ಶ್ರೀರಸ್ತು.

ಶ್ರೀಮನ್ಮಹಾರಾಜಾಧಿರಾಜ

ಶ್ರೀಕೃಷ್ಣರಾಜ ಒಡೆಯರ್ ಬಹದರವರಿಂದ

ರಚಿಸಲ್ಪಟ್ಟ

## ಶ್ರೀಕೃಷ್ಣರಾಜ ವಾಣೀವಿಲಾಸ

ಎಂಬ

# ಮಹಾಭಾರತದ ಕನ್ನಡ ಟೀಕು.

## ಸಭಾಪರ್ವ.

ಮನ್ಮಹಾರಾಜಾಧಿರಾಜ ಚಾಮರಾಜೇಂದ್ರ ಒಡೆಯರವರ ಅಪ್ಪಣೆಯಂ ಪಡೆದು



ಎಂ. ರುದ್ರಪ್ಪ ಅನ್ಡ ಸನ್ ಅವರುಗಳಿಂದ

ೕಯ "ಶ್ರೀಚಾಮುಂಡೇಶ್ವರಿ" ಮುದ್ರಾಕ್ಷರಶಾಲೆಯಲ್ಲಿ ಮುದ್ರಾಪಿಸಿ ಪ್ರಕಟಸಲ್ಪಟ್ಟಿತು.

ಬೆಂಗಳೂರು:

೧೮೯೦.

ಎರಡನೇ ಛಾಪೆ—೫೦೦ ಪ್ರತಿಗಳು.

# ಮೊದಲನೇ ಛಾಪೆಯ ಪೀಠಿಕೆ.

ಕಾವೇರಿ ಕಪಿಲಾ ಮುಂತಾದ ಮಹಾನದಿಗಳಿಂದಲೂ, ಚಂದ್ರದ್ರೋಣವೇ ಮೊದಲಾದ ಪರ್ವತಗಳಿಂದಲೂ
ಡಾನೆ, ಹುಲಿ ಕರಡಿಗಳಿಂದೊಪ್ಪುವ ಮಹಾರಣ್ಯಗಳಿಂದಲೂ, ಸ್ವರ್ಣ ರತ್ನಾದಿ ಗಣಿಗಳಿಂದಲೂ, ಬ್ರಹ್ಮ ಕ್ಷತ್ರಿಯ
ಶ್ಯಾದಿ ವರ್ಣಗಳಿಂದ ನಿಬಿಡವಾದ ಪಟ್ಟಣಗಳಿಂದಲೂ, ಕೋಟೆಕೊತ್ತಲುಗಳಿಂದಲೂ ಒಪ್ಪುವ ಈ ಮಹೀಶೂರು ಶೀ
ಯು ದಕ್ಷಿಣ ಹಿಂದುಸ್ತಾನಿನ ಮಧ್ಯದಲ್ಲಿ ದೇದೀಪ್ಯಮಾನವಾಗಿ ಪ್ರಕಾಶಿಸುತ್ತಲಿರುವದು. ಮಹಾ ಕೀರ್ತಿಪ್ರದವಾದ
ಸಂಸ್ಥಾನವು ಮಹಾರಾಜಾಧಿರಾಜ ಶ್ರೀ ಚಾಮರಾಜೇಂದ್ರ ಒಡೆಯರ್ ಬಹದೂರವರ ಆಳುವಿಕೆಯಲ್ಲಿಧೆ.——
ನಮ್ಮ ಮಹಾರಾಜರವರು ಅತ್ಯಂತ ದಯಾಳುಗಳಾಗಿಯೂ, ಧರ್ಮಜ್ಞರಾಗಿಯೂ, ಪುತ್ರಭಾಗ್ಯವುಳ್ಳವರಾಗಿ
ರು, ಪ್ರಜೆಗಳಲ್ಲಿ ಅನುರಾಗವುಳ್ಳವ ಯೂ, ದುಷ್ಟರನ್ನು ನಿಗ್ರಹಿಸುತ್ತಾ, ಸಿಷ್ಟರನ್ನು ಪರಿಪಾಲಿಸುತ್ತಾ ರಾಜ್ಯಾ
ಪತ್ಯವನ್ನು ಆಳುತಲಿಧಾರೆ. ಶ್ರೀಮನ್ಮಹಾರಾಜರವರ ನೀತಿಯಿಂದಲೂ, ಅವರ ದಿವಾನರವರಾದ ಕುಮಾರ
ಪುರಂ ಶೇಷಾದ್ರಿ ಅಯ್ಯರವರುಗಳ ಬುದ್ಧಿಕೌಶಲ್ಯದಿಂದಲೂ, ಈ ಸಂಸ್ಥಾನವು ಬಹಳ ಪ್ರಯೋಜನಗಳನ್ನು ಹೊಂದು
ತಲಿಧೆ. ಇತರ ಶೀಮೆಗಳವರು ಈ ಶೀಮೆಯಲ್ಲಿ ವಿಶೇಷವಾಗಿ ಬಂದು ಶೇರುತಲಿರುವದರಿಂದ ಕುಶಲತೆ ಹೆಚ್ಚಾಗಿ
ಇಲ್ಲಿನವರು ಬಹಳವಾಗಿ ವೃದ್ಧಿಯನ್ನೈದುತಲಿಧಾರೆ.——

ಪೂರ್ವದ ಮಹಾರಾಜರಾದ ಶ್ರೀಕೃಷ್ಣರಾಜ ಒಡೆಯರವರು ವ್ಯಾಸಕೃತವಾದ ಮಹಾಭಾರತವನ್ನು ಕರ್ನಾಟ
ಷೆಯಲ್ಲಿ ಸಾಮಾನ್ಯರಾದವರೂ ತಿಳಿದುಕೊಳ್ಳುವಬಗ್ಯೆ ವಚನರೂಪದಲ್ಲಿ ರಚಿಸಿ ತಮ್ಮ ಹೆಸರನ್ನು ಶಾಶ್ವತವಾಗಿ ಸ್ಥಿರ
ಡಿಸಿದರು. ಈ ಭಾರತವು ಈಗ ನಮ್ಮ ಮಹಾರಾಜರವರ ಪೋಷಣೆಯಿಂದ ಪ್ರಚುರವಾಗುತಲಿಧೆ. ದ್ರಾವಿಡ
ಂದ್ರ ಮಹಾರಾಷ್ಟ್ರ ಮೊದಲಾದ ದೇಶಗಳಲ್ಲಿ ಮಹಾಭಾರತವನ್ನೋದದಿರುವವರಿಲ್ಲ. ಇದನ್ನು ಶ್ರೀಕೃಷ್ಣರಾಜ
ಒಡೆಯರವರು "ನಾಲ್ಕು ವೇದಗಳು, ಆರು ಶಾಸ್ತ್ರಗಳು, ಪೂರ್ವಮೀಮಾಂಸ, ಉತ್ತರಮೀಮಾಂಸ, ನ್ಯಾಯಶಾಸ್ತ್ರ
ಗಳು, ಪುರಾಣಗಳು, ಧರ್ಮರಹಸ್ಯಗಳು ಎಂಬ ಹದಿನಾಲ್ಕು ವಿದ್ಯಗಳಲ್ಲಿರುವ ರಹಸ್ಯಗಳ ಸಾರವು" ಎಂದು ಹೇ
ಳುತ್ತಾರೆ. ಇದರಲ್ಲಿಲ್ಲದ ಪ್ರಶಂಸೆ ಇನ್ನೆಲ್ಲಿಯೂ ಇಲ್ಲವೆಂದೂ ಇದನ್ನೋದಿದವರಿಗೆ ಮೇಲೆ ಹೇಳಿದ ರಹಸ್ಯಗ
ಳೆಲ್ಲವೂ ತಿಳಿಯುವದೆಂದೂ ಹೇಳಲ್ಪಟ್ಟಿಧೆ. ವಚನರೂಪವಾದ ಮಹಾಭಾರತವು ಈಗಲೇ ಮೊದಲು ಪ್ರಸಿದ್ಧವಾದ್ದ
ರಿಂದ ಇದರ ಮಹಿಮೆಯು ಎಲ್ಲರಿಗೂ ತಿಳಿಯುವದಕ್ಕೆ ಇನ್ನು ಸ್ವಲ್ಪ ಕಾಲವು ಹೋಗಬೇಕಾಗಿದೆ. ಯುರೋಪ್
ಅಮೆರಿಕಾ ಖಂಡಗಳಲ್ಲಿ ಈ ರಹಸ್ಯಗಳನ್ನು ತಿಳಿಯುವ ಉದ್ದಿಶ್ಯ ತರ್ಜಮೆ ಮಾಡಿಸಿಧಾರೆ.

"ಶ್ರೀಕೃಷ್ಣರಾಜವಾಣೀವಿಲಾಸ" ಎಂಬ ಮಹಾಭಾರತದ ಕನ್ನಡ ಟೀಕಿನಲ್ಲಿ ಆದಿಪರ್ವವನ್ನು ಕಳೆದ ವರುಷ
ದಲ್ಲಿ ನಮ್ಮ ಸ್ವಕೀಯ ಶ್ರೀಚಾಮುಂಡೇಶ್ವರೀ ಮುದ್ರಾಕ್ಷರಶಾಲೆಯಲ್ಲಿ ಅಚ್ಚುಹಾಕಿಸಿ ಪ್ರಕಟಿಸಿದೆವು. ಈಗ ಸಭಾ
ಪರ್ವವನ್ನು ಪೂರೈಸಿದೆವು. ಮೊದಲೇ ವಿರಾಟೋದ್ಯೋಗ ಪರ್ವಗಳು ಮುದ್ರಿಸಲ್ಪಟ್ಟವು.——

ಆದಿ ಸಭಾಪರ್ವಗಳನ್ನು ಒಬ್ಬರ ಸಹಾಯವಿಲ್ಲದೇ ನಾವೇ ಮುಗಿಸಿದ್ದರಿಂದ ನಮಿಗೆ ಬಹಳ ಶ್ರಮೆಯೂ ಅರ್ಥ
ವ್ಯಯವೂ ಉಂಟಾಯಿತು. ದೊಡ್ಡ ಮನುಷ್ಯರುಗಳು ಭಾರತವನ್ನು ಅನೇಕವಾಗಿ ತೆಗದುಕೊಂಡು ತಮ್ಮ ಸುತ್ತ
ಲಿರುವ ವಿದ್ಯಾರ್ಥಿಗಳಿಗೆ ಉಚಿತವಾಗಿ ಕೊಟ್ಟಲ್ಲಿ ಮಹಾಫಲವುಂಟಾಗುವದು. ವಿಶೇಷ ಧರ್ಮಜ್ಞಾನವುಂಟುಮಾಡುವ
ಈ ಗ್ರನ್ಥವನ್ನು ಬಡವರಿಗೆ ಕೊಡುವದರಿಂದ ಕೊಟ್ಟವರು ಅತಿಶ್ರೇಷ್ಠವಾದ ದಾನವನ್ನು ಮಾಡಿದ ಫಲವನ್ನು
ಹೊಂದುವರು; ಪಡೆದುಕೊಳ್ಳುವವರು ಇದರ ಪಾರಾಯಣದಿಂದ ಬಹಳವಾದ ಪುಣ್ಯವನ್ನು ಪಡೆಯುವರು.——

ಎಂ. ರುದ್ರಪ್ಪ, ಅಂಡ್ ಸನ್,
ಪ್ರೊಪ್ರೈಟರ್ಸ, ಶ್ರೀ ಚಾಮುಂಡೇಶ್ವರೀ ಪ್ರೆಸ್,
ಲಾಲ್‌ಬಾಗ್ ರೋಡ್, ಬೆಂಗಳೂರು.

ಮಾರ್ಚ್, ೧೮೯೦.

# ಎರಡನೇ ಛಾಪೆಯ ಪೀಠಿಕೆ.

ಮೊದಲನೇ ಛಾಪೆಯನ್ನು ಪ್ರಕಟಿಸಿದಾಗ ನಾವು ಕೋರಿದಹಾಗೆಯೇ ಈಗ ಕನ್ನಡ ವಚನಭಾರತವು ಭಗವಂತನ ಕೃಪಾವಿಶೇಷದಿಂದ ಅಧಿಕವಾಗಿ ಪ್ರಸಿದ್ಧಿಪಡೆದಿರುವದೆಂದು ಬರೆಯಲು ಸಂತೋಷಪಡುತ್ತೇವೆ; ಎರಡು ವರುಷ ಕಾಲದಲ್ಲೆ ಶಾಂತಿಪರ್ವದವರಿವಿಗೂ ಪ್ರಚುರವಾಯಿತು; ಕೆಲವು ಪರ್ವಗಳು ಮುದ್ರಿಸಲ್ಪಟ್ಟ ಪುಸ್ತಕಗಳೆಲ್ಲವು ಮುಗಿದುಹೋದವು; ಈಗ ಸಭಾಪರ್ವದ ಎರಡನೇ ಛಾಪೆಯು ಛಾಪಿಸಿದೆವು. ಇನ್ನು ಸ್ವಲ್ಪಕಾಲದಲ್ಲೆ ವ್ಯಾಸಕೃತವಾದ ಭಾರತವು ಕನ್ನಡದಲ್ಲಿ ಸಂಪೂರ್ಣವಾಗಿ ಪ್ರಕಾಶಿಸುತ್ತಲಿರುವದು! ಕೆಲವು ಭಾಷೆಗಳಲ್ಲಿ ಭಾರತವು ವ್ಯಾಸಮುನೀಶ್ವರನನ್ನು ಬಿಟ್ಟು ಅನೇಕಬಗೆಯಾಗಿ ವ್ಯತ್ಯಾಸಪಟ್ಟು ಸಂಕ್ಷೇಪರೂಪವಾಗಿರುವದು. ಈ ಕನ್ನಡ ಭಾರತವು ಕೃಷ್ಣರಾಜ ಒಡೆಯರವರ ಕೃಪೆಯಿಂದ ವ್ಯಾಸಮುನೀಶ್ವರನನ್ನಗಲದೆ ಆತನು ರಚಿಸಿದ ಸಾಕ್ಷಾತ್ ರಚನೆಯಂತೆ ಮೆರೆಯುತ್ತಲಿರುವದು! ಇದನ್ನು ಓದಿದವರು ಯಾವ ಭಾಷೆಯವರಾದಾಗ್ಯೂ ತಿರಿಗೂ ಮತ್ತೊಂದು ಭಾಷೆಯ ಭಾರತವನ್ನೋದುವದಕ್ಕೆಣಿಸರು.

ಮದರಾಸ್ ಶೀಮೆಯ ವಿದ್ಯಾಭ್ಯಾಸದ ಇಲಾಖೆಯ ಮೆ॥ ಮಾರ್‍ಸ್ಡೆರ್ ಸಾಹೇಬರವರು ಕನ್ನಡಭಾಷಾವಿಶಾರದರಾಗಿಯೂ ಅಭಿಮಾನಿಗಳಾಗಿಯೂ ಇರುವದ್ದರಿಂದ ಕನ್ನಡ ಭಾರತವನ್ನು ಶ್ಲಾಘ್ಯವಾಗೆಣಿಸುತಲಿರುವತಲ್ಲದೆ ಬರುವ ವರುಷದ ಮದರಾಸ್ ಯುನಿವರ್ಸಿಟಿ ಎಪ್. ಏ. ಪರೀಕ್ಷೆಗೆ ಸಭಾಪರ್ವವನ್ನು ಟೆಕ್‌ಸ್ಟಾಗಿ ಏರ್ಪಡಿಸಿರುವರು.

ಅಂಧಕರಿಗೆ ಕಣ್ಣುಗಳನ್ನು ಕೊಟ್ಟರೀತಿ ತಿಳುವಳಿಕೆ ಇಲ್ಲದವರಿಗೆ ಜ್ಞಾನನೇತ್ರಗಳೋಪಾದಿಯಲ್ಲಿರುವ ಮಹಾಭಾರತವನ್ನು ಕರ್ಣಾಟಕದೇಶದವರಿಗೆ ತಮ್ಮ ಸ್ವಂತ ವ್ಯಯದಿಂದಲೂ ದೇಹಪ್ರಯಾಸದಿಂದಲೂ ಮಹಾರಾಜಾಧಿರಾಜ ಚಾಮರಾಜೇಂದ್ರ ಒಡಯರ್ ಬಹದೂರವರಿಗೆ ಪ್ರೀತಿವುಂಟಾಗುವಹಾಗೆ ಕೊಟ್ಟ ಅಂಬಿಲ್ ನರಸಿಹ್ಮ ಅಯ್ಯಂಗಾರ್ರವರನ್ನು ತಕ್ಕಮಟ್ಟಿಗೂ ಕೊಂಡಾಡುವೆವು! ಈಗ ಪ್ರಚುರದಲ್ಲಿರುವ ಪರ್ವಗಳನ್ನು ಅಂಗೀಕರಿಸಿ ಶ್ರೀಸಂಸ್ಥಾನ ಶ್ರೀ ಶ್ರಿಂಗೇರಿ ಜಗದ್ಗುರುಗಳೂ, ಶಿವಗಂಗೆಯ ಸ್ವಾಮಿಗಳೂ ಬಹಳವಾಗಿ ಸಂತೋಷಪಟ್ಟು ಶ್ರೀಮುಖಗಳನ್ನು ದಯಪಾಲಿಸಿದರು. ದಿವಾನ್‌ಬಹದರವರಾದ ಕೊಮಾರಪುರಂ ಶೇಷಾದ್ರಿ ಅಯ್ಯರ್ ಅವರುಗಳ್ಳು ಈ ಪ್ರಚುರದಲ್ಲಿ ಜ್ಞಾಪಕವುಳ್ಳವರಾಗಿರುವದ್ದರಿಂದ ಇನ್ನು ಶೀಘ್ರದಲ್ಲೆ ಮಿಕ್ಕ ಪರ್ವಗಳೂ ಪ್ರಚುರವಾಗದಿರಲಾರದು. ಅಂಡರ್ ಸೆಕ್ರೆಟರಿಗಳಾಗಿಯೂ, ಜನವರಿ ೧೮೯೨ನೇ ಇಸವಿಯಿಂದ ಮುಜರಾಯಿ ಸೂಪರಿಂಟೆಂಡೆಂಟರಾಗಿಯೂ ಮತ್ತು ದಿವಾನ್‌ಬಹದೂರವರ ಸ್ಪೆಷಲ್ ಸೆಕ್ರೆಟೆರಿಗಳಾಗುವ ಆರ್‌ಕಾಡ್ ಶ್ರೀನಿವಾಸಾಚಾರ್‍ಲು ಯವರು ಇದರ ವಿಷಯವಾಗಿ ಸಹಾಯಕರಾಗಿರುವರೆಂದು ತಿಳುಹಿಸಲು ಸಂತೋಷಿಸುತ್ತೇವೆ.

ಬೆಂಗಳೂರು,<br>
ಡಿಶಂಬರ್ ೨೦,<br>
೧೮೯೧.

ಎಂ. ರುದ್ರಪ್ಪ, ಅಂಡ್ ಸನ್,<br>
ಪ್ರೊಪ್ರೈಟರ್‌ಸ್, ಶ್ರೀ ಚಾಮುಂಡೇಶ್ವರೀ ಪ್ರೆಸ್,<br>
ಲಾಲ್‌ಬಾಗ್ ರೋಡ್, ಬೆಂಗಳೂರು.



# ಸಭಾಪರ್ವದ ವಿಷಯ ಸೂಚಿಕೆ.

## ಸಭಾಕ್ರಿಯ ಪರ್ವ.



## ಲೋಕಪಾಲ ಸಭಾಖ್ಯಾನಪರ್ವ.



## ರಾಜ ಸೂಯಾರಂಭ ಪರ್ವ



## ಜರಾಸಂಧವಧ ಪರ್ವ.



## ದಿಗ್ವಿಜಯ ಪರ್ವ.



## ರಾಜಸೂಯಿಕ ಪರ್ವ.



## ಅರ್ಘ್ಯಾಪಹರಣ ಪರ್ವ.



## ಶಿಶುಪಾಲ ವಧಪರ್ವ

ಪುಟ.



## ದ್ಯೂತ ಪರ್ವ.



## ಅನುದ್ಯೂತ ಪರ್ವ.






ಬ್ರಹ್ಮ. ವಿಘ್ನೇಶ. ವ್ಯಾಸಮಹಾಮುನಿ.

ಶ್ರೀ ಪರಬ್ರಹ್ಮಣಾಂಗೀಕೃತಃ ಶ್ರೀ ವಿಘ್ನೇಶ ಲಿಖಿತಃ ಶ್ರೀಮದ್ವೇದವ್ಯಾಸಮುನಿಪ್ರೋಕ್ತಃ
ಶ್ರೀ ಮಹಾಭಾರತ ಗ್ರಂಥಃ ಭುವಿವಿಜಯತೇತರಾಂ.

---

# ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬ
# ಮಹಾಭಾರತದ ಕನ್ನಡ ಟೀಕು.

---

## ಸಭಾಪರ್ವ.

---

### ೧ನೇ ಅಧ್ಯಾಯ.—ಸಭಾಕ್ರಿಯಾಪರ್ವ.

ಅನಂತರದಲ್ಲಿ : ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳಂ ಕುರಿತು ಇಂತೆಂದನು : ಕೇಳಿರೈ ಋಷಿಗಳಿರಾ, ಆ ಬಳಿಕ ಜನಮೇಜಯರಾಯನು ವೈಶಂಪಾಯನ ಮುನೀಂದ್ರನಂ ನೋಡಿ "ಎಲೈ ವೈಶಂಪಾಯನ ಮುನೀಶ್ವರನೇ, ಜಯಶೀಲನಾದ ಅರ್ಜುನನು ಖಾಂಡವವನದಲ್ಲಿ ಯಜ್ಞೇಶ್ವರನ ದಾಹದಿಂದ ಮಯನನ್ನು ತಪ್ಪಿಸಿ ರಕ್ಷಿಸಿದ ಬಳಿಕ ಏನು ಮಾಡಿದನು ? ಅದನ್ನು ಹೇಳಬೇಕು" ಎನಲು—ವೈಶಂಪಾಯನ ಮುನೀಶ್ವರನಿಂತೆಂದನು : "ಕೇಳು ಜನಮೇಜಯನೇ, ನಿಮ್ಮ ವಂಶದ ಚರಿತ್ರವನ್ನು ಹೇಳುತಲಿದ್ದೇನೆ ; ಸಾವಧಾನಚಿತ್ತನಾಗಿ ಕೇಳು : ಸರ್ವಾಸ್ತ್ರವಿಶಾರದನಾದ ಅರ್ಜುನನು ಈ ಪ್ರಕಾರದಿಂದ ಮಯನನ್ನು ರಕ್ಷಿಸಿ, ಶ್ರೇಷ್ಠವಾದ ಗಾಂಡೀವವನ್ನೂ ಅಕ್ಷಯ ಬಾಣಗಳುಳ್ಳ ಬತ್ತಳಿಕೆಗಳನ್ನೂ ಮಿಕ್ಕಾದ ರಾಯರಿಗೆ ದುರ್ಲಭವಾದ ದಿವ್ಯಾಸ್ತ್ರಗಳನ್ನೂ ಬಿಳೀ ಕುದುರೆಗಳೊಡನೆ ಕೂಡಿ ಧ್ವಜಪತಾಕಾಲಂಕೃತವಾದ ದಿವ್ಯ ರಥವನ್ನೂ ಯಜ್ಞೇಶ್ವರನ ಅನುಗ್ರಹದಿಂದ ಕೈಕೊಂಡು, ಸಂತೋಷಪಡುತ್ತ ಮಯನೊಡನೆ ಸಹ ಸುಖವಾಗಿದ್ದ ಸಮಯದಲ್ಲಿ—ಮಯನು ತನಗೆ ಅರ್ಜುನನು ಮಾಡಿದ ಉಪಕಾರವನ್ನು ಸ್ಮರಿಸುತ್ತ ಕೈಮುಗಿದು ಬಹುಪ್ರಕಾರವಾಗಿ ಸ್ತುತಿಸಿ ಕೃಷ್ಣಸ್ವಾಮಿಯ ಸಮಕ್ಷಮ

ದಲ್ಲಿ ಅರ್ಜುನನನ್ನು ನೋಡಿ 'ಎಲೈ ವೀರಶ್ರೇಷ್ಠನೆ, ಖಾಂಡವವನದಲ್ಲಿ ಯಜ್ಞೇಶ್ವರನು ಜ್ವಾಲಾ ಸಮೂಹಗಳಿಂದ ದಹಿಸುವ ಸಮಯದಲ್ಲಿ ಕೃಷ್ಣಸ್ವಾಮಿಯು ರಕ್ಷಿಸಬೇಡವೆಂದು ತಡದರೂ ದಯೆಯಿಂದ ನನ್ನ ಪ್ರಾಣ ಸಂರಕ್ಷಣವನ್ನು ಮಾಡಿದಂಥಾ ನಿನಗೆ ನಾನು ಏನು ಪ್ರತ್ಯುಪಕಾರವನ್ನು ಮಾಡಲಿ? ದಾನವರಿಗೆ ವಿಶ್ವಕರ್ಮನಾದ ನಾನು ಮತ್ತೊಬ್ಬರಿಗೆ ಅಸಾಧ್ಯವಾಗಿ ಆಶ್ಚರ್ಯಕರವಾಗಿ ಪ್ರಿಯವಾಗಿರುವಂಥಾ ಒಂದು ವಸ್ತುವನ್ನು ನಿರ್ಮಿಸಿ ತಂದು ಒಪ್ಪಿಸಬೇಕೆಂದು ನಿಶ್ಚಯಿಸಿದ್ದೇನೆ' ಅಂದನು. ಅರ್ಜುನನು ಒಂದು ಮುಹೂರ್ತಮಾತ್ರ ಯೋಚಿಸಿ ಮಾಯೋಪಾಯಜ್ಞನಾದ ಮಯನನ್ನು ನೋಡಿ ಮಂದಸ್ಮಿತದಿಂದ 'ಎಲೈ ಮಯನೆ, ನಾನು ಒಬ್ಬರಿಗೆ ಉಪಕಾರವಮಾಡಿದರೆ ಅವನ ದೆಸೆಯಿಂದ ಪ್ರತ್ಯುಪಕಾರವನ್ನು ಪಡೆಯಬೇಕೆಂಬುವದು ನನ್ನ ವ್ರತವಲ್ಲ; ನೀನು ಸರ್ವವನ್ನೂ ಕೊಟ್ಟಹಾಗೇ ಸರಿ; ನಮಗೆ ಅನ್ಯೋನ್ಯ ಸ್ನೇಹವಿರುವದೇಸಾಕು; ನಿನಗೆ ಸಕಲಸೌಖ್ಯವೂ ಉಂಟಾಗಲಿ; ಸುಖವಾಗಿ ಎಥೇಚ್ಛವಾಗಿ ಹೋಗು' ಅಂದನು. ಮಯನು 'ಎಲೈ ಪುರುಷಶ್ರೇಷ್ಠನೆ, ನನಗೆ ಹೇಳಿದ ವಾಕ್ಯವು ನಿನಗೆ ಯುಕ್ತವೇಸರಿ; ನಾನು ನಿನ್ನ ಪ್ರೀತಿಯನ್ನು ಸಂಪಾದಿಸಿಕೊಳ್ಳಬೇಕೆಂದು ಇಚ್ಛೈಸಿದ್ದೇನೆ; ನಾನು ದಾನವರಿಗೆ ಸಕಲ ಭೋಗಾಸ್ಪದಗಳಾಗಿರುವ ರಮಣೀಯಗಳಾದ ಉಪ್ಪರಿಗೆಗಳನ್ನೂ ವಿಚಿತ್ರವಾದ ಉದ್ಯಾನವನಗಳನ್ನೂ ಅನೇಕ ಪ್ರಕಾರವಾದ ಸರಸ್ಸುಗಳನ್ನೂ ಸ್ಮರಿಸಿದಂಥಾ ತಾವಿಗೆ ಹೋಗುವಂಥಾ ವಿಮಾನಗಳನ್ನೂ ವಿಶಾಲವಾದ ಕೋಟಿಕೊತ್ತಲ ಮೇಲ್ಮಚ್ಚು ಗೋಪುರಗಳುಳ್ಳಂಥಾ ಪಟ್ಟಣಗಳನ್ನೂ ಸರ್ವಲಕ್ಷಣ ಸಂಪನ್ನಗಳಾಗಿ ವಿಚಿತ್ರಗಳಾದ ಉಪ್ಪರಿಗೆಗಳನ್ನೂ ವಿಹಾರಯೋಗ್ಯಗಳಾದ ಮನೆಗಳನ್ನೂ ಪೂರ್ವದಲ್ಲಿ ನಿರ್ಮಿಸಿದಂಥಾವನು; ಈಗ ನಿನಗೆ ಒಂದು ಅಪ್ರರೂಪವಸ್ತುವನ್ನು ಮಾಡಿಕೊಡಬೇಕೆಂದು ಪ್ರೀತಿಯಿದೇ' ಅಂದನು. ಅರ್ಜುನನು 'ಎಲೈ ಮಯನೆ, ನಾನು ಉಪಕಾರವನ್ನು ಮಾಡಿದೆನೆಂದೆಣಿಸಿ ನೀನು ನನಗೆ ಪ್ರಿಯವನ್ನು ಮಾಡಬೇಕೆಂದೆಣಿಸಿದವನಾದ್ದರಿಂದ ನೀನು ಮಾಡುವಂಥಾ ಕಾರ್ಯವನ್ನು ತಡೆಯುವದು ನನಗೆ ಉಚಿತವಲ್ಲ; ನಿನ್ನ ಮನೋರಥವು ನೆರವೇರುವದಕ್ಕೆ ಒಂದು ಉಪಾಯವನ್ನು ಹೇಳುತಲಿದೇನೆ: ನೀನು ಕೃಷ್ಣಸ್ವಾಮಿಗೆ ಸಮ್ಮತವಾದ ಕಾರ್ಯವನ್ನು ಮಾಡಿದರೆ ಅದು ನನಗೆ ಮಾಡಿದ ಹಾಗಾಗುವದು' ಎನಲು; ಮಯನು ಕೃಷ್ಣಸ್ವಾಮಿಯನ್ನು ಕುರಿತು 'ಎಲೈ ಸ್ವಾಮಿಯೆ, ನಿನಗೆ ಅಭೀಷ್ಟವೇನು?' ಎಂದು ಕೇಳಿದನು. ಕೃಷ್ಣಸ್ವಾಮಿಯು ಒಂದು ಮುಹೂರ್ತಮಾತ್ರವು ಆಲೋಚನೆಮಾಡಿ ಮಯನನ್ನು ನೋಡಿ 'ಮೂರು ಲೋಕಗಳಲ್ಲಿರುವ ಆಶ್ಚರ್ಯಗಳೂ ಉಂಟಾಗಿ ಯಾವಾಗ ನೋಡಿದರೂ ಪುಷ್ಪಗಳಿಂದಲೂ ಫಲಗಳಿಂದಲೂ ಒಪ್ಪುತ್ತಲಿರುವ ವೃಕ್ಷಗಳುಳ್ಳದ್ದಾಗಿ ಮನುಷ್ಯಲೋಕಕ್ಕೆ ಆಶ್ಚರ್ಯಕರವಾಗಿ ಮತ್ತೊಬ್ಬರಿಗೆ ನಿರ್ಮಿಸುವದಕ್ಕೆ ಅಶಕ್ಯವಾಗಿ ದೇವತೆಗಳಿಗೂ ಅಸುರರಿಗೂ ಮನುಷ್ಯರಿಗೂ ಅಭಿಪ್ರಾಯಾನುಸಾರವಾಗಿರುವ ಒಂದು ಸಭಾ ಭವನವನ್ನು ಧರ್ಮರಾಯನಿಗೆ ಹೃದ್ಯವಾಗುವರೀತಿಗೆ ನಿರ್ಮಿಸಿಕೊಡು' ಅಂದನು.

"ಆ ವಾಕ್ಯವನ್ನು ಕೇಳಿ ಮಯನು ಸಂತೋಷಪಟ್ಟು ದಿವ್ಯ ವಿಮಾನಕ್ಕೆ ಸಮಾನವಾದ ಒಂದು ಸಭಾ ಭವನವನ್ನು ರಚಿಸುವದಕ್ಕೆಣಿಸಿದನು. ಆ ಬಳಿಕ ಕೃಷ್ಣಾರ್ಜುನರು ಮಯನನ್ನು ಕರದುಕೊಂಡು ಹೋಗಿ ಧರ್ಮರಾಯನಿಗೆ ಕಾಣಿಸಿ ಆ ವೃತ್ತಾಂತವನ್ನು ಹೇಳಲು ಧರ್ಮರಾಯನು ಆತನನ್ನು ಕುಳ್ಳಿರಿಸಿ ಯಥೋಚಿತವಾಗಿ ಬಹುಮಾನ ಮಾಡಿದನು. ಮಯನು ಸಂತೋಷಪಟ್ಟು ದಾನವರ ಚರಿತ್ರವನ್ನು ವಿಶದವಾಗಿ ಹೇಳುತ್ತ ಕೆಲವು ದಿವಸಗಳಿದ್ದು, ಒಂದು ಶುಭ ದಿವಸದಲ್ಲಿ ಇಷ್ಟದೇವತಾ ಪ್ರಾರ್ಥನೆಯಂ ಮಾಡಿ ಪಾಯಸಾನ್ನದಿಂದ ಅನೇಕ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ಅವರಿಗೆ ಬಹುಪ್ರಕಾರವಾಗಿ ಧನವನ್ನು ಕೊಟ್ಟು, ವಿಶ್ವಕರ್ಮನನ್ನು ಸ್ಮರಿಸಿ, ಕೃಷ್ಣಾರ್ಜುನರ ಅಪ್ಪಣೆಯಿಂದ ಸಕಲ ಋತುಸಂಪತ್ತುಗಳುಳ್ಳ ದಿವ್ಯ ರೂಪವುಳ್ಳಂಥ ಒಂದು ಸಭಾ ಭವನವನ್ನು ನಿರ್ಮಿಸುವದಕ್ಕಾಗಿ ನಾಲ್ಕು ದಿಕ್ಕುಗಳಲ್ಲಿಯೂ ಹತ್ತುಸಾವಿರ ಹಸ್ತ ಪ್ರಮಾಣಗಳುಳ್ಳ ಭೂಮಿಯನ್ನು ಅಳತೆ ಮಾಡಿದನು."

## ೨ನೇ ಅಧ್ಯಾಯ.—ಸಭಾಕ್ರಿಯಾಪರ್ವಶೇಷ.

"ಕೇಳು ಜನಮೇಜಯನೇ, ಕೃಷ್ಣಸ್ವಾಮಿಯು ಇಂದ್ರಪ್ರಸ್ಥ ಪಟ್ಟಣದಲ್ಲಿ ಸಂತೋಷಪಡುತ್ತ ಪಾಂಡವರು ಬಹುಮಾನಪೂರ್ವಕವಾಗಿ ಮಾಡಿದ ಪೂಜೆಗಳನ್ನು ಸ್ವೀಕರಿಸಿ ಕೆಲವು ದಿನಗಳು ಸುಖವಾಗಿದ್ದು, ತಮ್ಮ ತಂದೆಯಾದ ವಸುದೇವನನ್ನು ನೋಡಲು ದ್ವಾರಕಾ ಪಟ್ಟಣಕ್ಕೆ ಹೋಗುವದಕ್ಕೆಣಿಸಿ, ಯುಧಿಷ್ಠಿರಾದಿಗಳ ಅಪ್ಪಣೆಯನ್ನು ತೆಗೆದುಕೊಂಡು, ಅನಂತರದಲ್ಲಿ (ಸರ್ವಲೋಕ ವಂದಿತಚರಣಾರವಿಂದನಾದ ಗೋವಿಂದನು) ತನ್ನ ಸೋದರತ್ತೆಯಾದ ಕುಂತಿದೇವಿಯ ಪಾದಗಳಿಗೆ ನಮಸ್ಕರಿಸಲು ಕುಂತೀದೇವಿಯು ಆತನನ್ನು ಅಪ್ಪಿಕೊಂಡು ಶಿರಸ್ಸನ್ನು ಆಘ್ರಾಣಿಸಿದಳು. ಆ ಬಳಿಕ ಕೃಷ್ಣಸ್ವಾಮಿಯು ತನ್ನ ತಂಗಿಯಾದ ಸುಭದ್ರೆಯ ಸಮೀಪಕ್ಕೆ ಬಂದು ಪ್ರೇಮಾತಿಶಯದಿಂದ ಆನಂದಾಶ್ರುಗಳಂ ತುಂಬುತ್ತ ಕೆಲವು ಪ್ರಿಯ ವಚನಗಳಿಂದ ಬುದ್ಧಿ ವಚನಗಳನ್ನು ಹೇಳಲು ಭದ್ರಭೂಷಣೆಯಾದ ಸುಭದ್ರೆಯು ಆ ವಾಕ್ಯಗಳಷ್ಟನ್ನೂ ಕೇಳಿ ತಾಯಿತಂದೆಗಳಾದ ದೇವಕೀ ವಸುದೇವರಿಗೂ ಮತ್ತು ಇರುವ ಬಂಧುಜನಗಳಿಗೂ ಹೇಳತಕ್ಕ ಮಾತುಗಳನ್ನು ಮೃದುಮಧುರ ಭಾಷಣೆಗಳಿಂದ ಬಿನ್ನವಿಸಿ ಪಾದ ಪದ್ಮಗಳಿಗೆ ನಮಸ್ಕಾರವನ್ನು ಮಾಡಿದಳು. ಕೃಷ್ಣಸ್ವಾಮಿಯು ಬಹು ಸಂತೋಷಪಟ್ಟು ಅಲ್ಲಿಂದ ಹೊರಟು ಪಾಂಡವರ ಪುರೋಹಿತನಾದ ಧೌಮ್ಯನನ್ನು ನೋಡಿ ನಮಸ್ಕಾರವನ್ನು ಮಾಡಿ ಆತನ ಆಶೀರ್ವಾದವನ್ನು ಪಡೆದು, ದ್ರೌಪದಾದೇವಿಯ ಸಮೀಪಕ್ಕೆ ಹೋಗಿ ಸುಭದ್ರೆಯನ್ನು ಒಪ್ಪಿಸಿ, ಅರ್ಜುನನು ಸಂಗಡ ಬರಲು ತಮ್ಮಂದಿರೊಡನೆ ಕೂಡಿರುವ ಧರ್ಮರಾಯನ ಸಮೀಪಕ್ಕೆ ಹೋಗಿ, ಅವರೈದುಮಂದಿಯೂ ಸುತ್ತಿಕೊಂಡಿರಲು (ಆ ಪರಮ ಪುರುಷನು) ದೇವತೆಗಳಿಂದ ಸುತ್ತಲ್ಪಟ್ಟ ದೇವೇಂದ್ರನೋಪಾದಿಯಲ್ಲಿ ಒಪ್ಪುತ್ತ, ದಿವ್ಯ ಗಂಧ ಮಾಲ್ಯಗಳಿಂದ ದೇವಬ್ರಾಹ್ಮಣರನ್ನು ಪೂಜಿಸಿ ನಮಸ್ಕರಿಸಿ, ಆಶೀರ್ವಾದವನ್ನು ಮಾಡುವ ಬ್ರಾಹ್ಮಣೋತ್ತಮರ ದೆಸೆಯಿಂದ ಕುಸುಮಾಕ್ಷತೆಗಳನ್ನು ತೆಗೆದುಕೊಂಡು ಶಿರಸ್ಸಿನಲ್ಲಿ ಧರಿಸಿ, ಆ ಬ್ರಾಹ್ಮಣರಿಗೆ ಮಣಿ ಕನಕ ವಸ್ತ್ರಾಭರಣಗಳನ್ನು ಕೊಟ್ಟು, ಅವರ ಅಪ್ಪಣೆಯಿಂದ ಸಕಲ ಗುಣಾನ್ವಿತವಾದ ಶುಭ ಮುಹೂರ್ತದಲ್ಲಿ ಶಂಖ ಚಕ್ರ ಗದೆಗಳು ಮೊದಲಾದ ಸಕಲಾಯುಧಗಳಿಂದ ಅಲಂಕೃತವಾಗಿ ಶೈಬ್ಯ ಸುಗ್ರೀವ ಮೇಘಪುಷ್ಪ ವಲಾಹಕಗಳೆಂಬ ಕುದುರೆಗಳನ್ನು ಕಟ್ಟಿರುವಂಥಾದ್ದಾಗಿ ರತ್ನಕಾಂಚನ ಶೋಭಿತವಾದ ದಿವ್ಯ ರಥವನ್ನೇರಿ ಹೊರಟನು. ಆ ಸಮಯದಲ್ಲಿ: ಧರ್ಮರಾಯನು ಆ ರಥವನ್ನೇರಿ ಸಾರಥಿಯಾದ ದಾರುಕನನ್ನು ತಡದು ಪ್ರೇಮಾತಿಶಯದಿಂದ ಕುದುರೆಗಳ ಹಗ್ಗಗಳನ್ನು ಹಿಡಿದು ತಾನೇ ಸಾರಥ್ಯವನ್ನು ಮಾಡಿದನು; ಭೀಮನು ಅತಿವಿಶಾಲವಾಗಿ ಸುವರ್ಣಮಯವಾದ ಕಲಶವುಳ್ಳದ್ದಾಗಿ ದಿವ್ಯ ಮಾಲ್ಯಾಲಂಕೃತವಾದ ಚಿನ್ನದ ಕಾವುಳ್ಳ ಶ್ವೇತಚ್ಛತ್ರವನ್ನು ಹಿಡಿದನು; ಅರ್ಜುನನು ಬೆಳದಿಂಗಳೋಪಾದಿಯಲ್ಲಿ ಬಿಳುಪಾದ ಬೀಸಣಿಗೆಯಿಂದ ಬೀಸಿದನು; ನಕುಲ ಸಹದೇವರು ಉಭಯ ಪಾರ್ಶ್ವಗಳಲ್ಲಿ ಬಿಳುಪಾದ ಚಾಮರಗಳಿಂದ ಬೀಸಿದರು. ಆಗ ಋತ್ವಿಕ್ಪುರೋಹಿತರೊಡನೆ ಕೂಡಿಕೊಂಡು ಅಣ್ಣ ತಮ್ಮಂದಿರಾದ ಯುಧಿಷ್ಠಿರಾದಿಗಳಿಂದ ಸುತ್ತಲ್ಪಟ್ಟ ಕೃಷ್ಣಸ್ವಾಮಿಯು ಪ್ರಿಯರಾದ ಶಿಷ್ಯರೊಡನೆ ಕೂಡಿರುವ ಗುರುವಿನೋಪಾದಿಯಲ್ಲಿ ಪ್ರಕಾಶಿಸುತ್ತಲಿದ್ದನು. ಧೌಮ್ಯನು ವೃದ್ಧಜನ ಪರಿವೃತನಾಗಿ ಅಭಿಮನ್ಯುವನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಸಂಗಡಲೇ ಹೋದನು.

"ಈಪ್ರಕಾರವಾಗಿ ಬಂದು ಹರದಾರಿ ಹೋಗಿ ಕೃಷ್ಣಸ್ವಾಮಿಯು ಅರ್ಜುನನನ್ನು ಆಲಿಂಗಿಸಿಕೊಂಡು, ಧರ್ಮರಾಯನಿಗೂ ಭೀಮನಿಗೂ ನಮಸ್ಕರಿಸಿ, ನಕುಲ ಸಹದೇವರು ನಮಸ್ಕಾರವಂ ಮಾಡಲು ಅವರಿಗೆ ಆಶೀರ್ವಾದವ ಮಾಡಿ, ಅವರನ್ನು ಪಟ್ಟಣಕ್ಕೆ ಕಳುಹಿಸಿ ಎರಡನೇ ದೇವೇಂದ್ರನೋಪಾದಿಯಲ್ಲಿ (ಶ್ರೀ ಕೃಷ್ಣಸ್ವಾಮಿಯು) ದ್ವಾರಕಾಪಟ್ಟಣಕ್ಕೆ ಹೋದನು. ಪಾಂಡವರು ಕೃಷ್ಣಸ್ವಾಮಿಯ ರಥವು ಕಾಣಿಸುವ ಪರ್ಯಂತರವೂ ರಥವನ್ನೇ ನೋಡುತ್ತ, ಕಣ್ಣಿಗೆ ಮರೆಯಾದಮೇಲೆ ಆ ಕೃಷ್ಣಸ್ವಾಮಿಯನ್ನು ಹೃದಯ ಕಮಲದಲ್ಲಿರಿಸಿಕೊಂಡು ಆತನನ್ನು ಸ್ತುತಿಸುತ್ತ ಪಟ್ಟಣವನ್ನು ಸೇರಿದರು. ಆ ಬಳಿಕ ಭೀಮಸೇನನು ಮೊದಲಾದ ತಮ್ಮಂದಿರನ್ನು ಕುಮಾರವರ್ಗಗಳನ್ನೂ ತಮ್ಮ ತಮ್ಮ ಮನೆಗಳಿಗೆ ಕಳುಹಿಸಿ ಧರ್ಮರಾಯನು ದ್ರೌಪದಿ ಇರುವ ಅಂತಃಪುರಕ್ಕೆ ಹೋಗಿ

ಸುಖವಾಗಿದ್ದನು. ಶ್ರೀ ಕೃಷ್ಣಸ್ವಾಮಿಯೂ ಯದುಶ್ರೇಷ್ಠರಾದ ಉಗ್ರಸೇನ ಉದ್ಧವರು ಮೊದಲಾದವರೂ ಮತ್ತು ಇರುವ ಜನರೆಲ್ಲರೂ ಎದುರಾಗಿ ಬಂದು ಪೂಜಿಸಲು ದ್ವಾರಕಾ ಪಟ್ಟಣವನ್ನು ಹೊಕ್ಕು, ತಾಯಿತಂದೆಗಳಾದ ದೇವಕೀ ವಸುದೇವರಿಗೂ ಉಗ್ರಸೇನನಿಗೂ ನಮಸ್ಕಾರವನ್ನು ಮಾಡಿ, ಪ್ರದ್ಯುಮ್ನ ಸಾಂಬ ನಿಶಠ ಚಾರುದೇಷ್ಣ ಅನಿರುದ್ಧ ಇವರು ಮೊದಲಾದವರು ಬಂದು ತನಗೆ ನಮಸ್ಕರಿಸಲು ಅವರೆಲ್ಲರನ್ನೂ ಆಲಿಂಗಿಸಿಕೊಂಡು ಅವರವರ ಮನೆಗಳಿಗೆ ಕಳುಹಿಸಿ, ವೃದ್ಧಾನುಮತದಿಂದ ದಿವ್ಯವಾದ ಅಂತಃಪುರವನ್ನು ಪ್ರವೇಶಿಸಿ, ರುಕ್ಮಿಣೀಸಹಿತನಾಗಿ ಸುಖವಾಗಿ ವಿಹರಿಸುತ್ತಲಿದ್ದನು."

## ೩ನೇ ಅಧ್ಯಾಯ.—ಸಭಾಕ್ರಿಯಪರ್ವ ಶೇಷ.

ಅನಂತರದಲ್ಲಿ: ವೈಶಂಪಾಯನ ಮುನೀಂದ್ರನು ಜನಮೇಜಯರಾಯನನ್ನು ಕುರಿತು ಇಂತೆಂದನು: "ಕೇಳು ಜನಮೇಜಯನೆ, ಆ ಬಳಿಕ ದಾನವಶ್ರೇಷ್ಠನಾದ ಮಯನು ಧರ್ಮರಾಯನಿಗೆ ಒಂದು ದಿವ್ಯವಾದ ಸಭೆಯನ್ನು ಕಲ್ಪಿಸಬೇಕೆಂದೆಣಿಸಿ ಶೌರ್ಯೋದಾರ್ಯ ಧುರ್ಯನಾದ ಅರ್ಜುನನನ್ನು ನೋಡಿ 'ಕೈಲಾಸಪರ್ವತಕ್ಕೆ ಉತ್ತರಭಾಗದಲ್ಲಿರುವ ಮೈನಾಕ ಪರ್ವತದಲ್ಲಿ ದೈತ್ಯಶ್ರೇಷ್ಠರು ಯಜ್ಞವನ್ನು ಮಾಡುವ ಸಮಯದಲ್ಲಿ ಅಸುರೇಂದ್ರನಾದ ವೃಷಪರ್ವನಿಗೆ ಒಂದು ಸಭೆಯನ್ನು ನಿರ್ಮಿಸುವನಕ್ಕೆ ಯೋಚಿಸಿ ನಾನಾಪ್ರಕಾರವಾದ ರತ್ನಕಾಂಚನ ಮಯವಾದ ಸಮಸ್ತವಸ್ತು ಸಮೂಹಗಳನ್ನು ಅನೇಕವಾಗಿ ಬಿಂದು ಸರೋವರದಲ್ಲಿ ಇಟ್ಟಿದ್ದೇನೆ; ಅದೆಲ್ಲವನ್ನು ತಂದು ಧರ್ಮರಾಯನಿಗೆ ಮನಸ್ಸಂತೋಷಕರವಾಗಿ ಮೂರುಲೋಕಗಳಲ್ಲಿ ಪ್ರಸಿದ್ಧವಾಗುವಹಾಗೆ ಒಂದು ಸಭಾ ವಿಶೇಷವನ್ನು ನಿರ್ಮಿಸುವದಕ್ಕೆ ನಿನ್ನ ಅಪ್ಪಣೆಯಿಂದ ಹೋಗಿ ಬರುತಲಿದೇನೆ; ಮೊದಲು ಮಾಂಧಾತನೆಂಬ ಅರಸು ಯುದ್ಧದಲ್ಲಿ ಶತ್ರುಗಳನ್ನು ಕೊಂದು ಆ ಸರಸ್ಸಿನಲ್ಲಿ ಇರಿಸಿದಂಥಾದ್ದಾಗಿ ಪರರಿಂದ ಪ್ರಯೋಗಿಸಲ್ಪಟ್ಟ ಪರ್ವತಾದಿಗಳನ್ನು ಪುಡಿ ಪುಡಿ ಮಾಡುವಂಥಾದ್ದಾಗಿ ಸುವರ್ಣಬಿಂದುಗಳಿಂದ ವಿಚಿತ್ರವಾಗಿ ಸಕಲ ಶತ್ರು ಸಂಹಾರಕವಾದ ಒಂದು ಗದೆಯನ್ನು (ಯಜ್ಞೇಶ್ವರನು ನಿನಗೆ ಗಾಂಡೀವವನ್ನು ತಂದುಕೊಟ್ಟ ರೀತಿಗೆ) ಭೀಮಸೇನನಿಗೆ ನಾನು ತಂದು ಕೊಡುತಲಿದೇನೆ; ಮತ್ತು ವರುಣ ಸಂಬಂಧವಾಗಿ ಮಹಾ ಧ್ವನಿಯುಳ್ಳ ದೇವದತ್ತವೆಂಬ ಒಂದು ಶಂಖವನ್ನು ನಿನಗೆ ತಂದು ಕೊಡುತಲಿದೇನೆ' ಎಂದು ನುಡಿದು ಪೂರ್ವೋತ್ತರ ದಿಕ್ಕಾಗಿ ಹೋಗಿ—ಎಲ್ಲಿ ಭಗೀರಥನು ಅನೇಕ ಸಂವತ್ಸರಗಳು ತಪಸ್ಸನ್ನು ಮಾಡಿ ಗಂಗೆಯನ್ನು ಪಡದನೋ—ಎಲ್ಲಿ ಪರಮೇಶ್ವರನು ಬಹು ಸಹಸ್ರ ಯಾಗಮಂ ಮಾಡಲು ಮಣಿಕಾಂಚನ ಮಯವಾದ ಯೂಪಗಳೂ ಶಯನಾರ್ಥವಾಗಿ ಮಾಡಲ್ಪಟ್ಟಂಥಾ ಜಗತಿಗಳೂ ಅಲಂಕಾರಾರ್ಥವಾಗಿ ಮಾಡಲ್ಪಟ್ಟವೋ—ಎಲ್ಲಿ ದೇವೇಂದ್ರನು ಯಾಗಗಳಂ ಮಾಡಿ ಯಾಗ ಫಲಗಳಂ ಪಡೆದನೋ—ಎಲ್ಲಿ ಬ್ರಹ್ಮದೇವನು ಭೂತಜಾಲಗಳನ್ನು ಸೃಷ್ಟಿಸಿ ಅವುಗಳಿಂದ ಸೇವಿಸಲ್ಪಟ್ಟಂಥಾವನಾಗಿ ಪ್ರಕಾಶಿಸಿದನೋ—ಎಲ್ಲಿ ನರನಾರಾಯಣರು ಬ್ರಹ್ಮದೇವನು ಯಮನು ಶಂಕರನು ಯಾಗ ಸಹಸ್ರಗಳಲ್ಲಿ ಪರಮ ಪುರುಷನಂ ಕುರಿತು ಉಪಾಸನೆಯಂ ಮಾಡಿದರೋ—ಎಲ್ಲಿ ಮಹಾವಿಷ್ಣುವು ಕನಕ ಮಾಲ್ಯಾಲಂಕೃತಗಳಾದ ಯೂಪಗಳು ಚಯನ ವೇದಿಕೆಗಳು ಬಹುಪ್ರಕಾರವಾದ ಸುವರ್ಣ ದಕ್ಷಿಣೆಗಳುಳ್ಳ ಅಪರಿಮಿತ ಯಜ್ಞಗಳನ್ನು ಮಾಡಿದನೊ—ಅಂಥಾ ಬಿಂದು ಸರಸ್ಸಿಗೆ ಹೋಗಿ, ಅಲ್ಲಿ ಇಟ್ಟ ನವರತ್ನ ಮಯವಾದ ಕಾಂಚನ ವಸ್ತು ಸಮೂಹವನ್ನು ಕಿಂಕರರೆಂಬ ರಾಕ್ಷಸರಿಂದ ಎತ್ತಿಸಿಕೊಂಡು ಗದಾ ಶಂಖಗಳನ್ನೂ ತೆಗದುಕೊಂಡು ಇಂದ್ರಪ್ರಸ್ಥ ಪಟ್ಟಣಕ್ಕೆ ಬಂದು, ಭೀಮನಿಗೆ ಗದೆಯನ್ನೂ ಅರ್ಜುನನಿಗೆ ವೈರಿಹೃದಯವಿದಾರಣವಾದ ಧ್ವನಿಯುಳ್ಳ ದೇವದತ್ತವೆಂಬ ಶಂಖವನ್ನೂ ಕೊಟ್ಟು, ಕೆಲವು ದಿವಸಗಳು ಹೋಗಿಬಂದ ಶ್ರಮವನ್ನು ಪರಿಹರಿಸಿಕೊಂಡು, ಸಭಾ ನಿರ್ಮಾಣ ವೈಚಿತ್ರ್ಯವನ್ನು ಕೆಲವು ಹೊತ್ತು ಆಲೋಚಿಸಿ, ಒಂದು ಶುಭಮುಹೂರ್ತದಲ್ಲಿ ಬ್ರಾಹ್ಮಣರಿಗೆ ಪಾಯಸಾನ್ನದಿಂದ ಪರಿತೃಪ್ತಿಯನ್ನು ಮಾಡಿಸಿ—ಮಣಿಮಯವಾದ ಕೋಟೆ ಕೊತ್ತಲಗಳು, ಅನೇಕ ರತ್ನಖಚಿತಗಳಾದ ಜಗತಿಗಳು, ವಜ್ರದ ಕಂಬಗಳು, ಆಕಾಶವನ್ನು ಮುಟ್ಟುತಲಿರುವ ಉಪ್ಪರಿ

ಗೆಗಳುಳ್ಳ ಮನೋಹರವಾದ ಚಂದ್ರಶಾಲೆಗಳು, ಚಂದ್ರಕಾಂತ ಶಿಲಾಮಯಗಳಾದ ಭೂಭಾಗಗಳು, ನಿರ್ಮಲವಾ
ದ ಗರುಡಪಚ್ಚೆಗಳಿಂದ ನಿರ್ಮಿತಗಳಾದ ಬಾಗಲುಗಳು, ಮುತ್ತಿನ ಕಸಗಳು, ವಿಲಾಸಾರ್ಹಗಳಾದ ಪರ್ವತಗಳು,
ಕೇಳೀಗೃಹಗಳೂ, ಅನೇಕ ವರ್ಣವಿಚಿತ್ರ ಶಯ್ಯಾಸನಗಳೂ ಉಂಟಾಗಿ ಚಂದ್ರಸೂರ್ಯಾದಿಗಳ ಕಾಂತಿಗಳನ್ನು
ತಮ್ಮ ಕಾಂತಿಗಳಿಂದ ನಿರಾಕರಿಸುತ್ತ ಮೇರು ಪರ್ವತದೋಪಾದಿಯಲ್ಲಿ ನೇತ್ರಾನಂದಕರವಾಗಿ ಮೇಘ ಮಂಡಲ
ದೋಪಾದಿಯಲ್ಲಿ ಆಕಾಶವನ್ನು ಮುಟ್ಟಿ ಅನೇಕ ರತ್ನಸಮೂಹಗಳಿಂದ ಮನೋಹರವಾಗುವ ರೀತಿಗೆ ತನ್ನ ಸಾಮ
ರ್ಥ್ಯದಿಂದ (ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ) ದಿವ್ಯಗಳಾದ ಇಂದ್ರಬ್ರಹ್ಮಾದಿಗಳ ಸಭೆಗಳನ್ನು ನಿರಾಕರಿಸುವಂಥಾ
ದ್ದಾಗಿ ನಾಲ್ಕು ದಿಕ್ಕುಗಳಲ್ಲಿಯೂ ಹತ್ತು ಸಾವಿರ ಹಸ್ತಪ್ರಮಾಣವುಳ್ಳ ಒಂದು ಸಭೆಯನ್ನು ರಚಿಸಿ—ಅದರ ಮಧ್ಯದ
ಲ್ಲಿ ವೈಡೂರ್ಯ ಮಯಗಳಾದ ಎಲೆಗಳು, ಮರಕತ ಮಯವಾದ ದಂಟುಗಳುಳ್ಳಂಥಾದ್ದಾಗಿ ವಿಕಸಿತವಾದ ಸುವರ್ಣ
ಕಮಲಗಳು, ಇಂದ್ರನೀಲ ಮಣಿಗಳ ಕಾಂತಿಯನ್ನು ನಿರಾಕರಿಸುವ ಕನ್ನೈದಿಲುಗಳು, ಸುವರ್ಣ ಮಯಗಳಾದ
ಮತ್ಸ್ಯ ಕೂರ್ಮ ಮೊದಲಾದ ಜಲಜಂತುಗಳು, ಹಂಸ ಕಾರಂಡವ ಸಾರಸ ಚಕ್ರವಾಕ ಮೊದಲಾದ ಜಲಪಕ್ಷಿ
ಗಳು, ಪದ್ಮರಾಗ ನಿರ್ಮಿತವಾಗಿ ರಮಣೀಯವಾದ ಸೋಪಾನಗಳುಳ್ಳಂಥಾದ್ದಾಗಿ ಸಮಸ್ತ ಮಣಿ ಸಮೂಹಗಳ
ಶೋಭಿಸುವವಾದ್ದರಿಂದ—ಇದು ರತ್ನಖಚಿತ ಭೂಭಾಗವು—ಎಂಬ ಸಂಶಯಕ್ಕೆ ಆಸ್ಪದವಾಗಿ ಅರಿಯದೇ ಇರು
ವ ಜನರನ್ನು ತನ್ನಲ್ಲಿ ಬೀಳುವಹಾಗೆ ಮಾಡುವಂಥಾದ್ದಾಗಿ ಅಗಾಧವಾಗಿ ಅತ್ಯಂತ ನಿರ್ಮಲೋದಕವುಳ್ಳ ಒಂದು
ಸರಸ್ಸನ್ನೂ ನಿರ್ಮಿಸಿ, ಆ ಸಭಾಭವನದ ಸುತ್ತಲೂ ಗಿಳಿ ಕೋಗಿಲೆ ಗೊರಗ ಮೊದಲಾದ ನಾನಾವಿಧ ಪಕ್ಷಿಸಮೂ
ಹಗಳ ಕಲಕಲ ಧ್ವನಿಗಳು ಕಿವಿಗಳಿಗೆ ಸುಖವನ್ನುಂಟುಮಾಡಲು ಮುತ್ತಿನ ಆಕಾರವುಳ್ಳ ಜಲಬಿಂದುಗಳಿಂದ ಕೂಡಿ
ನಾನಾಪ್ರಕಾರವಾಗಿ ಪರಿಮಳಿಸುತ್ತಿರುವ ನಾನಾಪುಷ್ಪ ಪರಿಮಳ ಮಿಳಿತವಾದ ಮಂದಮಾರುತದಿಂದ ಒಪ್ಪುತ್ತ
ಲಿರುವ ಉದ್ಯಾನವನಗಳನ್ನೂ ನೇತ್ರಾನಂದಕರವಾದ ಕೊಳಗಳನ್ನೂ ಅಲ್ಲಲ್ಲಿ ಕಲ್ಪಿಸಿ—ಮಹತ್ತಾದ ಶರೀರಗಳುಳ್ಳ
ವರಾಗಿ ಮಹಾ ಬಲಶಾಲಿಗಳಾಗಿ ವಿಕೃತಾಕಾರಿಗಳಾಗಿ ವಿವಿಧಾಯುಧ ಹಸ್ತರಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತಲಿರುವ
ಕಿಂಕರರೆಂಬ ಎಂಟು ಸಾವಿರ ರಾಕ್ಷಸರನ್ನು ಆ ಸಭೆಯನ್ನು ರಕ್ಷಿಸುವದಕ್ಕೆ ಕಟ್ಟುಮಾಡಿ—ಈ ಪ್ರಕಾರದಿಂದ ಮ
ಯನು ಕೃಷ್ಣಾರ್ಜುನರಿಗೆ ಹೃದ್ಯವಾಗುವ ರೀತಿಗೆ ಹದಿನಾಲ್ಕು ತಿಂಗಳಲ್ಲಿ ಎಲ್ಲಿಯೂ ಜೋಡು ಇಲ್ಲದಂಥ ಸಭಾಭ
ವನವನ್ನು ರಚಿಸಿ ಧರ್ಮರಾಯನಿಗೆ ಕೊಟ್ಟನು."

## ೪ನೇ ಅಧ್ಯಾಯ.—ಸಭಾಕ್ರಿಯಪರ್ವ ಸಮಾಪ್ತಿ.

"ಕೇಳು ಜನಮೇಜಯನೇ, ಆ ಬಳಿಕ ಮಯನು ಅರ್ಜುನನನ್ನು ನೋಡಿ 'ಬಲಶಾಲಿಗಳಾಗಿ ದಿವ್ಯಗಳಾದ
ಶ್ವೇತಾಶ್ವಗಳನ್ನು ಕಟ್ಟಿರುವ ಅಗ್ನಿದತ್ತವೆಂಬ ರಥದಲ್ಲಿ ಒಪ್ಪುತ್ತ ಮಾಯಾಮಯವಾದ ಕಪಿಧ್ವಜದಲ್ಲಿ ಈ ಭೂತ
ಗಣಗಳು ನಿಂತು ಗಾಂಡೀವ ಧ್ವನಿಯನ್ನು ಕೇಳಿದಾಗಲೇ ಮೇಘ ಗಂಭೀರ ಧ್ವನಿಯಿಂದ ಅಟ್ಟಹಾಸವನ್ನು ಮಾಡು
ವವು; ಈ ಧ್ವಜವು ಪರ್ವತ ವೃಕ್ಷಗಳ ದೆಸೆಯಿಂದ ತಡೆಯಿಲ್ಲದೆ ಶತ್ರುಗಳಿಗೆ ಧೂಮಕೇತುವಿನೋಪಾದಿಯಲ್ಲಿ ತೋ
ರಿ ಭಯಂಕರವಾಗಿ ನೋಡುವಂಥಾ ಜನರಿಗೆ ಬಹುವರ್ಣ ಚಿತ್ರಿತವಾಗಿ ಯುದ್ಧದಲ್ಲಿ ಕಾಣಲ್ಪಡುವದು' ಎಂದು
ನುಡಿದು ಅರ್ಜುನನನ್ನು ಆಲಂಗಿಸಿಕೊಂಡು ತನ್ನ ನಿವಾಸಸ್ಥಾನಕ್ಕೆ ಹೋದನು. ಆ ಬಳಿಕ ಧರ್ಮರಾಯನು
ಒಂದು ಶುಭ ದಿನದಲ್ಲಿ ನಾನಾದೇಶಗಳ ದೆಸೆಯಿಂದ ಬಂದಿರುವ ಹತ್ತು ಸಾವಿರ ಮಂದಿ ಬ್ರಾಹ್ಮಣೋತ್ತಮರಿಗೆ
ಅಪರಿಮಿತವಾದ ಪರಮಾನ್ನಗಳಿಂದಲೂ ನಾನಾಪ್ರಕಾರವಾದ ಭಕ್ಷ್ಯಗಳಿಂದಲೂ ಬಹುಪ್ರಕಾರವಾದ ರಸಾಯನ
ಗಳಿಂದಲೂ ಮನೋಹರವಾದ ಫಲವಿಶೇಷಗಳಿಂದಲೂ ಚಿಗಳಿ ಕಡಬು ತಂಬಿಟ್ಟು ಕಡಲೆಯುಂಡಲಿಗೆ ಕರಜೀಕಾ
ಯಿ ಮೊದಲಾದ ಭಕ್ಷ್ಯಗಳಿಂದಲೂ ತೃಪ್ತಿಯನ್ನು ಮಾಡಿಸಿ, ರತ್ನಭೂಷಣ ಗಂಧಮಾಲ್ಯಗಳಿಂದ ಪ್ರತ್ಯೇಕ ಪ್ರ
ತ್ಯೇಕವಾಗಿ ಅಲಂಕರಿಸಿದ ಗೋಸಹಸ್ರಗಳನ್ನು ಕೊಟ್ಟು, ಅವರ ಸ್ವಸ್ತಿವಾಚನದ ಘೋಷಗಳು ಭೇರೀ ಮೃದಂಗಾ

ದಲು ತೃಪ್ತಿಯನ್ನು ಮಾಡಿದನು. ಸಕಲ ವೇದ ವಿಶಾರದನಾದ ನಾರದ ಮಹಾಮುನೀಂದ್ರನು ಸಂತೋಷಪಟ್ಟು ಧರ್ಮರಾಯನನ್ನು ನೋಡಿ ಧರ್ಮ ಕಾಮಾರ್ಥ ಸಹಿತವಾದ ಒಂದು ವಾಕ್ಯವನ್ನು ಹೇಳಿದನು: 'ಎಲೈ ಧರ್ಮರಾಯನೆ, ಅಪರಿಮಿತವಾದ ಧನಗಳನ್ನು ಸಂಪಾದಿಸಿ ಮನೋರಥಗಳನ್ನು ನೆರವೇರಿಸಿಕೊಂಡು ನಾನಾಪ್ರಕಾರವಾದ ಭೋಗಗಳನ್ನು ಪಡದು ಚಿತ್ತವನ್ನು ಧರ್ಮದಲ್ಲಿಯೇ ನಿಲ್ಲಿಸಿಕೊಂಡಿದ್ದೀಯೇ? ನಿಮ್ಮ ಕುಲವೃದ್ಧರಾದ ಅರಸುಗಳು ಸಮಸ್ತ ಜನಗಳಲ್ಲಿಯೂ ನಡದ ತೆರದಿಂದ ಅರ್ಥ ಧರ್ಮಗಳಿಂದ ಯಥೋಚಿತವಾಗಿ ಸಮಸ್ತರನ್ನೂ ರಕ್ಷಿಸುತ್ತಲಿದ್ದೀಯೇ? ಧರ್ಮದ ದೆಸೆಯಿಂದ ಅರ್ಥವನ್ನೂ ಅರ್ಥದ ದೆಸೆಯಿಂದ ಧರ್ಮವನ್ನೂ ಅಧಿಕವಾಗಿ ಪ್ರಿಯವಾದ ಕಾಮದ್ದೆಸೆಯಿಂದ ಈ ಧರ್ಮಾರ್ಥಗಳು ಬಾಧಿಸಲ್ಪಡದೆ ಇರುವರೀತಿಗೆ ನಡೆದುಕೊಂಡು ಆಯಾ ಕಾಲಗಳನ್ನು ತಿಳಿದುಕೊಂಡು ಧರ್ಮಾರ್ಥ ಕಾಮಗಳನ್ನು ಯಥೋಚಿತವಾಗಿ ಸಂಪಾದಿಸುತ್ತಲಿದ್ದೀಯೇ? ಷಡ್ಗುಣೈಶ್ವರ್ಯ ಸಂಪನ್ನನಾಗಿ ಸಾಮ ದಾನ ಭೇದ ದಂಡ ಉಪೇಕ್ಷೆ ಮಾಯೆ ಕಪಟ ಎಂಬ ಏಳು ಉಪಾಯಗಳನ್ನೂ ಸ್ವಶಕ್ತಿ ಪರಶಕ್ತಿಗಳನ್ನೂ ತಿಳಿದು ಜಾಗ್ರತೆಯಿಂದ ಇದ್ದೀಯೇ? ದುಷ್ಟನಿಗ್ರಹವು, ಶಿಷ್ಟಪರಿಪಾಲನವು, ನಿಯೋಗಿಗಳನ್ನು ಕಳುಹಿಸುವದು, ಬೇಹಿನವರನ್ನು ಕಳುಹಿಸುವದು, ಬಲಂಗಳಿಗೆ ಉಡುಗರೆಯನ್ನು ಕೊಟ್ಟು ಉತ್ಸಾಹ ಹುಟ್ಟಿಸುವದು, ಧರ್ಮ ಪರಿಪಾಲನವು, ಅರ್ಥಾರ್ಜನೆಯೂ, ತನ್ನ ಸೈನ್ಯಕ್ಕೆ ಸಂಬಳವನ್ನು ಕೊಡುವದು, ನಿತ್ಯ ಕಟ್ಟಲೆ ವಿಚಾರಿಸುವದು, ದೇವಾಲಯ ವಿಚಾರಣೆಯೂ ಎಂಬ ಹತ್ತು ಕಾರ್ಯಗಳನ್ನು ಮಾಡುತಲಿದ್ದೀಯೇ? ಪರರ ಸ್ವರೂಪವನ್ನು ತಿಳಿದು ಆಯಾ ರೀತಿಯಿಂದ ಕಾರ್ಯವನ್ನು ನಡಿಸುವದು, ಕೃಷಿ ವಾಣಿಜ್ಯವು, ದುರ್ಗಗಳು, ಬೇಕಾದ ತಾವುಗಳಲ್ಲಿ ಸೇತುಗಳನ್ನು ಕಟ್ಟುವದು, ಆನೇ ಕ್ಲೊಪ್ಪಲುಗಳನ್ನು ಸವರಿಸುವದು, ನವರತ್ನಗಳನ್ನು ಶೋಧಿಸುವದು, ಅರಸುಗಳದೆಸೆಯಿಂದ ಕಪ್ಪಗಳನ್ನು ತೆಗದುಕೊಳ್ಳುವದು, ಪಾಳುಭೂಮಿಗಳಲ್ಲಿ ಗ್ರಾಮಗಳನ್ನು ಕಟ್ಟಿಸುವದು ಎಂಬ ಈ ಅಷ್ಟವರ್ಗಗಳನ್ನು ವಿಚಾರಿಸಿ ಮಾಡುತಲಿದ್ದೀಯೇ? ಪುರೋಹಿತನು, ದ್ವಾರಪಾಲಕನು, ಅಂತಃಪುರದ್ವಾರಪಾಲಕನು, ಕಟ್ಟಿಗೆಯವನು, ಸಕಲ ಕಾರ್ಯ ನಿಯಾಮಕನು, ಧರ್ಮಾಧಿಕಾರಿಯು ಎಂಬ ಆರುಮಂದಿ ಮಂತ್ರಿಗಳು ಲೋಭರಹಿತರಾಗಿ ಪೂಜ್ಯರಾಗಿ ಸ್ವಾಮಿಕಾರ್ಯಪರರಾಗಿ ಧನಿಕರಾಗಿ ಸಂಚರಿಸುತಲಿದ್ದಾರೆಯೇ? ನೀನು ಮಂತ್ರಿಸಹಿತವಾಗಿ ಮಾಡುವಂಥಾ ಆಲೋಚನೆಗಳನ್ನು ಪರರು ಅರಿಯದಿರುವ ರೀತಿಗೆ ಮಂತ್ರಿಗಳಿಂದಲೂ ನಿನ್ನಿಂದಲೂ ಗೋಪ್ಯವಿರುವದೇ? ಸಂಧಿವಿಗ್ರಹಗಳನ್ನು ತಿಳಿದು ನಡಸುತ್ತಲಿದ್ದೀಯೇ? ಉದಾಸೀನ ಪುರುಷನಲ್ಲಿ ಉದಾಸೀನ ವೃತ್ತಿಯನ್ನೂ ಮಧ್ಯಮ ಪುರುಷನಲ್ಲಿ ಮಧ್ಯಮ ವೃತ್ತಿಯನ್ನೂ ಮಾಡುವೆಯೇ? ಬುದ್ಧಿಮಾರ್ಗದಲ್ಲಿ ನಿನಗೆ ಸಮಾನರಾಗಿ ನಡತೆಗಳಲ್ಲಿ ಪರಿಶುದ್ಧರಾಗಿ ಕಾರ್ಯಗಳಲ್ಲಿ ಅಪ್ರಮತ್ತರಾಗಿ ಮಹಾ ಕುಲದಲ್ಲಿ ಹುಟ್ಟಿರುವಂಥಾವರಾಗಿ ನಿನ್ನಲ್ಲಿ ಅನುರಾಗವುಳ್ಳಂಥಾ ಮಂತ್ರಿಗಳನ್ನು ಸಂಪಾದಿಸಿ ಅವರಿಗೆ ಬಹುಮಾನವನ್ನು ಮಾಡುವೆಯೇ? ಬಹುಜನಗಳನ್ನು ಕೂಡಿಸದೆ (ನೀನೊಬ್ಬನೇ ಇರದೆ) ಆಪ್ತಜನರೊಡನೆ ಕೂಡಿ ಲೋಕದವರು ಅರಿಯದಿರುವ ರೀತಿಗೆ ಕಾರ್ಯಾಲೋಚನೆಯನ್ನು ಮಾಡುವೆಯೇ? ಶಾಸ್ತ್ರಜ್ಞರಾಗಿ ಮಂತ್ರಕಲಾಪ್ರವೀಣರಾಗಿರುವ ಮಂತ್ರಿಗಳೊಡನೆ ಮಾಡಿದ ಆಲೋಚನೆಯು ವಿಜಯಂಗಳಷ್ಟಕ್ಕೂ ಮೂಲಕಾರಣವಾಗಿರುವದು. ಪ್ರಾತಃಕಾಲಕ್ಕೆ ಮೊದಲೇ ನಿದ್ರೆಯ ದೆಸೆಯಿಂದೆದ್ದು ನಾನಾಪ್ರಕಾರವಾದ ಕಾರ್ಯಗಳಿಗೆ ತಕ್ಕ ಉಪಾಯಗಳನ್ನು ಯೋಚಿಸುವೆಯೇ? ಸುಲಭ ಪ್ರಯತ್ನದಿಂದ ಬಹು ಫಲಗಳು ಲಭಿಸುವಹಾಗೆ ಚಾತುರ್ಯದಿಂದ ಕಾರ್ಯಗಳನ್ನು ಮಾಡುವೆಯೇ? ಯೋಚಿಸಿದ ಕಾರ್ಯಗಳನ್ನು ತಡಮಾಡದೇ ಶೀಘ್ರವಾಗಿ ಮಾಡುವೆಯೇ? ಸ್ವಲ್ಪವಾದ ಕಾರ್ಯವನ್ನು ಮಾಡುವಂಥಾ ಪುರುಷರನ್ನು ಲಕ್ಷ್ಯಮಾಡಿ ಮಾತನಾಡದೆ ಆತನನ್ನು ಬಿಡದೆ ಮಧ್ಯಮ ಪ್ರಕಾರದಿಂದ ನೋಡುವೆಯೇ? ಕಾರ್ಯವಾದ ಮೇಲೆ ತಿಳಿಯುವದೇ ಹೊರ್ತಾಗಿ ನಿನ್ನ ಮನಸ್ಸಿನಲ್ಲಿದ್ದ ಕಾರ್ಯವು ಮೊದಲು ಯಾರಿಗೂ ತಿಳಿಯದ ರೀತಿಗೆ ಇರುವೆಯೇ? ಸಕಲ ವಿದ್ಯಾಸಂಪನ್ನರಾದ ಶಿಕ್ಷಕರು ನಿನ್ನ ಕುಮಾರರನ್ನೂ ನಿನಗೆ ಪರಮ ಮಿತ್ರರಾದ ಯಾದವಶ್ರೇಷ್ಟರನ್ನೂ ಆಯಾ ವಿದ್ಯಾ ವಿಶೇಷಗಳಲ್ಲಿ ನಿಪುಣರಾಗುವ ರೀತಿಗೆ ರಕ್ಷಿಸುತ್ತಾರೆಯೇ? ಅಪ್ರಯೋಜಕರಾದ ಹತ್ತು ಸಾವಿರಮಂದಿಯೊಳಗೆ ಸಕಲಾಂಶಗಳಲ್ಲಿ—ಇವನೊಬ್ಬನೇ ಸಮರ್ಥನು ಇವನೇ ಸಾಕು—ಎನಿಸಿಕೊಳ್ಳುವ ಪಂಡಿತನ

ನ್ನು ಸಂಪಾದಿಸಿದ್ಧೀಯೋ? ಅಂಥಾ ಪಂಡಿತನು ಮಹತ್ತಾದ ಆಪತ್ತುಗಳನ್ನು ಪರಿಹರಿಸಿ ಬಹು ಶ್ರೇಯಸ್ಸನ್ನು ಸಂಪಾದಿಸುವನು. ಶೂರನಾಗಿ ಬುದ್ಧಿಸಂಪನ್ನನಾಗಿ ಉಪಶಾಂತನಾಗಿ ವಿಚಕ್ಷಣನಾಗಿರುವ ಮಂತ್ರಿಯು ಒಬ್ಬನಾದರೂ ಅರಸಿಗೂ ಅರಸುಮಕ್ಕಳಿಗೂ ಸಕಲ ಕಾರ್ಯವನ್ನೂ ನಿರ್ವಹಿಸಿ ಸಕಲ ಶ್ರೇಯಸ್ಸನ್ನು ಸಂಪಾದಿಸುವನು; ಅಂಥಾ ಮಂತ್ರಿಯನ್ನು ಸಂಪಾದಿಸಿದ್ಧೀಯೋ? ಜಲದುರ್ಗಂಗಳು ವನದುರ್ಗಂಗಳು ಪಂಕದುರ್ಗಂಗಳು ಗಿರಿದುರ್ಗಂಗಳು ಮೊದಲಾದ ದುರ್ಗಸ್ಥಾನಗಳಲ್ಲಿ ಧನಧಾನ್ಯ ಮೊದಲಾದ ವಸ್ತುಗಳನ್ನು ಆಯುಧ ಫಿರಂಗಿ ಮಕರ ಡಿಬ್ಬಿ ಮೊದಲಾದ ಯುದ್ಧಸಾಧನಗಳನ್ನೂ ಸಂಪೂರ್ಣವಾಗಿ ತುಂಬಿಸಿ ಅದಕ್ಕೆ ತಕ್ಕ ಭಟರನ್ನು ಕಾದು ಇರುವ ಹಾಗೆ ಕಟ್ಟುಮಾಡಿಸಿ ಪರಾಂಬರಿಸಿಕೊಳ್ಳುತ್ತಿದ್ದೀಯೋ? ಪರರಾಜ ಪಟ್ಟಣದಲ್ಲಿರುವ ಮಂತ್ರಿಯು, ಪುರೋಹಿತನು, ಯುವರಾಜನು, ದ್ವಾರಪಾಲಕನು, ಅಂತಃಪುರ ದ್ವಾರಪಾಲಕನು, ಅಂತಃಪುರಾಧಿಕಾರಿಯು, ಸೆರೆಮನೆಯ ಅಧಿಕಾರಿಯು, ಸಕಲ ಕಾರ್ಯ ನಿಯಾಮಕನು, ಧರ್ಮಾಧಿಕಾರಿಯು, ಸೇನಾಧಿಪತಿಯು, ಪುರಾಧ್ಯಕ್ಷನು, ಅಲ್ಪಾಧಿಕಾರಿಯು, ಕಾವಾಟದ ಅಧಿಕಾರಿಯು, ಸಭೆಯಲ್ಲಿ ಧರ್ಮಗಳನ್ನು ತೀರಿಸುವಂಥಾವನು, ದಂಡಪಾಲಕನು, ದುರ್ಗಪಾಲಕನು, ರಾಷ್ಟ್ರಪಾಲಕನು, ಎಂಬ ಹದಿನೆಂಟು ಸ್ಥಾನಗಳಲ್ಲಿರುವ ಅಧಿಕಾರಿ ಜನಗಳ ಸಮೀಪದಲ್ಲಿ ಪರಸ್ಪರ ಒಬ್ಬರಿಗೊಬ್ಬರು ತಿಳಿಯದಿರುವರೀತಿಗೆ ಮೂರು ಮೂರು ಮಂದಿಯಾಗಿ ಚೇರಿಸವರನ್ನು ಕಳುಹಿಸಿ ಹತ್ತು ಐದುಸಾರಿ ವಿಚಾರಿಸುತ್ತಿದ್ಧೀಯೋ? ಶತ್ರುರಾಯರನ್ನು ಪ್ರಯತ್ನದಿಂದ ವಿಚಾರಿಸಿಕೊಂಡು ನೀನು ಮಾಡುವಂಥಾ ಕಾರ್ಯಗಳು ಅವರಿಗೆ ತಿಳಿಯದಿರುವರೀತಿಗೆ ನಡದುಕೊಳ್ಳುತ್ತಿದ್ದೀಯೋ? ವಿನಯ ಸಂಪನ್ನನಾಗಿ ಸತ್ಕುಲ ಪ್ರಸೂತನಾಗಿ ವೇದಶಾಸ್ತ್ರಸಂಪನ್ನನಾಗಿ ನಿರ್ಮತ್ಸರನಾಗಿರುವ ಪುರೋಹಿತನನ್ನು ಸನ್ಮಾನದಿಂದ ನೋಡಿಕೊಂಡು ಬರುವೆಯೋ? ಅಗ್ನಿತ್ರಯಲಕ್ಷಣದಲ್ಲಿ ನಿಯುಕ್ತನಾಗಿ, ಅಗ್ನಿಹೋತ್ರಕ್ರಿಯಾಭಿಜ್ಞನಾಗಿ, ಬುದ್ಧಿ ಸಂಪನ್ನನಾಗಿ, ಲಲಿತ ಹೃದಯನಾದ ಋತ್ವಿಜನು ಮಾಡಿದಂಥಾ ಹೋಮವನ್ನು ಆಯಾ ಸಮಯಗಳಲ್ಲಿ ನಿನಗೆ ತಿಳುಹಿಸುವನೇ? ಶಿಕ್ಷಾ ಕಲ್ಪಂಗಳು ಮೊದಲಾದ ವೇದಾಂಗಗಳನ್ನು ತಿಳಿದಿರುವ ಜ್ಯೋತಿಶ್ಶಾಸ್ತ್ರಭಿಜ್ಞನು ಪಂಚಾಂಗವನ್ನು ಹೇಳುವನೇ? ಗಣಿತದಿಂದ ಗ್ರಹಸ್ಫುಟವನ್ನು ಮಾಡುವಂಥಾ ದೈವಜ್ಞನು ಬರುವ ಶುಭಾ ಶುಭಗಳನ್ನು ಪ್ರತಿ ದಿವಸವೂ ತಿಳುಹಿಸುವನೇ? ಉತ್ತಮಾಧಮ ಮಧ್ಯಮರಾದ ಸೇವಕ ಜನರ ತಾರತಮ್ಯಗಳನ್ನು ತಿಳಿದು ಅವರವರಿಗೆ ಉಚಿತವಾದ ಕಾರ್ಯಗಳನ್ನು ಹೇಳುತ್ತೀಯೋ? ಕಪಟೋಪಾಯಗಳಿಗೆ ಒಳಗಾಗದೆ ಲಂಚಗಳನ್ನು ಹಿಡಿಯದೆ ಪರಿಶುದ್ಧ ಹೃದಯರಾಗಿ ಬಂದಂಥಾ ಮಹಾಕಾರ್ಯವನ್ನು ಮಾಡಿದಂಥಾ ಮಂತ್ರಿಗಳನ್ನು ಶ್ರೇಷ್ಠವಾದ ಕಾರ್ಯಗಳಲ್ಲಿ ಕಟ್ಟುಮಾಡುವೆಯೋ? ಅಂಥಾ ಮಂತ್ರಿಗಳು ಉಗ್ರವಾದ ದಂಡದಿಂದ ಪ್ರಜೆಗಳನ್ನು ಬಾಧಿಸದೆ ರಾಜ್ಯವನ್ನು ಪರಾಂಬರಿಸುವರೇ? ಸ್ತ್ರೀಜನರು ಬಲಾತ್ಕಾರದಿಂದ ಕೈಹಿಡಿಯುವ ಕಾಮುಕರನ್ನು ತಿರಸ್ಕರಿಸುವಹಾಗೂ ಯಜ್ಞಮಾಡುವ ಋತ್ವಿಕ್ಕುಗಳು ಪತಿತನನ್ನು ನಿಂದಿಸುವಹಾಗೂ ನಿನ್ನನ್ನು ಅವಮಾನ ಮಾಡದೆ ಪೂಜ್ಯನಾಗಿ ಎಣಿಸುವರೇ? ಶೂರನಾಗಿ, ಬುದ್ಧಿ ಸಂಪನ್ನನಾಗಿ, ಧೈರ್ಯಶಾಲಿಯಾಗಿ, ಪರಿಶುದ್ಧನಾಗಿ, ಸತ್ಕುಲ ಪ್ರಸೂತನಾಗಿರುವ ಸೇನಾಧಿಪತಿಯು ಅನುರಕ್ತನಾಗಿರುವನೇ? ಒಂದೊಂದು ಯುದ್ಧ ಸಮಯದಲ್ಲಿ ಶೌರ್ಯ ಧುರಂಧರರಾಗಿ ಪರಾಕ್ರಮವನ್ನು ತೋರಿಸಿದ ವೀರಭಟರಿಗೆ ತಕ್ಕಂಥಾ ಬಹುಮಾನವನ್ನು ಮಾಡುತ್ತಿದ್ದೀಯೋ? ನಿನ್ನ ಸೇನೆಯವರಿಗೆ ಸಮಯವನ್ನು ತಪ್ಪದೆ ಸಂಬಳವನ್ನು ಕೊಟ್ಟು ಅವರವರಿಗೆ ನೀನೇ ಪ್ರತ್ಯೇಕ ಪ್ರತ್ಯೇಕವಾಗಿ ಕಾಣುವೆಯೋ? ಸೇನೆಯವರ ಮನಸ್ಸು ನೊಂದರೆ ಸಕಲ ಕಾರ್ಯಗಳೂ ಕೆಟ್ಟು ಹೋಗುವವು. ನಿನ್ನಲ್ಲಿ ಅನುರಕ್ತರಾದ ಬಂಧುಜನರು ಯುದ್ಧದಲ್ಲಿ ದೇಹಗಳನ್ನು ತೃಣೀಕರಿಸಿ ಕಾರ್ಯಗಳನ್ನು ಮಾಡುವರೆ? ಬಹು ಪ್ರಯೋಜನಾಪೇಕ್ಷೆ ಇರುವದರಿಂದ ನೀತಿಯನ್ನು ತಪ್ಪಿ ಮಿಕ್ಕಾದವರ ಕೂಡೆ ವಿಚಾರಿಸದೆ ಸ್ವೇಚ್ಛಾವಿಹಾರದಿಂದ ನಾಲ್ಕು ಮುಖದಲ್ಲಿಯೂ ಯುದ್ಧವನ್ನು ಮಾಡದೆ ಇರುವೆಯೋ? ವಿಶೇಷಕಾರ್ಯಗಳನ್ನು ಮಾಡದೆ ಇರುವಂಥಾ ಪುರುಷನನ್ನು ಭೃತ್ಯನೆಂದು ಉದಾಸೀನವನ್ನು ಮಾಡದೆ ಉಚಿತ ಸತ್ಕಾರದಿಂದ ಬಹುಮಾನ ಮಾಡುವೆಯೋ? ಯುದ್ಧರಂಗದಲ್ಲಿ ನಿನ್ನ ಕಾರ್ಯಾರ್ಥವಾಗಿ ಪ್ರಾಣಗಳನ್ನು ಬಿಟ್ಟ ವೀರಭಟರ ಹೆಂಡತಿಗಳಿಗೂ ಮಕ್ಕಳಿಗೂ ಆಪತ್ಕಾಲದಲ್ಲಿ ಸಹಾಯವನ್ನು ಮಾಡಿದವರ ಹೆಂಡತಿಗಳಿಗೂ

ಸಾಕಲ್ಯವಾಗಿ ಸಂಬಳಗಳನ್ನು ಕೊಟ್ಟು ಸಂರಕ್ಷಿಸುತ್ತಿದ್ದೀಯೇ? ಭಯಪಟ್ಟು ಬಂದವನನ್ನೂ, ಶರಣಾಗತನಾದ ಶತ್ರುವನ್ನೂ ಯುದ್ಧದಲ್ಲಿ ನಿನ್ನಿಂದ ಜಿತನಾದವನನ್ನೂ ಮಕ್ಕಳಂತೆ ಮನ್ನಿಸಿ ರಕ್ಷಿಸುತ್ತಿದ್ದೀಯೇ? ಸಮಸ್ತ ಜನರಲ್ಲಿಯೂ ಸಮಚಿತ್ತನಾಗಿ ತಾಯಿತಂದೆಗಳೋಪಾದಿಯಲ್ಲಿ ರಕ್ಷಿಸುತ್ತಿದ್ದೀಯೇ? ಶತ್ರುವು ಹೀನಬಲನಾಗಿರುವ ಸಮಯದಲ್ಲಿ ಊಂಬಳಿಯವರು ತಿಂಗಳುಗಟ್ಲೆ ಸಂಬಳದವರು ಸ್ನೇಹಿತರು ಎಂಬ ಮೂರು ಪ್ರಕಾರಗಳಾದ ಬಲಗಳಿಗೆ ಪಡಿಪಾನ್ಯವನ್ನು ಕೊಟ್ಟು ಹಿಂದೆ ಇರುವ ಶತ್ರುವಿನ ಭಯವು ತನ್ನ ಪಟ್ಟಣಕ್ಕೆ ಬಾರದೆ ಇರುವ ರೀತಿಗೆ ತಕ್ಕಂಥಾವರನ್ನಿರಿಸಿ ಶೀಘ್ರವಾಗಿ ಹೋಗಿ ಶತ್ರುಗಳನ್ನು ಜೈಸುವೆಯೋ? ಶತ್ರುಪಕ್ಷದಲ್ಲಿರುವವರಿಗೆ ರತ್ನ ಸುವರ್ಣ ವಸ್ತ್ರಗಳನ್ನು ಕೊಟ್ಟು ನಿನ್ನ ಆಧೀನವಾಗಿ ಮಾಡಿಕೊಳ್ಳುವೆಯೋ? ಮೊದಲು ನೀನು ಸಕಲಾಂಶದಲ್ಲಿ ಏಕಾಗ್ರಚಿತ್ತನಾಗಿ ಜಿತೇಂದ್ರಿಯನಾಗಿ ಮದೋನ್ಮತ್ತರಾಗಿ ಜಿತೇಂದ್ರಿಯರಲ್ಲದಿರುವ ಶತ್ರುಗಳನ್ನು ಜಯಿಸುವೆಯೋ? ನೀನು ಹೊರಡುವದಕ್ಕಿಂತಲೂ ಮೊದಲೇ ಸಾಮ ಭೇದ ದಾನ ದಂಡಗಳೆಂಬ ನಾಲ್ಕು ಉಪಾಯಗಳನ್ನು ನಡಸಿ ಶತ್ರುಗಳ ರಾಜ್ಯವನ್ನು ನಿನ್ನ ಆಧೀನಮಾಡಿಕೊಂಡು ಪರಿಪಾಲಿಸುವೆಯೋ? ಆನೆಗಳು ಫಿರಂಗಿಗಳು ಕುದುರೆಗಳು ಮೊದಲಾದ ಯಂತ್ರವಿಶೇಷಗಳು ಕೋಟೆಕೊತ್ತಲಗಳು ಆಯುಧಗಳು ಪದಾತಿಗಳು ಧನಗಳು ರಥಗಳೆಂಬ ಎಂಟು ಅಂಗಗಳೊಡನೆ ಕೂಡಿರುವ ಮೂಲಬಲವು ಶ್ರೇಣಿಬಲವು ಭೃತಿಬಲಗಳೆಂಬ ನಾಲ್ಕು ಪ್ರಕಾರವಾದ ಬಲಗಳು ಶತ್ರುಗಳನ್ನು ಜಯಿಸುತ್ತಲಿವೆಯೋ? ಪರರಾಷ್ಟ್ರಗಳನ್ನು ಮೊದಲು ನೀರು ಹುಲ್ಲು ಸೊಪ್ಪು ಮೊದಲಾದವುಗಳಿಲ್ಲದಹಾಗೆ ಮಾಡಿ ಆ ಬಳಿಕ ವಿಜಯ ಯಾತ್ರೆಯಿಂದ ಶತ್ರುಗಳನ್ನು ಜಯಿಸುವೆಯೋ? ಸ್ವರಾಷ್ಟ್ರ ಪರರಾಷ್ಟ್ರಗಳಲ್ಲಿ ನಿನ್ನಿಂದ ಯುಕ್ತರಾದ ಅಧಿಕಾರ ಪುರುಷರು ಅನ್ಯೋನ್ಯ ಸಹಾಯರಾಗಿರುವರೇ? ಪ್ರತಿದಿನವೂ ನಿನಗೆ ಅನುಭವಯೋಗ್ಯವಾದ ಭಕ್ಷ್ಯಗಳನ್ನು ಉದಕವನ್ನು ಪರಿಮಳದ್ರವ್ಯವನ್ನು ಪುಷ್ಪಮಾಲ್ಯಗಳನ್ನು ಹಿತರಾದ ವೈದ್ಯರು ವಿಚಾರಿಸುತ್ತಲಿದ್ದಾರೆಯೋ? ಬೊಕ್ಕಸಗಳಲ್ಲಿ ಉಗ್ರಾಣಗಳಲ್ಲಿ ಕೋಟೆಗೆ ಕಿಲಾರಿಗಳ ಕರವಟ್ಟಿಗಳಲ್ಲಿ, ಕತ್ತಿಬೊಕ್ಕಸಗಳಲ್ಲಿ, ಊರುಬಾಗಲುಗಳಲ್ಲಿ, ಹಣಬರುವಂಥಾ ಬಳಿಯಲ್ಲಿ ತಕ್ಕಂಥಾವರನ್ನು ಇರಿಸಿ ವಿಚಾರಿಸಿಕೊಳ್ಳುವೆಯೋ? ಹೊರಗೆ ಒಳಗೆ ಇರುವಂಥಾ ಜನರಿಂದ ಕಪಟೋಪಾಯಗಳು ನಡೆಯದೇ ಇರುವರೀತಿಗೆ ಆತ್ಮಸಂರಕ್ಷಣವನ್ನು ಮಾಡಿಕೊಂಡು ಅವರಿಗೆ ಪರಸ್ಪರ ಕಲಹವಿಲ್ಲದರೀತಿಗೆ ರಕ್ಷಿಸುತ್ತಿದ್ದೀಯೇ? ದ್ಯೂತವು ಪಾನವು ಬೇಟೆಯು ಸ್ತ್ರೀವಿಹಾರವು ಇವು ಮೊದಲಾದ ವ್ಯಸನಗಳಿಗೋಸ್ಕರ ಪೂರ್ವಾಹ್ಣದಲ್ಲಿ ಧನವ್ಯಯವನ್ನು ಮಾಡದೆ ಇದ್ದೀಯೇ? ನಾನಾಪ್ರಕಾರದಿಂದ ನೀನು ಸಂಪಾದಿಸುವಂಥಾ ಧನವನ್ನು ನಾಲ್ಕು ಭಾಗಗಳು—ಮೂರುಪಾಲಾದರೂ ಎರಡುಪಾಲಾದರೂ ಕಡೆಗೆ ಒಂದು ಪಾಲಾದರು ಬೊಕ್ಕಸದಲ್ಲಿ ನಿಲ್ಲಿಸಿ ವ್ಯಯಮಾಡದೇ ಇದ್ದೀಯೇ? ಗುರುಜನರನ್ನು, ವಯೋವೃದ್ಧರನ್ನು, ಆಶ್ರಿತರನ್ನು, ದರಿದ್ರರನ್ನು, ಜ್ಞಾತಿಗಳನ್ನು, ವರ್ತಕರನ್ನು, ಶಿಲ್ಪಿಗಳನ್ನು, ಉಚಿತಪ್ರಕಾರವಾಗಿ ಧನಧಾನ್ಯಗಳನ್ನು ಕೊಟ್ಟು ರಕ್ಷಿಸುವೆಯೋ? ಹಣಬರುವಂಥಾ ತಾವಿನಲ್ಲಿರಿಸಿರುವ ಕರಣೀಕರನ್ನು ಹಸ್ತಕರನ್ನು ಕರೆತರಿಸಿ ಪ್ರತಿದಿನವೂ ಆದಾಯವ್ಯಯಗಳನ್ನು ವಿಚಾರಿಸುತ್ತಿದ್ದೀಯೇ? ಕಾರ್ಯಗಳಲ್ಲಿ ಸಮರ್ಥರಾಗಿ ನಿನಗೆ ಹಿತವನ್ನೇ ಬಯಸಿ ಸ್ವಕಾರ್ಯಪರರಲ್ಲದೆ ಇರುವಂಥಾ ಜನರಲ್ಲಿ ಮೊದಲಿದ್ದ ಗುಣದೋಷಗಳನ್ನು ಎಣಿಸದೆ ಇದ್ದೀಯೋ? ಅವರವರ ಉದ್ಯೋಗಗಳನ್ನು ಅವರವರಿಗೆ ನಡಸುತ್ತಲಿದ್ದೀಯೋ? ವೃದ್ಧರನ್ನೂ ಶತ್ರುಗಳನ್ನೂ, ಅಸಮರ್ಥರನ್ನೂ ಲುಬ್ಧರನ್ನೂ ಪಾಪಾತ್ಮರನ್ನೂ ಅಧಿಕಾರದಲ್ಲಿ ಇರಿಸದೇ ಇದ್ದೀಯೇ? ನಿನ್ನ ಕುಮಾರವರ್ಗವು ಲುಬ್ಧರಾದ ಸಾಮಾದಿಕರು ಕಳ್ಳರು ಮೊದಲಾದವರು ರಾಷ್ಟ್ರದಲ್ಲಿ ಇರುವ ಪ್ರಜೆಗಳನ್ನು ಪೀಡಿಸದೆ ಇದ್ದಾರೆಯೇ? ನೀನು ಉಚಿತವಾಗಿ ಆರನೇ ಭಾಗವನ್ನು ತೆಗದುಕೊಂಡು ಕೃಷಿಮಾಡುವಂಥಾವರನ್ನು ರಕ್ಷಿಸುವೆಯೋ? ಬೇಕಾದತಾವುಗಳಲ್ಲಿ ಕೆರೆಗಳನ್ನು ಕಟ್ಟಿಸಿ ಕಾಲುವೆಗಳನ್ನು ಮಾಡಿಸಿ ನಿನ್ನ ರಾಜ್ಯವನ್ನು ನದೀಮಾತೃಕವಾಗಿ ಮಾಡಿದ್ದೀಯೋ? ದರಿದ್ರರಾದ ಪ್ರಜೆಗಳಿಗೆ ಮೊವಗಡವಾಗಿ ಧನಧಾನ್ಯಗಳನ್ನು ಕೊಟ್ಟು ನೂರಕ್ಕೆ ಒಂದರ ಪ್ರಕಾರವಾಗಿ ಬಡ್ಡಿಯನ್ನು ತೆಗದುಕೊಂಡು ರಕ್ಷಿಸುವೆಯೋ? ವೈಶ್ಯರಲ್ಲಿ ಪ್ರೀತಿಯನ್ನು ಮಾಡುತ್ತ ವ್ಯಾಪಾರಗಳನ್ನು ನಡಸುತ್ತ ಸುಂಕ ಸೂತ್ರಗಳ ತೆರವನ್ನು ವಿಚಾರಿಸುತ್ತ ಮಿಕ್ಕಾದ ವ್ಯಾಪಾರ ಜನಗ

ಳನ್ನು ರಕ್ಷಿಸುವೆಯೋ? ಪರಿಶುದ್ಧರಾಗಿ ಪ್ರಾಜ್ಞರಾದ ನಿನ್ನ ಮಂತ್ರಿಗಳು ಕರ್ಮಾರಂಭೋಪಾಯವು ಪುರುಷ ದ್ರವ್ಯ ಸಂಪತ್ತಿಯು ದೇಶಕಾಲವಿಭಾಗವು ವಿನಿಪಾತಪ್ರತೀಕಾರವು ಕಾರ್ಯಸಿದ್ಧಿಯು ಎಂಬ ಮಂತ್ರಕ್ಕೆ ಅಂಗಪಂಚಕವನ್ನು ತಿಳಿದು ಒಂದೊಂದು ಕಾರ್ಯಕ್ಕೆ ಐದು ಮಂದಿ ಕೂಡಿ ಯೋಚನೆಯನ್ನು ಮಾಡುತ್ತ ನಿನ್ನ ರಾಷ್ಟ್ರಕ್ಕೆ ಶುಭವನ್ನು ಮಾಡುತಲಿದ್ದಾರೆಯೋ? ಪಟ್ಟಣಸಂರಕ್ಷಣಾರ್ಥವಾಗಿ ನಾಲ್ಕು ದಿಕ್ಕುಗಳಲ್ಲಿಯೂ ಗಡಿಗಳನ್ನು ಕಟ್ಟಿಸಿ ಅವನ್ನು ಸಂರಕ್ಷಿಸುವದಕ್ಕೋಸ್ಕರ ತಕ್ಕ ವೀರಭಟರನ್ನು ನಿಯಮಿಸಿದ್ದೀಯೋ? ಸಮವಿಷಮಸ್ಥಳಗಳಿಂ ದೇಶಿಸದೆ ಸಂಚರಿಸಿ ವಿಶೇಷಗಳನ್ನು ತಿಳಿದುಬರುವಂಥಾ ಬೇಹಿನವರನ್ನು ಕಳುಹಿಸಿ ಅವರ ಹೆಂಡತಿಮಕ್ಕಳನ್ನು ಪಟ್ಟಣದಲ್ಲಿಯೇ ಇರಿಸಿಕೊಂಡು ಸಂರಕ್ಷಿಸುತಲಿದ್ದೀಯೋ? ಸ್ತ್ರೀಜನಗಳನ್ನು ನಂಬಿ ಅಂತರಂಗವಾದ ಕಾರ್ಯಗಳನ್ನು ತಿಳುಹಿಸದೆ ಅವರ ಮನಸ್ಸಿಗೆ ಪ್ರೀತಿಯನ್ನು ಮಾಡುತ್ತ ರಕ್ಷಿಸುತ್ತಲಿದ್ದೀಯೋ? ರಾತ್ರಿ ನೀನು ಮಲಗಿಕೊಳ್ಳುವ ಸಮಯದಲ್ಲಿ ಬೇಹಿನವರನ್ನು ಕರತರಿಸಿ ಸಕಲ ಕಾರ್ಯಗಳನ್ನು ಪರಾಂಬರಿಸುತ್ತ ಮತ್ತು ಅಂತಃಪುರದಲ್ಲಿರುವ ವಿಶೇಷಗಳನ್ನು ತಿಳಿಯುತ್ತ ಅನೇಕ ಭೋಗಗಳನ್ನು ಪಡದು ಸಂತೋಷಪಡುವೆಯೋ? ಉದಯಕಾಲದಲ್ಲೆದ್ದು ಸಕಲಭೂಷಣ ಭೂಷಿತನಾಗಿ ಮಂತ್ರಿಜನ ಸಮೇತನಾಗಿ ಪಟ್ಟಣದಲ್ಲಿರುವ ಜನಗಳ ಮನಸ್ಸಿಗೆ ಪ್ರಿಯವಾಗುವಹಾಗೆ ಸಂಚರಿಸುವಾಗ ಆಪ್ತಭಟರು ಕೆಂಪಿನ ವಸ್ತ್ರಗಳನ್ನು ಧರಿಸಿ ಚವ್ರಕುಳಿ ಮೊದಲಾದ ಭೂಷಣಗಳಿಂದ ಅಲಂಕೃತರಾಗಿ ಬಿಚ್ಚುಕತ್ತಿಗಳನ್ನು ಹಿಡುಕೊಂಡು ನಿನ್ನ ಸುತ್ತಲು ನಡೆದುಬರುವರೇ? ಪೂಜ್ಯರಲ್ಲಿ ಪೂಜೆಯನ್ನು ಮಾಡುತ್ತ ದಂಡಿಸುವದಕ್ಕೆ ಯೋಗ್ಯರಾದ ಜನಗಳಲ್ಲಿ ಯಮನೋಪಾದಿಯಲ್ಲಿ ಭಯಂಕರನಾಗಿ ತೋರುತ್ತಲಿದ್ದೀಯೋ? ಇವರು ಪ್ರಿಯರು ಇವರು ಅಪ್ರಿಯರೆಂದು ಚನ್ನಾಗಿ ವಿಚಾರಿಸಿಕೊಂಡು ಇದ್ದೀಯೋ? ಸತ್ಪುರುಷರ ಸೇವೆಗಳ ದೆಸೆಯಿಂದ ಮನೋರೋಗಗಳನ್ನು ಔಷಧ ಸೇವನೆಗಳ ದೆಸೆಯಿಂದ ಶರೀರ ರೋಗಗಳನ್ನು ಪರಿಹರಿಸಿಕೊಂಡು ಸುಖವಾಗಿದ್ದೀಯೋ? ಇವನು ನಮ್ಮವನೆಂದು ಅಭಿಮಾನಹುಟ್ಟುವದಕ್ಕೋಸ್ಕರ ಒಳ್ಳೇಮಾತುಗಳಿಂದ ಯಾವಾಗ್ಯೂ ಸಮಸ್ತರಾದವರನ್ನು ವಶಮಾಡಿಕೊಂಡು ಇರುತ್ತಿದ್ದೀಯೋ? ಕಾಯವು ಬಾಲವು ಗ್ರಹವು ಊರ್ಧ್ವಾಂಗವು ಶಲ್ಯವು ದಂಷ್ಟ್ರಯು ಜಾರೆಯು ಎಂಬ ಅಷ್ಟಾಂಗಗಳುಳ್ಳ ಆಯುರ್ವೇದದಲ್ಲಿ ವಿಶಾರದರಾಗಿ ಪ್ರಿಯರಾಗಿ ಅನುರಕ್ತರಾಗಿರುವ ವೈದ್ಯರು ನಿನ್ನ ಶರೀರಕ್ಕೆ ಹಿತವನ್ನು ಮಾಡುತಲಿದ್ದಾರೆಯೋ? ಕಾಮ ಮೋಹಾಸಕ್ತನಾಗಿ ನನೆಗೆ ಬಂದಂಥ ಯಾಚಕರನ್ನು ಶತ್ರುಗಳನ್ನು ನಿರಾಕರಿಸುವರೀತಿಗೆ ನಿರಾಕರಿಸದೆ ಸತ್ಕರಿಸುತ್ತಲಿದ್ದೀಯೋ? ಲೋಭವು ದ್ವೇಷವು ವಿಶ್ವಾಸವು ಸ್ನೇಹವು ಎಂಬ ಗುಣಗಳನ್ನು ಅಂಗೀಕರಿಸಿ ಜನರ ಜೀವನಕ್ಕೆ ಉಪದ್ರವಮಾಡದೆ ಇರುವೆಯೋ? ನೀಚಜನಗಳು ತಾವು ಬದುಕುವದಕ್ಕೋಸ್ಕರ ಚಾಡಿಮಾತುಗಳಿಂದ ಪ್ರಜೆಗಳಿಗೂ ನಿನಗೂ ಮಿತ್ರಭೇದವನ್ನು ಮಾಡದೆ ಇರುವರೇ? ಧನಸಂಪತ್ತಿಯಿಂದಲೂ ಮಂತ್ರಬಲದಿಂದಲೂ ನಿನ್ನ ವೈರಿಗಳು ಅನ್ಯೋನ್ಯ ಜಗಳವಾಡುವಲ್ಲಿ ನೀನು ಮಧ್ಯಸ್ತನಾಗಿ ಸುಮ್ಮನೆ ಇರುವೆಯೋ? ವಿದ್ಯಾಸಂಪನ್ನರಾದ ಬ್ರಾಹ್ಮಣರನ್ನೂ ಜ್ಞಾನವಂತರಾದ ಪೂಜ್ಯರನ್ನೂ ಬಹುಮಾನ ಮಾಡುತ್ತಿದ್ದೀಯೋ? ಆ ಬಹುಮಾನವು ಸಕಲ ಶುಭಗಳಿಗೂ ಕಾರಣವಾಗಿರುವದು. ನಿಮ್ಮ ದೊಡ್ಡವರು ಆಚರಿಸಿದಂಥಾ ವೇದೋಕ್ತವಾದ ಧರ್ಮಮಾರ್ಗವನ್ನು ತಪ್ಪದೆ ಆಚರಿಸುತ್ತಲಿದ್ದೀಯೋ? ವೇದಶಾಸ್ತ್ರಪಾರಂಗತರಾದ ಬ್ರಾಹ್ಮಣರಿಗೆ ನಿನ್ನ ಮನೆಯಲ್ಲಿ ಪ್ರತಿದಿವಸವೂ ಷಡ್ರಸೋಪೇತವಾದ ಅನ್ನವನ್ನು ಇಕ್ಕುವೆಯೋ? ವಾಜಪೇಯ ಪೌಂಡರೀಕಾದಿ ಯಾಗಗಳನ್ನು ಭಕ್ತಿಸಂಪನ್ನನಾಗಿ ಏಕಾಗ್ರಚಿತ್ತನಾಗಿ ಮಾಡುವೆಯೋ? ಬ್ರಾಹ್ಮಣ ಗುರುಜನಗಳನ್ನೂ ವೃದ್ಧರನ್ನೂ ದೇವತೆಗಳನ್ನೂ ಮಹಾ ಋಷಿಗಳನ್ನೂ ಜನರಿಗೆ ನಿವಾಸಯೋಗ್ಯವಾಗಿ ಜಗತಿಗಳನ್ನು ಕಟ್ಟಿರುವ ವೃಕ್ಷಗಳನ್ನೂ ಪ್ರತಿದಿವಸವೂ ಸಂರಕ್ಷಣೆಮಾಡುವಂಥಾ ಪುರುಷನಿಗೆ ಆಯುರಭಿವೃದ್ಧಿಯೂ ಸತ್ಕೀರ್ತಿಯೂ ಧರ್ಮಾರ್ಥಗಳೂ ವಿಜಯಲಾಭವೂ ಅನೇಕ ರಾಜ್ಯಾಧಿಪತ್ಯವೂ ಉಂಟಾಗುವದರಿಂದಲೂ ನೀನು ಹಾಗೆ ಭಕ್ತಿಯುಕ್ತನಾಗಿ ನಮಸ್ಕರಿಸುತ್ತಲಿದ್ದೀಯೋ? ಸಜ್ಜನನಾಗಿ ನಿರ್ಮಲಚಿತ್ತನಾದ ಪುರುಷನಲ್ಲಿ ಒಬ್ಬನು ದೋಷಾರೋಪಣವನ್ನು ಮಾಡುವಲ್ಲಿ ನೀತಿಶಾಸ್ತ್ರಜ್ಞರನ್ನು ಕರತರಿಸಿ ವಿಚಾರಿಸುವದಕ್ಕಿಂತಲು ಮೊದಲೆ ದಂಡಿಸದೆ ಇರುವೆಯೋ? ಇಬ್ಬರು ಜಗಳವಾಡಿ ಬಂದಲ್ಲಿ ಧನಿಕನಾದವನ ದೆಸೆಯಿಂದ ಲಂಚವನ್ನು ಹಿಡಿದು

ನಿನ್ನ ಮಂತ್ರಿಗಳು ಪಕ್ಷಪಾತವನ್ನು ಮಾಡದೆ ನೀತಿಯಿಂದ ನಡಗುಕೊಳ್ಳುವರೆ ? ನಾಸ್ತಿಕ್ಯವು, ಅನೃತವು, ಕ್ರೋಧವು, ಪ್ರಮಾದವು, ಚಿರಕ್ರಿಯೆಯೂ, ಸಜ್ಜನವೈಮುಖ್ಯವು, ಮಾಡಿದ ಪ್ರಕಾರವನ್ನು ತಿಳಿಯದೆ ಹೋಗುವದು ಏಕಾಲೋಚನೆಯು, ಅನಭಿಜ್ಞರಕೂಡೆ ಯೋಚಿಸುವದು, ನಿಶ್ಚಿತವಾದ ಕಾರ್ಯವನ್ನು ಮಾಡದೆ ಹೋಗುವದು, ಮಾಡಿದ ಆಲೋಚನೆಯನ್ನು ಪ್ರಕಟಮಾಡುವದು, ಶುಭಕಾರ್ಯವನ್ನು ಮಾಡದೇ ಹೋಗುವದು, ವಿಷಯಗಳಲ್ಲಿ ಆಸಕ್ತನಾಗಿರುವದು ಎಂಬ ಹದಿನಾಲ್ಕು ರಾಜದೋಷವನ್ನು ಬಿಟ್ಟು ಇರುವೆಯೋ ? ಮತ್ತು ನೀನು ಓದಿದ ವೇದಗಳು ಸಂಪಾದಿಸಿದ ಧನಗಳು ನಿನ್ನ ವಿವಾಹವು ಶಾಸ್ತ್ರಜ್ಞಾನವು ಸಫಲವಾಗಿರುವವೇ ? ' ಎಂದು ನಾರದನು ಕೇಳಿದನು.

" ಆ ವಾಕ್ಯಗಳನ್ನು ಕೇಳಿ ಧರ್ಮರಾಯನು, ' ಎಲೈ ಮುನೀಂದ್ರನೆ, ವೇದ ಮೊದಲಾದ ನಾಲ್ಕು ಸಫಲನಾಗಿರುವವೆ ಎಂದು ಕೇಳಿದಿರಿ ; ಇವಕ್ಕೆ ಫಲವೇನು ? ' ಎಂದು ಕೇಳಿದನು. ನಾರದನು ' ಕೇಳು ಧರ್ಮರಾಯನೆ, ಅಗ್ನಿಹೋತ್ರಾದಿ ಕರ್ಮಗಳನ್ನಾಚರಿಸುವದು ವೇದಗಳನ್ನು ಓದಿದ್ದಕ್ಕೆ ಫಲವು ; ದಾನವನ್ನು ಮಾಡಿ ತಾನೂ ಅನುಭವಿಸುವದು ಧನವನ್ನು ಸಂಪಾದಿಸಿದ್ದಕ್ಕೆ ಫಲವು ; ರತಿಕ್ರೀಡೆ ಮಾಡುವದೂ ಮಕ್ಕಳನ್ನು ಪಡೆಯುವದೂ ವಿವಾಹಕ್ಕೆ ಫಲವು ; ಸದ್ವೃತ್ತಿಯೂ ಸದಾಚಾರವೂ ಉಂಟಾಗುವದೇ ಜ್ಞಾನಕ್ಕೆ ಫಲವು ' ಎಂದು ನುಡಿದು ಮತ್ತು ಇಂತೆಂದನು : ' ದೇಶಾಂತರದಿಂದ ಲಾಭಕ್ಕೋಸ್ಕರ ಬಂದು ವ್ಯಾಪಾರಗಳನ್ನು ನಡೆಸುವ ವರ್ತಕರಲ್ಲಿ ಸುಂಕ ಸ್ಥಾನಗಳಲ್ಲಿ ಮೊದಲುಮಾಡಿದ ಮರ್ಯಾದೆಯನ್ನು ತಪ್ಪದೆ ನಿನ್ನ ಮಂತ್ರಿಗಳು ನೀತಿಮಾರ್ಗದಿಂದ ನಡೆಸುವರೆ ? ಅವರ ಬಹುವಿಧ ವ್ಯಾಪಾರಗಳಿಗೆ ಅನುಗುಣವಾಗಿ ನಡೆದುಕೊಳ್ಳುತಲಿದ್ದೀಯೋ ? ಕೃಷಿತಂತ್ರಗಳಲ್ಲಿಯೂ ಗೋಸ್ಥಾನಗಳಲ್ಲಿಯೂ ಜನರು ಫಲಾರ್ಥವಾಗಿ ಮಧು ಘೃತ ಸಮೇತವಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸುವರೆ ? ಪಟ್ಟಣದಲ್ಲಿರುವ ಜನಗಳಿಗೆ ದ್ರವ್ಯವನ್ನೂ ಅದಕ್ಕೆ ತಕ್ಕ ಸಾಧನಗಳನ್ನೂ ನಾಲ್ಕು ತಿಂಗಳಿಗೆ ಸಮಗ್ರವಾಗಿ ಸಾಗುವ ಹಾಗೆ ಕೊಡುವೆಯೋ ? ನಿನ್ನ ಪ್ರಜೆಗಳು ಪಟ್ಟಣದಲ್ಲಿ ರಾಷ್ಟ್ರದಲ್ಲಿ ಲಂಚಗಳನ್ನು ಕೊಡದೆ ಪುಣ್ಯಗಳನ್ನು ಮಾಡಿಕೊಂಡು ಸುಖವಾಗಿರುವರೇ ? ವೇದವೇದಾಂಗ ಪಾರಂಗತರಾಗಿ ಸದಾಚಾರಸಂಪನ್ನರಾದ ಬ್ರಾಹ್ಮಣರು ಹೇಳಿದ ಶಾಸ್ತ್ರಾರ್ಥಗಳನ್ನು ಕೇಳುತ್ತಿದ್ದೀಯೋ ? ಒಬ್ಬನು ಮಾಡಿದ ಉಪಕಾರವನ್ನು ಸ್ಮರಿಸಿ ಸಭಾಮಧ್ಯದಲ್ಲಿ ಸ್ತುತಿಸಿ ಬಹುಮಾನ ಮಾಡುವೆಯೋ ? ಅಶ್ವಶಿಕ್ಷೆಯು, ನಾಗಶಿಕ್ಷೆಯು, ರಥಶಿಕ್ಷೆಯು, ಆಯುಧಶಿಕ್ಷೆಯು, ಆಗ್ನೇಯಾದಿ ದಿವ್ಯಾಸ್ತ್ರಗಳ ಶಿಕ್ಷೆಯು, ಬ್ರಹ್ಮಾಸ್ತ್ರಶಿಕ್ಷೆಯು, ಶತೃಗಳನ್ನು ಕೊಲ್ಲುವಂಥಾ ವಿಷಪ್ರಯೋಗವು ಮೊದಲಾದವುಗಳನ್ನು ತಿಳಿದು ಇದ್ದೀಯೋ ? ಅಗ್ನಿಯ ದೆಸೆಯಿಂದಲು ಸಿಂಹಾದಿ ಮೃಗಗಳ ದೆಸೆಯಿಂದಲು ಸರ್ಪಾದಿ ವಿಷಜಂತುಗಳ ದೆಸೆಯಿಂದಲು ರಾಕ್ಷಸರ ದೆಸೆಯಿಂದಲು ಭಯಬಾರದಿರುವರೀತಿಗೆ ರಾಜ್ಯವನ್ನು ಪರಿಪಾಲಿಸುವೆಯೋ ? ರಾಜ್ಯದಲ್ಲಿರುವ ಕುರುಡರು ಕುಂಟರು ಮೂಕರು ಕಿವುಡರು ಗುಜ್ಜಾರಿಗಳನ್ನೂ ದೇಶಾಂತರಕ್ಕೆ ಹೋದವರ ಕುಟುಂಬಗಳನ್ನೂ ಮಕ್ಕಳನ್ನೂ ತಾಯಿತಂದೆಗಳೋಪಾದಿಯಲ್ಲಿ ರಕ್ಷಿಸುತಲಿದ್ದೀಯೋ ? ಎಲೈ ಧರ್ಮರಾಯನೆ, ಈಪ್ರಕಾರದಲ್ಲಿ ನಾಲ್ಕು ವರ್ಣದವರನ್ನೂ ರಕ್ಷಿಸಿದಂಥಾ ಅರಸು ದೇವೇಂದ್ರನೋಪಾದಿಯಲ್ಲಿ ಸುಖವಾಗಿರುವನು ' ಎಂದು ನುಡಿದನು.

" ಕೇಳು ಜನಮೇಜಯನೆ, ಧರ್ಮರಾಯನು ಈಪ್ರಕಾರದಿಂದ ನುಡಿದ ನಾರದನ ವಾಕ್ಯವನ್ನು ಕೇಳಿ ವಿನಯಪೂರ್ವಕವಾಗಿ ಆತನ ಪಾದಗಳಿಗೆ ನಮಸ್ಕರಿಸಿ ಅಭಿವಾದನವನ್ನು ಮಾಡಿ ' ಎಲೈ ಮಹಾತ್ಮನೆ, ನೀನು ಹೇಳಿದ ರೀತಿಯನ್ನು ಕೇಳಿ ಬಹುಪ್ರಜ್ಞಾವಂತನಾದೆನು ; ಇದೇ ರೀತಿಯಾಗಿ ನಿಮ್ಮವಚನ ಪ್ರಕಾರದಿಂದ ನಡದುಕೊಳ್ಳುತಲಿದೇನೆ ' ಎಂದು ಒಪ್ಪಿಕೊಂಡು ಆ ನಾರದಮಹಾಮುನಿಯ ವಚನ ಪ್ರಕಾರದಿಂದ ಚತುಸ್ಸಮುದ್ರ ಪರಿವೇಷ್ಟಿತವಾದ ರಾಷ್ಟ್ರವನ್ನು ಪರಿಪಾಲಿಸಿದನಾದ್ದರಿಂದ ಯಾವ ಅರಸನು ನಾರದಮಹಾಮುನಿಯು ಹೇಳಿದ ನೀತಿ ಪ್ರಕಾರವನ್ನು ತಿಳಿದು ರಾಜ್ಯವನ್ನಾಳುವನೋ ಆತನು ಸಕಲ ಸೌಖ್ಯಗಳನ್ನು ಪಡೆದು ದೇವೇಂದ್ರನ ಅರ್ಧಾಸನದಲ್ಲಿರುವನು. "

## ೬ನೇ ಅಧ್ಯಾಯ.—ಲೋಕಪಾಲಸಭಾಖ್ಯಾನಪರ್ವ.

ಅನಂತರದಲ್ಲಿ ವೈಶಂಪಾಯನ ಮುನೀಂದ್ರನು ಜನಮೇಜಯರಾಯನನ್ನು ಕುರಿತು ಇಂತೆಂದನು :

"ಕೇಳು ಜನಮೇಜಯನೆ, ಈಪ್ರಕಾರದಲ್ಲಿ ಬಹು ಪ್ರಕಾರವಾದ ರಾಜನೀತಿ ಕ್ರಮವನ್ನು ಹೇಳಿದ ನಾರದಮುನೀಶ್ವರ ವಾಕ್ಯಗಳನ್ನು ಕೇಳಿ ಯುಧಿಷ್ಠಿರನು ಸಂತೋಷಪಟ್ಟು 'ಎಲೈ ಮಹಾತ್ಮನೆ, ನೀನು ನನ್ನಲ್ಲಿ ಅನುಗ್ರಹವನ್ನು ಮಾಡಿ ಹೇಳಿದ ರಾಜನೀತಿಪ್ರಕಾರಗಳನ್ನು ನಿಯತಾತ್ಮರಾಗಿ ಸಕಲಶಾಸ್ತ್ರ ವಿಶಾರದ ಪೂರ್ವರಾಯರಿಗೆ ಹೊರತಾಗಿ ನಮ್ಮಂಥಾವರಿಗೆ ಆಚರಿಸುವದಕ್ಕೆ ಸಾಮರ್ಥ್ಯವುಂಟೆ? ಆದರೂ ಅವರ ಮಾರ್ಗವನ್ನು ಅನುಸರಿಸಿ ನನ್ನ ಕೈಲಾದಷ್ಟು ನಡದುಕೊಳ್ಳುತಲಿದೇನೆ' ಎಂದು ಮತ್ತು ವಿನಯಪೂರ್ವಕವಾಗಿ ಇಂತೆಂದನು : ಎಲೈ ನಾರದ ಮುನೀಶ್ವರನೆ, ಬ್ರಹ್ಮನಿರ್ಮಿತವಾದ ಹದಿನಾಲ್ಕು ಲೋಕಗಳಲ್ಲಿಯೂ ನೀನರಿಯದಿರುವ ಲೋಕವಿಲ್ಲವಷ್ಟೆ! ಎಲ್ಲಾದರೂ ಈ ಸಭಾಭವನಕ್ಕೆ ಸಮಾನವಾದ ಮತ್ತೊಂದು ಸಭಾ ಭವನವುಂಟೆ? ಹೇಳಬೇಕು' ಎಂದು ಪ್ರಾರ್ಥಿಸಿದನು. ನಾರದನು ಧರ್ಮರಾಯನನ್ನು ನೋಡಿ ಮುಗುಳುನಗೆಯಿಂದ ಇಂತೆಂದನು : 'ಎಲೈ ಧರ್ಮರಾಯನೆ, ಭೂಮಂಡಲದಲ್ಲಿ ಇಂಥಾ ನವರತ್ನ ವಿಚಿತ್ರವಾದ ನಾನಾಲಂಕಾರ ಶೋಭಿತವಾದ ದಿವ್ಯಮಹಿಮೆಯಿಂದೊಪ್ಪುವ ಸಭಾ ಭವನವನ್ನು ನಾನೆಲ್ಲಿಯೂ ಕಂಡದಿಲ್ಲ; ಬ್ರಹ್ಮಸಭೆಯು, ಇಂದ್ರಸಭೆಯು, ವರುಣಸಭೆಯು, ಕೈಲಾಸದಲ್ಲಿರುವ ಕುಬೇರನ ಸಭೆಯೂ, ಯಮನ ಸಭೆಯು, ಇವು ಮೊದಲಾದ ಸಭೆಗಳನ್ನು ನೋಡಿರುವದುಂಟು; ಆಯಾ ಸಭೆಗಳಲ್ಲಿರುವ ವಿಶೇಷಗಳನ್ನು ಕೇಳಬೇಕೆಂಬ ಪ್ರೀತಿಯಿದ್ದರೆ ಹೇಳುತ್ತಲಿದೇನೆ ಕೇಳು, ಎನಲು ; ಧರ್ಮರಾಯನು ತಮ್ಮಂದರೊಡಗೂಡಿ ಕೈಮುಗಿದು 'ಎಲೈ ಮುನೀಂದ್ರನೆ, ಬ್ರಹ್ಮದೇವನು ಮೊದಲಾದ ಸಕಲ ಲೋಕಪಾಲಕರ ಸಭಾಸ್ಥಳಗಳು ಯಾವ ದ್ರವ್ಯದಿಂದ ನಿರ್ಮಿಸಲ್ಪಟ್ಟವೆ? ಎಷ್ಟು ನೀಟವಾಗಿ ಎಷ್ಟು ಅಗಲವಾಗಿರುವವು? ಮಹೇಂದ್ರನು ಮೊದಲಾದ ಅಂಥಾ ಸಭಾಪತಿಗಳನ್ನು ಯಾರ್ಯಾರು ಸೇವಿಸುವರು? ಇದೆಲ್ಲವನ್ನು ಕೇಳಬೇಕು; ವಿಸ್ತಾರವಾಗಿ ಹೇಳಿ ನನ್ನ ಮನಸ್ಸಿಗೆ ಪ್ರೀತಿಯನ್ನುಂಟುಮಾಡಬೇಕು' ಎಂದು ಪ್ರಾರ್ಥಿಸಿದನು."

## ೭ನೇ ಅಧ್ಯಾಯ.—ಲೋಕಪಾಲ ಸಭಾಖ್ಯಾನಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ನಾರದನು ಧರ್ಮರಾಯನನ್ನು ನೋಡಿ 'ಎಲೈ ಧರ್ಮರಾಯನೆ, ನೂರು ಯೋಜನಗಳ ಅಗಲವೂ ನೂರಿಪ್ಪತ್ತು ಯೋಜನಗಳ ನೀಟವೂ ಐದು ಯೋಜನಗಳ ಉದ್ದವೂ ಉಳ್ಳದ್ದಾಗಿ, ಮನಸ್ಸುಬಂದಕಡೆಗೆ ಹೋಗುವಂಥಾದ್ದಾಗಿ, ಕಲ್ಪವೃಕ್ಷಗಳಿಂದಲೂ ರತ್ನಸಿಂಹಾಸನಗಳಿಂದಲೂ ವಿಚಿತ್ರಭವನಗಳಿಂದಲೂ ಒಪ್ಪುತ್ತ ಸಕಲಲೋಕ ಮನೋಹರವಾಗಿ, ತನ್ನಲ್ಲಿದ್ದವರಿಗೆ ಸಕಲ ಶ್ರಮಗಳನ್ನೂ ಪರಿಹರಿಸುವಂಥಾದ್ದಾಗಿ, ಯಾವಾಗಲೂ ಸುಖವನ್ನೇ ಉಂಟುಮಾಡುವಂಥಾದ್ದಾಗಿ, ಶುಭಪ್ರದವಾಗಿರುವ ದಿವ್ಯ ಸಭಾ ಭವನದಲ್ಲಿ ವಿಚಿತ್ರಮಾಲ್ಯಾಂಬರಧರನಾಗಿ ಕಿರೀಟ ಭುಜಕೀರ್ತಿ ಮೊದಲಾದ ನಾನಾಭೂಷಣ ಭೂಷಿತನಾಗಿ ದಿವ್ಯ ದೇಹದಿಂದ ವಿರಾಜಮಾನನಾದ ದೇವೇಂದ್ರನು ಶಚೀದೇವಿಯೊಡನೆ ಕೂಡಿ ಸಿಂಹಾಸನದಲ್ಲಿ ಕುಳಿತಿರಲು, ಶ್ರೀಯೂ ಕೀರ್ತಿಯೂ ಹ್ರೀಯೂ ಶಾಂತಿಯೂ ಶಚಿಯೂ ಮರೀಚಿಯೂ ಮೊದಲಾದ ಸ್ತ್ರೀಜನರು ಮರುತ್ತುಗಳು ಸೋಮಯಾಜಿಗಳು ಸಿದ್ಧರು ಸಾಧ್ಯರು ದೇವರ್ಷಿಗಳು ದೇವತೆಗಳ ಸಕಲ ಸತ್ತ್ರಮರ್ಗಗಳನ್ನು ಮಾಡಿ ಸಕಲವಾದ ಪಾಪಗಳನ್ನು ಪರಿಹರಿಸಿಕೊಂಡು ನಿರ್ಮಲಾಂತಃಕರಣರಾಗಿ ಅಗ್ನಿಗಳೋಪಾದಿಯಲ್ಲಿ ಪ್ರಕಾಶಮಾನರಾಗಿರುವ ವಾಜಪೇಯ ಪೌಂಡರೀಕಗಳಂ ಮಾಡಿದಂಥಾ ಪುಣ್ಯಶಾಲಿಗಳು ಇವರು ಮೊದಲಾದವರು ಇಂದ್ರನನ್ನು ಓಲಗಿಸಲು—ಮತ್ತು ಪರಾಶರನು, ಪರ್ವತನು, ಸಾವರ್ಣಿಯು, ಗಾಲವನು, ಏಕತನು, ದ್ವಿತನು, ತ್ರಿತನು, ಶಂಕನು, ಲಿಖಿತನು, ಗೌರಶಿರನು, ದೂರ್ವಾ

ಸನು, ದೀರ್ಘತಮನು, ಯಾಜ್ಞ್ಯವಲ್ಕ್ಯನು, ಭಾಲುಕಿಯು, ಉದ್ದಾಲಕನು, ಶ್ವೇತಕೇತುವು, ತಾಂಡ್ಯನು, ಶಾಠ್ಯನು, ಶರ್ಯಾಯನನು, ವಸಿಷ್ಠನು, ಹವಿಷ್ಮಂತನು, ಹವಿಷ್ಯನು, ಹರಿಶ್ಚಂದ್ರರಾಯನು, ಹೃದ್ಯನು, ಉದರಶಾಂಡಿಲ್ಯನು, ಗವಿಷ್ಠನು, ಜಾಬಾಲಿಯು, ವಾಮದೇವನು, ಶಕ್ತಿಯು, ಗಾರ್ಗ್ಯನು, ಸುವಾಮನನು, ವಾತಸ್ಕಂಧನು, ವಿಶಾಖನು, ವಿಧಾತನು, ಕಾಲನು, ಅನಂದತ್ತನು, ತ್ವಷ್ಟನು, ವಿಶ್ವಕರ್ಮನು, ತುಂಬುರನು, ಮರುತ್ತುವು, ಮರೀಚಿಯು, ಅತ್ರಿಯೆಂಬತಪಸ್ವಿಯು, ತಕ್ಷಿವಂತನು, ಗೌತಮನು, ತಾರ್ಕ್ಷ್ಯನು, ವೈಶ್ವಾನರನು, ಷಡರ್ತುವು, ಕಹೋಷನು, ಧೂಮ್ರನು, ರೈಭ್ಯನು, ನಳನು, ಪರಾವಸುವು, ಸ್ವಸ್ತ್ಯಾತ್ರೇಯನು, ಜರತ್ಕಾರುವು, ಕಹೋಳನು, ಕಾತ್ಯಾಯನನು, ಕಾಶ್ಯಪನು, ವಿಭಂಡಕನು, ಋಷ್ಯಶೃಂಗನು, ಉನ್ಮುಖನು, ವಿಮುಖನು, ಸರ್ವಋಷಿಯು, ಕಾಲಕವೃಕ್ಷೀಯರು, ಶುಶ್ರವನು, ಹಿರಣ್ಯಾದನು, ಸಂವರ್ತನು, ವೇದಹ್ಯನು, ವಿಶ್ವಸೇನನು, ವೀರ್ಯವಂತನು, ದೀರ್ಘಾಯುಷನು, ಉಚಥ್ಯನು, ಮೊದಲಾದ ಮಹಾಋಷಿಗಳು, ಮೂಡಣ ದಿಕ್ಕು, ದಿವ್ಯೋದಕಗಳು, ಓಷಧಿಗಳು, ಶ್ರದ್ಧೆಯು, ಮೇಧೆಯು, ಸರಸ್ವತಿಯು, ಧರ್ಮಾರ್ಥಕಾಮಗಳು, ಮಿಂಚುಗಳು, ಯಜ್ಞವಹರಾದ ಇಪ್ಪತ್ತೇಳು ಅಗ್ನಿದೇವತೆಗಳು, ಅಗ್ನಿಹೋಮರು, ಇಂದ್ರಾಗ್ನಿಗಳು, ಮಿತ್ರನು, ಸವಿತನು, ಅರ್ಯಮನು, ಭಗನು, ವಿಶ್ವೇದೇವತೆಗಳು, ಸಾಧ್ಯರು, ಸುತಾಮಣಿಗಳು, ಯಜ್ಞಗಳು, ದಕ್ಷಿಣೆಗಳು, ಗೃಹಗಳು, ಸ್ತೋಭಂಗಳು, ಯಜ್ಞದಲ್ಲಿ ಯೋಗ್ಯಗಳಾದ ಮಂತ್ರಗಳೂ, ಆ ಇಂದ್ರನನ್ನು ಓಲಗಿಸಲು—ರಂಭೆಯು, ಊರ್ವಶಿಯು, ಮೇನಕಿಯು, ಘೃತಾಚಿಯು, ಪಂಡಚೂಡೆಯು, ವಿಪ್ರಚಿತ್ತಿಯು, ಇವರು ಮೊದಲಾದ ಅಪ್ಸರೋಗಣಗಳು, ವಿಶ್ವಾವಸುವು, ಚಿತ್ರಸೇನನು, ಪರ್ವತನು, ತುಂಬುರನು, ಇವರು ಮೊದಲಾದ ಗಂಧರ್ವರು, ವಿದ್ಯಾಧರರು, ಮನೋಹರಗಳಾದ ನೃತ್ಯಗೀತವಾದ್ಯಗಳಿಂದಲೂ ಹಾವಭಾವವಿಲಾಸ ವಿಭ್ರಮಗಳಿಂದಲೂ ಆ ಇಂದ್ರನ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತ ಶುಭಪ್ರದಂಗಳಾದ ಸ್ತುತಿಗಳಿಂದಲೂ ವೃತ್ರಾಸುರ ಸಂಹಾರ ಮೊದಲಾದ ವಿಜಯ ಬಿರುದಾವಳಿಗಳಿಂದಲೂ ಸ್ತುತಿಸುತ್ತಿರಲು—ಮತ್ತು ಬ್ರಹ್ಮರ್ಷಿಗಳು, ದೇವರ್ಷಿಗಳು, ರಾಜರ್ಷಿಗಳು, ದಿವ್ಯಾಂಬರಾಭರಣಾಲಂಕೃತರಾಗಿ ನಾನಾರತ್ನದೇದೀಪ್ಯಮಾನರಾಗಿ ಯಜ್ಞೇಶ್ವರನೋಪಾದಿಯಲ್ಲಿರುವ ವಿಮಾನಗಳನ್ನು ಏರಿಬರುತ್ತ ಹೋಗುತ್ತಲಿರಲು—ಉದಕಸಹಿತವಾಗಿ ಗರ್ಜಿಸುತ್ತಿರುವ ಮೇಘ ಮಂದಮಾರುತಗಳು, ಬೃಹಸ್ಪತಿಯು, ಶುಕ್ರನು, ಮತ್ತು ಇರುವ ಸುಕೃತಶಾಲಿಗಳು ತೇಜೋವಿರಾಜಮಾನರಾಗಿ ಬ್ರಹ್ಮನಿಯುಕ್ತರಾದ ಸಮಸ್ತ ಋಷಿಗಳು ಆತನನ್ನು ಎಡಬಿಡದೆ ಸುತ್ತಿಕೊಂಡು ಪ್ರಕಾಶಿಸುತ್ತಿರಲು ಇಂಥಾ ದಿವ್ಯಮಹಿಮೆಯೊಡನೆ ಕೂಡಿರುವ ಇಂದ್ರಸಭೆಯನ್ನು ನೋಡಿ ಉಂಟು. ಇನ್ನು ಯಮಸಭೆಯ ಸ್ವರೂಪವನ್ನು ಹೇಳುತ್ತಲಿದೇನೆ ಕೇಳು' "

---

## ೮ ನೇ ಅಧ್ಯಾಯ.—ಲೋಕಪಾಲಸಭಾಖ್ಯಾನಪರ್ವಶೇಷ.

" ' ಎಲೈ ಧರ್ಮರಾಯನೆ, ಇನ್ನು ದಿವ್ಯವಾಗಿ ವಿಶ್ವಕರ್ಮನಿರ್ಮಿತವಾದ ಯಮನ ಸಭೆಯಲ್ಲಿರುವ ವಿಶೇಷಗಳನ್ನು ವಿಶದವಾಗಿ ವಿವರಿಸುವೆನು ಕೇಳು: ಆ ಸಭೆಯು ನೂರುಯೋಜನಗಳ ನೀಟವೂ ನೂರುಯೋಜನಗಳ ಅಗಲವೂ ಉಳ್ಳಂಥಾದ್ದಾಗಿ ಅತ್ಯುನ್ನತವಾಗಿ ಸೂರ್ಯಪ್ರಭಾಸಮಾನವಾಗಿ ಅತ್ಯುಷ್ಣವಲ್ಲದೆ ಮನಸ್ಸಿಗೆ ಸಂತೋಷವನ್ನು ಮಾಡುತ್ತ ತನ್ನಲ್ಲಿರುವ ದೇವತೆಗಳಿಗೂ ಮನುಷ್ಯರಿಗೂ ಹಸಿವು ಬಾಯಾರಿಕೆಗಳನ್ನು ಶೋಕದೈನ್ಯಗಳನ್ನೂ ಜರಾಕಾರ್ಪಣ್ಯಗಳನ್ನೂ ದಾರಿದ್ರ್ಯವನ್ನೂ ತೊಲಗಿಸುತ್ತ ರಸಯುಕ್ತಗಳಾದ ಭಕ್ಷ್ಯಭೋಜ್ಯಗಳು ದಿವ್ಯಗಂಧಮಾಲ್ಯಗಳು ಪುಷ್ಪ ಫಲಗಳಿಂದ ರಮ್ಯಗಳಾದ ನಾನಾವಿಧ ವೃಕ್ಷಗಳು ಪರಿಮಳಮಿಳಿತವಾದ ಶೀತೋದಕವು ಉಷ್ಣೋದಕವು ಉಂಟಾಗಿ ಒಪ್ಪುತ್ತಲಿರುವದು. ಆ ಸಭಾಸ್ಥಾನದಲ್ಲಿ ಯಯಾತಿಯು, ನಹುಷನು, ಪೂರುವು, ಮಾಂಧಾತನು, ಸೋಮಕನು, ಭೃಗುವು, ತ್ರಸದಸ್ಯನು, ಚೈತ್ರರಥನು, ಕೃತವೀರ್ಯನು, ಶ್ರುತಶ್ರವನು,

ಸದಶ್ವನು, ಅತಿಪುತ್ರನು, ಸುಸಿಷ್ಮನು, ಕೃತವೇಗನು, ಕೃತಾಕ್ಷತಿಯು, ಪ್ರತರ್ದನನು, ಶಿಬಿಯು, ಮಾತ್ಸ್ಯನು, ಪೃಥುವಕ್ಷನು, ಬೃಹದ್ರಥನು, ಇಳನು, ಮರುತ್ತುವು, ಸುನೀಥನು, ನಳನು, ದಿವೋದಾಸನು, ಸುಮನಸನು, ಅಂಬರೀಷನು, ಭಗೀರಥನು, ವೃಷ್ಣನು, ಸದಶ್ವನು, ವಾಧ್ರ್ಯಶ್ವನು, ಪಂಚಹಸ್ತನು, ಪೃಥುಶ್ರವನು, ವೃಷಕನು, ವೃಷಸೇನನು, ಕೃಪನು, ಮಹಾಬಲನು, ವೃಷದಶ್ವನು, ವಸುಮನಸ್ಕನು, ಪುರುಕುತ್ಸನು, ಧ್ವಜಿಯು, ಹಂಸನು, ಅರಿಷ್ಟನು, ರಥಿಯು, ಆರ್ಷ್ಟಿಷೇಣನು, ದಿಲೀಪನು, ಕಕುಸ್ಥನು, ಪ್ರವರ್ಧನನು, ಏಕೀರನು, ಪುಂಡರೀಕಶರ್ಯಾತಿಯು, ಭರತನು, ಶುಚಿಯು, ಹಂಸನು, ಅರಿಷ್ಟನು, ದೇವಾಶ್ವನು, ದುಷ್ಯಂತನು, ಸಂಜಯನು, ಜಯನು, ಭಾಗಸ್ವರಿಯು, ಸುನಿಷಧನು, ವಿಷಧನು, ಕರಂಧಮನು, ಬಾಹ್ಲೀಕನು, ಮಧುವು, ಕಪೋತರೋಮನು, ಸುದ್ಯುಮ್ನನು, ತೃಣಕನು, ಸಹದೇವನು, ಅರ್ಜುನನು, ದಶರಥಮಗನಾದ ರಾಮನು, ಲಕ್ಷ್ಮಣನು, ಪ್ರತರ್ದನನು, ಅಳರ್ಕನು, ಕಕ್ಷಸೇನನು, ಗಯನು, ಗೌರಾಶ್ವನು, ಭಾರ್ಗವರಾಮನು, ಸಗರನು, ಭೂರಿದ್ಯುಮ್ನನು, ಪೃಥಾಶ್ವನು, ಜನಕನು, ವೈನ್ಯನು, ವಾರಿಷೇಣನು, ಪುರುವಿನ ಮಗನಾದ ಜನಮೇಜಯನು, ಬ್ರಹ್ಮದತ್ತನು, ತ್ರಿಗರ್ತನು, ಉಪರಿಚರನು, ಇಂದ್ರದ್ಯುಮ್ನನು, ಭೀಮಜಾನುವು, ಜಯವೃಷ್ಣನು, ಹಯನು, ಪದ್ಮನು, ಭೂರಿದ್ಯುಮ್ನನು, ಪೃಥಾಶ್ವನು, ಪಾಂಡ್ಯನು, ಮುಚುಕುಂದನು, ಪ್ರಸೇನಜಿತ್ತು, ಅರಿಷ್ಟನೇಮಿಯು, ಪ್ರದ್ಯುಮ್ನನು, ಮತ್ತು ಮತ್ಸ್ಯದೇಶಾಧೀಶ್ವರರಾದ ಅರಸುಗಳು ನೂರುಮಂದಿಯು, ನೀಪವಂಶದಲ್ಲಿ ಹುಟ್ಟಿದ ಅರಸುಗಳು ನೂರುಮಂದಿಯು, ಗಯವಂಶದಲ್ಲಿ ಹುಟ್ಟಿದ ಅರಸುಗಳು ನೂರುಮಂದಿಯು, ಧೃತರಾಷ್ಟ್ರನ ವಂಶದಲ್ಲಿ ಹುಟ್ಟಿದ ಅರಸುಗಳು ನೂರುಮಂದಿಯು, ಜನಮೇಜಯನ ವಂಶದಲ್ಲಿ ಹುಟ್ಟಿದ ಅರಸುಗಳು ನೂರುಮಂದಿಯು, ಬ್ರಹ್ಮದತ್ತನ ವಂಶದಲ್ಲಿ ಹುಟ್ಟಿದ ಅರಸುಗಳು ನೂರುಮಂದಿಯು, ವೈರಿಗಳು ಅವೈರಿಗಳೆಂಬ ಹೆಸರುಗಳುಳ್ಳ ಅರಸುಗಳು ನೂರುಮಂದಿಯು, ಶಂತನುವು, ನಿಮ್ಮ ತಂದೆಯಾದ ಪಾಂಡುರಾಯನು, ರುಷದ್ಗುನು, ಶತರಥನು, ದೇವರಾತನು, ಉಷಾದರ್ವಿಯು, ಧಾಮನು, ಸಮೃದ್ಧಿಯು, ಅನೇಕ ದಕ್ಷಿಣೆಗಳನ್ನು ಕೊಟ್ಟು ನೂರು ಅಶ್ವಮೇಧಗಳನ್ನು ಮಾಡಿ ಕೀರ್ತಿ ಸುಕೃತಗಳನ್ನು ಸಂಪಾದಿಸಿ ಅನೇಕ ಸಾವಿರ ಸಂಖ್ಯೆಯಿಂದ ಒಪ್ಪಿರುವ, ಶತಬಿಂದು ಮಣಿಪತಿ ಮೊದಲಾದ ರಾಜಋಷಿ ಶ್ರೇಷ್ಠರು, ಯಮನನ್ನು ಓಲಗಿಸುವರು. ಮತ್ತು ಅಗಸ್ತ್ಯನು, ಮಾತಂಗನು, ಕಾಲನು, ಮೃತ್ಯುವು, ಯಜ್ಞಗಳಂ ಮಾಡಿದಂಥಾವರು, ಸಿದ್ಧರು, ಯೋಗೀಶ್ವರರು, ಫೇನಪರು, ಊಷ್ಮಪರು, ಸ್ವಧಾವಂತರು, ಬರ್ಹಿಷದರು, ಮೂರ್ತಿವಂತರಾಗಿ ಅಮೂರ್ತಿವಂತರಾಗಿ ಅಗ್ನಿಷ್ವಾತ್ತರು ಮೊದಲಾದ ಪಿತೃದೇವತೆಗಳು, ಮತ್ತು ದಕ್ಷಿಣಾಯನದಲ್ಲಿ ಮೃತರಾದ ಪಾಪಾತ್ಮರನ್ನು ಕರಕೊಂಡುಬರುವದಕ್ಕೆ ಕಳುಹಿಸಲ್ಪಟ್ಟ ಕಿಂಕರರು, ಯಜ್ಞೇಶ್ವರನೂ ಯಮನನ್ನು ಓಲಗಿಸಲು ಮತ್ತು ಮೂರ್ತಿಮಂತ್ರಗಳಾದ ಕಾಲಚಕ್ರಗಳು ಸಮಿತ್ಪಲಾಶ ಕುಶಾದಿಗಳು, ದಿವ್ಯ ತೇಜಸ್ಸುಗಳೊಡನೆ ನಿರಾಮಯಗಳಾಗಿ ಓಲಗಿಸಲು ಮತ್ತು ಅನೇಕ ಸಾವಿರ ಸಂಖ್ಯೆಯುಳ್ಳ ದಿವ್ಯ ಋಷಿಗಳಿಗೆ ನಿವಾಸವಾಗಿ ಮಹಾ ತಪಸ್ವಿಯಾದ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಯಮನ ದಿವ್ಯ ಮಂದಿರ ಸಭಾಭವನವು ಒಪ್ಪುತ್ತಿರುವದು. ಆ ಸಭಾಭವನವು ಸತ್ಯವ್ರತರಿಗೂ ತಪೋನಿಷ್ಟರಿಗೂ, ಶಾಂತರಿಗೂ ಸನ್ಯಾಸಿಗಳು ಮೊದಲಾದ ಸುಕೃತಶಾಲಿಗಳಿಗೂ ಪ್ರಾಪ್ಯಸ್ಥಾನವಾಗಿರುವದು. ಆ ಸಭಾಮಧ್ಯದಲ್ಲಿರುವಂಥಾವರಷ್ಟು ಮಂದಿಯೂ ದಿವ್ಯ ಮಾಲ್ಯಾಂಬರಾಲಂಕೃತರಾಗಿ ಮಣಿಕುಂಡಲ ಕಿರೀಟ ಭುಜಕೀರ್ತಿ ಮೊದಲಾದ ನಾನಾಭೂಷಣ ಭೂಷಿತರಾಗಿ ಸತ್ಕರ್ಮ ನಿರತರಾಗಿ ತೇಜೋವಿರಾಜಮಾನ ಶರೀರಗಳಾಗಿ ಪ್ರಕಾಶಿಸುತ್ತಲಿರುವರು. ಮತ್ತು ಮಹಾತ್ಮರಾದ ಗಂಧರ್ವರು ಸಾವಿರ ಸಂಖ್ಯೆಯುಳ್ಳ ಅಪ್ಸರೋಗಣಗಳು ನೃತ್ಯಗೀತ ವಾದ್ಯಗಳಿಂದಲೂ ಹಾಸ್ಯನರ್ತನಗಳಿಂದ ಹೊತ್ತು ಕಳೆಯುತ್ತಲಿರಲು, ದಿವ್ಯ ಮಾಲ್ಯಗಳು ದಿವ್ಯ ಗಂಧಗಳು ದಿವ್ಯ ಶಬ್ದಗಳು ಮನಸ್ಸಿಗೆ ಸಂತೋಷವನ್ನು ಮಾಡಲು, ದಿವ್ಯ ವೈಭವಯುಕ್ತನಾದ ಯಮನು ಸಭೆಯಲ್ಲಿ ಒಡ್ಡೋಲಗದಲ್ಲಿರುವನು.' "

೯ ನೇ ಅ ಧ್ಯಾ ಯ.—ಲೋ ಕ ಪಾ ಲ ಸ ಭಾ ಖ್ಯಾ ನ ಪ ರ್ವ ಶೇ ಷ.

"'ಎಲೈ ಧರ್ಮರಾಯನೆ, ವರುಣ ಸಭೆಯು ಯಮಸಭಾ ಪ್ರಮಾಣವುಳ್ಳಂಥಾದ್ದಾಗಿ, ಶುಭವಾದ ಕೋಟೆ ಕೊತ್ತಲಗಳಿಂದ ಅಲಂಕೃತವಾಗಿ, ಉದಕ ಮಧ್ಯದಲ್ಲಿ ಹೆಬ್ಬಾಗಲುಗಳಿಂದ ನಿರ್ಮಿಸಲ್ಪಟ್ಟಂಥಾದ್ದಾಗಿ, ರತ್ನ ದಿವ್ಯ ಫಲಗಳಿಂದ ಕೂಡಿರುವ ವೃಕ್ಷಗಳೊಡನೆ ಒಪ್ಪುತ್ತಲಿರುವಂಥಾದ್ದಾಗಿ, ಬಿಳಿ ಕರಿ ಹಳದಿ ಕೆಂಪು ಹಸರುವರ್ಣ ವುಳ್ಳಂಥಾದ್ದಾಗಿ, ಬಹುಪುಷ್ಪ ಯುಕ್ತಗಳಾದ ಹುವ್ವಿನ ಮಳೆಗಳಿಂದಲೂ ಕಲಕಲಧ್ವನಿಗಳು ವಿಚಿತ್ರಶರೀರಗಳುಳ್ಳ ಪಕ್ಷಿಕುಲಗಳಿಂದ ರಮಣೀಯವಾಗಿ, ಅತಿಶೀತವಾಗದೆ ಅತ್ಯುಷ್ಣವಾಗದೆ ಬಹುಸುಖ ಪ್ರದವಾಗಿ, ರತ್ನ ಕೀಲಿತ ಸಿಂಹಾಸನಗಳಿಂದ ಒಪ್ಪಿ, ಚಂದ್ರಪ್ರಭೆಯೋಪಾದಿಯಲ್ಲಿ ಒಪ್ಪುತ್ತ ವರುಣನಿಗೆ ಸಮ್ಮತವಾಗಿರುವದು. ಆ ಸಭಾಮಧ್ಯದಲ್ಲಿ ದಿವ್ಯ ಮಾಲ್ಯಾಂಬರಗಳನ್ನು ಧರಿಸಿ, ದಿವ್ಯ ಭೂಷಣಾಲಂಕೃತಗಳಾಗಿ, ಗೌರೀವಾರುಣಿಯೆಂಬ ಹೆಸರುಗಳಿಂದ ಪ್ರಸಿದ್ಧಳಾದ ತನ್ನ ಪ್ರಾಣಕಾಂತೆಯೊಡನೆ ಸುಖಾನುಭವದಿಂದ ಸಂತುಷ್ಟನಾಗುತ್ತ ವರುಣನು ಒಡ್ಡೋಲಗದಲ್ಲಿರುವನು. ಮತ್ತು ದಿವ್ಯಮಾಲ್ಯಾಂಬರಗಳನ್ನು ಧರಿಸಿ ದಿವ್ಯಾಲಂಕಾರ ಭೂಷಿತರಾಗಿರುವ ದ್ವಾದಶಾದಿತ್ಯರು, ವಾಸುಕಿಯು, ತಕ್ಷಕನು, ನಾಗನು, ಐರಾವತನು, ಕೃಷ್ಣನು, ಲೋಹಿತನು, ಪದ್ಮನು, ಪರಾಕ್ರಮಶಾಲಿಯಾದ ಚಿತ್ರನು, ಕಂಬಳನು, ಇಶ್ವತರನು, ಧೃತರಾಷ್ಟ್ರನು, ವಲಾಹಕನು, ಮಣಿಯು, ಮಣಿನಾಗನು, ಶಂಖಣಕನು, ಕೌರವ್ಯನು, ಸ್ವಸ್ತಿಕನು, ಐಲಾಪುತ್ರನಾದ ಸುವಾಮನನು, ಅಪರಾಜಿತನು, ದೋಷನು, ನಂದಕನು, ಪುರಾಣನು, ಅಭೀರುವು, ಶಿಬಿಕನು, ಶ್ವೇತನು, ಭದ್ರನು, ಭದ್ರೇಶ್ವರನು, ಮಣಿಮಂತನು, ಬಿಂದಿಕನು, ಸ್ಮಾರನು, ಕರ್ಕೋಟಕನು, ಧನಂಜಯನು, ಪ್ರಹ್ಲಾದನು, ಮೂಷಿಕಾದನು, ಜನಮೇಜಯನು, ಇವರು ಮೊದಲಾದ ಸರ್ಪಶ್ರೇಷ್ಠರು ಧ್ವಜಗಳುಳ್ಳಂಥಾವರಾಗಿ ಮಂಡಲಾಕಾರವಾಗಿ ಸುತ್ತಿಕೊಂಡಿರುವ ಹೆಡೆಗಳಿಂದ ಅಲಂಕೃತರಾಗಿ ನಾಲ್ಕು ದಿಕ್ಕುಗಳಲ್ಲಿಯು ಸುತ್ತಿಕೊಂಡು ವರುಣನನ್ನು ಸೇವಿಸುವರು. ಮತ್ತು ಅನಂತನು ಆ ವರುಣನಿಂದ ಪೂಜಿತನಾಗಿ ಅಲ್ಲಿರುವನು. ಶೇಷನಿಂದ ನಿಯೋಗಿಸಲ್ಪಟ್ಟ ವಾಸುಕಿ ಮೊದಲಾದ ಸರ್ಪಶ್ರೇಷ್ಠರು ಯಥೋಚಿತವಾಗಿ ಕುಳಿತುಕೊಂಡು ಕೈಮುಗಿದು ಓಲಗಿಸುವರು; ವಿನತೆಯ ಕುಮಾರನಾದ ಗರುಡನು ಆತನ ಪರಿಜನಗಳಾದ ಪಕ್ಷಿಕುಲಗಳು ಮೂರ್ತಿವಂತರಾದ ಧರ್ಮಾರ್ಥಕಾಮಗಳು ವರುಣನನ್ನು ಚಿಂತೆಗಳನ್ನು ಬಿಟ್ಟು ಓಲಗಿಸುವರು; ವಸುವು ಕಪಿಲನು ವಿರೋಚನನ ಮಗನಾದ ಬಲಿಯು, ಭೂಮಿದೇವಿಯ ಮಗನಾದ ನರಕಾಸುರನು, ಪ್ರಹ್ಲಾದನು, ವಿಪ್ರಚಿತ್ತಿಯು, ಕಾಲಕೇಯರು, ಸುಮುಖನು, ಶಂಕುವು, ದುರ್ಮುಖನು, ಸುಮನಸ್ಕನು, ಸುಮತಿಯು, ಸ್ವನನು, ಘಟೋದರನು, ಮಹಾಪಾರ್ಶ್ವನು, ಕಥನು, ವಿಶ್ವರೂಪನು, ವಿರೂಪನು, ಮಹಾಶಿರನು, ದಶಗ್ರೀವನು, ವಾಲಿಯು, ಮೇಘವಾಸನು, ಮೊದುಹನು, ಪ್ರಭವನು, ಇಂದ್ರತಾಪನು, ಮೊದಲಾದ ಶೂರಾಗ್ರಗಣ್ಯರಾದ ದೈತ್ಯದಾನವರು ದಿವ್ಯ ಮಾಲ್ಯಾಂಬರಗಳನ್ನು ಧರಿಸಿ ನವರತ್ನ ಕಿರೀಟ ಕುಂಡಲ ಭುಜಕೀರ್ತಿಗಳು ಮೊದಲಾದ ಭೂಷಣಗಳಿಂದ ಅಲಂಕೃತರಾಗಿ ವರಪ್ರಸಾದವನ್ನು ಪಡದು ಮೃತ್ಯುವನ್ನು ಜಯಿಸಿರುವಂಥಾವರಾಗಿ ವ್ರತಗಳನ್ನು ಆಚರಿಸಿದಂಥಾವರಾಗಿ ಧರ್ಮಯುಕ್ತ ಚಿತ್ತರಾಗಿ ಆ ಸಭೆಯಲ್ಲಿ ತಮ್ಮ ಪರಿವಾರದೊಡನೆ ಸಹ ವರುಣನನ್ನು ಓಲಗಿಸುವರು. ಮತ್ತು ಪಿತೃದೇವತೆಗಳು, ನಾಲ್ಕು ಸಮುದ್ರಗಳು, ಗಂಗೆಯು, ಯಮುನೆಯುು, ಅಶಿಯು, ವರಣೆಯು, ನರ್ಮದೆಯು, ವೇಗವಾಹಿನಿಯು, ವಿವಾಶೆಯು, ಶತದ್ರುವು, ಚಂದ್ರಭಾಗೆಯು, ಸರಸ್ವತಿಯು, ಇರಾವತಿಯು, ವಿತಸ್ತೆಯು, ಸಿಂಧುವೆಂಬ ದೇವನದಿಯು, ಗೋದಾವರಿಯು, ಕೃಷ್ಣವೇಣಿಯು, ಕಾವೇರಿಯು, ಕಪಿಲೆಯು, ವಿಲಶ್ಯೆಯು, ಕೌಶಿಕೆಯು, ಗೋಮತಿಯು, ದೇವಕಿಯು, ಗಂಡಕಿಯು, ಜ್ಯೇಷ್ಠೆಯು, ಶೋಣನದಿಯು, ಚರ್ಮಣ್ವತಿಯು, ಶ್ವೇತನದಿಯು, ಮಹಾನದಿಯು, ಫಲ್ಗುನಿಯು, ಸರಯು, ಚಿಲರವಲ್ಕಲೆಯು, ಸಿಂಧು ಎಂಬ ದೇವನದಿಯು ಇವು ಮೊದಲಾದ ಮಹಾನದಿಗಳು ಇನ್ನೂ ಮಿಕ್ಕಾದ ತೊರೆಗಳು, ಕಾಲ್ವೆಗಳು, ತೀರ್ಥಗಳು, ಕೊಳಗಳು, ಮಡುವುಗಳು, ಬಾವಿಗಳು, ಜಟ್ಟದ ತೊರೆಗಳು, ಬೊಬೆಗಳು, ಕೆರೆಗಳು, ದಿಕ್ಕುಗಳು, ಭೂಮಿಯು, ರತ್ನಗಳು, ಜಲಚರಗಳು, ರಸನ್ವರ್ಗಗ

ಳುಳ್ಳ ಪರ್ವತಗಳು, ಮೂರ್ತಿವತ್ತುಗಳಾಗಿ ವರುಣನನ್ನು ಸೇವಿಸುವವು. ಮತ್ತು ಗೋನಾಮನು ಪುಷ್ಕರನು ಎಂಬ ಮಕ್ಕಳೊಡನೆ ಕೂಡಿ ಇಷ್ಟರಾದ ಭೃತ್ಯಾಮಾತ್ಯ ಪರಿವೃತನಾಗಿ ಸುನಾಮನೆಂಬ ಮಂತ್ರಿಶ್ರೇಷ್ಠನು ಓಲಗಿಸಲು; ಗೀತವಾದ್ಯ ನೃತ್ಯಗಳನ್ನು ಮಾಡುತ್ತ ಗಂಧರ್ವಾಪ್ಸರೋಗಣಗಳು ಸ್ತುತಿಸುತ್ತಿರಲು ವರುಣನು ಒಪ್ಪುತ್ತಲಿರುವನು. ಅಂಥಾ ದಿವ್ಯಸಭೆಯನ್ನು ನಾನು ನೋಡಿಉಂಟು; ಇನ್ನೂ ಕುಬೇರನ ಸಭಾಮಹಾತ್ಮ್ಯವನ್ನು ಹೇಳುತ್ತಲಿದೇನೆ ಕೇಳು' "

ೞೞೞ

೧೦ನೇ ಅಧ್ಯಾಯ.—ಲೋಕಪಾಲ ಸಭಾಖ್ಯಾನ ಪರ್ವ ಶೇಷ.

" 'ಎಲೈ ಧರ್ಮರಾಯನೆ, ಕುಬೇರನ ಸಭೆಯು ನೂರುಯೋಜನಗಳ ನೀಟವೂ ಇಪ್ಪತ್ತು ಯೋಜನಗಳ ಅಗಲವೂ ಉಂಟಾಗಿ, ಕೈಲಾಸ ಶಿಖರದೋಪಾದಿಯಲ್ಲಿ ರಮಣೀಯವಾಗಿ, ಗುಹ್ಯಕರಿಂದ ವಹಿಸಲ್ಪಟ್ಟು ನಭೋಮಧ್ಯದಲ್ಲಿ ಚಂದ್ರಪ್ರಭೆಯೋಪಾದಿಯಲ್ಲಿ ಪ್ರಕಾಶಮಾನವಾಗಿ, ಕುಬೇರನ ತಪಸ್ಸಿನಿಂದ ಸಂಪಾದಿಸಲ್ಪಟ್ಟದ್ದಾಗಿ, ಸುವರ್ಣಮಯವಾಗಿ, ಅತ್ಯುನ್ನತವಾಗಿ, ದಿವ್ಯವಾದ ವೃಕ್ಷಗಳಿಂದ ಅತಿ ರಮ್ಯವಾದ ಪ್ರಭಾ ಭಾಸಮಾನವಾಗಿ, ದಿವ್ಯ ಪರಿಮಳ ಉಳ್ಳಂಥಾದ್ದಾಗಿ, ಶುಭ್ರವಾದ ಮೇಘ ಸಮೂಹದೋಪಾದಿಯಲ್ಲಿ ತೋರುತ್ತಲಿರುವದು. ಆ ಸಭಾ ಮಧ್ಯದಲ್ಲಿ ವಿಚಿತ್ರಾಂಬರಾಭರಣ ಭೂಷಿತನಾಗಿ ದೇವ ಸಮೂಹದಿಂದ ಸುತ್ತಲ್ಪಟ್ಟವನಾಗಿ ನವರತ್ನಗಳಿಂದ ಕೆತ್ತಲ್ಪಟ್ಟ ಕುಂಡಲ ಕಿರೀಟಗಳು ಮೊದಲಾದ ಸಕಲಾಭರಣ ಭೂಷಿತನಾಗಿ ರತ್ನಸಿಂಹಾಸನದಲ್ಲಿ ಸುಖವಾಗಿ ಕುಳಿತುಕೊಂಡಿರಲು ಕಲ್ಪವೃಕ್ಷಗಳಲ್ಲಿಯೂ ನೈದಲುಗಳ ಕೊಳಗಳಲ್ಲಿಯೂ ಶ್ರೀಗಂಧದ ಮರಗಳಲ್ಲಿಯೂ ಇರುವ ಗಂಧಗಳಿಂದ ಮನಸ್ಸಿಗೆ ಸಂತೋಷವನ್ನು ಮಾಡುವ ವಾಯುದೇವನು ಕುಬೇರನನ್ನು ಓಲಗಿಸುವನು. ಮತ್ತು ಅಪ್ಸರೋಗಣಗಳೊಡನೆ ಕೂಡಿ ದಿವ್ಯ ಗಾನಗಳನ್ನು ದಿವ್ಯ ಗೀತಗಳನ್ನು ದೇವ ಗಂಧರ್ವ ಸಮೂಹಗಳು ಕೇಳಿಸುತ್ತಿರಲು—ಮಿತ್ರಕೇಶಿಯು, ರಂಭೆಯು, ಚಿತ್ರಸೇನೆಯು, ಚಾರುದೇಷ್ಣೆಯು, ಘೃತಾಚಿಯು, ಮೇನಕೆಯು, ಪುಂಜಿಕಸ್ಥಲಿಯು, ವಿಶ್ವಾಚಿಯು, ಸಹಜನ್ಯೆಯು, ಪ್ರಮ್ಲೋಚಂತಿಯು, ಊರ್ವಶಿಯು, ದಿವ್ಯೆಯು, ಸಾರಥೆಯು, ದೇವಿಯು, ಮನೋರಮೆಯು, ಗೋಪಾಲಿಯು, ಪಂಚಚೂಡೆಯು, ವಿದ್ಯುತ್ಪರ್ಣೆಯು, ಸುಲೋಚನೆಯು, ಚಿತ್ರದೇವಿಯು, ನೀಲೆಯು, ರಮೆಯು, ಲಲಿತೆಯು ಮೊದಲಾದ ಅಪ್ಸರಸ್ತ್ರೀಯರು ನೃತ್ಯಗೀತವಾದ್ಯಗಳಿಂದ ಆ ಕುಬೇರನ ಮನೋರಂಜನವನ್ನು ಮಾಡುತ್ತ ಓಲಗಿಸುವರು. ಮತ್ತು ವಿಶ್ವಾವಸುವು, ಹಾಹಾ ಹೂಹುಗಳು, ತುಂಬುರರು, ಪರ್ವತನು, ಶೈಲೂಷನು, ನಾರದನು, ಚಿತ್ರಸೇನನು, ಚಿತ್ರರಥನು, ಮತ್ತು ಇರುವ ಗಂಧರ್ವಪತಿಗಳು, ವಿದ್ಯಾಧರರು, ತಮ್ಮಂದರೊಡನೆ ಕೂಡಿರುವ ಚಂದ್ರಾಪೀಡನು, ಭಗದತ್ತನು ಮೊದಲಾದ ಗಂಧರ್ವಶ್ರೇಷ್ಠರು, ವಿದ್ಯಾಧರಶ್ರೇಷ್ಠರು, ಕಿನ್ನರಶ್ರೇಷ್ಠರು, ಆ ಕುಬೇರನನ್ನು ಓಲಗಿಸುವರು. ದ್ರುಮನೆಂಬ ಕಿಂಪುರುಷಶ್ರೇಷ್ಠನು, ಸಕಲ ರಾಕ್ಷಸ ಪರಿವೃತನಾಗಿ ಧರ್ಮಶೀಲನಾದ ವಿಭೀಷಣನು, ಮತ್ತು ಕೆಲವು ರಾಕ್ಷಸರು ಸಕಲಸಿದ್ಧಿಸಮೇತನಾದ ಶಂಖಪದ್ಮನು, ಮಾಣಿಭದ್ರನು, ಶ್ವೇತಭದ್ರನು, ಗುಹ್ಯಕನು, ಸೂಣಕನು, ಸೂರ್ಯಭಾನು ಪ್ರಾಕ್ಷೇಣಕನು, ತಿಂದುಕನು, ಕುಬೇರಳನು, ಗಂಡಪಿಂಡನು, ವೃಷಾಧನು, ಮಹಾಬಲನು, ದ್ರುಮನು, ಹಿಮಚಂದ್ರನು, ಪುಷ್ಪಾನನನು, ಪಿಂಗಳಾಕ್ಷನು, ಶ್ರೋತಾದನು, ಪ್ರಪಾಲಕನು, ವೃಕ್ಷಪಾರ್ಶ್ವನು, ಚಿತ್ರವಾಸನು ಮೊದಲಾದ ಅನೇಕ ಸಂಖ್ಯೆಯುಳ್ಳ ಯಕ್ಷರು, ಮತ್ತು ಶ್ರೀಯು, ನಳಕೂಬರನು, ಹಿಮವಂತನು, ಪಾರಿಯಾತ್ರವು, ಕೈಲಾಸವು, ಮಂದರವು, ಮಲಯವು, ದುರ್ದರವು, ಮಹೇಂದ್ರವು, ಗಂಧಮಾದನವು, ಇಂದ್ರಕೀಲವು, ಸುನಾಭವು, ಮೇರು ಮೊದಲಾದ ಪರ್ವತಶ್ರೇಷ್ಠಗಳೂ ಕುಬೇರನನ್ನು ಓಲಗಿಸಲು ದೇವಋಷಿಗಣಗಳೊಡನೆ ನಾನೂ ಓಲಗಿಸುತ್ತಿರುವೆನು. ಮತ್ತು ಒಂದೊಂದು ಸಮಯದಲ್ಲಿ ನಂದೀಶ್ವರನು ಮಹಾಕಾಳನು ಶಂಕುಕರ್ಣನು ಮೊದಲಾದ ಪ್ರಮಥಗಣಗಳು, ಕಾಷ್ಟನು, ಕುಟೀಮುಖನು, ಸೋಮನಂದಿಯು, ತಪೋಧಿಕನಾದ ವಿಜಯನು, ಮಹಾಧ್ವನಿಯನ್ನು ಮಾಡುವ ಬಿಳೀಬಸವನು, ವಾಮನರಾಗಿ ವಿಕೃತಾಂಗಿಗಳಾಗಿ ಕುಬ್ಜರಾಗಿ ಕೆಂಪಾದ ಕಣ್ಣುಗಳುಳ್ಳವರಾಗಿ ಮಹಾ

ಧ್ವನಿಯನ್ನು ಮಾಡುವಂಥಾವರಾಗಿ ಮೇದೋಮಾಂಸಗಳನ್ನು ಭಕ್ಷಿಸುವಂಥಾವರಾಗಿ ವಿಕೃತ ದೃಷ್ಟಿಗಳುಳ್ಳಂಥಾವರಾಗಿ ಘೋರವಾದ ಕಿವಿಗಳುಳ್ಳಂಥಾವರಾಗಿ ನಾನಾಪ್ರಕಾರವಾದ ಆಯುಧಗಳನ್ನು ಧರಿಸಿ ಭಯಂಕರಾಕಾರಿಗಳಾಗಿ ವಾಯುವೇಗ ಮನೋವೇಗಸಂಪನ್ನರಾಗಿರುವ ಪ್ರಮಥಗಣಗಳು ಇತ್ಯಾದಿಗಳಿಂದ ಸುತ್ತಲ್ಪಟ್ಟ (ಭಗವಂತನು ಉಮಾಪತಿಯು ಪಶುಪತಿಯು ಶೂಲಧರನು ಭಗನೇತ್ರಹರನು ತ್ರೈಲೋಕ್ಯಭಾವನನು ತ್ರಿಯಂಬಕನು ವಿಶ್ವರೂಪನು ಶಿವನು ಇವು ಮೊದಲಾದ ಅನೇಕ ದಿವ್ಯನಾಮಗಳಿಂದ ಪ್ರಸಿದ್ಧನಾಗಿರುವ) ಪರಮೇಶ್ವರನು ಪಾರ್ವತಿ ಸಮೇತನಾಗಿ ಬರಲು, ಆತನಿಗೆ ಕುಬೇರನು ಪ್ರತ್ಯುತ್ಥಾನವನ್ನು ಮಾಡಿ ವಿನಯಭಯಭಕ್ತಿಪೂರ್ವಕವಾಗಿ ಅನೇಕ ಸಾಷ್ಟಾಂಗನಮಸ್ಕಾರಗಳನ್ನು ಮಾಡಿ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ತಾನೂ ಆತನ ಅಪ್ಪಣೆಯಿಂದ ಯಥೋಚಿತವಾದ ಆಸನದಲ್ಲಿ ಕುಳಿತುಕೊಂಡಿರುವನು. ಹೀಗೆ ಮಹಾಮಹಿಮಾಸ್ಪದವಾದ ಕುಬೇರನ ಸಭಾ ಭವನವನ್ನು ನೋಡಿದೆನು. ಇನ್ನು ಬ್ರಹ್ಮದೇವರ ಸಭಾಮಾಹಾತ್ಮ್ಯವನ್ನು ಹೇಳುತಲಿದೇನೆ ಕೇಳು’”

---

## ೧೧ ನೇ ಅಧ್ಯಾಯ.—ಲೋಕಪಾಲ ಸಭಾಖ್ಯಾನ ಪರ್ವ ಶೇಷ.

“‘ಎಲೈ ಧರ್ಮರಾಯನೆ, ಬ್ರಹ್ಮಸಭಾ ಮಾಹಾತ್ಮ್ಯವನ್ನು ಹೇಳುತಲಿದೇನೆ ಕೇಳು: ಮೊದಲು ಜೀವಯುಗದಲ್ಲಿ ಭಗವಂತನಾದ ಸೂರ್ಯನು ಮನುಷ್ಯರೂಪವಂ ಧರಿಸಿ ಭೂಲೋಕಕ್ಕೆ ಬಂದಿದ್ದನು; ಆತನು ಬ್ರಹ್ಮಸಭೆಗೆ ಹೋಗಿದ್ದವನಾದ್ದರಿಂದ ಅಪರಮಿತ ಪ್ರಭಾಭಾಸಮಾನವಾಗಿ ಅನಂತ ಮಹಿಮಾಸ್ಪದವಾಗಿ ಸರ್ವಭೂತ ಮನೋಹರವಾಗಿ ಬ್ರಹ್ಮದೇವನ ಸಂಕಲ್ಪದಿಂದ ನಿರ್ಮಿತವಾದ ಆ ಸಭೆಯ ಮಹಿಮೆಯನ್ನು ನನಗೆ ಯಥಾರ್ಥವಾಗಿ ಹೇಳಿದನು. ನಾನು ಅದನ್ನು ನೋಡಬೇಕೆಂದೆಣಿಸಿ ಸೂರ್ಯನನ್ನು ನೋಡಿ ‘—ಎಲೈ ಮಹಾತ್ಮನೆ, ಬ್ರಹ್ಮದೇವನ ಸಭೆಯನ್ನು ನೋಡಬೇಕೆಂದು ಇಚ್ಛೈಯಿಸುತಲಿಧೇನೆ; ಯಾವ ತಪಸ್ಸಿನಿಂದ ಯಾವ ಸುಕೃತದಿಂದ ಯಾವ ಔಷಧಿ ವಿಶೇಷದಿಂದ ಅದನ್ನು ನೋಡಬಹುದು? ಅಲ್ಲದೆ ಏನಾದರೂ ಉಪಾಯದಿಂದಲಾದರೂ ತಿಳಿಯಬಹುದೆ? ಆ ಉಪಾಯವನ್ನು ತಿಳುಹಬೇಕು’—ಎಂದು ಕೇಳಿದೆನು. ಆತನು ನನ್ನನ್ನು ನೋಡಿ ‘—ಎಲೈ ನಾರದನೆ, ಸಾವಿರ ವರುಷಗಳು ನಿಯಮದಿಂದ ಬ್ರಹ್ಮಚರ್ಯ ವ್ರತವನ್ನು ಮಾಡಿದರೆ ಆ ಸಭೆಗೆ ಹೋಗುವದಕ್ಕೆ ಯೋಗ್ಯನಾಗುತ್ತೀಯೆ—’ ಅಂದನು. ಆ ಬಳಿಕ ನಾನು ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ತಪಸ್ಸನ್ನು ಮಾಡುತ್ತಲಿರುವ ಸಮಯದಲ್ಲಿ ಸೂರ್ಯನು ಬಂದು ಅತಿನಿರ್ಮಲವಾಗಿ ಅನಿರ್ವಚನೀಯವಾಗಿರುವ ಬ್ರಹ್ಮಸಭೆಗೆ ನನ್ನನ್ನು ಕರದುಕೊಂಡು ಹೋದನು. ಆ ಬ್ರಹ್ಮಸಭೆಯು ಕ್ಷಣ ಕ್ಷಣಕ್ಕೂ ಬಂದೊಂದು ರೂಪವಾಗಿ ತೋರುತ್ತ ಇಷ್ಟು ಅಷ್ಟು ಎಂದು ಹೇಳುವದಕ್ಕೆ ಅಶಕ್ಯವಾಗಿರುವ ನೀಟವೂ ಅಗಲವೂ ಉಳ್ಳಂಥಾದ್ದಾಗಿ ಅತ್ಯುಷ್ಣವೂ ಅತಿಶೀತವೂ ಅಲ್ಲದೇ ಇರುವ ಅತಿಸೌಖ್ಯಸಂಪಾದಕವಾಗಿ ತನ್ನಲ್ಲಿರುವವರಿಗೆ ಹಸಿವು ಬಾಯಾರಿಕೆ ಶ್ರಮಗಳು ಮೊದಲಾದ ಸಕಲ ಬಾಧಕಗಳನ್ನು ಪರಿಹರಿಸುವದು; ಮತ್ತು ಪ್ರತ್ಯೇಕ ಪ್ರತ್ಯೇಕವಾಗಿ ನಾನಾರೂಪಗಳು ನಾನಾವರ್ಣಗಳು ಉಂಟಾಗಿ ಬಹುವಿಧಭಾವಗಳಿಂದ ಒಪ್ಪುತ್ತಿರುವ ಚಿತ್ರಗಳಿಂದ ನಿರ್ಮಿತವಾದ ತೆರದಿಂದ ತೋರುತ್ತಲಿರುವದು; ಸೂರ್ಯ ಚಂದ್ರಾಗ್ನಿಗಳಿಗಿಂತಲೂ ಅಧಿಕವಾಗಿ ತೇಜಸ್ಸುಂಟಾಗಿ ಪ್ರಭಾವಿಶೇಷದಿಂದ ತನ್ನಲ್ಲಿದ್ದವರನ್ನು ಬೆಳಗಿಸುತ್ತ ಜಯಶಾಲಿಗಳಿಗೆ ಶಾಶ್ವತವಾಗಿ ಸ್ತಂಭಾದಿ ಪ್ರಯತ್ನರಹಿತವಾಗಿರುವ ಅಂಥಾ ಸಭಾ ಭವನವನ್ನು ಯಾವಾಗಲು ಕಂಡು ಕೇಳಿದ್ದಿಲ್ಲ; ಅಂಥಾ ಸಭೆಯಲ್ಲಿ ಬ್ರಹ್ಮದೇವನು ಇದ್ದುಕೊಂಡು ದೇವಮಾಯೆಯಿಂದ ಹದಿನಾಲ್ಕು ಲೋಕಗಳನ್ನೂ ನಿರ್ಮಿಸುವನು; ಮತ್ತು ದಕ್ಷನು, ಪ್ರಚೇತನು, ಪುಲಹನು, ಪುಲಸ್ತ್ಯನು, ಮರೀಚಿಯು, ಕಾಶ್ಯಪನು ಮೊದಲಾದ ನವಬ್ರಹ್ಮರು, ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಸಪ್ತಮರುತ್ತುಗಳು, ವಿಶ್ವೇದೇವತೆಗಳು, ಅಶ್ವಿನೀದೇವತೆಗಳು, ಎಂಟುಮಂದಿ ದಿಕ್ಪಾಲಕರು, ಕ್ರತುವು, ಪ್ರಹ್ಲಾದನು, ಕರ್ದಮನು, ಭೃಗುವು, ಅತ್ರಿಯು, ವಸಿಷ್ಠನು, ಗೌತಮನು, ಶುಕನು, ಅಧರ್ವಾಂಗೀರಸರು, ವಾಲಖಿಲ್ಯರು, ಮರೀಚಿಪರು ಮೊದಲಾದ ಮಹಾ ಋಷಿಗಳು, ಪ್ರಸ್ತಕಾಲಗಳಲ್ಲಿ ಬರುವ ಮಹಾದೇವನು, ಮತ್ತು ಮಾರ್ಕಂಡೇಯನು, ಜಮದಗ್ನಿಯು, ಭರದ್ವಾಜನು, ಸಂವರ್ತನು,

ಚ್ಯವನನು, ದೂರ್ವಾಸನು, ಋಷ್ಯಶೃಂಗನು, ಯೋಗಾಚಾರ್ಯನು, ಸನತ್ಕುಮಾರನು, ಅಸಿತನು, ದೇವಲನು, ತತ್ವಜ್ಞನಾದ ಜೈಗೀಷವ್ಯನು, ಋಷಭನು, ಅಜಾತ ಶತ್ರುವು, ಮಹಾವೀರ್ಯನಾದ ಮಣಿಯು ಮೊದಲಾದ ಮುನಿಶ್ರೇಷ್ಠರು, ಮನಸ್ಸು, ವಿದ್ಯೆಯು, ಅಂತರೀಕ್ಷವು, ವಾಯುವು, ತೇಜಸ್ಸು, ಜಲ, ಭೂಮಿಯು, ರೂಪ ರಸ ಗಂಧ ಸ್ಪರ್ಶ ಶಬ್ದಗಳು, ಪ್ರಕೃತಿಯು, ಪ್ರಕೃತಿ ವಿಕಾರಗಳು, ಮಿಕ್ಕಾದ ಜಗತ್ಕಾರಣಗಳು, ಅಷ್ಟಾಂಗ ಸಹಿತವಾದ ಆಯುರ್ವೇದವು, ಚಂದ್ರನು, ನಕ್ಷತ್ರಗಳು, ಸೂರ್ಯನು, ವಾಯುಗಳು, ಸಂಕಲ್ಪಗಳು, ಪ್ರಾಣಗಳು ಇವೆಲ್ಲವು ಮೂರ್ತಿಗಳನ್ನು ಅಂಗೀಕರಿಸಿ ಬಂದು ಬ್ರಹ್ಮದೇವನನ್ನು ಓಲಗಿಸುತ್ತಿರುವವು. ಧರ್ಮಾರ್ಥಕಾಮಗಳು, ಹರ್ಷದ್ವೇಷಗಳು, ತಪಸ್ಸು, ದಮವು, ಇಪ್ಪತ್ತೆಂಟು ಮಂದಿ ಗಂಧರ್ವರು, ಮಿಕ್ಕಾದ ಗಂಧರ್ವರು, ಲೋಕಪಾಲಕರು, ಬೃಹಸ್ಪತಿಯು, ಶುಕ್ರನು, ಬುಧನು, ಅಂಗಾರಕನು, ಶನೀಶ್ವರನು, ರಾಹುವು, ಕೇತುವು ಮೊದಲಾದ ನವಗ್ರಹಗಳು, ರಥಂತರ ಸಾಮವು, ಹರಿಮಂತವು, ವಸುಮಂತವೆಂಬ ಸಾಮವು, ಶಿತೋಷ್ಣಾದಿ ದ್ವಂದ್ವ ದುಃಖಗಳನ್ನು ಬಿಟ್ಟ ಬ್ರಹ್ಮನಿಷ್ಠರು, ಇಂದ್ರಾದಿ ಅರಸುಗಳು, ವಿಶ್ವಕರ್ಮನು, ವಿಜ್ಞಾನಗಳು— ಇವರೆಲ್ಲರೂ ಆ ಸಭೆಯಲ್ಲಿ ಮನಸ್ಸು ಬಂದರೀತಿಗೆ ಓಲಗಿಸುವರು. ಮತ್ತು ಪಿತೃದೇವತೆಗಳು, ಋಗ್ವೇದವು, ಸಾಮವೇದವು, ಯಜುರ್ವೇದವು, ಅಥರ್ವಣವೇದವು, ಸರ್ವಶಾಸ್ತ್ರಗಳು, ಇತಿಹಾಸಗಳು, ಉಪವೇದಗಳು, ವೇದಾಂಗಗಳು, ಗ್ರಹಯಜ್ಞಗಳು, ಸೋಮಾದಿ ದೇವತೆಗಳು, ಸಂಸಾರ ತಾರಕವಾದ ಗಾಯತ್ರಿಯು, ಕ್ಷಮೆಯು, ಗಾಯತ್ರಿ ಮೊದಲಾದ ಸಪ್ತಛಂದಸ್ಸುಗಳಿಂದ ಒಪ್ಪುತ್ತಲಿರುವ ವಾಣಿಯು, ಮೇಧೆಯು, ಧೃತಿಯು, ಶ್ರುತಿಯು, ಪ್ರಜ್ಞೆಯು, ಕಾಂತಿಯು, ಸ್ಮೃತಿಯು, ಕೀರ್ತಿಯು, ಕ್ಷಮೆಯು, ಸಾಮಗಾನಗಳು, ಗಾಥೆಗಳು, ತರ್ಕಯುಕ್ತಗಳಾದ ಭಾಷ್ಯಗಳು, ಕ್ಷಣಗಳು, ಲವಗಳು, ಮುಹೂರ್ತಗಳು, ಅಹೋರಾತ್ರಗಳು, ಪಕ್ಷಗಳು, ಮಾಸಗಳು, ಋತುಗಳು, ಪರಿವತ್ಸರಗಳು, ಇಡಾವತ್ಸರಗಳು, ಇದ್ವತ್ಸರಗಳು, ವತ್ಸರಗಳೆಂಬ ಐದು ವಿಧಗಳಾದ ಸಂವತ್ಸರಗಳು, ಕೃತಾದಿ ಚತುರ್ಯುಗಗಳು, ನಾಲ್ಕು ಪ್ರಕಾರಗಳಾದ ಸಮರಾತ್ರಗಳು, ವಿದ್ಯವಾಗಿ ನಿತ್ಯವಾಗಿ ಅವ್ಯಯವಾಗಿ ಧ್ರುವವಾಗಿರುವ ಕಾಲಚಕ್ರಗಳು, ಅದಿತಿಯು, ದಿತಿಯು, ದನುವು, ವಿನತೆಯು, ಸುರಸೆಯು, ಕಾಲಕೆಯು, ಸುರಭಿದೇವಿಯು, ಸರಮೆಯು, ಗೌತಮಿಯು, ಪೃಥೆಯು, ಕದ್ರುವು ಮೊದಲಾದ ದೇವ ಮಾತೃಗಳು, ರುದ್ರಾಣಿಯು, ಶ್ರೀದೇವಿಯು, ಲಕ್ಷ್ಮಿಯು, ಭದ್ರೆಯು, ಜರೆಯು, ಪೃಥಿವಿಯು, ಗಂಗೆಯು, ಹ್ರೀದೇವಿಯು, ಸ್ವಾಹಾದೇವಿಯು, ಕೀರ್ತಿಯು, ಸುರಾದೇವಿಯು, ಶಚೀದೇವಿಯು, ತುಷ್ಟಿಯು, ಅರುಂಧತಿಯು, ಸಂವೃತ್ತಿಯು, ಆಶೆಯು, ನಿಯತಿಯು, ಪುಷ್ಟಿಯು, ರತಿಯು ಮೊದಲಾದ ದೇವತಾ ಸ್ತ್ರೀಯರು, ಭೂಲೋಕದಲ್ಲಿ ನಾಲ್ಕು ವರ್ಣದವರಿಂದ ಮಾಡಲ್ಪಟ್ಟ ಸ್ವಧಾಕಾರ್ಯದಿಂದ ತೃಪ್ತರಾಗಿ ಸೋಮನಿಗೆ ತೃಪ್ತಿಯನ್ನು ಮಾಡುತ್ತ ದೇಹವಂತರಾಗಿರುವ ಅಗ್ನಿಷ್ವಾತ್ತ ವೈರಾಜ ಮಹಾಭಾಗ ಗಾರ್ಹಪತ್ಯರೆಂಬ ನಾಲ್ಕು ಮಂದಿ ಪಿತೃದೇವತೆಗಳು, ಮೂರುವರ್ಣದವರಿಂದ ಮಾಡಲ್ಪಟ್ಟ ಸ್ವಧಾಕಾರ್ಯದಿಂದ ತೃಪ್ತರಾಗಿ ಸೋಮನಿಗೆ ತೃಪ್ತಿಯನ್ನು ಮಾಡುತ್ತ ಮೂರ್ತಿಮಂತರಲ್ಲದೇ ಇರುವ ಸೋಮಪರು, ಏಕಶೃಂಗರು, ಅಸ್ವಾಹಾರ್ಯರೆಂಬ ಮೂರು ಮಂದಿ ಪಿತೃದೇವತೆಗಳೂ ಬ್ರಹ್ಮದೇವನನ್ನು ಓಲಗಿಸುವರು. ರಾಕ್ಷಸರು, ಪಿಶಾಚರು, ಗುಹ್ಯಕರು, ದಾನವರು, ಗರುಡರು, ಪನ್ನಗರು, ಪಶುಗಳು, ಸ್ಥಾವರ ಜಂಗಮಾತ್ಮಕವಾದ ಪ್ರಪಂಚವು ಬಂದು ಬ್ರಹ್ಮದೇವನಿಗೆ ನಮಸ್ಕಾರವನ್ನು ಮಾಡಿ ಬರುತ್ತ ಹೋಗುತ್ತಲಿರುವರು. ಈ ಪ್ರಕಾರದಲ್ಲಿ ಬ್ರಹ್ಮದೇವನು ತನ್ನ ಸಮೀಪಕ್ಕೆ ಬರುವ ಸಕಲ ದೇವದಾನವ ದೈತ್ಯ ಮುನಿ ಯಕ್ಷ ಸುಪರ್ಣ ಗರುಡ ಗಂಧರ್ವಾಪ್ಸರೋಜನಗಳನ್ನು ದಯೆಯಿಂದ ಯಥೋಚಿತ ಸತ್ಕಾರಗಳಿಂದ ಸಂತೋಷಪಡಿಸುತ್ತ ಸಕಲ ಭೋಗಗಳನ್ನು ಕೊಟ್ಟು ಬಹುಮಾನವನ್ನು ಮಾಡುವನು. ಈಪ್ರಕಾರದಲ್ಲಿ ಪ್ರತಿದಿನವೂ ಬರುತ್ತ ಹೋಗುತ್ತಲಿರುವ ದೇವದಾನವರು ಮೊದಲಾದವರಿಂದ ನಿಬಿಡವಾಗಿ ದಿವ್ಯವಾಗಿ ಬ್ರಹ್ಮ ತೇಜೋವಿರಾಜಮಾನವಾಗಿ ಬ್ರಹ್ಮರ್ಷಿಗಣ ಸೇವಿತವಾಗಿರುವ ಬ್ರಹ್ಮ ದೇವನ ಸಭೆಯನ್ನು ನೋಡಿ ಉಂಟು ; ಭೂಲೋಕದಲ್ಲಿ ನಿನ್ನ ಸಭೆಯು ಹ್ಯಾಗೆ ಶ್ರೇಷ್ಠವಾಗಿರುವದೋ ಹಾಗೆ ದೇವಲೋಕದಲ್ಲಿ ಬ್ರಹ್ಮಸಭೆಯು ಶ್ರೇಷ್ಠವಾಗಿರುವದು ' ಎಂದು ನಾರದನು ಧರ್ಮರಾಯನಿಗೆ ಹೇಳಿದನು. ''

## ೧೨ನೇ ಅಧ್ಯಾಯ.—ಲೋಕಪಾಲಸಭಾಖ್ಯಾನಪರ್ವ ಸಮಾಪ್ತಿ.

"ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ನಾರದನಂ ನೋಡಿ 'ಎಲೈ ನಾರದನೆ, ಯಮನ ಸಭೆಯಲ್ಲಿ ಅನೇಕ ರಾಜಸಮೂಹವಿರುವದೆಂತಲೂ ವರುಣನ ಸಭಾಸ್ಥಾನದಲ್ಲಿ ನಾಗೇಂದ್ರರು, ದೈತ್ಯರು, ಸಮುದ್ರಾದಿ ದೇವತೆಗಳೂ ಇರುವರೆಂತವೂ ಕುಬೇರನ ಸಭಾಭವನದಲ್ಲಿ ಗಂಧರ್ವಾಪ್ಸರೋಗಣಗಳು, ಯಕ್ಷ ರಾಕ್ಷಸ ಗುಹ್ಯಕರು ಭಗವಂತನಾದ ಶಂಕರನೂ ಇರುವನೆಂತಲೂ ಬ್ರಹ್ಮದೇವನ ಸಭಾಭವನದಲ್ಲಿ ಮಹಾಋಷಿಶ್ರೇಷ್ಠರೂ ಸಕಲ ದೇವತೆಗಳೂ ಸಕಲ ವೇದಶಾಸ್ತ್ರಾದಿ ದೇವತೆಗಳೂ ಇರುವರೆಂತಲೂ ಮಹೇಂದ್ರನ ಸಭಾಭವನದಲ್ಲಿ ದೇವಗಂಧರ್ವ ಮುನಿಜನಗಳು ರಾಜಋಷಿಶ್ರೇಷ್ಠನಾದ ಹರಿಶ್ಚಂದ್ರನೂ ಇರುವನೆಂತಲೂ ಹೇಳಿದಿರಿ; ಸಕಲರಾಜ ಸಮೂಹವೂ ಯಮನ ಸಭೆಯಲ್ಲಿರುವಾಗ ಹರಿಶ್ಚಂದ್ರನೊಬ್ಬನೇ ಯಾವ ನಿಮಿತ್ತದಿಂದ ಯಾವ ಪುಣ್ಯವಿಶೇಷದಿಂದ ಯಾವ ತಪಸ್ಸಿನಿಂದ ಸಕಲರಾದ ಅರಸುಗಳಿಗಿಂತಲೂ ಅಧಿಕವಾಗಿ ಇಂದ್ರನ ಸಭೆಯಲ್ಲಿದ್ದುಕೊಂಡು ಆತನೊಡನೆ ಕೂಡಿ ಸಂತೋಷಪಡುವದಕ್ಕೆ ಯೋಗ್ಯನಾದನು? ಯಮನ ಸಭೆಯಲ್ಲಿರುವ ನನ್ನ ತಂದೆಯಾದ ಪಾಂಡುರಾಯನನ್ನು ನೀವು ಕಂಡು ಮಾತನಾಡಿದಿರಲ್ಲ; ಆತನು ನನಗೆ ಏನುಹೇಳಿದನು? ಅದನ್ನು ವಿವರಿಸಬೇಕು; ತ್ರಿಕಾಲಜ್ಞಾನ ಸಂಪನ್ನನಾದ ನಿನ್ನ ದೆಸೆಯಿಂದ ಸಕಲ ವಿಶೇಷಗಳನ್ನೂ ತಿಳಿಯುವದಕ್ಕೆ ನನಗೆ ಸಂತೋಷವಾಗುತ್ತಲಿಧೆ' ಎಂದು ಕೇಳಿದನು. ನಾರದನು 'ಎಲೈ ಧರ್ಮರಾಯನೆ, ಹರಿಶ್ಚಂದ್ರನು ಯಾವ ಕಾರಣದಿಂದ ಇಂದ್ರಸಭೆಯಲ್ಲಿದ್ದಾನೆಂದು ಕೇಳಿದೆಯಲ್ಲ; ಆತನ ಮಹಾತ್ಮ್ಯವನ್ನು ಹೇಳುತಲಿಧೇನೆ ಕೇಳು: ಇಕ್ಷ್ವಾಕು ಕುಲದಲ್ಲಿ ಹುಟ್ಟಿ ವಿಶ್ವಾಮಿತ್ರನಿಂದ ರಕ್ಷಿಸಲ್ಪಟ್ಟ ತ್ರಿಶಂಕುಮಹಾರಾಯನು ಅಯೋಧ್ಯಾಪಟ್ಟಣವನ್ನು ಪರಿಪಾಲಿಸುತ್ತ ಕೈಕೆಯ ವಂಶದಲ್ಲಿ ಹುಟ್ಟಿದ ಸತ್ಯವತಿಯೆಂಬ ತನ್ನ ಧರ್ಮಪತ್ನಿಯಲ್ಲಿ ಸತ್ಯಸಂಧನಾದ ಹರಿಶ್ಚಂದ್ರನಂ ಪಡೆವನು; ತ್ರಿಶಂಕುಮಗನಾದ ಹರಿಶ್ಚಂದ್ರನು ಬಲಪರಾಕ್ರಮ ಧುರಂಧರನಾಗಿ ಸಕಲ ರಾಜಸಮೂಹವೂ ತನ್ನ ಆಜ್ಞೆಯಲ್ಲಿ ಪ್ರವರ್ತಿಸುತ್ತಿರಲು, ಚಕ್ರವರ್ತಿಯೆಂಬ ಪ್ರಸಿದ್ಧಿಯಂ ಪಡೆದು ತನ್ನ ಭುಜಬಲದಿಂದ ಸಪ್ತದ್ವೀಪಗಳನ್ನೂ ಪರ್ವತಸಮೇತನಾದ ಮಹೀಮಂಡಲವನ್ನೂ ಜಯಿಸಿ ರಾಜಸೂಯವೆಂಬ ಯಾಗವನ್ನು ಮಾಡುವಲ್ಲಿ ಸಕಲವಾದ ಅರಸುಗಳೂ ನಾನಾವಸ್ತು ವಿಶೇಷಗಳನ್ನು ಜೊತೆಗೊಳಿಸಿ ತೆಗದುಕೊಂಡು ಬಂದು ಸಕಲ ಬ್ರಾಹ್ಮಣ ಸಮೇತರಾಗಿ ತನಗೆ ಸಹಾಯವನ್ನು ಮಾಡಲು ಯಜ್ಞವು ಮುಗಿಯಿತು. ಆಗ ಅವಭೃತಸ್ನಾನವನ್ನು ಮಾಡಿ ಶಾಸ್ತ್ರೋಕ್ತಪ್ರಕಾರದಿಂದ ಐದು ಮಡಿಯಾಗಿ ಅಧಿಕವಾದ ದಕ್ಷಿಣೆಯನ್ನು ಋತ್ವಿಕ್ಕುಗಳಿಗೆ ಕೊಟ್ಟು ಬ್ರಾಹ್ಮಣರಿಗೆ ಬೇಕಾದ ಧನಕನಕವಸ್ತು ರತ್ನಭೂಷಣಗಳಿಂದಲೂ ಷಡ್ರಸೋಪೇತವಾದ ಭೋಜನಗಳಿಂದಲೂ ಸಂತೋಷವನ್ನು ಕಲ್ಪಿಸಿದನು. ಅವರು '—ಕೀರ್ತಿ ತೇಜೋವಿಶೇಷಗಳ ದೆಸೆಯಿಂದ ಸಕಲವಾದ ಅರಸುಗಳಿಗಿಂತಲೂ ಅಧಿಕವಾಗಿರು—' ಎಂದು ಹರಸಿದರು. ಆದ್ದರಿಂದ ಹರಿಶ್ಚಂದ್ರನಿಗೆ ಅಂಥಾ ಮಹತ್ವವು ಉಂಟಾಯಿತು. ರಾಜಸೂಯ ಯಾಗವನ್ನು ಮಾಡಿದವರು, ಯುದ್ಧದಲ್ಲಿ ಹಿಮ್ಮೆಟ್ಟದೆ ಹತರಾದವರು, ಅತಿಘೋರ ತಪಸ್ಸನ್ನು ಮಾಡಿ ದೇಹವನ್ನು ಬಿಟ್ಟವರೂ ಇಂದ್ರನ ಸಮಾನರಾಗಿ ಇಂದ್ರಸಭೆಯಲ್ಲಿ ಅನೇಕ ಕಾಲ ಸುಖವಾಗಿರುವರು. ಆದ್ದರಿಂದ ಈ ಹರಿಶ್ಚಂದ್ರನಲ್ಲಿರುವ ಮಹಾತ್ಮ್ಯವನ್ನು ಕೇಳಿ ಆಶ್ಚರ್ಯಪಟ್ಟು ನಿನ್ನ ತಂದೆಯಾದ ಪಾಂಡುರಾಯನು ನನ್ನನ್ನು ನೋಡಿ '—ಧರ್ಮರಾಯನೊಡನೆ ಭುಜಬಲ ಧುರಂಧರರಾದ ತಮ್ಮಂದಿರು ಆತನು ಕಟ್ಟು ಮಾಡಿದ ಕಾರ್ಯಗಳನ್ನು ಮಾಡುತ್ತಿರಲು ಅವರಿಂದ ಸಾಧ್ಯವಾಗದ ಕಾರ್ಯಗಳುಂಟೆ? ಸಕಲರಾದ ಅರಸುಗಳನ್ನು ಜಯಿಸಿ ರಾಜಸೂಯ ಯಾಗವನ್ನು ಮಾಡುವಹಾಗೆ ಹೇಳು—' ಎಂದು ಹೇಳಿದನು; ನೀನು ಆತನ ಅಪ್ಪಣೆಯನ್ನು ಅಂಗೀಕರಿಸಿ ಹಾಗೆ ಮಾಡಿದರೆ ಪಿತೃಪಿತಾಮಹ ಸಮೇತನಾಗಿ ಪಾಂಡುರಾಯನು ಇಂದ್ರಸಭಾ ಭವನದಲ್ಲಿ ಸಕಲ ಸೌಖ್ಯಗಳನ್ನು ಅನುಭವಿಸುವನು; ನಿನಗೆ ಅಂಥಾ ಶ್ರೇಯೋಲಾಭವಾದರೆ ಈ ಯಜ್ಞದ್ದೆಸೆಯಿಂದ ಸಕಲ ಕ್ಷತ್ರಿಯ ವಿನಾಶಕಾರಣವಾದ ಯುದ್ಧವು ಸಂಭವಿಸುವದು; ಅದಲ್ಲದೆ ಬ್ರಹ್ಮರಾಕ್ಷಸ ಸಮೂಹವು ವಿಘ್ನಮಾಡುವದಕ್ಕೋಸ್ಕರ ರಂಧ್ರಗಳನ್ನೇ ಹುಡುಕಿ ತಿರುಗುವರು; ಅದರಿಂದ ಯಾಗವು ಬಹು ವಿಘ್ನಗಳಿಗೆ ಆಸ್ಪದವಾಗಿರುವದು, ಇಷ್ಟ್ಟೆ

ಮಾತ್ರವೇ ಅಲ್ಲ. ಈ ಯಾಗದಿಂದ ಆಗುವ ಶುಭಗಳು ಅಪಾರಗಳಾಗಿರುವವು; ನಾನು ಹೇಳತಕ್ಕದ್ದೆಲ್ಲವನ್ನೂ ಹೇಳಿದೆನು; ಇನ್ನು ನಿನ್ನ ಮನಸ್ಸಿಗೆ ಬಂದರೀತಿಮಾಡು; ಸಮಸ್ತರಾದ ನಾಲ್ಕು ವರ್ಣದವರ ಸಂರಕ್ಷಣದಲ್ಲಿ ಅಪ್ರಮತ್ತನಾಗಿ ಬ್ರಾಹ್ಮಣರಿಗೆ ದಾನಗಳಿಂದ ಸಂತೋಷವನ್ನು ಕಲ್ಪಿಸಿ ಸುಖವಾಗಿ ವೃದ್ಧಿಯನ್ನೈದು; ನಾನು ಶ್ರೀಕೃಷ್ಣದರ್ಶನಾರ್ಥವಾಗಿ ದ್ವಾರಕಾಪಟ್ಟಣಕ್ಕೆ ಹೋಗುತಲಿದ್ದೇನೆ' ಎಂದು ನುಡಿದು ಧರ್ಮರಾಯನ ಅಪ್ಪಣೆಯನ್ನು ತೆಗೆದುಕೊಂಡು ರೈವತನು ಮೊದಲಾದ ಋಷಿಸಮೂಹದೊಡನೆ ಕೂಡಿ ಎಥೇಚ್ಛವಾಗಿ ಹೋದನು. ಆ ಬಳಿಕ ಧರ್ಮರಾಯನು ಅತಿ ದುರ್ಲಭವಾದ ರಾಜಸೂಯ ಯಾಗವನ್ನು ಕುರಿತು ವಿಚಾರಿಸುತ್ತಲಿದ್ದನು" ಎಂದು ವೈಶಂಪಾಯನ ಮುನೀಂದ್ರನು ಜನಮೇಜಯರಾಯನಿಗೆ ವಿವರಿಸಿದನು.

---

## ೧೩ ನೇ ಅಧ್ಯಾಯ.—ರಾಜಸೂಯಾರಂಭ ಪರ್ವ.

ಅನಂತರದಲ್ಲಿ: ವೈಶಂಪಾಯನಮುನೀಂದ್ರನು ಜನಮೇಜಯರಾಯನನ್ನು ಕುರಿತು ಇಂತೆಂದನು:

"ಕೇಳು ಜನಮೇಜಯನೆ, ಈಪ್ರಕಾರದಿಂದ ಧರ್ಮರಾಯನು ನಾರದಮುನೀಂದ್ರನ ವಾಕ್ಯಗಳನ್ನು ಮನಸ್ಸಿನಲ್ಲಿ ಸ್ಮರಿಸುತ್ತ ಯಾಗದ್ದೆಸೆಯಿಂದ ಬರುವ ಪುಣ್ಯಲೋಕಗಳನ್ನೂ ಪೂರ್ವರಾಜರ್ಷಿಗಳನ್ನೂ ಅವರ ಮಹಾತ್ಮ್ಯವನ್ನೂ ಇವರೆಷ್ಟುಮಂದಿಗಿಂತಲೂ ವಿಶೇಷವಾದ ಪ್ರಭಾವವನ್ನೈದಿದ ಹರಿಶ್ಚಂದ್ರನನ್ನೂ ಸ್ಮರಿಸಿ ಅತಿ ದುರ್ಲಭವಾದ ರಾಜಸೂಯವು ಯಾವ ಪ್ರಕಾರದಿಂದ ಲಭಿಸುವದೆಂದು ನಿಟ್ಟುಸುರುಗಳನ್ನು ಬಿಡುತ, ಡೋಳಾಯಮಾನ ಹೃದಯನಾಗಿ, ಸಭೆಯಲ್ಲಿರುವವರನ್ನು ಬಹುಮಾನಪೂರ್ವಕವಾಗಿ ನೋಡಿ, ತನ್ನ ಮನೋರಥವನ್ನು ಹೇಳಿ, ಯಾವ ಪ್ರಕಾರದಿಂದಲಾದರೂ ರಾಜಸೂಯ ಯಾಗವನ್ನು ಮಾಡಬೇಕೆಂದು ನಿಶ್ಚಯಿಸಿದನು. ಮತ್ತು ಪರಾಕ್ರಮಶಾಲಿಯಾದ ಧರ್ಮರಾಯನು ಸಕಲಜನ ಸಮೇತನಾಗಿ ಧರ್ಮವನ್ನೇ ಪರಿಪಾಲಿಸುತ್ತ ಪರಿಜನಗಳನ್ನು ನೋಡಿ, ಕೋಪವನ್ನೂ ಬಲಾತ್ಕಾರವನ್ನೂ ಬಿಟ್ಟು ಅರ್ಥಿಜನಗಳಿಗೆ ಬೇಕಾದ ವಸ್ತುಗಳನ್ನು ಕೊಡಿ' ಎಂತಲೂ 'ಪ್ರಿಯವನ್ನೇ ಮಾಡಿ' ಎನ್ನುತಲೇ ಹೊರತು ಮತ್ತೊಂದು ಕಾರ್ಯವನ್ನು ನುಡಿಯದೆ ಇದ್ದನು. ಆ ಮಹಾತ್ಮನನ್ನು ಪ್ರಜೆಗಳು ತಾಯಿತಂದೆಗಳೋಪಾದಿಯಲ್ಲಿ ಭಾವಿಸಿದವರಾದ್ದರಿಂದ ಲೋಕದಲ್ಲಿ ಧರ್ಮರಾಯನಿಗೆ ಶತ್ರುವು ಒಬ್ಬನಾದರೂ ಇಲ್ಲ; ಆದರಿಂದ ಆತನಿಗೆ 'ಆ ಅಜಾತ ಶತ್ರು' ಎಂಬ ಹೆಸರು ಯಥಾರ್ಥವಾಯಿತು. ಮತ್ತು ಭೀಮನು ಧರ್ಮಮಾರ್ಗವನ್ನು ತಪ್ಪದೆ ನೀತಿಮಾರ್ಗದಿಂದ ಪ್ರಜಾಪರಿಪಾಲನವನ್ನು ಮಾಡುತ್ತಿರಲು, ಸವ್ಯಸಾಚಿಯಾದ ಅರ್ಜುನನು ಸಕಲ ಶತ್ರುಸಂಹಾರವನ್ನು ಮಾಡುತ್ತಿರಲು, ಕೀರ್ತಿ ಧುರಂಧರನಾದ ನಕುಲನು ಸಕಲರಾಜ ಲೋಕಗಳ ದೆಸೆಯಿಂದ ಕಪ್ಪಗಳನ್ನು ತೆಗದುಕೊಂಡು ಬರಲು, ಬುದ್ಧಿಸಂಪನ್ನನಾದ ಸಹದೇವನು ಧರ್ಮಾಧಿಕಾರಿಯಾಗಿ ಪ್ರವರ್ತಿಸುತ್ತಲಿರಲು, ಆ ರಾಜ್ಯದಲ್ಲಿರುವಂಥಾವರು ಕಲಹದ ಹೆಸರನ್ನು ಅರಿಯದೆ ಸುಖವಾಗಿದ್ದರು. ಯಾಗವು, ಸಂತಾನವು, ವಾಣಿಜ್ಯವು, ಗೋರಕ್ಷಣವು, ಕೃಷಿಯು, ವೃದ್ಧಿಜೀವನವು ಮೊದಲಾದ ಸದ್ಧರ್ಮವನ್ನು ತಪ್ಪದೆ ಆಚರಿಸುವ ವೈಶ್ಯನು ಸರ್ವವರ್ಣಗಳಲ್ಲಿ ಅರ್ಥಸಂಪಾದಕನಾಗಿ ಪ್ರವರ್ತಿಸುತ್ತಿದ್ದನು. ಮತ್ತು ಆ ಧರ್ಮರಾಯನ ರಾಜ್ಯದಲ್ಲಿ ಅತಿವೃಷ್ಟಿಯು, ಅನಾವೃಷ್ಟಿಯು, ರೋಗಗಳು, ಚೋರಾಗ್ನಿಪರರಾಷ್ಟ್ರಭಯಗಳು, ಅನ್ಯೋನ್ಯ ಕಲಹ ಭಯವು, ದಂಡದ್ರೋಹಗಳಿಂದ ಬರುವ ಭಯವು ಲೇಶಮಾತ್ರವಾದರೂ ಇಲ್ಲದೆ ಹೋಯಿತು. ಆ ಅರಸಿಗೆ ವಸ್ತುವಿಶೇಷವನ್ನೂ ಕಪ್ಪಗಳನ್ನೂ ಕೊಡುವದಕ್ಕೂ ಆತನ ವಿಭವವನ್ನು ನೋಡುವದಕ್ಕೂ ಬರುವವರೇ ಹೊರತಾಗಿ ರಾಷ್ಟ್ರದಲ್ಲಿ ನೀತಿ ತಪ್ಪಿತೆಂದು ಹೇಳುವದಕ್ಕೆ ಬಂದವನು ಒಬ್ಬನೂ ಇಲ್ಲ. ಈಪ್ರಕಾರದಲ್ಲಿ ಆ ಅಜಾತ ಶತ್ರುವು ಧರ್ಮಪರಿಪಾಲನವನ್ನು ಮಾಡುವಾಗ ಪ್ರಜೆಗಳು ತಮ್ಮಗೆ ತಾವೇ ತಂದು ಕೊಡುವಂಥ ದ್ರವ್ಯದಿಂದ ಬೊಕ್ಕಸಗಳೆಲ್ಲ ತುಂಬಿರಲು, ಧರ್ಮರಾಯನು ತನ್ನ ತಮ್ಮಂದಿರನ್ನೂ ಮಂತ್ರಿಗಳನ್ನೂ ಕರತರಿಸಿ ರಾಜಸೂಯವನ್ನು ಮಾಡಬೇಕೆಂದು ಬಹು ಪ್ರಕಾರವಾಗಿ ನುಡಿದನು. ಅವ

ರು ಯಾಗ ಮಾಡುವದಕ್ಕೆ ನಿಶ್ಚಯಿಸಿರುವ ಧರ್ಮರಾಯನನ್ನು ನೋಡಿ ಇಂತೆಂದರು: 'ಬಹು ಕೀರ್ತಿಪ್ರದವಾಗಿ ಸರ್ವಯಜ್ಞ ಫಲ ಸಮೇತವಾಗಿ ಶ್ರೇಷ್ಠವಾದ ರಾಜಸೂಯವು ಸಕಲ ರಾಜ ಸಮೂಹವನ್ನು ಜಯಿಸುವದಕ್ಕೆ ಸಾಮರ್ಥ್ಯವುಳ್ಳ ಸಾಮ್ರಾಜ್ಯಾಧಿಪತಿಗೆ ಹೊರತಾಗಿ ಮಿಕ್ಕಾದವರಿಗೆ ಯೋಗ್ಯವಲ್ಲ; ಈ ಯಜ್ಞತಂತ್ರವನ್ನು ನಡೆಸುವ ಋತ್ವಿಕ್ಕುಗಳ ಮಾತೃ ಪಿತೃ ವಂಶಗಳಲ್ಲಿ ಹತ್ತುತರದವರು ಮೊದಲು ಸಾಂಗವಾಗಿ ವೇದವನ್ನೋದಿರಬೇಕು; ಮತ್ತು ಸಕಲರಾದ ಅರಸುಗಳೂ ತನ್ನ ಆಜ್ಞೆಯಲ್ಲಿರಲು ನಿಯತವ್ರತನಾಗಿ ಸಾಮಮಂತ್ರಗಳಿಂದ ಷಡಗ್ನಿ ಜಯವನ್ನು ಮಾಡಿ, ದರ್ವಿಹೋಮಗಳನ್ನು ಮಾಡಿ, ಸಕಲ ಕ್ರತುಸಂಸ್ಥಗಳನ್ನು ಮಾಡಿ, ತನಗಿರುವ ಸಮಸ್ತ ಧನವನ್ನೂ ದಕ್ಷಣೆಯಾಗಿ ಕೊಟ್ಟು, ಅವಭೃತಸ್ನಾನವನ್ನು ಮಾಡಿದ ಅರಸಿಗೆ ವರುಣಲೋಕ ಪ್ರಾಪ್ತಿಯಾಗುವದರಿಂದ, ಸಕಲ ಕ್ಷತ್ರಿಯರೂ ತಮಗೆ ಅಶಕ್ಯವಾದರೂ ಈ ಯಾಗವನ್ನೇ ಮಾಡಬೇಕೆಂದು ಅಪೇಕ್ಷಿಸುತ್ತಲಿರುವರು; ಹೀಗಿರುವಲ್ಲಿ ಸಕಲ ಸಾಮ್ರಾಜ್ಯಕ್ಕೆ ಯೋಗ್ಯನಾದ ನೀನು ರಾಜಸೂಯ ಯಾಗವನ್ನು ಮಾಡುವದಕ್ಕೆ ಸಂಶಯವೇನು? ಭೂಲೋಕದಲ್ಲಿರುವ ಸಮಸ್ತ ರಾಜಲೋಕಗಳನ್ನು ನಿನ್ನ ಅಪ್ಪಣೆಯಿಂದ ನಾವೇ ಜಯಿಸುತಲಿದೇವೆ; ನೀನು ಈಗಲೇ ಈ ಯಾಗವನ್ನು ಮಾಡು' ಎಂದು ಅವರೆಲ್ಲರೂ ಏಕವಾಕ್ಯತೆಯಾಗಿಯೂ ಪ್ರತ್ಯೇಕ ಪ್ರತ್ಯೇಕವಾಗಿಯೂ ನುಡಿದರು. ಆ ಬಳಿಕ ಅಜಾತಶತ್ರುವು ಧರ್ಮಯುಕ್ತವಾಗಿ ಹಿತವಾಗಿ ಶುಭಪ್ರದವಾಗಿ ಯೋಗ್ಯಗಳಾದ ಅವರ ವಾಕ್ಯಗಳೆಲ್ಲವನ್ನೂ ಕೇಳಿ ರಾಜಸೂಯ ಯಾಗವನ್ನು ಮಾಡುವದಕ್ಕೆ ನಿಶ್ಚಯಿಸಿದನು."

---

## ೧೪ ನೇ ಅಧ್ಯಾಯ.—ರಾಜಸೂಯಾರಂಭ ಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಭೀಮಸೇನನು ಮೊದಲಾದ ತಮ್ಮಂದರು, ಪ್ರಾಜ್ಞರಾದ ಮಂತ್ರಿಜನಗಳು, ಮಹಾತ್ಮರಾದ ಋತ್ವಿಕ್ಕುಗಳು, ಕೃಷ್ಣದ್ವೈಪಾಯನ ಧೌಮ್ಯರು ಮೊದಲಾದವರು, ಬುದ್ಧಿಸಂಪನ್ನನಾದ ಧೃಷ್ಟದ್ಯುಮ್ನನು, ರಾಜಧರ್ಮವನ್ನು ತಿಳಿದ ವಿರಾಟ ದ್ರುಪದರು, ಪ್ರಾಜ್ಞನಾದ ಸಾತ್ಯಕಿಯು, ಸುಭದ್ರೆಯ ಮಗನಾದ ಅಭಿಮನ್ಯುವು, ಶೌರ್ಯಧುರಂಧರರಾದ ದ್ರೌಪದಿಯ ಮಕ್ಕಳು ಮೊದಲಾದ ತನ್ನ ಆಪ್ತಜನರನ್ನು ಕುರಿತು ಕೌರವ ಶ್ರೇಷ್ಠನಾದ ಧರ್ಮರಾಯನು 'ಸಕಲ ಸಾಮ್ರಾಜ್ಯಾಧಿಪತಿಯಾದ ಸಾರ್ವಭೌಮನು ಮಾಡತಕ್ಕಂಥಾ ಈ ರಾಜಸೂಯ ಯಾಗವನ್ನು ಮಾಡಬೇಕೆಂದು ನನ್ನ ಮನಸ್ಸಿನಲ್ಲಿದೆ; ಇದಕ್ಕೆ ತಕ್ಕಂಥಾ ಉಪಾಯವನ್ನು ಹೇಳಬೇಕು' ಎನಲು ಅವರೆಲ್ಲರೂ ಆತನನ್ನು ನೋಡಿ 'ನಿನ್ನ ಸಾಮರ್ಥ್ಯವು ದೇಶಕಾಲಗಳು ಧನಾಗಮವ್ಯಯಗಳನ್ನು ಬಹು ಪ್ರಕಾರದಲ್ಲಿ ವಿಚಾರಿಸಿದರೂ ಯಾವ ಪ್ರಕಾರದಿಂದಲೂ ರಾಜಸೂಯ ಯಾಗವನ್ನು ಮಾಡುವದಕ್ಕೆ ನೀನೇ ಯೋಗ್ಯನು ಎಂದು ಮೊದಲೇ ನಿಶ್ಚಯಿಸಿದೆವು' ಎಂದು ನುಡಿದರು. ಧರ್ಮರಾಯನು ಅವರ ವಾಕ್ಯವನ್ನು ಕೇಳಿ ಸಕಲ ಲೋಕಗಳಿಗೂ ತನಗೂ ಹಿತವಾಗುವದು ಯಾವದೆಂದು ಬಾರಿ ಬಾರಿಗೂ ಸ್ಮರಿಸುತ್ತ, ಸರ್ವಲೋಕೋತ್ತರನಾಗಿ, ಪರಮಪುರುಷನಾಗಿ, ಆದ್ಯಂತ ರಹಿತನಾಗಿ, ಅಜನಾಗಿದ್ದರೂ ಲೀಲಾರ್ಥವಾಗಿ ಭೂಮಂಡಲದಲ್ಲಿ ಮನುಷ್ಯರೂಪದಿಂದ ಅವತರಿಸಿರುವ ಶ್ರೀ ಕೃಷ್ಣನು ಆ ಕಾರ್ಯವನ್ನು ನಿರ್ವಹಿಸುವದಕ್ಕೆ ಸಮರ್ಥನೆಂತಲೂ ಆತನು ತಿಳಿಯದಿರುವ ಕಾರ್ಯವೂ ಆತನು ಮಾಡದಿರುವ ಕಾರ್ಯವೂ ಆತನಿಗೆ ಅಸಾಧ್ಯವಾದ ಕಾರ್ಯವೂ ಹದಿನಾಲ್ಕು ಲೋಕಗಳಲ್ಲಿಯೂ ಇಲ್ಲದೆ ಇರುವದರಿಂದ ಆತನನ್ನು ಕರಸಬೇಕೆಂತಲೂ ನಿಶ್ಚಯಿಸಿ, ಜಗದೀಶ್ವರನ ಸಮುಖಕ್ಕೆ ಇಂದ್ರಸೇನನೆಂಬವನನ್ನು ಕಳುಹಿಸಿದನು. ಇಂದ್ರಸೇನನು ವಾಯುವೇಗವುಳ್ಳ ಕುದುರೆಗಳನ್ನು ಕಟ್ಟಿರುವ ರಥವನ್ನೇರಿ, ದ್ವಾರಕಾ ಪಟ್ಟಣಕ್ಕೆ ಹೋಗಿ, ಸಕಲ ಯಾದವ ಸಮೇತನಾದ ಶ್ರೀ ಕೃಷ್ಣಸ್ವಾಮಿಯನ್ನು ನೋಡಿ ದಂಡಪ್ರಣಾಮವನ್ನು ಮಾಡಿ, ವಿನಯದಿಂದ ಕೈಮುಗಿದು 'ಎಲೈ ಮಹಾತ್ಮನೆ, ವ್ಯಾಸ ಧೌಮ್ಯರು ಮೊದಲಾದ ಮಹಾ ಋಷಿಗಳೊಡನೆ ಕೂಡಿ ಸಕಲ ಬಂಧು ಮಿತ್ರ ಸಹೋದರ ಸಮೇತನಾಗಿರುವ ಧರ್ಮರಾಯನು ನಿಮ್ಮ ದರ್ಶನವನ್ನು ಅಪೇಕ್ಷಿಸಿದ್ದಾನೆ' ಎಂದು ಬಿನ್ನವಿಸಿದನು. ಯದುಕುಲಾಗ್ರಗಣ್ಯನಾದ ಶ್ರೀ ಕೃಷ್ಣಸ್ವಾಮಿಯು

ಬಲರಾಮ ವಸುದೇವರ ಅಪ್ಪಣೆಯನ್ನು ತೆಗದುಕೊಂಡು ಪಾಂಡವರನ್ನು ನೋಡಬೇಕೆಂದು ನಿಶ್ಚಯಿಸಿ, ಸಂತೋಷದಿಂದ ಇಂದ್ರಸೇನನನ್ನು ಕೂಡಿಕೊಂಡು ಅತಿತ್ವರಿತ ಗಮನದಿಂದ ನಾನಾ ದೇಶಗಳನ್ನು ದಾಟಿ, ಇಂದ್ರಪ್ರಸ್ಥಪಟ್ಟಣಕ್ಕೆ ಬಂದು—ಧರ್ಮರಾಯನು ತನ್ನನ್ನು ಸಹೋದರ ಭಾವದಿಂದ ಪೂಜಿಸಲು, ಭೀಮಸೇನನು ಸೌಹಾರ್ದವನ್ನು ತೋರಿಸಲು, ಅರ್ಜುನನು ಸಖೀಭಾವವನ್ನು ತೋರಿಸಲು, ನಕುಲ ಸಹದೇವರು ಶಿಷ್ಯಕೃತ್ಯವನ್ನು ಮಾಡಲು, ತನ್ನ ಸಹೋದರಿಯಾದ ಸುಭದ್ರೆಯನ್ನು ಗೌರವದಿಂದ ಆದರಿಸಿ, ಅರ್ಜುನ ಸಮೇತನಾಗಿ ಸುಖವಾಗಿದ್ದನು. ಧರ್ಮರಾಯನು ಶ್ರೀ ಕೃಷ್ಣಸ್ವಾಮಿಯನ್ನು ನೋಡಿ 'ಎಲೈ ಕೃಷ್ಣಸ್ವಾಮಿಯೇ, ನಾನು ರಾಜಸೂಯ ಯಾಗವನ್ನು ಮಾಡಬೇಕೆಂದೆಣಿಸಿದ್ದೇನೆ ; ಅದು ಸುಲಭದಿಂದ ಲಭಿಸುವದಲ್ಲ ; ಆ ಯಜ್ಞವು ಲಭಿಸುವದಕ್ಕೆ ಉಪಾಯವನ್ನು ಹೇಳುವದಕ್ಕೂ ಅದನ್ನು ವಿವರಿಸುವದಕ್ಕೂ ನೀನೇ ಸಮರ್ಥನು ; ಸಕಲ ವಸ್ತು ಸಮೃದ್ಧಿಯೂ ಅಖಂಡ ಭೂಮಂಡಲಾಧಿಪತ್ಯವೂ ಯಾವ ಸಮಯದಲ್ಲಿ ಯಾರಿಗೆ ಉಂಟಾಗುವದೋ ಆ ಸಮಯದಲ್ಲಿ ಮಾಡತಕ್ಕ ಇಂಥಾ ರಾಜಸೂಯ ಯಾಗವನ್ನು ನೀನು ಮಾಡಬೇಕೆಂದು ಸಮಸ್ತ ಬಂಧು ಜನಗಳೂ ಹೇಳುತಲಿದಾರೆ ; ನೀನೂ ಅದೇಪ್ರಕಾರವಾಗಿ ಕಟ್ಟಳೆಮಾಡಿದರೆ ಆ ಬಳಿಕ ಆದನ್ನು ಮಾಡಬೇಕೆಂದು ನಿಶ್ಚಯಿಸಿದ್ದೇನೆ ; ಆದು ಹ್ಯಾಗೆಂದರೆ ಲೋಕದಲ್ಲಿ ಕೆಲವರು ಸ್ನೇಹಾತಿಶಯದಿಂದಲೂ ಕೆಲವರು ದಾನಾಪೇಕ್ಷೆಯಿಂದಲೂ ಕೆಲವರು ವಿಚಾರಿಸದೆಯೂ ಕಾರ್ಯಸ್ವರೂಪವನ್ನು ಹೇಳುವರು ; ಜನವಾದವು ಹೀಗೆ ಬಹು ಪ್ರಕಾರವಾಗಿ ಪ್ರವರ್ತಿಸುವದು ; ನೀನು ಸರ್ವಜ್ಞನು ; ನನಗೆ ಹಿತವಾಗುವ ರೀತಿಗೆ ಮಾಡತಕ್ಕಂಥಾ ಕಾರ್ಯಸ್ವರೂಪವನ್ನು ಹೇಳಬೇಕು' ಎಂದು ಕೇಳಿದನು."

---

## ೧೫ನೇ ಅಧ್ಯಾಯ.—ರಾಜಸೂಯಾರಂಭಪರ್ವಶೇಷ.

"ಕೇಳು ಜನಮೇಜಯನೆ, ಈ ಪ್ರಕಾರವಾಗಿ ಕೇಳಿದ ಧರ್ಮರಾಯನನ್ನು ನೋಡಿ ಕೃಷ್ಣಸ್ವಾಮಿಯು ಇಂತೆಂದನು : 'ಎಲೈ ಧರ್ಮರಾಯನೇ, ಸಕಲ ಸದ್ಗುಣಗಳಿಂದ ಸಾಮ್ರಾಜ್ಯಕ್ಕೆ ನೀನೇ ಯೋಗ್ಯನಾದ್ದರಿಂದ ನೀನು ಅರಿಯದಿರುವ ಕಾರ್ಯವುಂಟೆ? ಆದರೂ ಹೇಳುತಲಿದ್ದೇನೆ ಕೇಳು : ಪೂರ್ವಕಾಲದಲ್ಲಿ ಜಮದಗ್ನಿಯ ಮಗನಾದ ಪರಶುರಾಮನು ಸಕಲ ಕ್ಷತ್ರಿಯರನ್ನು ಸಂಹರಿಸಿದವನಾದ್ದರಿಂದ ಭೂಲೋಕವು ಅರಾಜಕವಾಗಿ ದೇವ ಋಷಿಗಳ ಅನುಗ್ರಹದಿಂದ ರಾಜವಂಶವು ತಿರಿಗಿ ಉಂಟಾಯಿತೆಂದು ದೊಡ್ಡವರ ದೆಸೆಯಿಂದ ಕೇಳಿ ಉಂಟು ; ಇಳನೂ, ಇಕ್ಷ್ವಾಕುವೂ ಕಾರಣರಾಗಿ ಅನೇಕಶತ ಕ್ಷತ್ರಿಯ ಕುಲವು ಭೂಲೋಕದಲ್ಲಿ ನಾಲ್ಕು ಪ್ರಕಾರವಾಗಿ ನಾಲ್ಕು ದಿಕ್ಕುಗಳಲ್ಲಿ ಪ್ರಸಿದ್ಧವಾಯಿತು. ಯಯಾತಿಯ ವಂಶದಲ್ಲಿ ಹುಟ್ಟಿದ ಅರಸುಗಳನ್ನು ಆಶ್ರಯಿಸಿ ಪ್ರವರ್ತಿಸುತ್ತಿರಲು ಅವರಿಗೆ ಅನ್ಯೋನ್ಯ ಮಿತ್ರಭೇದವನ್ನು ಮಾಡಿ ಜರಾಸಂಧನು ಚತುಸ್ಸಮುದ್ರ ಪರಿವೇಷ್ಟಿತವಾದ ಭೂಮಂಡಲವೆಲ್ಲವನ್ನೂ ಏಕಚ್ಛತ್ರಾಧಿಪತಿಯಾಗಿ ಪರಿಪಾಲಿಸುತ್ತಲಿದ್ದಾನೆ ; ನೂರೊಂದು ಮಂದಿ ನಮ್ಮ ವಂಶದ ಅರಸುಗಳೆಲ್ಲರೂ ಆತನಾಜ್ಞಾಶಾಸನವನ್ನು ಶಿರಸಾವಹಿಸಿದ್ದಾರೆ ; ಪರಾಕ್ರಮ ಧುರಂಧರನಾದ ಶಿಶುಪಾಲನು ಆತನಿಗೆ ಸೇನಾಧಿಪತಿಯಾಗಿರುವನು ; ಮಾಯಾಬಲ ಸಮನ್ವಿತನಾದ ಕರೂಶ ದೇಶಾಧಿಪತಿಯಾದ ದಂತವಕ್ರನು ಆತನಿಗೆ ಪರಮ ಭೃತ್ಯನಾಗಿರುವನು ; ಭುಜಬಲ ಸಂಪನ್ನರಾದ ಹಂಸ ಡಿಭಕರೆಂಬ ಇಬ್ಬರು ಅರಸುಗಳೂ ಆತನನ್ನು ಆಶ್ರಯಿಸಿರುವರು ; ದಂತವಕ್ರನು ಕರೂಶನು ಕಲಭನು ದಿವ್ಯ ರತ್ನ ಶಿರಸ್ಸಿನಲ್ಲಿರುವದರಿಂದ ಭೂತಮಣಿಯೆಂಬ ಪ್ರಸಿದ್ಧಿಯನ್ನು ಪಡೆದ ಮೇಘವಾಹನೂ ಆ ಜರಾಸಂಧನನ್ನು ಓಲಗಿಸುವರು ; ಮುರನು ಯವನನೆಂಬ ಯವನ ದೆಸೆಯಿಂದ ದೇಶಾಧಿಪತಿಗಳಾದವರು ತನ್ನನ್ನು ಆಶ್ರಯಿಸಿರಲು, ಪಶ್ಚಿಮದಿಕ್ಕಿನಲ್ಲಿ ವರುಣನೋಪಾದಿಯಲ್ಲಿ ಪ್ರಕಾಶಿಸುತ್ತಿರುವ ಅತಿ ಪರಾಕ್ರಮಧುರ್ಯನಾಗಿ ಪಾಂಡುಮಹಾರಾಯನಿಗೆ ಸ್ನೇಹಿತನೆಂದು ಪ್ರಸಿದ್ಧಿಯಂ ಪಡೆದ ಭಗದತ್ತನೂ ಅವನಿಗೆ ವಿಧೇಯನಾಗಿರುವನು ; ಆದರೂ ನಿನ್ನಲ್ಲಿ ಅನುರಕ್ತನಾದ್ದರಿಂದ ನೀನು ಆತನನ್ನು ತಂದೆಯೋಪಾದಿಯಲ್ಲೆಣಿಸಬೇಕು ; ಮತ್ತು ದಕ್ಷಿಣ ಪಶ್ಚಿಮ ದಿಕ್ಕುಗಳಲ್ಲಿರುವ ಅರಸುಗಳೆಲ್ಲರೂ ಮಗಧ ದೇಶಾಧೀಶ್ವರನನ್ನು ಅನುವರ್ತಿಸು

ವರು; ಕುಂತೀದೇಶಾಧೀಶ್ವರನಾಗಿ ಶೂರಾಗ್ರೇಸರನಾಗಿ ಶತ್ರು ಭಯಂಕರನಾದ ಪುರುಜಿತ್ತು ಜರಾಸಂಧನೊಡನೆ ಕೂಡಿ ಮೊದಲು ನನ್ನಮೇಲೆ ಜಗಳಕ್ಕೆ ಬಂದ ಸಮಯದಲ್ಲಿ ನಿನಗೆ ಸೋದರಮಾವನಾದ್ದರಿಂದ ನಾನು ಆತನನ್ನು ಸಂಹರಿಸದೇ ಹೋದೆನು; ಆ ಪುರುಜಿತ್ತುವು ಶತ್ರುಬಾಧಕನಾದರೂ ಜರಾಸಂಧನಿಗೆ ಸ್ನೇಹಿತನಾಗಿದ್ದರೂ ವಂಶಕ್ಕೆಲ್ಲ ಒಬ್ಬನೇ ಎಂದು ಕೊಲ್ಲದೆ ಬಿಟ್ಟೆನು. ಮತ್ತು ಪುಂಡ್ರ ವಂಗ ಕಿರಾತ ಚೇದಿ ಕೈಕಯ ದೇಶಗಳಲ್ಲಿರುವ ಜನಗಳನ್ನು ತನ್ನ ವಿದ್ಯೆಯಿಂದಲೂ ಬಲದಿಂದಲೂ ಭುಜಪರಾಕ್ರಮದಿಂದಲೂ ರಕ್ಷಿಸುತ್ತ ಮಹೇಂದ್ರ ಸಮಾನನಾಗಿ ಬಲಶಾಲಿಯಾಗಿ ಭೋಗಗಳನ್ನು ಅನುಭವಿಸುತ್ತ ಲೋಕದಲ್ಲಿ ಪುರುಷೋತ್ತಮನು ನಾನೇ ಹೊರತಾಗಿ ಮತ್ತೊಬ್ಬರಿಲ್ಲವೆಂದು ನನ್ನನ್ನು ಅವಮಾನಮಾಡಿ ಮದೋನ್ಮತ್ತನಾಗಿ ನನಗೆ ಗುರುತಾದ ಶಂಖ ಚಕ್ರಾದಿಗಳನ್ನು ಲೇಶಮಾತ್ರವಾದರೂ ಶಂಕೆಯಿಲ್ಲದೆ ಧರಿಸಿ ಪೌಂಡ್ರಕ ವಾಸುದೇವನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವಂಥಾವನು ಪರಾಕ್ರಮದಲ್ಲಿ ಪರಶುರಾಮನ ಸಮಾನನಾದ ಆಕೃತಿಯೆಂಬ ಅವನ ತಮ್ಮನೂ ಜರಾಸಂಧನಿಗೆ ಪರಮ ಪುತ್ರರಾಗಿರುವರು; ರುಕ್ಮಿಣಿಗೆ ತಂದೆಯಾದ ಭೀಷ್ಮಕನು ಬಲವಂತನಾಗಿ ಆಭಿಜಾತ್ಯವನ್ನೂ ಕೀರ್ತಿಪ್ರತಾಪಗಳನ್ನೂ ಲೇಶಮಾತ್ರವಾದರೂ ಮನಸ್ಸಿನಲ್ಲೆಣಿಸದೆ ವಿನಯದಿಂದ ಬಹು ಪ್ರಕಾರವಾಗಿ ಪ್ರಾರ್ಥಿಸುತ್ತಿರುವ ನನ್ನನ್ನೂ ನಮ್ಮ ಪ್ರಭುತ್ವವನ್ನೂ ನೋಡದೆ ಅವಮಾನವನ್ನು ಮಾಡುತ್ತ ಆ ಮಗಧೇಶ್ವರನಿಗೆ ವಶವರ್ತಿಯಾಗಿರುವನು; ನಾವು ಜರಾಸಂಧನ ಭಯದಿಂದ ಹದಿನೆಂಟು ಕುಲದವರೊಡನೆ ಕೂಡಿ ಉತ್ತರದೇಶವನ್ನು ಬಿಟ್ಟು ಪಶ್ಚಿಮದೇಶಕ್ಕೆ ಬಂದು ಇಧೇವೆ; ಅದಲ್ಲದೆ ಶೂರಸೇನ ಭದ್ರಕ ಸಾಲ್ವ ಪಟಚ್ಚರ ಸುಸ್ಥಲ ಮುಕುಟ ಕುಳಿಂದ ಕುಂತಿದೇಶಾಧೀಶ್ವರರು ಈಗ ದಕ್ಷಿಣದೇಶದಲ್ಲಿರುವ ಪಾಂಚಾಲರು ಪೂರ್ವದಿಕ್ಕಿನಲ್ಲಿರುವ ಮಾಳವರು ಪಶ್ಚಿಮದೇಶದಲ್ಲಿರುವ ಮತ್ಸ್ಯರು ಮೊದಲಾದ ಅರಸುಗಳು ಜರಾಸಂಧನ ಭಯದಿಂದ ಉತ್ತರದಿಕ್ಕನ್ನು ಬಿಟ್ಟು ಓಡಿಹೋಗಿ ಅಲ್ಲಲ್ಲಿ ತಿರುಗುತ್ತಲಿಧಾರೆ; ಗಿರಿವ್ರಜ ಪಟ್ಟಣಕ್ಕೆ ಅಧಿಪತಿಯಾದ ಮಗಧನು ಜಯಯಾತ್ರೆ ಹೊರಡುವದಕ್ಕಿಂತಲೂ ಮೊದಲೇ ಪಾಂಚಾಲರು ಭಯದಿಂದ ನಾಲ್ಕುದಿಕ್ಕುಗಳಲ್ಲಿಯೂ ಸೇರಿಕೊಂಡರು; ಉಗ್ರಸೇನನ ಮಗನಾದ ಕಂಸನು ಅಸ್ತಿಯು ಪ್ರಾಪ್ತಿಯು ಎಂಬ ಹೆಸರುಳ್ಳಂಥಾ ಸಹದೇವನ ತಂಗಿಗಳಾದ ಜರಾಸಂಧನ ಮಕ್ಕಳನ್ನು ಮದುವೆಯಾಗಿ ಗರ್ವದಿಂದ ಸಕಲರಾದ ಅರಸುಗಳನ್ನೂ ಜ್ಞಾತಿಗಳನ್ನೂ ಅವಮಾನಿಸಲು, ಅವರೆಲ್ಲರಿಂದ ಪ್ರಾರ್ಥಿಸಲ್ಪಟ್ಟದ್ದರಿಂದ ಆಹುಕನ ಮಗಳನ್ನು ಅಕ್ರೂರನಿಗೆ ಕೊಟ್ಟು ನಾನು ಬಲರಾಮಸಹಿತನಾಗಿ ಕಂಸನನ್ನೂ ಆತನ ತಮ್ಮನಾದ ಸುನಾಮನನ್ನೂ ಸಂಹರಿಸಿ ಹಿತವನ್ನು ಮಾಡಿದೆನು; ಆ ಬಳಿಕ ಕಂಸನಾಶವನ್ನು ಕೇಳಿ ಜರಾಸಂಧನು ಸಕಲ ಸೇನಾಸಮೇತನಾಗಿ ಹೊರಟು ಮಧುರಾಪಟ್ಟಣವನ್ನು ಮುತ್ತಿಕೊಂಡು ಅತಿಘೋರವಾದ ಯುದ್ಧವನ್ನು ಮಾಡಲು, ನಾವು ಯಾದವಭೋಜಾಂಧಕರು ಮೊದಲಾದ ಹದಿನೆಂಟು ಕುಲದವರ ಬಲವನ್ನು ಜೊತೆಮಾಡಿಕೊಂಡು, ಅಷ್ಟುಮಂದಿಯೂ ಆಲೋಚಿಸಿ, ಅನೇಕ ಶಸ್ತ್ರಾಸ್ತ್ರಗಳಿಂದಲೂ ನಾನಾಪ್ರಕಾರವಾದ ಅಸ್ತ್ರಗಳಿಂದಲೂ ಭಯಂಕರವಾದ ಯುದ್ಧವನ್ನು ಮೂರುವರುಷಗಳು ಮಾಡಿ, ಆತನ ಸೇನಾಸಮೂಹವನ್ನು ನಿಶ್ಶೇಷವಾಗಿ ಕೊಂದೆವು; ಜರಾಸಂಧನಿಗೆ ಹಂಸ ಬಕರೆಂಬ ಅರಸುಗಳು ಪರಮಮಿತ್ರರಾಗಿ ಪ್ರವರ್ತಿಸುತ್ತಲಿಧಾರೆಂದು ಮೊದಲೇ ಹೇಳಿದೆನಲ್ಲ, ಇವರು ಮೂರುಮಂದಿಯೂ ಒಮ್ಮಡಿಯಾಗಿ ನಡೆದರೆ ಮೂರುಲೋಕಗಳನ್ನೂ ನಿಮಿಷಮಾತ್ರದಲ್ಲಿ ಸಂಹರಿಸುವರೆಂದು ಲೋಕದಲ್ಲಿರುವ ಅರಸುಗಳು ಆಡಿಕೊಳ್ಳುವದು ಮಾತ್ರವಲ್ಲದೆ ನನ್ನ ಮನಸ್ಸಿನಲ್ಲೂ ಹಾಗೆಯೇ ತೋರಿತು.

"'ಕೇಳು ಧರ್ಮರಾಯನೆ, ಈ ಪ್ರಕಾರವಾಗಿ ಆತನಕೂಡೆ ಹದಿನೆಂಟುಸಾರಿ ಅತಿಘೋರವಾದ ಯುದ್ಧವನ್ನು ಮಾಡಿದರೂ ಶೌರ್ಯಾಟೋಪ ಸಮನ್ವಿತನಾದ ಮಗಧೇಶ್ವರನು ಹತನಾಗದೆ ಹೋದನು; ಅತಿಭಯಂಕರವಾದ ಅಂಥಾ ಯುದ್ಧದಲ್ಲಿ ಹಂಸನೆಂಬ ಮತ್ತೊಬ್ಬ ರಾಯನು ಹತನಾಗಲು, ಹಂಸನು ಹತನಾದನೆಂದು ಮತ್ತೊಬ್ಬನು ಬಕನಿಗೆ ಹೇಳಲು, ತನಗೆ ಪರಮಮಿತ್ರನಾದ ಹಂಸನು ಇಲ್ಲದಿರುವ ಲೋಕದಲ್ಲಿ ತಾನು ಹ್ಯಾಗಿರುವದೆಂದು ಯಮುನಾಪ್ರವಾಹದಲ್ಲಿ ಬಿದ್ದು ಹತನಾದನು; ಆ ಬಳಿಕ ಹಂಸನ ವೃತ್ತಾಂತವನ್ನು ಕೇಳಿ ಬಕನು ಅದೇ ನದೀಜಲದ

ಲ್ಲಿ ಬಿದ್ದು ಹತನಾದನು. ಇವೆಲ್ಲವೂ ವಿಶದವಾಗಿ ತಿಳಿದು ಆ ಜರಾಸಂಧನು ಶೂರಸೇನ ದೇಶಗಳನ್ನು ಬಿಟ್ಟು ಗಿರಿವ್ರಜ ಪಟ್ಟಣಕ್ಕೆ ಹೋದನು; ಆ ಬಳಿಕ ನಾವು ದ್ವಾರಕಾ ಪಟ್ಟಣಕ್ಕೆ ಬಂದು ಸಂತೋಷದಿಂದ ಸುಖವಾಗಿದ್ದೆವು. ಮತ್ತು, ಕಂಸನ ಹೆಂಡತಿಗಳಾದ ಜರಾಸಂಧನ ಹೆಣ್ಣು ಮಕ್ಕಳಿಬ್ಬರೂ ಪತಿವಿಯೋಗದಿಂದ ದುಃಖಿತರಾಗಿ ನಮ್ಮ ಕೂಡೆ ಯುದ್ಧಕ್ಕೆ ಮಗಧೇಶ್ವರನಿಗೆ ಮನಸ್ಸು ಹುಟ್ಟುವ ಹಾಗೆ ಮಾಡಿದರು; ನಾವು ಜರಾಸಂಧನು ಮಾಡಿದ ಮಹಾಪಕಾರವನ್ನು ಸ್ಮರಿಸಿ ಒಬ್ಬರೂ ಅರಿಯದಿರುವ ರೀತಿಗೆ ನಾಲ್ಕು ದಿಕ್ಕುಗಳಲ್ಲಿಯೂ ಓಡಿಹೋಗಿ ಪಶ್ಚಿಮ ದಿಗ್ಭಾಗದಲ್ಲಿ ಮೊದಲು ರೈವತರಾಯನಿದ್ದ ಪಟ್ಟಣವು ಪಾಳಾಗಿದ್ದದ್ದರಿಂದ ಜ್ಞಾತಿಜನಗಳೊಡನೆ ಕೂಡಿ ಅಲ್ಲಿ ಇದ್ದೆವು; ಆ ದುರ್ಗವು ದೇವದಾನವರಿಗೆ ಅಸಾಧ್ಯವಾಗಿರುವದು; ಅಲ್ಲಿರುವ ಸ್ತ್ರೀಜನಗಳಿಗಾದರೂ ಯುದ್ಧ ಮಾಡುವದಕ್ಕೆ ಸಾಮರ್ಥ್ಯವುಂಟು ಎಂಬಲ್ಲಿ ಯಾದವ ವೀರರನ್ನು ಹೇಳಬೇಕೆ! ಹೀಗೆ ಅಸಾಧ್ಯವಾದ ದ್ವಾರಕಾ ಪಟ್ಟಣದ ಸಮೀಪದಲ್ಲಿ ರೈವತಕ ಪರ್ವತವನ್ನೂ ಮಾಧವೀ ತೀರ್ಥವನ್ನೂ ಆಶ್ರಯಿಸಿಕೊಂಡು ನಿರ್ಭಯವಾಗಿ ಸುಖವಾಗಿದ್ದೇವೆ; ಜರಾಸಂಧನೊಡನೆ ಮಹಾವಿರೋಧವು ಪ್ರಾಪ್ತವಾದ್ದರಿಂದ ಬಲವಂತರಾಗಿ ಬಾಂಧವರಾದ ನಿಮ್ಮನ್ನು ಆಶ್ರಯಿಸಿದೆವು. ಮೂರು ಗಾವುದ ವಿಸ್ತಾರವೂ ನಾಲ್ಕು ಗಾವುದ ನೀಟವೂ ಉಳ್ಳಂಥಾದ್ದಾಗಿ ಗಾವುದ ಗಾವುದಕ್ಕೂ ಹೆಬ್ಬಾಗಲುಳ್ಳದ್ದಾಗಿ ಹದಿನೆಂಟು ಕುಲದ ಕ್ಷತ್ರಿಯರೊಡನೆ ಕೂಡಿರುವ ಆ ಪಟ್ಟಣದಲ್ಲಿ ಹದಿನೆಂಟು ಸಾವಿರ ಸಂಖ್ಯೆಯುಳ್ಳ ಸಹೋದರ ವರ್ಗವು ಮಹೇಂದ್ರ ಸಮಾನರಾಗಿ ನೂರು ಮಂದಿ ಆಹುಕನ ಮಕ್ಕಳು ಚಾರುದೇಷ್ಣನು ಆತನ ತಮ್ಮನಾದ ಚಕ್ರದೇವನು ಸಾತ್ಯಕಿಯು ನಾನು ಬಲರಾಮನು ಸಾಂಬನು ಬಲಪರಾಕ್ರಮ ಸಂಪನ್ನರಾಗಿರುವೆವು. ಇನ್ನೂ ಹೇಳುತಲಿದ್ದೇನೆ ಕೇಳು: ಕೃತವರ್ಮನು ಅನಾಧೃಷ್ಟಿಯು ಸಮೀಕನು ಸಮಿತಿಂಜಯನು ಕಂಕನು ಶಂಕುವು ಕುಂತಿಭೋಜನು ಎಂಬ ಏಳು ಮಂದಿ ಮಹಾಧಿಕರೂ ಪ್ರದ್ಯುಮ್ನನು ಅನಿರುದ್ಧನು ಭಾನುವು ಅಕ್ರೂರನು ಸಾರಣನು ನಿಶಠನು ಗದನು ಎಂಬ ಏಳು ಮಂದಿ ಮಹಾರಥರೂ ವಿಕದ್ರುವು ಝಲ್ಲಿಯೂ ಬಭ್ರುವು ಉದ್ಧವನು ವಿಡೂರಥನು ವಸುದೇವನು ಉಗ್ರಸೇನನು ಎಂಬ ಏಳು ಮಂದಿ ಮಂತ್ರಿಗಳೂ ಪ್ರತಿದಿವಸವು ಬಹು ಸುವರ್ಣವನ್ನು ಸುರಿಯುತ್ತಲಿರುವ ಸ್ಯಮಂತಕ ಮಣಿಯುಳ್ಳವನಾದಂಥಾ ಪ್ರಸೇನನೂ ಆತನ ಹತ್ತುಮಂದಿ ಕುಮಾರಕರೂ ಮಹಾಧಿಕರಾಗಿ ಭುಜಬಲ ಪರಾಕ್ರಮಶಾಲಿಗಳಾಗಿರುವ ವೃಷ್ಣಿಶ್ರೇಷ್ಠರೆಷ್ಟುಮಂದಿಯೂ ನಮಗೆ ಪೂರ್ವಸ್ಥಾನ ಮಧ್ಯದೇಶವನ್ನು ಸ್ಮರಿಸುತ್ತ ಪಾಂಡುರಾಯನ ಮಕ್ಕಳಾದ ನಿಮ್ಮನ್ನು ಧೊರೆಗಳಾಗಿ ಎಣಿಸಿದ್ದೇವೆ.'"

## ೧೬ ನೇ ಅಧ್ಯಾಯ.—ರಾಜಸೂಯಾರಂಭಪರ್ವಶೇಷ.

"'ಎಲೈ ಧರ್ಮರಾಯನೆ, ಹೀಗೆ ಜರಾಸಂಧನು ಬಲ ಸಂಪತ್ತಿನಿಂದ ಪ್ರಸಿದ್ಧನಾಗಿ ಸುಖವಾಗಿರಲು ನಿನಗೆ ಸಾಮ್ರಾಜ್ಯವು ಹ್ಯಾಗೆ ಲಭಿಸುವದು? ಮತ್ತು ದುರ್ಯೋಧನ ಭೀಷ್ಮ ದ್ರೋಣ ಅಶ್ವತ್ಥಾಮ ಕೃಪ ಕರ್ಣ ಶಿಶುಪಾಲ ರುಕ್ಮಿಣಿಗಳು, ಏಕಲವ್ಯನು, ಧ್ರುವನು, ಶ್ವೇತನು, ಶಲ್ಯನು, ಶಕುನಿಯು ಎಂಬ ಮಹಾರಥರನ್ನು ಜಯಿಸದೆ ರಾಜಸೂಯವನ್ನು ಮಾಡುವದು ಹ್ಯಾಗೆ? ಆದರೂ ಇವರೆಲ್ಲರೂ ನಿನ್ನಲ್ಲಿ ಪ್ರೀತಿಯನ್ನು ಮಾಡಿ ಸ್ನೇಹವನ್ನು ಮಾಡುವರೇ ಹೊರತಾಗಿ ಯುದ್ಧಕ್ಕೆ ಬಾರರು; ಹಾಗಾದರೂ ಭುಜಬಲೋನ್ಮತ್ತನಾಗಿ ದಿವ್ಯಾಸ್ತ್ರ ವಿಶಾರದನಾಗಿ ಸೂರ್ಯನ ಮಗನಾದ ಕರ್ಣನು ಒಬ್ಬನೇ ಯಾವಾಗಲೂ ನಿನ್ನೊಡನೆ ಮತ್ಸರಿಸಿರುವದರಿಂದ ಆತನು ಯುದ್ಧವನ್ನು ಮಾಡದೆ ಬಿಡನು. ಅದು ಹಾಗಿರಲಿ; ಶೌರ್ಯಧುರಂಧರನಾದ ಜರಾಸಂಧನು ಪ್ರಾಣಸಹಿತನಾಗಿರುವಾಗ ನಿನಗೆ ರಾಜಸೂಯವು ಹ್ಯಾಗೆ ಲಭಿಸುವದು? ಸಿಂಹವು ಆನೆಗಳನ್ನು ತೆಗದುಕೊಂಡು ಗುಹೆಯಲ್ಲಿಟ್ಟುಕೊಂಡ ರೀತಿಗೆ ಸಕಲ ರಾಜಸಮೂಹಗಳನ್ನು ಹಿಡಿತಂದು ಶರೆಮನೆಯಲ್ಲಿ ಕೂಡಿಸಿದ್ದಾನೆ; ಅದು ಯಾಕೆಂದರೆ ಮೂರ್ಧಾಭಿಷಿಕ್ತರಾದ ಎಂಟು ಸಾವಿರ ಅರಸುಗಳನ್ನು ಪಶುಗಳಾಗಿ ಮಾಡಿ ಯಜ್ಞಮಾಡಬೇಕೆಂದೆಣಿಸಿರುವನಾದ್ದರಿಂದ ಮಹಾದೇವ

ನನ್ನು ಕುರಿತು ತಪಸ್ಸನ್ನು ಮಾಡಿ ಆತನ ಪ್ರಸಾದದಿಂದ ಯುದ್ಧಮುಖದಲ್ಲಿ ಮೂರ್ಧಾಭಿಷಿಕ್ತರಾದ ಅರಸುಗಳನ್ನು ಜಯಿಸಿ ಹಿಡಿತಂದು ಗಿರಿವ್ರಜವನ್ನು ನರವ್ರಜವನ್ನು ಮಾಡಿದ್ದಾನೆ; ನಾವು ಆತನ ಭಯದಿಂದಲೇ ಮಥುರಾಪಟ್ಟಣವನ್ನು ಬಿಟ್ಟು ಪುತ್ರ ಮಿತ್ರ ಸಹಿತರಾಗಿ ದ್ವಾರಕಾಪಟ್ಟಣದಲ್ಲಿದ್ದೇವೆ; ನಮಗೆ ಇಂಥಾ ಬಲವದ್ವಿರೋಧಕ್ಕೆ ಕಂಸ ಸಂಹಾರವೇ ಕಾರಣವಾಯಿತು. ಅದು ಹಾಗಿರಲಿ: ನಿನಗೆ ಯಾಗಮಾಡುವದು ಲಭಿತವಾಗಬೇಕಾದರೆ ಯಾವ ರೀತಿಯಿಂದಲಾದರೂ ಆತನನ್ನು ಯುದ್ಧದಲ್ಲಿ ಕೊಂದು ಶರೆಮನೆಯಲ್ಲಿರುವ ಅರಸುಗಳನ್ನು ಬಿಡಿಸಬೇಕು; ಇನ್ನು ಬಾರಿಬಾರಿಗೂ ಹೇಳಿ ಪ್ರಯೋಜನವೇನು? ಯಾವ ರೀತಿಯಿಂದಲಾದರೂ ಜರಾಸಂಧನನ್ನು ಕೊಲ್ಲುವದೇ ಯಾಗ ಮಾಡುವದಕ್ಕೆ ಪ್ರಥಮಾರಂಭವಾದ್ದರಿಂದ ಇದಕ್ಕೆ ತಕ್ಕ ಉಪಾಯವನ್ನು ಯೋಚಿಸು; ಆ ಜರಾಸಂಧನನ್ನು ಜಯಿಸುವದೇ ಸಕಲ ರಾಜಸಮೂಹವನ್ನು ಜಯಿಸಿದಹಾಗೆಂದು ತಿಳುಕೊ; ನನಗೆ ತೋರಿದಷ್ಟು ಹೇಳಿದೆನು; ನಿನ್ನ ಮನಸ್ಸಿನಲ್ಲಿರುವ ಅರ್ಥವನ್ನು ನನಗೆ ವಿವರಿಸು' ಎಂದು ಕೃಷ್ಣಸ್ವಾಮಿಯು ಧರ್ಮರಾಯನಿಗೆ ಹೇಳಿದನು."

---

## ೧೩ ನೇ ಅಧ್ಯಾಯ.—ರಾಜಸೂಯಾರಂಭ ಪರ್ವಶೇಷ.

"'ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ಕೃಷ್ಣಸ್ವಾಮಿಯನ್ನು ನೋಡಿ 'ಎಲೈ ಕೃಷ್ಣಸ್ವಾಮಿಯೆ, ನೀನು ಹೇಳತಕ್ಕ ಅರ್ಥವನ್ನು ಹೇಳಿದೆ; ಈಪ್ರಕಾರವಾಗಿ ತಿಳಿದು ಹೇಳುವ ಸಾಮರ್ಥ್ಯವು ಯಾರಿಗುಂಟು? ಹೀಗೆ ಸಕಲ ಸಂಶಯಗಳನ್ನು ತೀರಿಸಿ ರಕ್ಷಿಸುವದಕ್ಕೆ ನಿನಗಿಂತಲೂ ನಮಗೆ ಪ್ರಾಣ ಬಂಧುವ್ಯಾರು? ಅತಿಪ್ರಯಾಸದಿಂದ ಸಂಪಾದಿಸತಕ್ಕ ಸಾಮ್ರಾಜ್ಯ ಪದವಿಯು ಮನೆಯಲ್ಲಿ ಸುಖವಾಗಿದ್ದು ಅಪೇಕ್ಷಿಸುವಂಥಾವನಿಗೆ ಯಾವ ಪ್ರಕಾರದಿಂದ ಲಭಿಸುವದು? ಬುದ್ಧಿ ಬಲ ಸಂಪನ್ನನಾದ ಮಹಾತ್ಮನ ಸಹಾಯವಿಲ್ಲದೆ ಬುದ್ಧಿವಂತನಾದವನು ಕಾರ್ಯವನ್ನು ಆರಂಭಿಸುವನೆ? ನಾನಾರತ್ನ ಪರಿಪೂರ್ಣವಾಗಿ ಅತಿವಿಶಾಲವಾದ ಭೂಮಂಡಲವೆಲ್ಲವನ್ನೂ ಏಕಚ್ಛತ್ರವಾಗಿ ಪರಿಪಾಲಿಸದೆ ರಾಜಸೂಯವನ್ನು ಆಚರಿಸುವದಕ್ಕೆ ಸಾಮರ್ಥ್ಯವು ಯಾವ ಪ್ರಕಾರದಿಂದಾಗುವದು? ಪೂರ್ವದಲ್ಲಿ ಅನೇಕ ಯಾಗಗಳನ್ನು ಮಾಡಿ ಮಾಂಧಾತನು ಸಕಲ ಭೂಮಂಡಲವನ್ನು ಪರಿಪಾಲಿಸಿದನು; ಭಗೀರಥನು ಮಹನೀಯ ವ್ರತದಿಂದಲೂ, ಕಾರ್ತವೀರ್ಯನು ತಪೋಮಹಿಮೆಯಿಂದಲೂ, ಭರತನು ತನ್ನ ಭುಜಬಲ ಮಹಿಮೆಯಿಂದಲೂ, ಮರುತ್ತುವು ಮಹದೈಶ್ವರ್ಯದಿಂದಲೂ, ರಾಜ್ಯಾಭಿಷಿಕ್ತರಾಗಿ ಪ್ರವರ್ತಿಸಿವರೆಂದು ಕೇಳಿ ಉಂಟು; ಅಂಥಾ ಮಹಾ ಮಹಿಮೆಯುಳ್ಳ ಮೊದಲಿದ್ದ ಅರಸುಗಳಿಗೂ ರಾಜಸೂಯವು ಬಹು ಪ್ರಯತ್ನ ಸಾಧ್ಯವಾದ್ದರಿಂದ ಈಗ ನಾವು ಯಾಗವನ್ನು ಬಯಸುವದಕ್ಕಿಂತಲೂ ನಿನ್ನ ಧ್ಯಾನಮಾಡಿಕೊಂಡು ಸುಮ್ಮನಿರುವದೇ ಉಚಿತವಾಗಿ ತೋರುತ್ತಲಿದೆ' ಅಂದನು.

"ಆ ಸಮಯದಲ್ಲಿ ಭೀಮಸೇನನು ಶ್ರೀಕೃಷ್ಣಸ್ವಾಮಿಯನ್ನು ನೋಡಿ ಇಂತೆಂದನು: 'ಉತ್ತಮವಾದ ಯಾಗವನ್ನು ಆರಂಭಿಸಿದರೆ ನೆರವೇರುವದಕ್ಕೆ ಸಂಶಯವಿಲ್ಲವೆಂದು ನನ್ನ ಮನಸ್ಸಿನಲ್ಲಿ ತೋರುತಲಿದೆ; ನ್ಯಾಯ ಧುರಂಧರನಾದ ನೀನೂ ಜಯಶೀಲನಾದ ಅರ್ಜುನನೂ ಭುಜಬಲಶಾಲಿಯಾದ ನಾನೂ ಕೂಡಿದರೆ ಅಗ್ನಿತ್ರಯವು ಕೂಡಿ ಪ್ರಕಾಶಿಸುವ ರೀತಿಗೆ ನಾವು ನಿನ್ನ ಕಟಾಕ್ಷದಿಂದ ಈ ಮಗಧಾಧಿಪನನ್ನು ಜಯಿಸುತ್ತಲಿದ್ದೇವೆ; ಆ ಬಳಿಕ ಧರ್ಮರಾಯನ ಅಭೀಷ್ಟವು ನೆರವೇರುವದು; ಜಗದೀಶ್ವರನಾದ ನೀನು ನಮಗೆ ಒಡೆಯನಾಗಿರುವಾಗ ಜಯವು ಲಭಿಸುವದಕ್ಕೆ ಸಂಶಯವುಂಟೆ?' ಅಂದನು. ಶ್ರೀಕೃಷ್ಣಸ್ವಾಮಿಯು ಭೀಮನನ್ನು ನೋಡಿ 'ಬಾಲನಾದವನು ಮುಂದೆ ಬರುವಂಥಾದ್ದನ್ನು ವಿಚಾರಿಸದೆ ತಾನು ಹಿಡಿದ ಕಾರ್ಯವಾದರೆ ಸಾಕೆಂದೆಣಿಸಿ ಮಾಡಿದರೆ ಕಡೆಗೆ ಅನರ್ಥಬರುವದು; ನೀನು ಧರ್ಮಾರ್ಥ ಮಾರ್ಗದಿಂದ ನಮ್ಮ ಶಕ್ತಿಯನ್ನೂ ಆತನ ಬಲ ಸಂಪತ್ತನ್ನೂ ವಿಚಾರಿಸು; ಬೃಹದ್ರಥನ ಮಗನಾದ ಜರಾಸಂಧನೊಡನೆ ನೂರೊಂದು ಕುಲಗಳ ರಾಜಶ್ರೇಷ್ಠರೊಳಗೆ ಇಷ್ಟು ಪರ್ಯಂತ ಯಾರಾದರೂ ಎದುರಿಸಿದವರುಂಟೆ? ಅಂಥಾ ಬಲಶೌರ್ಯ ಧುರಂಧರನಾದ್ದರಿಂದ ಆತನು ಮೂರ್ಧಾಭಿಷಿಕ್ತರಾಗಿ ಸತ್ಕುಲಪ್ರಸೂತರಾದ

ಅರಸುಗಳು ತನ್ನನ್ನು ಓಲಗಿಸುವಾಗ ಕಣ್ಣಿನಿಂದಲಾದರೂ ನೋಡುವದಿಲ್ಲ; ಮತ್ತು ಯಾರಿಗೂ ಜಯಿಸುವದಕೆ
ಅವಶ್ಯಕವಾದ ಅರಸುಗಳೆಲ್ಲರೂ ತನಗೆ ಕಪ್ಪಗಳನ್ನು ಕೊಡಲು, ಸಕಲರಾದ ಅರಸುಗಳಿಗಿಂತಲೂ ಅಧಿಕನಾದ ಆತ
ನನ್ನು ಬಲಹೀನರಾದ ನಮಗೆ ನೋಡುವದಕ್ಕಾದರೂ ಸಾಮರ್ಥ್ಯವುಂಟೆ? ಅದಲ್ಲದೆ ಆ ಮಾಗಧನು ತಂಡುಲಪ್ರಸ್ಥ
ವೆಂಬ ದೇವಾಲಯದಲ್ಲಿ ಈಶ್ವರನ ಸನ್ನಿಧಾನದಲ್ಲಿ ಬಲಿಯನ್ನು ಕೊಡುವದಕ್ಕೋಸ್ಕರ ಕುರಿಗಳ ಹಿಂಡಿನೋಪಾ
ದಿಯಲ್ಲಿ ಅರಸುಗಳನ್ನು ಕೂಡಿಸಿಧಾನೆ; ಕಟಕಟಾ! ಯುದ್ಧವನ್ನು ಬಯಸಿರುವ ಕ್ಷತ್ರಿಯ ಜಾತಿಗೆ ಇಂಥಾ ದುರ
ವಸ್ಥೆ ಬರಬಹುದೆ! ಯಾವರೀತಿಯಲ್ಲಿ ವಿಚಾರಿಸಿದರೂ ಜರಾಸಂಧನಕೂಡೆ ಯುದ್ಧವು ನಮಗೆ ಶಕ್ಯವಲ್ಲವೆಂದು
ತೋರುತ್ತಲಿಧೆ. ಈಗ ತಂಡುಲಪ್ರಸ್ಥದಲ್ಲಿ ಎಂಭತ್ತಾರುಮಂದಿ ರಾಜಶ್ರೇಷ್ಠರನ್ನು ಇಟ್ಟಿದ್ಧಾನೆ; ಇನ್ನೂ ಹದಿನಾ
ಲ್ಕು ಮಂದಿಯನ್ನೂ ಕೂಡಿಸಿ ಆಮೇಲೆ ಎಲ್ಲರನ್ನು ಒಟ್ಟಾಗಿ ಕೊಲ್ಲುವದಕ್ಕೆ ಎಣಿಸಿಧಾನೆ; ಇಂಥಾ ಕ್ರೂರವ್ರತಕ್ಕೆ
ದೀಕ್ಷಿತನಾದ ದುರಾತ್ಮನ ವ್ರತಕ್ಕೆ ವಿಘ್ನವನ್ನು ಮಾಡಿ ಯಾವನು ಕೊಲ್ಲುವನೊ ಆತನು ಸಾಮ್ರಾಜ್ಯಕ್ಕೆ ಯೋಗ್ಯ
ನಾಗುವನು' ಎಂದು ಶ್ರೀಕೃಷ್ಣಸ್ವಾಮಿಯು ಭೀಮನಿಗೆ ಹೇಳಿದನು.''

---

## ೧೮ ನೇ ಅಧ್ಯಾಯ.—ರಾಜಸೂಯಾರಂಭಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ಭೀಮನನ್ನು ನೋಡಿ 'ಸಾಹಸವೇ ಪ್ರಧಾನವಾಗಿ
ರುವ ಬಾಲರಾದ ನಿನ್ನನ್ನೂ ಅರ್ಜುನನನ್ನೂ ಕೃಷ್ಣಸ್ವಾಮಿಯನ್ನೂ ಯುದ್ಧಕ್ಕೆ ಸಾಮ್ರಾಜ್ಯಾಭಿಲಾಷೆಯಿಂದ
ಸ್ವಾರ್ಥಪರನಾಗಿ ಹ್ಯಾಗೆ ಕಳುಹಿಸುವೆನು? ನೀನೂ ಅರ್ಜುನನೂ ಇಬ್ಬರೂ ನನಗೆ ಎರಡು ಕಣ್ಣುಗಳು; ಯ
ದುಕುಲ ಶ್ರೇಷ್ಠನಾದ ಕೃಷ್ಣಸ್ವಾಮಿಯು ನನ್ನ ಹೃದಯವು; ಈ ಮೂರು ಮಂದಿಯನ್ನು ಕಳುಹಿಸಿ ಮನೋ
ನೇತ್ರ ವಿಹೀನನೋಪಾದಿಯಲ್ಲಿ ಹ್ಯಾಗೆ ಜೀವಿಸುವೆನು? ಅಪಾರವಾಗಿ ಅತಿ ಭಯಂಕರವಾದ ಜರಾಸಂಧನ ಬಲವ
ನ್ನು ಹೊಕ್ಕರೆ ನಿಮಗೆ ಅಧಿಕವಾದ ಶ್ರಮವುಂಟಾಗುವದು; ಆ ಬಳಿಕ ಮಾಡತಕ್ಕ ಕಾರ್ಯವೇನು? ಅದು ಹಾಗಿರ
ಲಿ; ನೀವು ಆತನನ್ನು ಹ್ಯಾಗೆ ಜಯಿಸಿ ನನ್ನ ಸಮೀಪಕ್ಕೆ ತಿರಿಗಿಬರುವಿರಿ? ಈ ಕಾರ್ಯವನ್ನು ಆರಂಭಿಸಿದರೆ ಬರು
ವಂಥಾ ಬಾಧಕವನ್ನು ತಿಳಿದು ಅದಕ್ಕೆ ಒಂದುಪಾಯವನ್ನು ಯೋಚಿಸಿರುತ್ತೇನೆ; ಅದನ್ನು ಹೇಳುವೆನು; ಕೇಳಿರಿ;
ಈ ರಾಜಸೂಯ ಯಾಗವನ್ನು ಮಾಡುವದಕ್ಕೋಸ್ಕರವಲ್ಲವೆ ಇಷ್ಟು ಚಿಂತೆ ಬಂದು ಪ್ರಾಪ್ತವಾಯಿತು; ಇದನ್ನು
ಪರಿಹರಿಸುವದೇ ಒಳ್ಳೇದೆಂದು ತೋರುತ್ತಲಿದೆ, ಅಂದನು. ಕೇಳು ಜನಮೇಜಯನೆ, ಆ ಮಾತನ್ನು ಕೇಳಿ ಅ
ರ್ಜುನನು ಧರ್ಮರಾಯನನ್ನು ನೋಡಿ ಇಂತೆಂದನು: 'ದಿವ್ಯರಥವು, ಶ್ವೇತಾಶ್ವಗಳು, ಗಾಂಡೀವವು, ಅಕ್ಷಯ
ತೂಣೀರಗಳು, ದಿವ್ಯಾಸ್ತ್ರಗಳು ಮೊದಲಾದ ದುರ್ಲಭವಾದ ದಿವ್ಯ ಸಾಧನಗಳೂ ದಿವ್ಯ ಸಭೆಯೂ ನಮಗೆ
ಅವೆ; ಲೋಕದಲ್ಲಿ ಜನರು ಸತ್ಕುಲದಲ್ಲಿ ಹುಟ್ಟುವದೇ ದೊಡ್ಡದೆಂದು ಹೇಳುವರು; ಮತ್ತು ಕೆಲವರು ಬಲವೇ
ದೊಡ್ಡದೆಂದು ಹೇಳುವರು; ಈ ಎರಡಕ್ಕಿಂತಲೂ ಶೌರ್ಯವೇ ದೊಡ್ಡದೆಂದು ನನ್ನ ಮನಸ್ಸಿನಲ್ಲಿ ತೋರುತ್ತಲಿಧೆ;
ಕುಲವೂ ಬಲವೂ ಉಂಟಾಗಿ ಶೌರ್ಯವಿಲ್ಲದಿದ್ದರೆ ಅಪಜಯವು ಪ್ರಾಪ್ತವಾಗುವದು; ಗುಣಗಳಿಲ್ಲದಿದ್ದರೂ ಶೌರ್ಯ
ಮಾತ್ರ ಇರುವ ಪುರುಷನು ಶತ್ರುಗಳನ್ನು ಸಂಹರಿಸುವನು; ಸಕಲ ಗುಣಗಳಿದ್ದರೂ ಪರಾಕ್ರಮವಿಲ್ಲದಿರುವ ಪು
ರುಷನು ಮೂಢನಾಗುವನು; ಅಷ್ಟು ಗುಣಗಳೂ ಶೌರ್ಯ ಗುಣವೂ ಇದ್ದ ಪುರುಷನಲ್ಲಿ ಸಕಲ ಸಿದ್ಧಿಯುಂಟಾಗು
ವದೆಂದು ಹೇಳಬೇಕು; ಶತ್ರುಜಯಕ್ಕೆ ಪುರುಷ ಪ್ರಯತ್ನವೇ ಕಾರಣವಾಗಿರುವದು; ಅದು ದೈವಾನುಗ್ರಹದಿಂದ
ಫಲಿಸುವದಾದ್ದರಿಂದ ಯಾವ ರೀತಿಯಿಂದಲಾದರೂ ಪ್ರಯತ್ನದಿಂದಲೇ ಮಾಡಬೇಕು; ತನಗೆ ಶೌರ್ಯವುಂಟೆಂದು
ಪ್ರಮತ್ತನಾಗಿರುವ ಪುರುಷನು ಒಂದಾನೊಂದು ಸಮಯದಲ್ಲಿ ಶತ್ರುಗಳ ಕೈಗೆ ಸಿಕ್ಕುವನು; ಬಲಹೀನನಾಗಿರುವಾ
ಗ ಸಾಹಸವನ್ನು ಮಾಡುವದೂ ಸಕಲ ಸಂಪತ್ತು ಇರುವಾಗ ಮದಾಂಧನಾಗಿ ಸುಮ್ಮನಿರುವದೂ ಎಂಬ ಈ ಎ
ರಡು ದುರ್ಗುಣಗಳನ್ನು ಜಯಾರ್ಥಿಯಾದ ಪುರುಷನು ಬಿಟ್ಟು ಬಿಡಬೇಕು; ಜರಾಸಂಧನನ್ನು ಜಯಿಸುವದು ಆ

ತನ ಕೈಗೆ ಸಿಕ್ಕಿರುವ ಸಕಲರಾದ ಅರಸುಗಳನ್ನು ಬಿಡಿಸುವದು ಎಂಬ ಈ ಎರಡು ಕಾರ್ಯಗಳೂ ರಾಜಸೂಯ ಯಾಗಾರ್ಥವಾಗಿ ಮಾಡಿದರೆ ನಾವು ಯೋಚಿಸಿದ ಕಾರ್ಯವೆಲ್ಲವೂ ಆಗುತ್ತಲಿಧೆ; ಈ ಸಮಯದಲ್ಲಿ ಶತ್ರುಗಳನ್ನು ಜಯಿಸುವದಕ್ಕೆ ಪ್ರಯತ್ನಮಾಡದಿರುವದೇ ದುರ್ಗುಣವು; ಸಮಸ್ತ ಸಾಮರ್ಥ್ಯವೂ ನಮ್ಮಲ್ಲಿರುವಾಗ ಸಂಶಯ ಪಡುವದಕ್ಕೆ ಕಾರಣವೇನು? ಆದ್ದರಿಂದ ನಿನಗೆ ಸಾಮ್ರಾಜ್ಯವನ್ನು ಬಯಸಿ ಶತ್ರುಗಳನ್ನು ಜಯಿಸುವದಕ್ಕೆ ಹೋಗುತ್ತಲಿಧೇವೆ; ಆ ಬಳಿಕ ಸಕಲ ಮುನಿಜನ ಸಮೇತನಾಗಿ ಸಾಮ್ರಾಜ್ಯವನ್ನೈದಿ ನೀನು ಸಂತೋಷಪಡುತಿದ್ದೀ' ಎಂದು ಅರ್ಜುನನು ಧರ್ಮರಾಯನಿಗೆ ಹೇಳಿದನು."

## ೧೯ ನೇ ಅಧ್ಯಾಯ.—ರಾಜಸೂಯಾರಂಭಪರ್ವ ಸಮಾಪ್ತಿ.

"ಕೇಳು ಜನಮೇಜಯನೆ, ಆ ಬಳಿಕ ಕೃಷ್ಣಸ್ವಾಮಿಯು ಧರ್ಮರಾಯನನ್ನು ನೋಡಿ 'ಕುಂತೀ ಪುತ್ರನಾಗಿ ಭರತಕುಲ ಶ್ರೇಷ್ಠನಾದ ಅರ್ಜುನನು ಹೇಳಿದ ವಾಕ್ಯವಷ್ಟೂ ಯತಾರ್ಥವೇ ಸರಿ; ಯುದ್ಧಕ್ಕೆ ಹೋಗದೆ ಶರೀರವನ್ನು ಬಚ್ಚಿಟ್ಟುಕೊಂಡಿರುವವರು ಸಾಯುವದಿಲ್ಲವೆ? ಯುದ್ಧಮಾಡುವಂಥಾವರು ಬಹುಕಾಲ ಬದುಕುವದಿಲ್ಲವೆ? ಮೃತ್ಯುವಿಗೆ ರಾತ್ರಿಯು ಹಗಲು ಎಂದು ಸಮಯವನ್ನು ನಿರ್ಣಯಿಸಬಹುದೆ? ಯಾರಾದರೂ ನೀತಿಮಾರ್ಗವನ್ನನುಸರಿಸಿ ಶತ್ರುಗಳಲ್ಲಿ ಕಾರ್ಯವನ್ನು ನಡಿಸಿದರೆ ಕಾರ್ಯವು ಕೈಕೂಡುವದು; ನೀತಿ ರಹಿತನಾದವನಲ್ಲಿ ನೀತಿವಂತನಾದವನು ನಯಭಯದಿಂದ ಪ್ರವರ್ತಿಸಿದರೆ ಆ ನೀತಿ ಸಫಲವಾಗುವದು; ವಿರೋಧಿಯೂ ತಾನೂ ಇಬ್ಬರೂ ನೀತಿಯುಕ್ತರಾದರೆ ಜಯಪರಾಜಯಗಳು ನಿಶ್ಚಯಿಸಕೂಡದು; ಇಂಥಾ ನೀತಿ ಸಾಮ್ಯವು ಇತ್ತಂಡದವರಿಗೂ ಲಭಿಸುವದು ದುರ್ಲಭವು; ಯಾವರೀತಿಯಿಂದಲಾದರೂ ಸೇನೆಯೊಡನೆ ಕೂಡಿರುವ ಶತೃವನ್ನು ಜಯಿಸುವದಕ್ಕೆ ಹೋಗಬಾರದು; ನಾವು ಉಪಾಯದಿಂದ ವಿರೋಧಿರಾಜ್ಯವನ್ನು ಪ್ರವೇಶಿಸಿ ಮಾಡುವಂಥಾ ಕಾರ್ಯವನ್ನು ಅವರು ಅರಿಯದಿರುವ ರೀತಿಗೆ ಪರಮ ಧರ್ಮಗಳನ್ನು ಅತಿಭೇದಿಸುತ್ತ, (ನದೀವೇಗವು ವೃಕ್ಷಗಳ ಮೂಲವನ್ನು ಭೇದಿಸುವಹಾಗೆ) ಕ್ರಮದಿಂದ ಶತೃಸಂಹಾರವನ್ನು ಮಾಡಬೇಕು. ಲೋಕದಲ್ಲಿ ತಾನು ಎಷ್ಟು ಬಲಶಾಲಿಯಾದರೂ ಸೇನಾರಹಿತನಾದರೆ ಸೇನೆಯೊಡನೆ ಕೂಡಿರುವ ಶತೃವನ್ನು ಜಯಿಸುವದಕ್ಕೆ ಹೋಗಬಾರದು ಎಂದು ಬುದ್ಧಿವಂತರು ಹೇಳುವ ನೀತಿಯು ನನಗೂ ಸಮ್ಮತವಾಗಿ ತೋರುತ್ತಲಿಧೆ; ನಾವು ಅನವದ್ಯರಾಗಿ ತಡೆಯಿಲ್ಲದೆ ಸಕಲ ಸೇನಾಸಮೇತರಾಗಿ ಶತ್ರುಗಳಿರುವ ತಾವಿಗೆ ಹೋಗಿ ಶತ್ರುವನ್ನು ಜಯಿಸಿ ನಮ್ಮ ಅಭಿಲಾಷೆಯನ್ನೈದುವೆವು. ಲೋಕದಲ್ಲಿ ಅಂತರಾತ್ಮನೋಪಾದಿಯಲ್ಲಿ ಯಾವ ಪುರುಷನು ಸಕಲೈಶ್ವರ್ಯಗಳನ್ನು ಅನುಭವಿಸುವನೊ ಆ ಪುರುಷನು ಹೋದರೆ ಅವನ ಬಲವಷ್ಟೂ ನಷ್ಟವಾಗಿ ಹೋಗುವದು; ಆದ್ದರಿಂದ ಆ ಜರಾಸಂಧನನ್ನು ಕೊಂದು ಸಕಲ ಸಾಮ್ರಾಜ್ಯವನ್ನು ಅನುಭವಿಸುವೆವು; ಜಯಿಸಲಾರದೆ ಹೋದರೆ ಪ್ರಾಣಗಳ ಮೇಲೆ ಆಶೆಯಿದ್ದರೆ ಹತಶೇಷರೊಡನೆ ಕೂಡಿ ಬಂದು ಸುಖವಾಗಿರಬಹುದು; ಪ್ರಾಣಗಳ ಮೇಲೆ ಆಶೆಯಿಲ್ಲದೆ ಇದ್ದರೆ ಕ್ಷತ್ರಿಯಧರ್ಮವನ್ನು ಅನುಸರಿಸಿ ಅವನಿಂದ ಹತರಾಗಿ ಸ್ವರ್ಗಕ್ಕೆ ಹೋಗಬಹುದು' ಅಂದನು. ಧರ್ಮರಾಯನು ಶ್ರೀ ಕೃಷ್ಣಸ್ವಾಮಿಯನ್ನು ನೋಡಿ 'ಎಲೈ ಮಹಾತ್ಮನೆ, ಕಾಡು ಕಿಚ್ಚಿನಲ್ಲಿ ಬಿದ್ದ ಪತಂಗದ ಹುಳವಿನೋಪಾದಿಯಲ್ಲಿ ಹತನಾಗದೆ ಯುದ್ಧದಲ್ಲಿ ನಿನ್ನ ಕೈಯಲ್ಲಿ ಸಿಕ್ಕಿ ತಪ್ಪಿಸಿಕೊಂಡು ಹೋದ ಆ ಜರಾಸಂಧನಿಗೆ ಅಂಥಾ ಪರಾಕ್ರಮ ಶೌರ್ಯಗಳು ಯಾವರೀತಿಯಿಂದುಂಟಾಯಿತು? ಆ ವೃತ್ತಾಂತವೆಲ್ಲವನ್ನೂ ನನಗೆ ತಿಳಿಯಹೇಳು' ಎನಲು, ಶ್ರೀ ಕೃಷ್ಣಸ್ವಾಮಿ ಇಂತೆಂದನು.

'ಎಲೈ ಧರ್ಮರಾಯನೆ, ಆ ದುರಾತ್ಮನನ್ನು ಯುದ್ಧದಲ್ಲಿ ಕೊಲ್ಲದೆ ಉಪೇಕ್ಷೆ ಮಾಡಿ ಹದಿನೆಂಟುಸಾರಿ ಸಹಿಸಿರುವ ರೀತಿಯನ್ನೂ ಆತನು ಹುಟ್ಟಿದ ಪ್ರಕಾರವನ್ನೂ ಆತನ ಬಲಪರಾಕ್ರಮಗಳನ್ನೂ ವಿಸ್ತಾರವಾಗಿ ಹೇ

ಳುತ್ತಲಿದ್ದೇನೆ ಕೇಳು : ಮಗಧ ದೇಶಾಧೀಶ್ವರನಾದ ಬೃಹದ್ರಥನೆಂಬ ರಾಯನು ಪರಾಕ್ರಮದಲ್ಲಿ ಸೂರ್ಯನಿಗೆ ಸಮಾನನಾಗಿ, ಕೋಪದಲ್ಲಿ ಯಮನಿಗೆ ಸಮಾನನಾಗಿ, ಐಶ್ವರ್ಯದಲ್ಲಿ ಕುಬೇರನಿಗೆ ಸದೃಶನಾಗಿ, ಕ್ಷಮಾತಿಶಯದಲ್ಲಿ ಭೂಮಿಯೆಣೆಯೋಪಾದಿಯಲ್ಲಿರುವವನಾಗಿ, ಪರಾಕ್ರಮ ಧುರಂಧರನಾಗಿ, ಯಾವಾಗಲೂ ಯಾಗಗಳನ್ನೇ ಮಾಡುತ್ತ ಎರಡನೇ ದೇವೇಂದ್ರನೋಪಾದಿಯಲ್ಲಿ ಒಪ್ಪುತ್ತ, ಆಜನ್ಮಶುದ್ಧವಾದ ತನ್ನ ಸದ್ಗುಣಗಳಿಂದ ಅಖಂಡಲ ಭೂಮಂಡಲವನ್ನು ಸೂರ್ಯಕಿರಣಗಳೋಪಾದಿಯಲ್ಲಿ ಆವೃತವಾಗಿರಲು ಮೂರಕ್ಷೋಹಿಣೀ ಸಂಖ್ಯೆಯುಳ್ಳ ಬಲಗಳು ಓಲಗಿಸಲು ಮಗಧ ದೇಶಗಳಲ್ಲಿ ಗಿರಿವ್ರಜ ಪಟ್ಟಣವನ್ನು ಪರಿಪಾಲಿಸುತ್ತ ರೂಪ ಲಾವಣ್ಯವತಿಗಳಾದ ಕಾಶೀರಾಯನ ಮಕ್ಕಳನ್ನು ಮದುವೆಯಾಗಿ '—ಇಬ್ಬರು ಹೆಂಡತಿಗಳಲ್ಲಿಯೂ ಸಮಾನವಾಗಿ ನಡದುಕೊಳ್ಳುತಲಿದ್ದೇನೆ—' ಎಂದು ಸಂಕೇತವನ್ನು ಮಾಡಿ, ರೂಪ ಸೌಂದರ್ಯ ಶೀಲಗಳುಂಟಾಗಿ ಅನುಕೂಲರಾಗಿರುವ ಹೆಂಡತಿಗಳೊಡನೆ ಕೂಡಿ ಎರಡು ಹೆಣ್ಣಾನೆಗಳಿಂದ ಕೂಡಿರುವ ಮದ್ದಾನೆಯೋಪಾದಿಯಲ್ಲಿಯೂ ಗಂಗಾಯಮುನೆಗಳ ಮಧ್ಯದಲ್ಲಿ ಮೂರ್ತಿಕರಿಸಿರುವ ಸಮುದ್ರರಾಜನೋಪಾದಿಯಲ್ಲಿಯೂ ಪ್ರಕಾಶಿಸುತ್ತ, ಅಭೀಷ್ಟ ಭೋಗಗಳಿಂದ ಸಂತುಷ್ಟನಾಗಿದ್ದನು. ಆ ಬಳಿಕ ಯೌವನವು ಹೋಗಿ ವಂಶೋದ್ಧಾರಕನಾದ ಮಗನಿಲ್ಲದೆ ಹೋಗಲು, ಪುತ್ರಾಭಿಲಾಷೆಯಿಂದ ಪುತ್ರಕಾಮೇಷ್ಟಿ ಮೊದಲಾದ ಅನೇಕ ಯಜ್ಞಗಳನ್ನೂ ಶುಭ ಕರ್ಮಗಳನ್ನೂ ಮಾಡಿದರೂ ಮಕ್ಕಳನ್ನು ಪಡೆಯಲಾರದೆ ಚಿಂತಾಕ್ರಾಂತನಾಗಿ, ಬೇಡವೆಂದು ಮಂತ್ರಿಗಳು ತಡದರೂ ಕೇಳದೆ ಹೆಂಡತಿಗಳನ್ನು ಕರಕೊಂಡು ತಪೋವನಕ್ಕೆ ಹೋಗಿ, ಗೌತಮ ವಂಶದಲ್ಲಿ ಹುಟ್ಟಿ ಕಕ್ಷಿವಂತನೆಂಬ ಮುನೀಶ್ವರನಿಗೆ ಪುತ್ರನಾಗಿರುವ ಚಂಡಕೌಶಿಕನ ಮಹತ್ವವನ್ನು ತಿಳಿದು, ಮಾವಿನ ಮರದ ಕೆಳಗೆ ಕುಳಿತುಕೊಂಡಿರುವ ಆ ತಪೋಧನನ ಸಮುಖಕ್ಕೆ ಹೋಗಿ, ವಿನಯದಿಂದ ಹೆಂಡತಿಗಳೂ ತಾನೂ ಆತನಿಗೆ ದಂಡಪ್ರಣಾಮವನ್ನು ಮಾಡಿ, ಪ್ರಿಯಭಾಷೆಗಳಿಂದ ಆತನ ಮನಸ್ಸಿಗೆ ಸಂತೋಷವನ್ನುಂಟುಮಾಡಿದನು. ಆ ಚಂಡಕೌಶಿಕನು ಕೃಪಾದೃಷ್ಟಿಯಿಂದ ಬೃಹದ್ರಥನನ್ನು ನೋಡಿ ಕುಳಿತುಕೊಳ್ಳುವದಕ್ಕೆ ಅಪ್ಪಣೆಯನ್ನು ಕೊಟ್ಟು, ಪೌರಜನಗಳೂ ಹೆಂಡತಿಗಳೂ ಸಂಗಡ ಬರಲು ರಾಜ್ಯಪರಿಪಾಲನವನ್ನು ಬಿಟ್ಟು ವನಭೂಮಿಗೆ ಬರುವದಕ್ಕೆ ಕಾರಣವೇನೆಂದು ಕೇಳಿದನು. ಆ ಮಹಾರಾಯನು ಕೈಮುಗಿದು '—ಎಲೈ ಮುನೀಂದ್ರನೆ, ಮಕ್ಕಳಿಲ್ಲದಿರುವವನಿಗೆ ಕೀರ್ತಿಯೂ ಪರಲೋಕ ಸೌಖ್ಯವೂ ಇಲ್ಲವೆಂದು ವೇದಶಾಸ್ತ್ರಗಳಲ್ಲಿ ಹೇಳುವದರಿಂದ ಮಕ್ಕಳಿಲ್ಲದೆ ವೃದ್ಧನಾಗಿರುವ ನನಗೆ ರಾಜ್ಯದಿಂದ ಪ್ರಯೋಜನವೇನೆಂದೆಣಿಸಿ ಪತ್ನೀಸಮೇತನಾಗಿ ತಪಸ್ಸನ್ನು ಮಾಡುವದಕ್ಕೆ ಬಂದೆನು—' ಅಂದನು. ದಯಾಳುವಾದ ಆ ಮುನಿಶ್ರೇಷ್ಠನು ಆತನಿಗೆ ಬಹುಮಾನವನ್ನು ಮಾಡಿ '—ಎಲೈ ರಾಯನೆ, ನಿನ್ನ ಗುಣಾತಿಶಯಕ್ಕೆ ಸಂತೋಷಪಟ್ಟೆನು ; ನಿನಗೆ ಬೇಕಾದ ವರವನ್ನು ಬೇಡು—' ಎನಲು, ಆ ರಾಯನು ಅತ್ಯಂತ ಭಕ್ತಿಯುಕ್ತನಾಗಿ ಸಂತೋಷದಿಂದ ಕಂಬನಿಗಳನ್ನು ತುಂಬುತ ಆತನನ್ನು ನೋಡಿ ಗದ್ಗದಸ್ವರದಿಂದ ಇಂತೆಂದನು : '—ಎಲೈ ಮಹಾತ್ಮನೆ, ಮಕ್ಕಳಿಲ್ಲದೆ ರಾಜ್ಯವನ್ನು ಬಿಟ್ಟು ತಪೋವನಕ್ಕೆ ಬಂದಿರುವ ನಮಗೆ ಮಕ್ಕಳಾಗುವದಕ್ಕಿಂತಲೂ ಮತ್ತೊಂದು ವರವು ಕೇಳತಕ್ಕಂಥಾದ್ದೇನು?—' ಅಂದನು. ಕೇಳು ಧರ್ಮರಾಯನೆ, ಆ ಬಳಿಕ ಆ ಮುನೀಶ್ವರನು ಆ ರಾಯನ ವಾಕ್ಯವೆಲ್ಲವನ್ನೂ ಕೇಳಿ ಕಣ್ಣು ಮುಚ್ಚಿಕೊಂಡು ಧ್ಯಾನಿಸುವ ಸಮಯದಲ್ಲಿ ಅಕಾರವಾಗಿ ಬಂದು ಮಾವಿನ ಹಣ್ಣು ಆತನ ತೊಡೆಯ ಮೇಲೆ ಬಿತ್ತು. ಅದನ್ನು ತೆಗದುಕೊಂಡು ಅಭಿಮಂತ್ರಿಸಿ ಆ ರಾಜಶ್ರೇಷ್ಠನಿಗೆ ಕೊಟ್ಟು '—ಎಲೈ ನರೇಂದ್ರನೆ, ಈ ಫಲವನ್ನೇ ಮಗನಾಗಿ ಎಣಿಸಿ ತಪಸ್ಸು ಮಾಡುವದನ್ನು ಬಿಟ್ಟು ರಾಜಧರ್ಮವಾದ ಪ್ರಜಾಪರಿಪಾಲನವನ್ನು ಮಾಡು ; ಮಹೇಂದ್ರನಿಗೆ ಪ್ರಿಯವಾದ ಅನೇಕ ಯಜ್ಞಗಳನ್ನು ಮಾಡುತ್ತ ಕೆಲವು ಕಾಲವಿದ್ದು, ಆ ಬಳಿಕ ಪ್ರಜ್ಞಾಸಂಪನ್ನನಾದ ಮಗನಿಗೆ ಪಟ್ಟವನ್ನು ಕಟ್ಟಿ, ಬಳಿಕ ತಪೋವನಕ್ಕೆ ಹೋಗುವದು ಉಚಿತವು ; ಬ್ರಾಹ್ಮಣ ಭಕ್ತಿಯು, ಯುದ್ಧದಲ್ಲಿ ಯಾರಿಗೂ ಜಯಿಸುವದಕ್ಕೆ ಅವಶ್ಯಕವಾಗಿರುವದು, ಯುದ್ಧಾಭಿಲಾಷೆಯು, ಅತಿಥಿ ಪೂಜೆಯು, ದೀನರಕ್ಷಣವು, ಮಹಾ ಬಲವು, ಶಾಶ್ವತವಾದ ಕೀರ್ತಿಯು, ಪ್ರಜೆಗಳಲ್ಲಿ ಪ್ರೀತಿಯುಂಟಾಗುವದು ಎಂಬ ಎಂಟುವರಗಳನ್ನು ನಿನ್ನ ಮಗನಿಗೆ ಕೊಟ್ಟೆನಾದ್ದರಿಂದ ನೀನು ಕೃತಾರ್ಥನಾದೆ ; ಇನ್ನು ಮೇಲೆ ನೀನು ಪಟ್ಟಣಕ್ಕೆ ಹೋಗು—' ಅಂದನು. ಬೃಹದ್ರಥನು ಚಂಡಕೌಶಿಕ ಮುನೀ

ಶ್ವರನ ಅಪ್ಪಣೆಯಿಂದ ಆ ಫಲವನ್ನು ತೆಗದುಕೊಂಡು ಪತ್ನೀಸಮೇತನಾಗಿ ಪೌರಜನಗಳು ಓಲಗಿಸಲು ಗಿರಿವ್ರಜ ಪಟ್ಟಣಕ್ಕೆ ಬಂದು ಒಂದು ಶುಭ ಮುಹೂರ್ತದಲ್ಲಿ ಮುನಿಪ್ರಸಾದ ಲಬ್ಧವಾದ ಮಾವಿನ ಹಣ್ಣನ್ನು ಇಬ್ಬರು ಹೆಂಡತಿಗಳಿಗೂ ಕೊಟ್ಟನು. ಅವರು ಅದನ್ನು ಸರಿಯಾಗಿ ಹಂಚಿ ಭಕ್ಷಿಸಲು ಗರ್ಭವನ್ನು ಧರಿಸಿ ನವಮಾಸಗಳು ತುಂಬಲು, ಹತ್ತನೇ ಮಾಸದಲ್ಲಿ ಒಂದು ಕಾಲು ಒಂದು ಕಣ್ಣು ಒಂದು ಕಿವಿ ಅರ್ಧ ಹೊಟ್ಟೆ ಒಂದು ಭುಜ ಅರ್ಧ ಮೂಗು ಉಳ್ಳಂಥಾ ಬಲುತಿರುವ ಎರಡು ಶರೀರದ ಹೋಳುಗಳನ್ನು ಪಡದರು. ಆ ಹೋಳುಗಳಿಂದ ಪ್ರಯೋಜನವೇನೆಂದು ಅಕ್ಕತಂಗಿಗಳಾದ ಆ ರಾಜಪತ್ನಿಗಳಿಬ್ಬರೂ ದುಃಖಪಡುತ್ತಿರಲು, ದಾದಿಗಳು ಅವೆರಡನ್ನೂ ಬಿಳೀ ಸೀರೆಯಲ್ಲಿಟ್ಟುಕೊಂಡು ಅಂತಃಪ್ರರದಿಂದ ಹೊರಟು ಯಾರೂ ಅರಿಯದಿರುವ ರೀತಿಗೆ ಅರಮನೆಯ ಬಾಹ್ಯಪ್ರದೇಶದಲ್ಲಿ ನಾಲ್ಕುದಾರಿ ಕೂಡಿದ ತಾವಿನಲ್ಲಿ (ಆ ಶರೀರದ ಹೋಳುಗಳನ್ನು) ಹಾಕಿಬಿಟ್ಟರು.

" 'ಕೇಳು ಧರ್ಮರಾಯನೆ, ಆ ಬಳಿಕ ಆ ನಾಲ್ಕುದಾರಿಗಳು ಕೂಡಿದ ತಾವಿನಲ್ಲಿ ಬಿದ್ದಿರುವ ಶರೀರದ ಹೋಳುಗಳನ್ನು ರಕ್ತ ಮಾಂಸಗಳಿಂದ ಜೀವಿಸುತ್ತಲಿರುವ ಜರಾ ಎಂಬ ಒಬ್ಬ ರಾಕ್ಷಸಿಯು ನೋಡಿ ಭಕ್ಷಿಸಬೇಕೆಂಬ ಇಚ್ಛೆಯಿಂದ ತೆಗದುಕೊಂಡು ವಿಧಿಪ್ರೇರಣೆಯಿಂದ ಎರಡು ಹೋಳುಗಳನ್ನೂ ಒಂದಾಗಿ ಕೂಡಿಸಲು ಅವು ವಜ್ರದೋಪಾದಿಯಲ್ಲಿ ಕಠಿಣವಾದ ಶರೀರವುಳ್ಳಂಥ ಒಬ್ಬ ಕುಮಾರನಾದವು! ಆ ರಾಕ್ಷಸಿಯು ಅದನ್ನು ಭಕ್ಷಿಸುವದಕ್ಕೆ ಸಾಮರ್ಥ್ಯವಿಲ್ಲದೆ ನೋಡುತ್ತಿರಲು ಆ ಬಾಲಕನು ನಾಲ್ಕು ಬೆರಳುಗಳನ್ನು ಮುರಿದು ಹೆಬ್ಬೆಟ್ಟನ್ನು ಬಾಯಲ್ಲಿಟ್ಟುಕೊಂಡು ಬಲ ಪರಾಕ್ರಮ ಧುರಂಧರನಾದ್ದರಿಂದ ಉದಕದೊಡನೆ ಕೂಡಿರುವ ಮೇಘದೋಪಾದಿಯಲ್ಲಿ ಮಹಾ ಧ್ವನಿಯಿಂದ ಅಳುತ್ತಿದ್ದನು. ಕಿವಿಗೆ ಭಯಂಕರವಾದ ಆ ಶಬ್ದವನ್ನು ಕೇಳಿ ಅಂತಃಪ್ರರದಲ್ಲಿರುವ ರಾಯನು ಪರಿಜನಗಳೊಡನೆ ಶೀಘ್ರವಾಗಿ ಆ ಸ್ಥಳಕ್ಕೆ ಬಂದನು; ವಿಫಲವಾದ ಸಂತಾನವು ತಿರಿಗೂ ಲಭಿಸಿತೆಂದು ಸ್ತನಗಳು ಗೊಸಲಿಳಿಯಲು ಆ ರಾಜಸ್ತ್ರೀಯರೂ ಬಂದರು. ಆಗ ಆ ರಾಕ್ಷಸ ಸ್ತ್ರೀಯು ಪುತ್ರಮೋಹದಿಂದ ಬರುತ್ತಲಿರುವ ಆ ರಾಜಪತ್ನಿಗಳಿಗೂ ರಾಯನಿಗೂ ಇಷ್ಟಸಂತಾನವಾಗಿ ಬಲಶಾಲಿಯಾದ ಆ ಬಾಲಕನನ್ನು ನೋಡಿ, ತನ್ನ ಮನಸ್ಸಿನಲ್ಲಿ—ಪುತ್ರಾರ್ಥಿಯಾಗಿ ಬಹುಕಾಲಕ್ಕೆ ಕುಮಾರನನ್ನು ಪಡೆದ ಅರಸಿಗೂ ಆತನ ಪಟ್ಟಣದಲ್ಲಿರುವ ಜನರಿಗೂ ದ್ರೋಹವನ್ನು ಮಾಡುತ್ತಲಿರುವದು ಉಚಿತವಲ್ಲವೆಂತಲೂ ಆ ಕುಮಾರನು ಮೇಘಗಳಿಂದ ಮುಚಲ್ಪಡದೇ ಇರುವ ಸೂರ್ಯನೋಪಾದಿಯಲ್ಲಿರುವನೆಂತಲೂ ನಿಶ್ಚಯಿಸಿ, ಮನುಷ್ಯ ರೂಪವನ್ನು ಧರಿಸಿ, ಆ ರಾಯನನ್ನು ನೋಡಿ '—ಎಲೈ ನರೇಂದ್ರನೆ, ಚಂಡಕೌಶಿಕ ಮಹಾಮುನೀಶ್ವರನ ವರಪ್ರಸಾದದಿಂದ ನಿನ್ನ ಹೆಂಡತಿಗಳದೆಸೆಯಿಂದ ಹುಟ್ಟಿದ ಕುಮಾರನನ್ನು ದಾದಿಗಳು ಈ ಸ್ಥಳದಲ್ಲಿ ಹಾಕಿ ಬಿಟ್ಟು ಹೋಗಲು, ನಾನು ಸಂರಕ್ಷಿಸಿದವಳಾದ್ದರಿಂದ ನಿನಗೆ ವಂಶಕನಾದ ಕುಮಾರನನ್ನು ನಾನು ಕೊಡುತ್ತಲಿದೇನೆ—' ಎಂದು ನುಡಿದಳು. ರಾಜಪತ್ನಿಗಳಿಬ್ಬರೂ ಆ ಕುಮಾರನನ್ನು ಕೈಗಳಿಂದ ಎತ್ತಿಕೊಂಡು ಸ್ತನಕ್ಷೀರಗಳಿಂದ ಅಭಿಷಿಕ್ತನನ್ನಾಗಿ ಮಾಡಿದರು. ಆ ಬಳಿಕ ಬೃಹದ್ರಥನು ಸಂತೋಷಪಟ್ಟು, ಮನುಷ್ಯರೂಪದೊಡನೆ ಇರುವ ರಾಕ್ಷಸ ಸ್ತ್ರೀಯನ್ನು ನೋಡಿ '—ನೀನ್ಯಾರು? ನಮ್ಮ ಭಾಗ್ಯ ದೇವತೆಯೋಪಾದಿಯಲ್ಲಿ ತೋರಿ ನಮಗೆ ಪುತ್ರಸಂತಾನವನ್ನು ಕೊಟ್ಟವಳಾದ್ದರಿಂದ ನಿನ್ನ ಅಭೀಷ್ಟವೇನು? ಹೇಳು ಕೊಡುತ್ತಲಿದೇನೆ—' ಅಂದನು.' "

---

## ೧೦ನೇ ಅಧ್ಯಾಯ.—ಜರಾಸಂಧವಧಪರ್ವ.

" 'ಕೇಳೈ ಧರ್ಮರಾಯನೆ, ಬಳಿಕ ಜರೆಯೆಂಬ ರಾಕ್ಷಸಿಯು ಆ ರಾಜನಂ ಕುರಿತು '—ಎಲೈ ರಾಜನೆ, ನಿನಗೆ ಸಕಲ ಶುಭಗಳೂ ಆಗಲಿ! ನಾನು ಜರೆಯೆಂಬ ರಾಕ್ಷಸಿಯು; ಕಾಮರೂಪಿಯಾಗಿ ನಿನ್ನ ಅಂತಃಪುರದ ಸಮೀಪದಲ್ಲಿ ಸುಖದಿಂದಿರುವದರಿಂದ ನಿನಗೆ ಒಂದು ಉಪಕಾರವನ್ನು ಮಾಡಬೇಕೆಂದು ಚಿಂತಿಸುತ್ತಿದ್ದೆನು; ದೈವಾನುಗ್ರಹದಿಂದ ನಿನ್ನ ಮಗನ ಶರೀರದ ಹೋಳುಗಳನ್ನು ಒಂದಾಗಿ ಹತ್ತಿಸಲು ನಿನ್ನ ಭಾಗ್ಯಾತಿಶಯದಿಂದ ಮಗನಾದನು;

ನಾನು ನಿಮಿತ್ತಮಾತ್ರವು, ಈತನು ನನ್ನ ಹೆಸರಿನಿಂದ ಪ್ರಸಿದ್ಧಿಯನ್ನು ಪಡದು ಲೋಕದಲ್ಲಿ ಪ್ರಸಿದ್ಧನಾಗುವನು—' ಎಂದು ನುಡಿದು ಅಂತರ್ಧಾನವನ್ನೈದಿದಳು. ಆ ಬಳಿಕ ಬೃಹದ್ರಥನು ಕುಮಾರನನ್ನು ಅಂತಃಪುರಕ್ಕೆ ತಂದು, ಜಾತಕರ್ಮಾದಿ ಕೃತ್ಯಗಳನ್ನು ಮಾಡಿ, ತನ್ನ ರಾಜ್ಯದಲ್ಲಿ ರಾಕ್ಷಸ ಸ್ತ್ರೀಗೆ ಮಹೋತ್ಸವವನ್ನು ಮಾಡಲು ಕಟ್ಟು ಮಾಡಿಸಿ, ಜರೆಯೆಂಬ ರಾಕ್ಷಸಿಯಿಂದ ಕೂಡಿಸಲ್ಪಟ್ಟವನಾದ್ದರಿಂದ ಜರಾಸಂಧನೆಂಬ ಅನ್ವರ್ಥ ನಾಮಕರಣವನ್ನು ಮಾಡಿದನು. ಆ ಬಳಿಕ ಅಸಮಾನ ಬಲಸಂಪನ್ನನಾದ ಆ ಜರಾಸಂಧನು ಆಜ್ಯಾಹುತಿಗಳಿಂದ ಪ್ರಜ್ವಲಿಸುತ್ತಿರುವ ಯಜ್ಞೇಶ್ವರನೋಪಾದಿಯಲ್ಲಿ ತೇಜೋಧುರೀಣನಾಗಿ ದಿನದಿನಕ್ಕೆ ಪ್ರವರ್ಧಮಾನನಾಗಿ ಯೌವನರೂಢನಾಗಿ ತಾವರೆಯ ಎಸಳಿನೋಪಾದಿಯಲ್ಲಿರುವ ಕಣ್ಣುಗಳುಳ್ಳಂಥಾವನಾಗಿ ಪ್ರವರ್ತಿಸುತ್ತಿದ್ದನು. ಆ ಬಳಿಕ ಒಂದು ದಿವಸದಲ್ಲಿ ತಪೋನಿಧಿಯಾದ ಚಂಡಕೌಶಿಕ ಮುನೀಶ್ವರನು ಮಾಗಧ ಪಟ್ಟಣವಾದ ಗಿರಿವ್ರಜ ಪಟ್ಟಣಕ್ಕೆ ಬರಲು, ಬೃಹದ್ರಥರಾಯನು ಪುತ್ರ ಮಿತ್ರ ಕಳತ್ರ ಮಂತ್ರಿ ಸಮೇತನಾಗಿ ಎದುರಾಗಿ ಹೋಗಿ, ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು, ಬಹು ಪ್ರಕಾರವಾಗಿ ಪೂಜಿಸಿ, ತನ್ನ ಮಗನ ವೃತ್ತಾಂತವೆಲ್ಲವನ್ನೂ ತಿಳುಹಿಸಿದನು. ಆ ಮುನೀಂದ್ರನು ಸಂತೋಷಪಡುತ್ತ ಅವನು ಮಾಡಿದ ಪೂಜೆಯನ್ನು ಅಂಗೀಕರಿಸಿ ರಾಯನನ್ನು ನೋಡಿ '—ಇವೆಲ್ಲವನ್ನೂ ನಾನು ದಿವ್ಯ ದೃಷ್ಟಿಯಿಂದ ತಿಳಿದಿದ್ದೇನೆ; ಇನ್ನುಮೇಲೆ ನಿನ್ನ ಮಗನು ಇತರವಾದ ಅರಸುಗಳಿಗೆ ದುರ್ಲಭವಾದ ಶೌರ್ಯ ಪರಾಕ್ರಮಗಳನ್ನು ಹೊಂದಿ, ವಿರೋಧಿವರ್ಗಗಳನ್ನು ಜಯಿಸಿ ಕೀರ್ತಿಯನ್ನು ಸಂಪಾದಿಸುತ್ತಲಿದ್ದಾನೆ; ಮತ್ತು ದೇವ ಪ್ರಯುಕ್ತವಾದ ಶಸ್ತ್ರಾಸ್ತ್ರಗಳೂ ಆಯುಧ ವಿಶೇಷಗಳೂ ಪರ್ವತಗಳನ್ನು ಭೇದಿಸದೇ ಇರುವ ಪ್ರವಾಹದೋಪಾದಿಯಲ್ಲಿ ಈತನ ದೇಹವನ್ನು ಸೋಕಿದ ಮಾತ್ರದಿಂದಲೇ ವಿಫಲಗಳಾಗಿ ಹೋಗುತ್ತಲಿವೆ; ಇತರ ತೇಜಸ್ಸುಗಳನ್ನು ತಿರಸ್ಕರಿಸುವ ಸೂರ್ಯನೋಪಾದಿಯಲ್ಲಿ ತನ್ನ ಪ್ರತಾಪ ವಿಶೇಷದಿಂದ ಶತ್ರುಗಳನ್ನು ಅಡಗಿಸುತ್ತ ಸಕಲರಾಜ ಸಮೂಹಗಳಲ್ಲಿ ತಾನೇ ಅಗ್ರಗಣ್ಯನಾಗಿರುವನು; ಶತ್ರುರಾಯರು ಎಷ್ಟು ಬಲಪರಾಕ್ರಮಶಾಲಿಗಳಾದರೂ ಈತನ ಕೂಡೆ ಹೋರಿದರೆ ಕಾಡುಕಿಚ್ಚಿನಲ್ಲಿ ಬಿದ್ದ ಪತಂಗದ ಹುಳಗಳೋಪಾದಿಯಲ್ಲಿ ವಿನಾಶವನ್ನೈದುವರು; ವರ್ಷಾಕಾಲದಲ್ಲಿ ಪ್ರವರ್ತಿಸುವ ನದೀ ಪ್ರವಾಹಗಳನ್ನು ಒಳಕೊಳ್ಳುವ ಸಮುದ್ರದೋಪಾದಿಯಲ್ಲಿ ಸಕಲರಾದ ಅರಸುಗಳ ವೈಭವವನ್ನು ಅಪಹರಿಸುತ್ತಲಿದ್ದಾನೆ; ಸಕಲ ಸಸ್ಯ ಸಮೃದ್ಧವಾದ ಭೂಮಂಡಲದಲ್ಲಿರುವ ನಾಲ್ಕು ವರ್ಣದವರನ್ನೂ ತನ್ನ ಭುಜಬಲದಿಂದ ಪರಿಪಾಲಿಸುತ್ತಿರಲು, ಪ್ರಾಣಾತ್ಮಕನಾದ ವಾಯುವಿಗೆ ಶರೀರಧಾರಿಗಳೋಪಾದಿಯಲ್ಲಿ ಸಕಲರಾದ ಅರಸುಗಳೂ ಈತನಿಗೆ ವಿಧೇಯರಾಗಿರುವರು; ಮತ್ತು ನಿನ್ನ ಕುಮಾರನು ತ್ರಿಪುರಾಂತಕನಾಗಿ ಮಹಾದೇವನಾದ ಶಂಕರನನ್ನು ಪ್ರತ್ಯಕ್ಷವಾಗಿ ಕಾಣುವನು—' ಎಂದು ನುಡಿದು ಚಂಡಕೌಶಿಕನು ಬೃಹದ್ರಥನಿಂದ ಕಳುಹಿಸಿಕೊಂಡು ಮಾಧ್ಯಾಹ್ನಿಕವನ್ನು ಮಾಡಬೇಕೆಂದು ಯಥೇಚ್ಛವಾಗಿ ಹೋದನು. ಬೃಹದ್ರಥನು ಪರಿಜನ ಸಮೇತನಾಗಿ ತನ್ನ ಪಟ್ಟಣಕ್ಕೆ ಬಂದು, ಒಂದು ಶುಭಮುಹೂರ್ತದಲ್ಲಿ ಜರಾಸಂಧನಿಗೆ ಮಗಧರಾಜ್ಯದಲ್ಲಿ ಪಟ್ಟಾಭಿಷೇಕವಂಮಾಡಿ, ಪತ್ನೀ ಸಮೇತನಾಗಿ ತಪೋವನಕ್ಕೆ ಹೋದನು. ಜರಾಸಂಧನು ಸಕಲರಾದ ಅರಸುಗಳು ತನ್ನ ಆಜ್ಞೆಯನ್ನು ಶಿರಸಾವಹಿಸಿ ನಡಕೊಳ್ಳುತ್ತಿರಲು, ಸಕಲವಾದ ಭೂಮಂಡಲವನ್ನೂ ಪರಿಪಾಲಿಸುತ್ತ ಸುಖವಾಗಿದ್ದನು. ಆ ಬಳಿಕ ತಪೋವನದಲ್ಲಿ ಬೃಹದ್ರಥನು ಭಾರ್ಯಾ ಸಮೇತನಾಗಿ ಅತಿಘೋರವಾದ ತಪಸ್ಸನ್ನು ಮಾಡಿ ಸ್ವರ್ಗಸೌಖ್ಯವನ್ನು ಪಡದನು. ಇಲ್ಲಿ ಜರಾಸಂಧನು ಚಂಡಕೌಶಿಕನ ವರಪ್ರಸಾದದಿಂದ ಪ್ರಾಪ್ತವಾದ ರಾಜ್ಯವನ್ನು ಪರಿಪಾಲಿಸುತ್ತಿರಲು, ಯುದ್ಧವಿಶಾರದರಾಗಿ, ಶಸ್ತ್ರಾಸ್ತ್ರಗಳಿಂದ ಮರಣ ರಹಿತರಾಗಿ, ಮಂತ್ರ ಪ್ರವೀಣರಾಗಿರುವ ಹಂಸ ಡಿಬಿಕರೆಂಬ ಅರಸುಗಳು ಜರಾಸಂಧನಿಗೆ ಪರಮ ಮಿತ್ರರಾಗಿ ಪ್ರವರ್ತಿಸುತ್ತಿದ್ದರು. ಆ ಹಂಸ ಡಿಬಿಕರೂ ಕಂಸನೂ ನನ್ನಿಂದ ಹತರಾದ ಬಳಿಕ ಜರಾಸಂಧನ ಹೆಣ್ಣುಮಕ್ಕಳಾದ ಕಂಸನ ಹೆಂಡತಿಗಳಿಬ್ಬರೂ ಜರಾಸಂಧನ ಸಮೀಪಕ್ಕೆ ಹೋಗಿ, ಕಂಸನ ವೃತ್ತಾಂತವನ್ನು ಹೇಳಿ ಅಳುತ್ತಿರಲು, ಆ ಜರಾಸಂಧನು ಬಂದು ಗದೆಯನ್ನು ತೆಗದುಕೊಂಡು ನೂರು ಸಾರಿ ಬಿರಬಿರನೆ ತಿರುಗಿಸಿ ನಮ್ಮಮೇಲೆ ಹಾಕಲು, ಆ ಗದೆಯು ಗಿರಿವ್ರಜ ಪಟ್ಟಣದ ದೆಸೆಯಿಂದ ತೊಂಭತ್ತೊಂಭತ್ತು ಗಾವುದ ದಾರಿ ಬಂದು ನಾವಿರುವ ಮಥುರಾ ಪಟ್ಟ

ಣದ ಸಮೀಪದಲ್ಲಿ ಬಿತ್ತು ; ಅದರ ದಾರಿಯನ್ನು ಪಟ್ಟಣದಲ್ಲಿರುವ ಜನರು ಅರಿಯರು ; ಅದು ಮೊದಲು ಜರಾಸಂಧನಿಗೂ ನಮಗೂ ವಿರೋಧ ಬಂದು ಪ್ರಾಪ್ತವಾಯಿತು ; ಅಂಥಾ ಬಲಪರಾಕ್ರಮಶಾಲಿಯಾದ ಜರಾಸಂಧನೂ ಹಂಸಡಿಬಿಕರೂ ಕೂಡಿದರೆ ಮೂರು ಲೋಕಗಳನ್ನೂ ಜಯಿಸುವರೆಂದು ಮೊದಲೇ ಹೇಳದ್ದುಂಟಲ್ಲ ; ಇಂಥಾ ಪ್ರತಾಪಶಾಲಿಯಾದ ಜರಾಸಂಧನು ಕುಕುರಾಂಧಕ ವೃಷ್ಣಿ ಮೊದಲಾದ ಅರಸುಗಳಿಗೆ ನಯೋಪಾಯದಿಂದ ಅಸಾಧ್ಯನಾದ್ದರಿಂದ ನಾನು ಉಪೇಕ್ಷೆಯನ್ನು ಮಾಡಿದೆನು.’’

## ೨೧ನೇ ಅಧ್ಯಾಯ.—ಜರಾಸಂಧ ವಧ ಪರ್ವಶೇಷ.

‘‘ ‘ಎಲೈ ಧರ್ಮರಾಯನೆ, ಅಂಥಾ ಬಲಪರಾಕ್ರಮಶಾಲಿಗಳಾದ ಹಂಸ ಡಿಬಿಕರೂ ಕಂಸನೂ ಆತನಿಗೆ ಬಡಹುಟ್ಟಿದ ಸುನಾಮನೂ ನನ್ನಿಂದ ಯುದ್ಧದಲ್ಲಿ ಹತರಾದ್ದರಿಂದ ರಕ್ಕೆಗಳಿಲ್ಲದಿರುವ ಕುಲಶೈಲದೋಪಾದಿಯಲ್ಲಿರುವ ಜರಾಸಂಧನನ್ನು ಈಗ ಕೊಲ್ಲುವದಕ್ಕೆ ಅತಿ ಸುಲಭವಾಗಿರುವದು ; ಯುದ್ಧರಂಗದಲ್ಲಿ ಮಗಧೇಶ್ವರನನ್ನು ಜಯಿಸುವದಕ್ಕೆ ಸುರಾಸುರರಿಗೂ ಅಳವಲ್ಲ ; ಬಾಹು ಯುದ್ಧದಲ್ಲಿ ಆತನನ್ನು ಕೊಲ್ಲುವದಕ್ಕೆ ಶಕ್ಯವಲ್ಲ ; ಭುಜಬಲಸಂಪನ್ನನಾದ ಭೀಮಸೇನನು, ನೀತಿ ವಿಧಾನಜ್ಞನಾದ ನಾನು, ನಮ್ಮಿಬ್ಬರನ್ನೂ ಕಾಪಾಡುವದಕ್ಕೆ ಧನುರ್ವಿದ್ಯಾವಿಶಾರದನಾದ ಅರ್ಜುನನೂ ಕೂಡಿದರೆ ಅಗ್ನಿತ್ರಯದೋಪಾದಿಯಲ್ಲಿ ಪ್ರಜ್ವಲಿಸಿ ಬೃಹದ್ರಥನ ಮಗನನ್ನು ಕೊಂದುಹಾಕುತಲಿಧೇವೆ ; ನಾವು ಮೂರು ಮಂದಿಯೂ ಕೂಡಿ ಏಕಾಂತದಲ್ಲಿ ಕರದರೆ ಅಭಿಮಾನಶಾಲಿಯಾದ್ದರಿಂದ ತಪ್ಪಿಸಿಕೊಳ್ಳದೆ ನಮ್ಮ ಮೂರು ಮಂದಿಯೊಳಗೆ ಯಾರಸಂಗಡಲಾದರೂ ಯುದ್ಧಕ್ಕೆ ಬರುತಲಿಧಾನೆ ; ವಿಶೇಷವಾಗಿ ಸಾಧಕವನ್ನು ಮಾಡಿ ಭುಜಬಲಶಾಲಿಯಾದ್ದರಿಂದ ಭೀಮಸೇನನನ್ನು ಬಯಸುವನು ; ಇದು ನಿಶ್ಚಯವು ; ಹಾಗಾದರೆ ಲೋಕಗಳನ್ನು ನಾಶಮಾಡುವದಕ್ಕೋಸ್ಕರ ಯಮನು ಹ್ಯಾಗೆ ಸಮರ್ಥನೋ ಹಾಗೆ ಭೀಮನು ತನ್ನ ಮೇಲೆ ಪೆಟ್ಟು ಬೀಳದಹಾಗೆ ಮಾಡಿಕೊಂಡು ಜರಾಸಂಧನನ್ನು ಸಂಹರಿಸುವನು ; ಈಪ್ರಕಾರದಲ್ಲಿ ನುಡಿಯುವ ನನ್ನ ವಾಕ್ಯಗಳಲ್ಲಿ ವಿಶ್ವಾಸವಿದ್ದರೆ ಭೀಮಾರ್ಜುನರನ್ನು ನನ್ನ ಸಂಗಡ ಕಳುಹಿಸು ; ಶತ್ರುವನ್ನು ಜಯಿಸಿ ನಿನ್ನ ತಮ್ಮಂದರನ್ನು ತಿರುಗಿ ಕರಕೊಂಡು ಬರುತಲಿಧೇನೆ ’ ಅಂದನು. ಆ ವಾಕ್ಯವನ್ನು ಕೇಳಿ ಧರ್ಮರಾಯನು ಯುದ್ಧವನ್ನು ಮಾಡಬೇಕೆಂಬ ಸಂತೋಷದಿಂದ ಉಬ್ಬುತ್ತಲಿರುವ ಭೀಮಾರ್ಜುನರನ್ನು ನೋಡಿ ಕೃಷ್ಣಸ್ವಾಮಿಯಂ ಕುರಿತು ‘ ಎಲೈ ಕಂಸಮರ್ದನನೆ, ಹೀಗೆ ನೀನು ಹೇಳಬಹುದೆ ? ಈ ಪಾಂಡುವಂಶಕ್ಕೆ ನೀನು ಅಧೀಶ್ವರನು ; ನಿನ್ನನ್ನು ಆಶ್ರಯಿಸಿರುವ ನಾವು ನಿನ್ನ ವಾಕ್ಯಗಳನ್ನು ಕೇಳದೆ ಹೋಗುವದು ಯಾವಾಗಲೂ ಇಲ್ಲ ; ನಿನ್ನ ಕಟಾಕ್ಷವು ಯಾವ ಪುರುಷನಲ್ಲಿರುವದೋ ಆತನ ಮನೆಯು ಲಕ್ಷ್ಮೀನಿವಾಸವಾಗಿರುವದು ; ನಿನ್ನ ದಯೆ ಯಾರಲ್ಲಿಲ್ಲದೆ ಇರುವದೊ ಆತನು ದರಿದ್ರಕ್ಕೆ ಪಾತ್ರನಾಗುವನು ; ನಾವು ನಿನ್ನ ಬುದ್ಧಿಮಾರ್ಗದಲ್ಲಿರುವದ್ದರಿಂದ ಜರಾಸಂಧನು ಹತನಾದನೆಂದೂ ಸಕಲರಾಜ ಲೋಕಗಳಿಗೂ ಶೆರೆಗಳು ತೀರಿದವೆಂದೂ ರಾಜಸೂಯವನ್ನೂ ಮಾಡಿದೆನೆಂದೂ ನನ್ನ ಮನಸ್ಸಿನಲ್ಲಿ ನಂಬುತ್ತೇನೆ ; ಇದು ನನ್ನನ್ನು ಸಂರಕ್ಷಿಸಿದಮಾತ್ರವೇ ಅಲ್ಲ ; ಸಕಲ ಲೋಕಗಳನ್ನೂ ಸಂರಕ್ಷಿಸುವದಾದ್ದರಿಂದ ಕಾರ್ಯವನ್ನು ತಡಮಾಡದೆ ಶೀಘ್ರವಾಗಿ ಮಾಡು ; ಧರ್ಮಕಾಮಾರ್ಥರಹಿತನಾಗಿ ರೋಗಿಯಾದ ದರಿದ್ರನೋಪಾದಿಯಲ್ಲಿ ನಿಮ್ಮ ಮೂರುಮಂದಿಯನ್ನು ಬಿಟ್ಟು ನಾನು ಹ್ಯಾಗಿರುವೆನು ! ಈ ಕೃಷ್ಣಾರ್ಜುನರು ಅನ್ಯೋನ್ಯವಗಲಿಬಿಟ್ಟಿರಲಾರರು ; ಆಲೋಚನೆಯನ್ನು ಮಾಡಿದರೆ ಹದಿನಾಲ್ಕು ಲೋಕಗಳಲ್ಲಿಯೂ ನಿಮಗೆ ಅಸಾಧ್ಯವಾದದ್ದಿಲ್ಲ ; ಬಲಪರಾಕ್ರಮಶಾಲಿಯಾದ ಭೀಮನಿಗೆ ಇಂಥಾವರ ಸಹಾಯವಾದರೆ ಈತನಿಂದ ಆಗದಿರುವ ಕಾರ್ಯವುಂಟೆ ! ಸಮರ್ಥನಾದವನು ಕೂಡಿಸಿದ ಬಲದಿಂದ ಕಾರ್ಯವಾಗುವದು ; ಆ ಸಮಸ್ತ ಬಲವನ್ನು ನಡಸುವವನಿಲ್ಲದಿದ್ದರೆ ಕಾರ್ಯಹಾನಿಯೇ ಬರುವದು ; ಹಳ್ಳದದಾರಿಯನ್ನು ತಿಳಿದು ನೀರನ್ನು ತರುವಹಾಗೆ ಶತ್ರುವರ್ಗದ ಮರ್ಮಗಳನ್ನು ತಿಳದು ಸಮರ್ಥನಾದವನು ಸೇನೆಗಳನ್ನು ನಡೆಸುವನು ; ಆದ್ದರಿಂದ ಕಾರ್ಯವು ಕೈಕೂಡುವದಕ್ಕೆ ನಾವು ಪ್ರಯತ್ನಮಾಡುವಲ್ಲಿ ಸಮ

ರ್ಥನಾಗಿ ಪುರುಷೋತ್ತಮನಾಗಿ ಜಗತ್ಪ್ರಸಿದ್ಧನಾಗಿ ನೀತಿವಂತನಾಗಿ ಪ್ರಜ್ಞಾಶಾಲಿಯಾಗಿ ಬಲೋಪಾಯ ವಿಶಾರದನಾಗಿ ಗೋವಿಂದನಾದ ನಿನ್ನನ್ನು ಆಶ್ರಯಿಸುತ್ತಲಿದ್ದೇವೆ; ನಯಭಯ ಪರಾಕ್ರಮ ಸಂಪನ್ನನಾದ ಕೃಷ್ಣಸ್ವಾಮಿಯನ್ನು ಮುಂದಿಟ್ಟುಕೊಂಡು ಅರ್ಜುನನು, ಅರ್ಜುನನನ್ನು ಅನುಸರಿಸಿಕೊಂಡು ಭೀಮನು, ಇರಬೇಕು; ನೀವಷ್ಟು ಮಂದಿಯೂ ಹಾಗೆ ಮಾಡಿ ವಿಜಯವನ್ನೈದಿರಿ!' ಎಂದು ಹರಸಿ ಕಳುಹಿಸಿದನು. ಅವರು ಧರ್ಮರಾಯನ ಆಜ್ಞೆಯನ್ನು ತೆಗದುಕೊಂಡು ಸ್ನಾತಕವ್ರತಧಾರಿಗಳಾದ ಬ್ರಾಹ್ಮಣವೇಷವನ್ನು ಧರಿಸಿ, ಭೀಮಾರ್ಜುನರು ಕೃಷ್ಣಸ್ವಾಮಿ ಸಹಿತರಾಗಿ ಮಗಧದೇಶೋನ್ಮುಖರಾಗಿ ನಡೆಯುವ ಸಮಯದಲ್ಲಿ ಕೋಪಾಟೋಪದೀಪಿತರಾಗಿ ತೇಜೋವಿರಾಜಮಾನರಾಗಿ ಮೂರು ಮೂರ್ತಿಗಳಾಗಿ ಸೂರ್ಯ ಚಂದ್ರಾಗ್ನಿಗಳೋಪಾದಿಯಲ್ಲಿ ಪ್ರಕಾಶಿಸುತ್ತಿದ್ದರು.

"ಆ ಬಳಿಕ ಧರ್ಮರಾಯನು ಧರ್ಮಾರ್ಥಕಾಮಗಳನ್ನೂ ಲೌಕಿಕ ಕಾರ್ಯಗಳನ್ನೂ ತಿಳಿದಿರುವ ಬುದ್ಧಿವಂತರಾಗಿ ಹಿತರಾಗಿರುವ ವಾಸುದೇವನು ಭೀಮನು ಅರ್ಜುನನು ಇವರು ಮೂರುಮಂದಿಯೂ ಒಂದೇ ಕಾರ್ಯವನ್ನು ಹಿಡಿದು ಹೋದವರಾದ್ದರಿಂದ ಯಾವ ರೀತಿಯಿಂದಲಾದರೂ ಜರಾಸಂಧನು ಹತನಾಗುತಲಿದ್ದಾನೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿದನು. ಕೇಳು ಜನಮೇಜಯನೇ, ಆ ಬಳಿಕ ಈ ಮೂರುಮಂದಿಯೂ ಕುರು ದೇಶದಿಂದ ಹೊರಟು ಕುರುಜಾಂಗಲಕ್ಕೆ ಹೋಗಿ, ಅಲ್ಲಿಂದ ಪದ್ಮ ಸರೋವರ ಪ್ರಾಂತ್ಯಕ್ಕೆ ಹೋಗಿ, ಕಾಲಕೂಟವನ್ನು ದಾಟಿ, ರಮ್ಯವಾದ ಸರಯೂ ನದಿಗೆ ಹೋಗಿ, ಪೂರ್ವ ಕೋಸಲ ದೇಶವನ್ನು ಪ್ರವೇಶಿಸಿ, ಗಂಡಕಿ ಅನುರಾಗೆ ಯೆಂಬ ನದಿಗಳನ್ನು ಸದಾ ನೀರಯೆಂಬ ನದಿಯನ್ನು ದಾಟಿ, ಏಕಪರ್ವತದಲ್ಲಿನ್ನ ಬಹು ನದಿಗಳನ್ನು ದಾಟಿ, ಮಿಥಿಲಾ ಪಟ್ಟಣಕ್ಕೆ ಹೋಗಿ, ಮತ್ತು ಅನೇಕ ನದಿಗಳನ್ನೂ ಗಂಗೆಯನ್ನೂ ಶೋಣಭದ್ರೆಯನ್ನೂ ದಾಟಿ, ಮೂಡಣಮುಖವಾಗಿ ನಡೆದು ಮಗಧದೇಶವನ್ನು ಹೊಕ್ಕು ಗೋಗಣ ಸಮಾಕೀರ್ಣವಾಗಿ ಜೇನುತುಪ್ಪವುಳ್ಳದ್ದಾಗಿ ಶುಭ ವೃಕ್ಷ ಸಮೇತವಾದ ಗೋರಥವನ್ನು ಸೇರಿ, ಗಿರಿವ್ರಜ ಪಟ್ಟಣವನ್ನು ನೋಡಿದರು."

---

## ೨೨ನೇ ಅಧ್ಯಾಯ.—ಜರಾಸಂಧ ವಧ ಪರ್ವ.

"ಕೇಳು ಜನಮೇಜಯನೇ, ಆ ಬಳಿಕ ಕೃಷ್ಣಸ್ವಾಮಿಯು ಭೀಮಾರ್ಜುನರನ್ನು ನೋಡಿ 'ಈ ಪಟ್ಟಣವು ಪಶು ಸಮೂಹದಿಂದ ಕೂಡಿ, ಮಣಿಮಯಗಳಾದ ಮನೆಗಳಿಂದ ಒಪ್ಪಿ, ಆರೋಗ್ಯಕರವಾಗಿ ಶುಭಪ್ರದವಾಗಿ ಸ್ವಾದೋದಕ ಪರಿಪೂರ್ಣವಾದ ಕೆರೆಗಳಿಂದಲೂ ಪುಷ್ಪ ಫಲ ಸಮೃದ್ಧಿಗಳಿಂದಲೂ ಒಪ್ಪುತ್ತಲಿರುವ ವೃಕ್ಷಗಳಿಂದಲೂ ಉದ್ಯಾನ ವನಗಳಿಂದಲೂ ಮತ್ತು ನಾನಾವಸ್ತು ವಿಶೇಷಗಳಿಂದಲೂ ಶೋಭಿತವಾಗಿದೆ; ಮತ್ತು ವಿಪುಲವು ವಾರಾಹವು ವೃಷಭವು ಚೈತ್ಯಕವು ಋಷಿಗಿರಿ ಎಂಬ ನಾಮಧೇಯಗಳಿಂದ ಪ್ರಸಿದ್ಧಗಳಾಗಿ, ಅತಿಶೀತಳವಾದ ವೃಕ್ಷಗಳಿಂದ ಮನೋಹರವಾಗಿ, ಸಂಚರಿಸುವದಕ್ಕೆ ಯೋಗ್ಯವಾದ ಪರ್ವತಗಳು ಗಿರಿವ್ರಜ ಪಟ್ಟಣಕ್ಕೆ ಪ್ರಾಕಾರಗಳಾಗಿ ತೋರುತ್ತಲಿವೆ; ದಿವ್ಯವಾದ ಪರಿಮಳವುಳ್ಳ ಪುಷ್ಪಗಳಿಂದ ರಮ್ಯಗಳಾದ ಕೊಂಬುಗಳಿಂದ ಒಪ್ಪಿರುವ ಲೊದ್ದುಗಳ ಮರಗಳು ಆ ಪರ್ವತಗಳನ್ನು ಸುತ್ತಿಕೊಂಡಿವೆ? ಯತಿಗಳು ಮುನಿಗಳು ವೃಷಭನು ತಮಾಲನು ಮತ್ತು ಅನೇಕ ಗಂಧರ್ವ ನಾಗೇಂದ್ರರು ಅಲ್ಲಿ ಸಂತೋಷದಿಂದ ವಾಸಮಾಡಿಕೊಂಡಿರುವರು; ಕಕ್ಷಿವಂತನೆಂಬ ಮುನೀಶ್ವರನ ತಪೋಮಹತ್ವದ್ದೆಸೆಯಿಂದ ಅಲ್ಲಿರುವ ಕೆರೆಗಳೆಲ್ಲಾ ಪುಣ್ಯ ತೀರ್ಥಗಳಾಗಿ ತಪೋವನಗಳೆಂಬ ಹೆಸರುಗಳಿಂದ ಪ್ರಸಿದ್ಧಗಳಾಗಿರುವವು; ಅಲ್ಲಿ ದೀರ್ಘತಮನೆಂಬ ಋಷೀಶ್ವರನು ತನ್ನ ಹೆಂಡತಿಯಲ್ಲಿ ಗೌತಮನು ಮೊದಲಾದ ಮಕ್ಕಳನ್ನು ಹುಟ್ಟಿಸಿ, ಉಶೀನರಿಯೆಂಬ ಶೂದ್ರ ಸ್ತ್ರೀಯಲ್ಲಿ ಕಕ್ಷಿವಂತನು ಮೊದಲಾದ ಮಕ್ಕಳನ್ನು ಹುಟ್ಟಿಸಿದನು; ಗೌತಮನು ಮಗಧವಂಶದವರಿಗೆ ಐಶ್ವರ್ಯವನ್ನು ಕೊಟ್ಟು ವಂಶವು ಅಭಿವೃದ್ಧಿಯಾಗುವರೀತಿಗೆ ಅನುಗ್ರಹವನ್ನು ಮಾಡಿದನು; ಅಲ್ಲಿ ಅಂಗ ವಂಗ ಮೊದಲಾದ ಮಹಾ ಬಲಶಾಲಿಗಳಾದ ಅರಸುಗಳು ಗೌತಮನ ಅನುಗ್ರಹವನ್ನು ಪ

ಜಮು ಆತನ ಆಶ್ರಮದಲ್ಲಿ ಸುಖವಾಗಿದ್ದರು ; ಗೌತಮನ ಆಶ್ರಮದಲ್ಲಿ ಮತ್ತಿ ಮರಗಳೂ ಲೊದ್ದುಗ ಹೊನ್ನೆ ಸುರಹೊನ್ನೆ ವೃಕ್ಷಗಳ ಪಜ್ತಿಗಳೂ ಪ್ರಕಾಶಿಸುತ್ತಲಿರುವವು; ಅಲ್ಲಿ ಅರ್ಬುದನು ಶಕ್ರವಾಪಿಯು ಎಂಬ ಎರಡು ಸ್ಪರ್ಪಗಳು ಶತ್ರುಸಂಹಾರಕಗಳಾಗಿರುವವು; ಮಣಿನಾಗನೆಂಬ ಸರ್ಪಶ್ರೇಷ್ಠನು ತನ್ನ ಮಣಿ ಸಂರಕ್ಷಣಾರ್ಥವಾಗಿ ಮೇಘಗಳಿಗಿಂತಲೂ ಅತ್ಯುನ್ನತವಾಗಿ ನಾಲ್ಕು ಬಾಗಲುಗಳುಳ್ಳಂಥಾ ಒಂದು ಉಪ್ಪರಿಗೆಯನ್ನು ಈ ಮಗಧ ದೇಶದಲ್ಲಿ ಕಟ್ಟಿಸಿರುವನು; ಮಹಾ ಶೇಷನ ಮಗನೂ ಮಣಿಯೂ ಅಲ್ಲಿ ಅನುಗ್ರಹ ಮಾಡಿರುವರು, ಮಣಿಯೆಂಬ ಸರ್ಪಶ್ರೇಷ್ಠನ ದರ್ಶನದಿಂದ ಸಕಲ ಜನರೂ ಶುಭಗಳನ್ನೈದುವರು. ನಾವು ಶೀಘ್ರವಾಗಿ ಹೋಗಿ ಜರಾಸಂಧನು ತನಗೆ ಅಭೀಪ್ಸಿತವಾದ ಅರಸುಗಳನ್ನು ವಧೆಮಾಡುವದಕ್ಕಿಂತ ಮೊದಲೆ ಆತನನ್ನು ನಿಗ್ರಹಿಸಬೇಕು ’ ಎಂದು ಒಬ್ಬರೊಬ್ಬರು ಆಲೋಚಿಸುತ್ತ ಆ ವೀರಾಗ್ರೇಸರರು ಇತರಜನ ದುರವಗಾಹವಾಗಿ ಸಕಲ ಸಂಪತ್ತುಗಳಿಂದ ಸಮೃದ್ಧಿಯಾಗಿ ನಾಲ್ಕು ಜಾತಿ ಜನರಿಂದ ಒಪ್ಪುತ್ತಲಿರುವ ಗಿರಿವ್ರಜ ಪಟ್ಟಣದಲ್ಲಿ ವೀರಭಟ ಸಮಾಕೀರ್ಣವಾದ ಪಟ್ಟಣದ ಬಾಗಲನ್ನು ಪ್ರವೇಶಿಸದೆ ಮಾರ್ಗಾಂತರದಿಂದ ಹೋದರು. ಮಾಂಸವೇ ಆಹಾರವಾಗಿ ಉಳ್ಳ ಮಾಷ ಎಂಬ ಹೆಸರುಳ್ಳ ವೃಷಭವನ್ನು ಕೊಂದು, ಅದರ ಚರ್ಮದಿಂದ ಮೂರು ಭೇರಿಗಳನ್ನು ಮಾಡಿ, ಪ್ರತಿ ದಿವಸವೂ ಜರಾಸಂಧನು ಆ ಭೇರಿಗಳನ್ನು ಗಂಧ ಮಾಲ್ಯಾಕ್ಷತೆಗಳಿಂದ ಪೂಜಿಸುತ್ತಿರುವನು. ಆ ಭೇರಿಗಳು ವಿರೋಧಿಗಳಾದ ಕೃಷ್ಣ ಪಾಂಡವರು ಆ ಪಟ್ಟಣವನ್ನು ಪ್ರವೇಶಿಸಿದ್ದರಿಂದ ತಮ್ಮ ಸ್ವಭಾವಗುಣದಿಂದ ತಮಗೆ ತಾವೇ ಮಹಾಧ್ವನಿಯನ್ನು ಮಾಡಿದವು. ಅದನ್ನು ಕೇಳಿ ಅಲ್ಲಿರುವ ಯೋಧಶ್ರೇಷ್ಠರು ನಾನಾವಿಧಾಯುಧಹಸ್ತರಾಗಿ ಪಟ್ಟಣದ ಬಾಗಲಿಗೆ ಅಭಿಮುಖವಾಗಿ ನಡದರು. ಆ ಬಳಿಕ ಕೃಷ್ಣಾರ್ಜುನ ಭೀಮರು ಮೂರುಮಂದಿಯೂ ಗಂಧ ಮಾಲ್ಯಾಲಂಕೃತವಾಗಿ ನಾನಾ ವೃಕ್ಷಸಂಕೀರ್ಣವಾಗಿ ಅತಿವಿಶಾಲವಾಗಿರುವ ಚೈತ್ಯಕಶೈಲ ಶಿಖರವನ್ನು ತಮ್ಮ ಭುಜಬಲದಿಂದ (ಜರಾಸಂಧನ ಶಿರಸ್ಸನ್ನೋ? ವೇದಿಯಲ್ಲಿ) ಕಿತ್ತು ಹಾಕಿದರು. ಅಲ್ಲಿ ರಾಜಪುರೋಹಿತರು ಇದು ದುರ್ನಿಮಿತ್ತವೆಂದು ತಿಳಿದು, ಅದಕ್ಕೆ ಪ್ರತೀಕಾರವಾಗಿ ಶಾಂತಿ ಹೋಮಗಳನ್ನು ಮಾಡಿ ಜರಾಸಂಧನನ್ನು ಪಟ್ಟಣಕ್ಕೆ ಪ್ರದಕ್ಷಣವನ್ನು ಮಾಡಿಸಿದರು.

“ಕೇಳು ಜನಮೇಜಯನೆ, ಆ ಬಳಿಕ ಯೋಧಾಗ್ರೇಸರರಾದ ಶ್ರೀಕೃಷ್ಣ ಭೀಮಾರ್ಜುನರು ಸಕಲವಸ್ತು ಪರಿಪೂರ್ಣವಾದ ಅಂಗಡೀ ಬೀದಿಗೆ ಹೋಗಿ, ಕರ್ಪೂರ ಕುಂಕುಮ ಕಸ್ತೂರಿ ಮೊದಲಾದ ಪರಿಮಳ ದ್ರವ್ಯಗಳನ್ನೂ ಪುಷ್ಪಮಾಲಿಕೆಗಳನ್ನೂ ಬಲಾತ್ಕಾರದಿಂದ ತೆಗದುಕೊಂಡು ಬೇಕಾದಷ್ಟು ಧರಿಸಿಕೊಂಡು, ಅಲ್ಲಲ್ಲಿ ವಿಶ್ರಮಿಸುತ್ತ ಮಂದಗಮನದಿಂದ ಗೋಸ್ಥಾನವನ್ನು ಹುಡುಕಿಕೊಂಡು ಹೋಗುತ್ತಲಿರುವ ಸಿಂಹಗಳೋಪಾದಿಯಲ್ಲಿ ಜರಾಸಂಧನ ಮನೆಯನ್ನು ಪ್ರವೇಶಿಸುವಾಗ—ಆಜಾನುಬಾಹುಗಳಾಗಿ ಅತಿ ವಿಶಾಲವಾದ ವಕ್ಷಸ್ಥಲವುಳ್ಳಂಥಾವರಾಗಿ ಗಂಧ ಪುಷ್ಪಾಲಂಕೃತವಾದ ಎದೆಗಳನ್ನು ಬಿಟ್ಟು ಬರುವ ಭದ್ರಗಜಗಳೋಪಾದಿಯಲ್ಲಿ ಒಪ್ಪುತ್ತಲಿರುವ ಕೃಷ್ಣಭೀಮಾರ್ಜುನರನ್ನು ನೋಡಿ ಗಿರಿವ್ರಜ ಪಟ್ಟಣದಲ್ಲಿರುವ ಜನಗಳು ಆಶ್ಚರ್ಯಪಡುತ್ತಿದ್ದರು. ಇವರು ಕಕ್ಷ್ಯಾಂತರಗಳನ್ನು ದಾಟಿ, ಅಂತಃಪುರದ ಬಾಗಲಲ್ಲಿ ನಿಂತು ‘ ಎಲೈ ಮಹಾರಾಯನೆ ’ ಎಂದು ಗಟ್ಟಿಯಾಗಿ ಕೂಗಿ ಏಕವಚನಗಳಿಂದ ಕರೆದರು. ಸ್ನಾತಕ ವ್ರತಶಾಲಿಗಳಾದ ಬ್ರಾಹ್ಮಣರು ಅರ್ಧರಾತ್ರಿ ಸಮಯದಲ್ಲಿ ಬಂದರೇದೂ ಎದುರಾಗಿ ಹೋಗಿ ಪೂಜಿಸಬೇಕೆಂದೂ ಎಣಿಸಿ, ವ್ರತನಿಯಮವುಳ್ಳವನಾದ್ದರಿಂದ ಆ ಜರಾಸಂಧನು ಅವರ ವಾಕ್ಯವನ್ನು ಕೇಳಿ ಪ್ರತ್ಯುತ್ಥಾನವನ್ನು ಮಾಡಿ ಕುಶಲ ಪ್ರಶ್ನೆಯನ್ನು ಮಾಡಿದನು ; ಆ ಕಪಟ ಬ್ರಾಹ್ಮಣರು ಆತನನ್ನು ನೋಡಿ ಸ್ವಸ್ತಿವಚನಗಳನ್ನು ಹೇಳುತ್ತ, ಆತನ ಅಪ್ಪಣೆಯಿಂದ ಉಚಿತಾಸನಗಳಲ್ಲಿ ಕುಳಿತುಕೊಂಡರು; ಅಗ್ನಿತ್ರಯದೋಪಾದಿಯಲ್ಲಿ ನೋಡುವದಕ್ಕೆ ಅಶಕ್ಯವಾಗಿ ಪ್ರಕಾಶಿಸುತ್ತಲಿರುವ ಆ ಕಪಟ ಬ್ರಾಹ್ಮಣರನ್ನು ಅವರ ಕಪಟ ವೇಷವನ್ನು ನೋಡಿ ಸತ್ಯಸಂಧನಾದ ಜರಾಸಂಧನು ಇಂತೆಂದನು : ‘ ಸ್ನಾತಕ ವ್ರತದೀಕ್ಷಿತರಾದ ಬ್ರಾಹ್ಮಣರು ಬಹಿರ್ಮಾಲ್ಯಾಲಂಕೃತರಾದ್ದು ಈ ಲೋಕದಲ್ಲಿ ಎಲ್ಲಿಯೂ ನೋಡಲಿಲ್ಲ ; ಅದಲ್ಲದೆ ನಿಮ್ಮ ಹಸ್ತಗಳು ಹೆದೆಗಳನ್ನು ಸೆಳದು ಜಡ್ಡುಗಟ್ಟಿವೆ ; ನೀವು ಧೂಮವಸ್ತ್ರಗಳನ್ನು ಧರಿಸಿದ್ಧೀರಿ ; ಯಾವ ರೀತಿಯಲ್ಲೂ ನೀವು ಕ್ಷತ್ರಿಯರಾಗಿ ತೋರುತ್ತಿದ್ದೀರಿ ; ನಾವು ಬ್ರಾಹ್ಮಣರೆಂದು ಹೇಳುತ್ತಿದ್ಧೀರಿ ; ಚೈತ್ಯಪರ್ವತದ ಶಿಖರವನ್ನು ಕಿತ್ತು ನಿರ್ಭಯದಿಂದ

ಪಟ್ಟಣದ ಬಾಗಲನ್ನು ಬಿಟ್ಟು ಮಾರ್ಗಾಂತರದಿಂದ ಪಟ್ಟಣವನ್ನು ಹೊಕ್ಕು ನನ್ನ ಸನ್ನಿಧಾನಕ್ಕೆ ಬಂದ ಪ್ರಯೋಜನವೇನು? ಬ್ರಾಹ್ಮಣರಲ್ಲಿ ವಾಗ್ಬಲವು ವಿಶೇಷವಾಗಿರುವದಿಲ್ಲ! ನಾನು ಮಾಡಿದ ಪೂಜೆಗಳನ್ನು ಪ್ರೀತಿಯಿಂದ ತೆಗದುಕೊಳ್ಳುವದಿಲ್ಲ! ಇವೆಲ್ಲವನ್ನೂ ಯಥಾರ್ಥವಾಗಿ ವಿವರಿಸಿರಿ' ಅಂದನು. ವಾಗ್ವಿಶಾರದನಾದ ಕೃಷ್ಣಸ್ವಾಮಿಯು ಜರಾಸಂಧನನ್ನು ನೋಡಿ 'ಬ್ರಹ್ಮ ಕ್ಷತ್ರಿಯ ವೈಶ್ಯ ಜಾತಿಗಳೂ ಸ್ನಾತಕ ವ್ರತವನ್ನು ಆಚರಿಸಬಹುದು; ಅವರಲ್ಲಿ ವಿಶೇಷಗಳು ಅವಿಶೇಷ ನಿಯಮಗಳೂ ಉಂಟಾಗಿರುವವು; ಕ್ಷತ್ರಿಯರು ಸಂಪತ್ತುಗಳನ್ನು ಇಚ್ಛೈಸಿರುವದ್ದರಿಂದಲೂ ಗಂಧ ಪುಷ್ಪಗಳು ಲಕ್ಷ್ಮೀಕರಗಳಾದ್ದರಿಂದಲೂ ಧರಿಸಿದೆವು; ಕ್ಷತ್ರಿಯರು ಭುಜಬಲವನ್ನೇ ತೋರಿಸುವರೇ ಹೊರತಾಗಿ ವಾಗ್ಬಲವನ್ನು ತೋರಿಸರು; ಬ್ರಹ್ಮದೇವನು ಕ್ಷತ್ರಿಯರಿಗೆ ಭುಜಬಲವನ್ನು ಕೊಟ್ಟಿಧಾನೆ; ಅದು ನಿನಗೆ ಈಗಲೇ ತೋರುತ್ತಲಿದೆ; ಲೋಕದಲ್ಲಿ ಬಂಧುಗೃಹಕ್ಕೆ ಹೋಗುವಂಥಾವರು ಮಾರ್ಗದಿಂದ ಹೋಗಬೇಕು; ಶತ್ರುಗೃಹಗಳಿಗೆ ಹೋಗುವಂಥಾವರು ಅಮಾರ್ಗದಿಂದ ಹೋಗಬೇಕು; ಆದ್ದರಿಂದ ನಾವು ಈ ರೀತಿಯಿಂದ ಬಂದೆವು; ಬಂದು ಕಾರ್ಯವನ್ನು ಯೋಚಿಸಿ ಶತ್ರುಗೃಹಕ್ಕೆ ಬಂದಂಥಾವರು ಆತನು ಮಾಡಿದ ಪೂಜೆಗಳನ್ನು ಅಂಗೀಕರಿಸದೆ ಇರುವದೇ ಅವರಿಗೆ ವ್ರತವು' ಎಂದು ಕೃಷ್ಣಸ್ವಾಮಿಯು ಜರಾಸಂಧನಿಗೆ ಹೇಳಿದನು.

---

## ೨೨ನೇ ಅಧ್ಯಾಯ.—ಜರಾಸಂಧವಧಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಜರಾಸಂಧನು ಕೃಷ್ಣಸ್ವಾಮಿಯನ್ನು ನೋಡಿ 'ಎಲೈ ಬ್ರಾಹ್ಮಣೋತ್ತಮನೆ, ಯಾವರೀತಿಯಿಂದ ವಿಚಾರಿಸಿದರೂ ನೀವು ನಮಗೆ ಅಪಕಾರಮಾಡಿದ್ದೂ ನಾನು ನಿಮ್ಮಲ್ಲಿ ವಿರೋಧವನ್ನು ಆಚರಿಸಿದ್ದೂ ನನ್ನ ಮನಸ್ಸಿನಲ್ಲಿ ತೋರಲಿಲ್ಲ; ಹೀಗೆ ವೈರ ಲೇಶವೂ ಇಲ್ಲದಿರುವ ನನ್ನಲ್ಲಿ ನಿಷ್ಕಾರಣವಾಗಿ ದ್ವೇಷವನ್ನು ಪ್ರಕಟಮಾಡಿ ಶತ್ರುವಿನಲ್ಲಿ ನುಡಿಯುವಹಾಗೆ ನುಡಿಯುತ್ತಿದ್ಧೀರಿ; ಇದು ಸತ್ಪುರುಷರಿಗೆ ವಿಹಿತವೆ? ಅರ್ಥಧರ್ಮಗಳಿಗೆ ಹಾನಿಯನ್ನು ಮಾಡುವ ಪುರುಷನು ನಿರಪರಾಧಿಗಳಲ್ಲಿ ರಾಜಧರ್ಮವನ್ನು ಆಚರಿಸುವದನ್ನು ತಪ್ಪಿ ತನ್ನ ಕಾರ್ಯವನ್ನೇ ಮಾಡುವನು; ಅಂಥಾ ಕ್ಷತ್ರಿಯರಿಗೆ ಐಶ್ವರ್ಯವೂ ಪರಲೋಕವೂ ತೊಲಗಿ ಹೋಗುವವು; ಮೂರು ಲೋಕದವರೂ ಧರ್ಮಾರ್ಥಪರನಾಗಿ ಎಣಿಸುವ ನನ್ನನ್ನು ನೀವು ಅಪರಾಧಿ ಎಂದೆಣಿಸದಿದ್ದರೂ ಸುಮ್ಮನೇ ನಿಷ್ಠೂರವಾಗಿ ಹೇಳುತ್ತಿದ್ದೀರಿ' ಅಂದನು. ಶ್ರೀಕೃಷ್ಣಸ್ವಾಮಿಯು ಮಗಧಪತಿಯನ್ನು ನೋಡಿ 'ಲೋಕದಲ್ಲಿರುವ ಅರಸುಗಳನ್ನು ತಂದು ಸೆರೆಮನೆಯಲ್ಲಿ ಹಾಕಿ ಇನ್ನುಮೇಲೆ ಅಷ್ಟು ಮಂದಿಯನ್ನು ಈಶ್ವರನಿಗೆ ಬಲಿಯಾಗಿ ಕೊಡಬೇಕೆಂದೆಣಿಸಿದ್ದಿ; ಇದಕ್ಕಿಂತ ಅನುಚಿತ ಕೃತ್ಯವುಂಟೆ? ಆದ್ದರಿಂದ ಸಕಲರಾಜ ವಂಶೋದ್ಧಾರಕನಾದ ರಾಜಶ್ರೇಷ್ಠನು ತಮ್ಮ ಕ್ಷತ್ರಿಯ ಕುಲವನ್ನು ನಿರ್ವಹಿಸುವದಕ್ಕೋಸ್ಕರ ಕಳುಹಿಸಲು ಬಂದೆವು; ಮನುಷ್ಯ ಪಶುವನ್ನು ಯಾವ ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿದೆ; ಅದಲ್ಲದೆ ಬುದ್ಧಿಹೀನನಾದ್ದರಿಂದ ಕ್ಷತ್ರಿಯನಾದ ನೀನು ಕ್ಷತ್ರಿಯರನ್ನು ಪಶುವಾಗಿ ಮಾಡುವದಕ್ಕೆ ಯೋಚಿಸಿದೆ; ಧರ್ಮವಿಚಕ್ಷಣರಾದ ನಾವು ನಮ್ಮ ಮಹಾರಾಯನ ಅನುಮತಿಯಿಂದ ಇಲ್ಲಿಗೆ ಬಂದೆವು; ರಾಜವಂಶದಲ್ಲಿ ಹುಟ್ಟಿ ಸಮಸ್ತ ದೇಶಾಧೀಶ್ವರರನ್ನು ಹಿಂಸೆಮಾಡುವ ದುಷ್ಟಾತ್ಮನಾದ ನಿನ್ನನ್ನು ಶಿಕ್ಷಿಸಿ ಅರಸುಗಳನ್ನು ಬಿಡಿಸಬೇಕೆಂದೆಣಿಸಿ ಬಂದೆವು; ಈ ಲೋಕದಲ್ಲಿ ಬುದ್ಧಿಹೀನನಾದ ನೀನೊಬ್ಬನೇ ನಮ್ಮ ಆಜ್ಞೆಯನ್ನು ಮೀರಿದ್ದಿ; ಯಾವನು ಸತ್ಕುಲದಲ್ಲಿ ಹುಟ್ಟಿ ಸ್ವಧರ್ಮವನ್ನು ತಪ್ಪದೆ ಇರುವನೊ, ಆತನು ಸ್ವರ್ಗಭೋಗಗಳನ್ನು ಅನುಭವಿಸುವನಾದ್ದರಿಂದ ಸಮಸ್ತರಾದ ಅರಸುಗಳೂ ಯುದ್ಧ ಯಜ್ಞದಲ್ಲಿ ದೀಕ್ಷಿತರಾಗುವದು ಸ್ವರ್ಗಲೋಕ ಸುಖಕ್ಕಲ್ಲವೇ? ಯುದ್ಧಜಯವೂ ವಿಸ್ತಾರವಾದ ಕೀರ್ತಿಯೂ ಅತಿಘೋರವಾದ ತಪಸ್ಸೂ ಭಾರಾವಮಾರ್ಗವಾಗಿರುವವು; ಇಷ್ಟು ಗುಣಗಳೂ ಉಂಟಾಗಿರುವದರಿಂದ ದೇವೇಂದ್ರನು ಮೂರು ಲೋಕಗಳನ್ನೂ ಪರಿಪಾಲಿಸುತಲಿಧಾನೆ; ನೀನು ಬಹುಸೇನೆ ಇಧೆಯೆಂದೆಣಿಸಿ ಅರಸುಗಳನ್ನು ನಿರಾಕರಿಸುತ್ತಿದ್ದಿ; ನಿಜವಾಗಿ ನೋಡಿದರೆ ಅಷ್ಟು ಶಕ್ತಿಯುಂಟೆ? ಬಲಗರ್ವಿತನಾದ ಪುರುಷನು ತನಗೆ ಸಮಾನನಾದವನು ಮತ್ತೊಬ್ಬನುಂಟೆಂದು ಯಾವಾಗ ತಿಳಿಯುವನೋ, ಆಗ ಆತನಿಗೆ ಗರ್ವಭಂಗವಾಗುವದು; ಈಗ ನಿನಗೆ ಇನ್ನೊಂದು ಹಿತೋಪದೇಶವನ್ನು ಮಾಡುತ್ತಲಿಧೇನೆ

ಕೇಳು ; ಸಮಾನಪರಾಕ್ರಮಶಾಲಿಗಳನ್ನು ತೃಣೀಕರಿಸಿ, ಪುತ್ರ ಮಿತ್ರ ಕಳತ್ರ ಸಹಿತನಾಗಿ ಯಮನ ಪಟ್ಟಣಕ್ಕೆ ಯಾಕೆ ಹೋಗುತ್ತಿದ್ದಿ ! ಮೊದಲು ಗಂಭೋದ್ಭವನು ಕಾರ್ತವೀರ್ಯನು ಬೃಹದ್ರಥನು ಮೊದಲಾದ ದುಷ್ಟ ಮಹೀಪತಿಗಳು ದೊಡ್ಡವರನ್ನು ಅವಮಾನಮಾಡಿದವರಾದ್ದರಿಂದ ವಿನಾಶವನ್ನೈದಿದರು ! ನಾವು ಅತಿಥಿಗಳಾಗಿ ಬಂದ ಬ್ರಾಹ್ಮಣರೆಂದೆಣಿಸಬ್ಯಾಡ ; ನಾನು ಕಂಸಾಂತಕನಾದ ಕೃಷ್ಣನು ; ಇವರಿಬ್ಬರೂ ಶೌರ್ಯಧುರ್ಯರಾದ ಭೀಮಾರ್ಜುನರು ; ನಾವು ಯುದ್ಧಾರ್ಥಿಗಳಾಗಿ ಬಂದೆವು ; ನಿನಗೆ ಧೈರ್ಯವಿದ್ದರೆ ಯುದ್ಧಮಾಡು ; ಇಲ್ಲದಿದ್ದರೆ ಸೆರೆಹಾಕಿರುವ ಅರಸುಗಳನ್ನು ಬಿಟ್ಟು ಸುಖವಾಗಿರು ' ಅಂದನು.

“ ಕೇಳು ಜನಮೇಜಯನೆ, ಆ ವಾಕ್ಯಗಳನ್ನು ಕೇಳಿ ಜರಾಸಂಧನು ಕೋಪಾಟೋಪದೀಪಿತನಾಗಿ, ಕೃಷ್ಣಸ್ವಾಮಿಯನ್ನು ನೋಡಿ ‘ ಎಲೆ ಕೃಷ್ಣನೆ, ನನ್ನನ್ನು ನಿನ್ನಿಂದ ಹತರಾದ ಕಂಸ ಪ್ರಲಂಬ ಚಾಣೂರ ಮುಷ್ಟಿಕ ನರಕ ಕಾಲಯವನ ಪೂತನಿ ಮೊದಲಾದವರೊಡನೆ ಸಮಾನವಾಗಿ ಎಣಿಸಬೇಡ ; ಈಗ ನನ್ನಲ್ಲಿ ಕೆಲವು ಗುಣದೋಷಗಳನ್ನು ಎಣಿಸಿದೆಯಲ್ಲ ; ನೀನು ಗೊಲ್ಲರ ಕುಲದಲ್ಲಿ ಹುಟ್ಟಿ ನನ್ನ ಭುಜಾಟೋಪವನ್ನು ಸಹಿಸಲಾರದೆ ನಿನ್ನ ಜನ್ಮದೇಶವಾದ ಮಥುರಾಪಟ್ಟಣವನ್ನು ಬಿಟ್ಟು ಓಡಿಹೋಗಿ ಸಮುದ್ರಮಧ್ಯದಲ್ಲಿ ಮರೆಯಾಗಿರುವದನ್ನು ಸ್ವಲ್ಪವಾದರೂ ಎಣಿಸದೆ ಶರತ್ಕಾಲದ ಮೇಘದೋಪಾದಿಯಲ್ಲಿ ವ್ಯರ್ಥವಾಗಿ ಕೂಗುತ್ತಿದ್ದಿ ; ಅದು ಹಾಗಿರಲಿ ; ಉಗ್ರಸೇನನ ಮಗನಾಗಿ ಭೋಜಪತಿಯಾಗಿ ಬುದ್ಧಿವಂತನಾದ ಕಂಸನನ್ನು ಕೊಂದುಹಾಕಿದ ನಿನ್ನನ್ನು ಸಂಹರಿಸಿ ನನ್ನ ಹಗೆಯನ್ನು ತೀರಿಸಿಕೊಳ್ಳುತಲಿದ್ದೇನೆ ; ನಿನ್ನನ್ನು ಪುತ್ರ ಮಿತ್ರ ಸಹಿತವಾಗಿ ಯುದ್ಧದಲ್ಲಿ ಕೊಲ್ಲಬೇಕೆಂದು ಬಹುಕಾಲವೆಣಿಸಿರುವ ನನ್ನ ಮನೋರಥವು ನನ್ನ ಭಾಗ್ಯಾತಿಶಯದಿಂದ ಈ ಹೊತ್ತು ಸಫಲವಾಯಿತು ; ಉನ್ಮತ್ತರಾಗಿ ಬಾಲಕರಾದ ಭೀಮಾರ್ಜುನರೆಂಬ ಹುಲ್ಲೆಮರಿಗಳನ್ನು ಸಿಂಹದೋಪಾದಿಯಲ್ಲಿ ಕೊಂದುಹಾಕುತಲಿದ್ದೇನೆ ' ಎಂದು ನುಡಿದು ರೋಷಭೀಷಣಾಕಾರನಾಗಿ ಕೂಗುತ್ತಲಿರುವ ಜರಾಸಂಧನನ್ನು ನೋಡಿ ಸಕಲ ಭೂತಗಳೂ ಭಯಪಟ್ಟವು ! ಆ ಬಳಿಕ ಯದುಶ್ರೇಷ್ಠನಾದ ಕೃಷ್ಣಸ್ವಾಮಿಯು ಆತನನ್ನು ನೋಡಿ ‘ ಎಲೈ ಮಗಧಾಧಮನೆ ಇಷ್ಟು ಗರ್ವವ್ಯಾತಕ್ಕೆ ? ನಿನಗೆ ವಿಧೇಯರಾದ ಭೀಮಾರ್ಜುನರಿಂದ ಪರಿವಾರಸಹಿತನಾದ ನಿನ್ನನ್ನು ಈಗಲೇ ಕೊಲ್ಲಿಸುತ್ತಲಿದ್ದೇನೆ ; ಆ ಬಳಿಕ ಕೂಗುವೆ ; ಇನ್ನು ಮೇಲೆ ಅಂತಃಪುರಕ್ಕೆ ಹೋಗಬೇಕೆಂಬ ಇಚ್ಛೆಯನ್ನು ಬಿಡು ' ಅಂದನು. ಜರಾಸಂಧನು ಶ್ರೀಕೃಷ್ಣಸ್ವಾಮಿಯನ್ನು ನೋಡಿ ‘ ಯಾವ ಅರಸನ್ನಾದರೂ ಯುದ್ಧದಲ್ಲಿ ಜಯಿಸದೆ ಹಿಡಿತರಲಿಲ್ಲ ; ಈ ಪ್ರಕಾರದಿಂದ ಸಮಸ್ತ ಜನರೂ ನನ್ನಿಂದ ಪರಾಜಿತರಾದ್ದರಿಂದ ನನ್ನನ್ನು ಹೆದರಿಸುವಂಥಾವನ್ಯಾರು ? ಇಂಥಾ ವಿರೋಧಿಗಳನ್ನು ಹಿಡಿತಂದು ತನಗೆ ತೋರಿದ ರೀತಿಗೆ ಮಾಡುವದು ಭುಜಬಲ ಧುರಂಧರನಾದ ಕ್ಷತ್ರಿಯನಿಗೆ ಧರ್ಮವೆಂದು ನೀತಿ ಶಾಸ್ತ್ರಜ್ಞರು ಹೇಳುವದರಿಂದ ಇಷ್ಟದೇವತಾ ಪೂಜಾರ್ಥವಾಗಿ ಯುದ್ಧ ಮುಖದಲ್ಲಿ ಹಿಡಿತಂದ ಅರಸುಗಳನ್ನು ಪರಾಕ್ರಮಶಾಲಿಯಾದ ನಾನು ನಿನ್ನ ಮಾತುಗಳಿಗೆ ಬಿಡುವೆನೆ ? ಇನ್ನು ಇಂಥಾ ಮಾತುಗಳಿಂದ ಪ್ರಯೋಜನವೇನು ? ನೀವು ಸೇನಾಸಮೇತರಾಗಿ ಬಂದರೂ ಒಬ್ಬೊಬ್ಬರಾಗಿ ಬಂದರೂ ಕಡೆಗೆ ಮೂರು ಮಂದಿಯೂ ಬಂದರೂ ನಿಮ್ಮನ್ನು ಯುದ್ಧದಲ್ಲಿ ಜಯಿಸುತಲಿದ್ದೇನೆ ' ಎಂದು ನುಡಿದು, ಯುದ್ಧಸನ್ನದ್ಧನಾಗಿ ಕೌಶಿಕ ಚಿತ್ರಸೇನರೆಂಬ ಮಂತ್ರಿಗಳನ್ನು ಕರೆದು ತನ್ನ ಕುಮಾರನಾದ ಸಹದೇವನಿಗೆ ಪಟ್ಟವನ್ನು ಕಟ್ಟುವದಕ್ಕೆ ಕಟ್ಟುಮಾಡಿ, ಯುದ್ಧರಂಗದಲ್ಲಿ ತನಗೆ ಎರಡು ಭುಜಗಳೋಪಾದಿಯಲ್ಲಿದ್ದ ಹಂಸ ಡಿಂಭೀಕರನ್ನು ಸ್ಮರಿಸಿ ನಿಟ್ಟುಸುರುಗಳನ್ನು ಬಿಡುತ್ತ, ಸಮರಸನ್ನದ್ಧನಾಗಿ ನಿಂತನು. ಆ ಬಳಿಕ ಪುರುಷಶ್ರೇಷ್ಠನಾಗಿ ಶೌರ್ಯಧುರಂಧರನಾಗಿ ಸರ್ವಜ್ಞನಾದ ಕೃಷ್ಣಸ್ವಾಮಿಯು ಶಸ್ತ್ರಾಸ್ತ್ರಗಳ ದೆಸೆಯಿಂದ ಮರಣವಿಲ್ಲದ ರೀತಿಗೆ ಚಂಡಕೌಶಿಕ ಮುನೀಂದ್ರನು ಜರಾಸಂಧನಿಗೆ ಕೊಟ್ಟ ವರವನ್ನು ತಿಳಿದವನಾದ್ದರಿಂದ ಮಲ್ಲಯುದ್ಧದಲ್ಲಿ ಭೀಮನಿಂದ ಆತನನ್ನು ಕೊಲ್ಲಿಸಬೇಕೆಂದು ಮನಸ್ಸಿನಲ್ಲೆಣಿಸಿ ಸುಮ್ಮನೆ ಇದ್ದನು ” ಎಂದು ವೈಶಂಪಾಯನ ಮುನೀಂದ್ರನು ಜನಮೇಜಯರಾಯನಿಗೆ ವಿವರಿಸಿದನು.

## ೨೮ನೇ ಅಧ್ಯಾಯ.—ಜರಾಸಂಧವಧಪರ್ವಶೇಷ.

ಅನಂತರದಲ್ಲಿ ಜನಮೇಜಯರಾಯನು ವೈಶಂಪಾಯನ ಮುನೀಂದ್ರನನ್ನು ಕುರಿತು "ಎಲೈ ಮುನೀಂದ್ರನೆ, ಯದುಕುಲಾಗ್ರಗಣ್ಯನಾದ ಶ್ರೀ ಕೃಷ್ಣಸ್ವಾಮಿಗೂ ಜರಾಸಂಧನಿಗೂ ವೈರಬಂದ ರೀತಿಹ್ಯಾಗೆ? ಮಾಗಧನು ಕೃಷ್ಣಸ್ವಾಮಿಯನ್ನು ಹದಿನೆಂಟು ಸಾರಿ ಹ್ಯಾಗೆ ಓಡಿಸಿದನು? ಕಂಸನು ಜರಾಸಂಧನಿಗೆ ಹ್ಯಾಗೆ ಅಳಿಯನಾದನು? ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳಬೇಕು" ಎನಲು, ವೈಶಂಪಾಯನನು ಜನಮೇಜಯರಾಯನನ್ನು ನೋಡಿ ಇಂತೆಂದನು:

"ಎಲೈ ಜನಮೇಜಯರಾಯನೆ, ಬುದ್ಧಿಸಂಪನ್ನನಾಗಿ ಯದುವಂಶದಲ್ಲಿ ಹುಟ್ಟಿದ ವಸುದೇವನು ಉಗ್ರಸೇನನಿಗೆ ಮಂತ್ರಿಯಾಗಿದ್ದನು; ಆ ಉಗ್ರಸೇನನೆಂಬವನಿಗೆ ಜ್ಯೇಷ್ಠಪುತ್ರನಾಗಿ ಶೂರಾಗ್ರೇಸರನಾಗಿ ನಿಖಿಲ ಶಸ್ತ್ರಾಸ್ತ್ರವಿಶಾರದನಾದ ಕಂಸನು ಜರಾಸಂಧನ ಮಕ್ಕಳನ್ನು ರಾಜ್ಯವನ್ನೇ ಓಲಿಯಾಗಿ ಕೊಟ್ಟು ಮದುವೆಯಾದ್ದರಿಂದ ತನ್ನ ತಂದೆಯಾದ ಉಗ್ರಸೇನನನ್ನು ಸೆರೆಯಲ್ಲಿಕ್ಕಿ ಐಶ್ವರ್ಯ ಬಲಗರ್ವಿತನಾಗಿ ಅಖಂಡ ಭೂಮಂಡಲವನ್ನೂ ಪರಾಕ್ರಮದಿಂದ ಮಂತ್ರಿಸಹಿತನಾಗಿ ಪರಿಪಾಲಿಸುತ್ತಿದ್ದನು. ಉಗ್ರಸೇನನ ಮಂತ್ರಿಯಾದ್ದರಿಂದ ವಸುದೇವನಲ್ಲಿ ಅನಾದರಣೆಯನ್ನು ಮಾಡಿ ಧರ್ಮಮಾರ್ಗರಹಿತನಾಗಿದ್ದನು. ತನ್ನ ತಂಗಿಯಾಗಿ ದೇವಕನ ಮಗಳಾದ ದೇವಕೀದೇವಿಯನ್ನು ವಸುದೇವನಿಗೆ ಕೊಟ್ಟು ಮಹಾ ವೈಭವದಿಂದ ಮೆರೆಯಲು, ವಧೂವರರನ್ನು ರಥದಲ್ಲಿರಿಸಿ ತಾನೂ ಆ ರಥವನ್ನೇರಿಕೊಂಡು ಪಟ್ಟಣದಲ್ಲಿ ಮೆರವಣಿಗೆ ಮಾಡುವ ಸಮಯದಲ್ಲಿ 'ದೇವಕಿಯ ಎಂಟನೆಯ ಗರ್ಭದಲ್ಲಿ ಹುಟ್ಟುವ ಕುಮಾರನು ನಿನಗೆ ಮೃತ್ಯುವಾಗುವನು' ಎಂದು ಆತನನ್ನು ಕುರಿತು ಅಶರೀರ ವಚನ ಉಂಟಾಯಿತು. ಅದನ್ನು ಕೇಳಿ ಕಂಸನು ಬೆಚ್ಚಿಬಿದ್ದು ರಥದಿಂದ ಕೆಳಗೆ ಧುಮುಕಿ ಕತ್ತಿಯನ್ನು ಝಳಪಿಸುತ್ತ ಆ ದೇವಕೀದೇವಿಯನ್ನು ಹುಯಿದುಹಾಕುವದಕ್ಕೆ ಯೋಚಿಸಿದನು. ದುಷ್ಟಚಿತ್ತನಾದ ಆ ಕಂಸನನ್ನು ನೋಡಿ ಬುದ್ಧಿಸಂಪನ್ನನಾದ ವಸುದೇವನು 'ಸ್ತ್ರೀವಧೆ ಅಯುಕ್ತವೆಂದು ಸಕಲ ಶಾಸ್ತ್ರಗಳೂ ಹೇಳುತ್ತಲಿವೆ; ಅದಲ್ಲದೆ ನಿರಪರಾಧಿಯಾಗಿ ನಿನಗೆ ತಂಗಿಯಾದ ಇವಳನ್ನು ವ್ಯರ್ಥವಾಗಿ ಯಾಕೆ ಹುಯಿದು ಹಾಕಬೇಕು? ಇವಳಿಗೆ ಪ್ರಾಣಹಾನಿಯಿಲ್ಲದೇ ಇರುವ ಒಂದು ಉಪಾಯವನ್ನು ಹೇಳುತಲಿದೇನೆ; ಇವಳ ಎಂಟನೆಯ ಗರ್ಭದಲ್ಲಿ ಹುಟ್ಟುವ ಕುಮಾರನು ನಿನಗೆ ಶತ್ರುವಾಗುವನು; ಆ ಕುಮಾರನನ್ನು ಕೊಂದುಹಾಕಿದರೆ ನಿನಗೆ ಶುಭಗಳಾಗುವವು' ಎಂದು ಹೇಳಿದನು. ಆತನ ವಾಕ್ಯಗಳನ್ನು ಕಂಸನು ಅಂಗೀಕರಿಸಿದನು."

## ೨೯ನೇ ಅಧ್ಯಾಯ.—ಜರಾಸಂಧವಧಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಕೆಲವು ಕಾಲದಲ್ಲಿ ದೇವಕಿಯ ಗರ್ಭದಲ್ಲಿ ಸೂರ್ಯನೋಪಾದಿಯಲ್ಲಿ ಪ್ರಕಾಶಿಸುತ್ತಲಿರುವ ಆರುಮಂದಿ ಕುಮಾರಕರು ಕ್ರಮದಿಂದ ಹುಟ್ಟಿದರು; ಉಗ್ರಸೇನನ ಮಗನಾದ ಕಂಸನು ಅವರೆಲ್ಲರನ್ನೂ ಕೊಲ್ಲುತ್ತಾ ಬಂದನು; ಆ ಬಳಿಕ ದೇವಕಿಯು ಸಪ್ತಮ ಗರ್ಭವನ್ನು ಧರಿಸಲು, ಅದನ್ನು ತಿಳಿದು ಯಮನು ತನ್ನ ಮಾಯೆಯನ್ನು ಕರದು 'ಈ ಗರ್ಭವನ್ನು ವಸುದೇವನ ಹೆಂಡತಿಯಾದ ರೋಹಿಣಿಯ ಹೊಟ್ಟೆಯಲ್ಲಿ ನಿಲ್ಲಿಸು' ಎಂದು ಹೇಳಿದನು. ಆ ಮಾಯೆಯು ಹಾಗೆ ಮಾಡಲು ಆ ಏಳನೆ ಗರ್ಭದ ಕುಮಾರನು ಗರ್ಭಸಂಕರ್ಷಣವಾದ್ದರಿಂದ ಸಂಕರ್ಷಣನು—ಬಲಾಧಿಕನಾದ ಬಲದೇವನು ಎಂಬ ಹೆಸರುಗಳಿಂದ ಪ್ರಸಿದ್ಧನಾದನು; ದೇವಕಿಯ ಎಂಟನೆ ಗರ್ಭದಲ್ಲಿ ಸಕಲ ಲೋಕೇಶ್ವರನಾದ ವಾಸುದೇವನು ಪ್ರವೇಶಿಸಿರಲು, ಭೋಜದೇಶಾಧಿಪತಿಯಾದ ಕಂಸನು ದೇವಕಿ ವಸುದೇವರನ್ನು ಕಾವಲು ಮಾಡಿ ಇಡಿಸುವದಕ್ಕೆ ಉಗ್ರನೆಂಬ ಬ

ಬ್ಬ ಕ್ರೂರಕರ್ಮನನ್ನು ನಿಯಮಿಸಿದನು. ಆತನು ಮಹಾರ್ಘಟಿಯಿಂದ ಶೆರೆಮನೆಯ ಸಮೀಪಕ್ಕೆ ಬಂದು ಅಲ್ಲಿರುವ ಕಾವಲವರನ್ನು ಎಚ್ಚರವಾಗಿರುವಹಾಗೆ ಕಟ್ಟುಮಾಡಿ ತಿರುಗಿ ಹೋದನು. ಆ ಬಳಿಕ ಹತ್ತನೆ ಮಾಸದಲ್ಲಿ ಶ್ರೀಕೃಷ್ಣಸ್ವಾಮಿಯು ಹುಟ್ಟಲು ಆತನ ಮಾಯೆಯಿಂದ ಕಾವಲಲ್ಲಿದ್ದವರೆಲ್ಲರೂ ಮೈಮರತಿದ್ದರು. ಆ ಬಾಲಕನನ್ನು ವಸುದೇವನು ತೆಗದುಕೊಂಡು ಗೋಪಳ್ಳಿಗೆ ಹೋಗಿ ನಂದನನ ಹೆಂಡತಿಯಾದ ಯಶೋದೆಯ ಸಮೀಪದಲ್ಲಿರಿಸಿ ಅಲ್ಲಿ ಆಗಲೇ ಹುಟ್ಟಿದ್ದ ಹೆಣ್ಣು ಶಿಶುವನ್ನು ತೆಗದುಕೊಂಡು ಶೀಘ್ರವಾಗಿ ಮಥುರಾ ಪಟ್ಟಣಕ್ಕೆ ಬಂದು ದೇವಕೀ ದೇವಿಯ ಬಳಿಯಲ್ಲಿರಿಸಿದನು. ಅಲ್ಲಿದ್ದ ಕಾವಲವರು ಆ ಹೆಣ್ಣುಮಗುವನ್ನು ಆ ಪಾಪಾತ್ಮನ ಮುಂದೆ ಇರಿಸಲು ಕಂಸನು ಅಶರೀರವಾಕ್ಯವನ್ನು ಸ್ಮರಿಸಿ ಖಡ್ಗವನ್ನು ತೆಗದುಕೊಂಡು ಬಂದನು. ಆ ಹೆಣ್ಣುಶಿಶುವು ನಗುತ್ತ ಆಕಾಶಕ್ಕೆ ಹಾರಿ 'ಆರ್ಯ' 'ಆರ್ಯ' ಎಂದು ಬಾರಿ ಬಾರಿಗೂ ನುಡಿದುಕೊಂಡು ಹೋದದ್ದರಿಂದ ಅದು ಮೊದಲು ಆ ಶಕ್ತಿಗೆ 'ಆರ್ಯೆ' ಎಂದು ಹೆಸರಾಯಿತು. ಆ ಬಳಿಕ ಶ್ರೀಕೃಷ್ಣನು ನಿರ್ಮಲವಾದ ಉದಕಮಧ್ಯದಲ್ಲಿರುವ ಕಮಲದೋಪಾದಿಯಲ್ಲಿ ಅಭಿವೃದ್ಧಿಯನ್ನೈದುತ್ತ ಮರಗಳಲ್ಲಿ ಗೋಪ್ಯವಾಗಿರುವ ಯಜ್ಞೇಶ್ವರನೋಪಾದಿಯಲ್ಲಿ ಕಂಸನಿಂದ ಅಜ್ಞಾತನಾಗಿ ಪಳ್ಳಿಯಲ್ಲಿ ಬಂದ ಬಾಧಕಗಳನ್ನು ಪರಿಹರಿಸಿಕೊಂಡು ಸುಖವಾಗಿದ್ದನು. ಕಂಸನ ಭಯದಿಂದ ಕಷ್ಟಪಡುತ್ತಲಿರುವ ಸಕಲರಾದ ಅರಸುಗಳೂ ತನ್ನನ್ನು ಆಶ್ರಯಿಸಿರಲು, ಬಲರಾಮಸಮೇತನಾಗಿ ಶ್ರೀಕೃಷ್ಣನು ಮಥುರಾ ಪಟ್ಟಣಕ್ಕೆ ಹೋಗಿ ಭ್ರಾತೃಸಹಿತನಾದ ಕಂಸನನ್ನು ಕೊಂದು ಉಗ್ರಸೇನನಿಗೆ ಪಟ್ಟವನ್ನು ಕಟ್ಟಿ ಸುಖವಾಗಿದ್ದನು. ಆ ಬಳಿಕ ಜರಾಸಂಧನು ಕಂಸಕುಮಾರಕನಾದ ತನ್ನ ದೌಹಿತ್ರನಿಗೆ ಭೋಜರಾಜ್ಯದಲ್ಲಿ ಪಟ್ಟವನ್ನು ಕಟ್ಟಬೇಕೆಂದು ಸರ್ವಸೈನ್ಯಸಹಿತನಾಗಿ ಹೊರಟು ಮಥುರಾಪಟ್ಟಣವನ್ನು ಹೊಕ್ಕು ಯದು ವೃಷ್ಣಿ ಸಮೇತನಾದ ಕೃಷ್ಣಸ್ವಾಮಿಯೊಡನೆ ಯಾವಾಗಲೂ ಹೋರುತ್ತ ನಾನಾದೇಶಗಳಲ್ಲಿರುವ ಅರಸುಗಳನ್ನು ಹಿಡಿತಂದು ದೇವದೇವೋತ್ತಮನಾಗಿರುವ ಪರಮೇಶ್ವರನಿಗೆ ಬಲಿಯಾಗಿ ಕೊಡುವದಕ್ಕೆ ತನ್ನ ಪಟ್ಟಣದಲ್ಲಿಟ್ಟಿದ್ದನು. ಅದರಿಂದ ಕೃಷ್ಣ ಜರಾಸಂಧರಿಗೆ ವಿರೋಧ ಬಂದು ಪ್ರಾಪ್ತವಾಯಿತು. ಅದು ಹಾಗಿರಲಿ: ಭೀಮಸೇನನು ಮಗಧೇಶ್ವರನಂ ಕೊಂದುಹಾಕಿದ ವಿವರವನ್ನು ಹೇಳುತಲಿದೇನೆ ಕೇಳು."

## ೨೬ನೇ ಅಧ್ಯಾಯ.—ಜರಾಸಂಧವಧಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಕೃಷ್ಣಸ್ವಾಮಿಯು ಯುದ್ಧಸನ್ನದ್ಧನಾದ ಜರಾಸಂಧನನ್ನು ನೋಡಿ 'ಎಲೆ ಜರಾಸಂಧನೆ, ನಮ್ಮ ಮೂರುಮಂದಿಗಳೊಳಗೆ ಒಬ್ಬನೊಡನೆ ಯುದ್ಧಮಾಡುವದಕ್ಕೆ ನಿಶ್ಚಯಿಸು; ಆತನು ಯುದ್ಧಕ್ಕೆ ಸನ್ನದ್ಧನಾಗಲಿ' ಅಂದನು. ಮಗಧೇಶ್ವರನು ಕೃಷ್ಣಸ್ವಾಮಿಯನ್ನು ನೋಡಿ 'ನೀನು ಗೋಪಾಲಕನು; ಅರ್ಜುನನು ಬಾಲಕನು; ನೀವಿಬ್ಬರೂ ಬೇಡ; ಇವನು ಗದಾಯುದ್ಧದಲ್ಲಿ ಸಮರ್ಥನೆಂತಲೂ ಬಲಾಧಿಕನೆಂತಲೂ ಕೇಳಿ ನನ್ನ ಮನಸ್ಸು ಸಂತೋಷಪಡುವದರಿಂದ ಈತನ ಕೂಡೆ ಹೆಣಗಬೇಕು' ಎಂದು ನುಡಿದು, ಅಷ್ಟರೊಳಗೆ ಪುರೋಹಿತನು ಬಂದು—ಜಯೀಭವ! ಎಂದು ಹರಸಲು ಕಿರೀಟವನ್ನು ಸಡಲಿಸಿ, ಮಂಡೆಯನ್ನು ಸವರಿ ಕಟ್ಟಿಕೊಂಡು, ಉಬ್ಬಿರುವ ಸಮುದ್ರದೋಪಾದಿಯಲ್ಲಿ ಭುಜಬಲೋದ್ದೀಪಿತನಾಗಿ ಪರಾಕ್ರಮಶಾಲಿಯಾದ ಬಕಾಂತಕನನ್ನು ನೋಡಿ 'ನೀನು ಬಲಶಾಲಿ ಯಾದ್ದರಿಂದ ನಿನ್ನ ಕೂಡೆ' ಹೆಣಗಬೇಕು ಎಂದು ಹೇಳಿ, ದೇವೇಂದ್ರನಮೋಲೆ ಕಾಣಿಸಿಕೊಂಡ ವೃತ್ರಾಸುರನೋಪಾದಿಯಲ್ಲಿ ಎದಿರಿಸಿ ತಾಕಿದನು. ಭೀಮಸೇನನು ಕೃಷ್ಣಸ್ವಾಮಿಯಿಂದ ಅನುಜ್ಞಾತನಾಗಿ ಆತನಿಗೆ ಅಭಿಮುಖನಾಗಿ ನಿಂತನು. ಈಪ್ರಕಾರದಿಂದ ಭುಜಗಳೇ ಆಯುಧಗಳಾಗಿ ಉಳ್ಳ ಪುರುಷಶ್ರೇಷ್ಠರಿಬ್ಬರೂ ಒಬ್ಬರಮೇಲೆ ಒಬ್ಬರು ಕಾಣಿಸಿಕೊಂಡು ಭುಜಗಳನ್ನು ತಟ್ಟಿಕೊಳ್ಳಲು, ಅದರಿಂದ ಹುಟ್ಟಿದಧ್ವನಿಯು ಪರ್ವತಗಳನ್ನೂ ಭೇದಿಸುವ ವಜ್ರಾಯುಧ ಧ್ವನಿಯನ್ನು ಅನುಸರಿಸಿತು! ಬಾಹುಬಲಧುರಂಧರರಾಗಿ ಸಂತುಷ್ಟಚಿತ್ತರಾಗಿ

ಮಲ್ಲಯುದ್ಧ ವಿಶಾರದರಾದ ಭೀಮ ಜರಾಸಂಧರು ಅನ್ಯೋನ್ಯ ಒಬ್ಬರೊಬ್ಬರ ಕೈಯನ್ನು ಹಿಡಿಯುತ್ತ, ಎಡಬಲಗಳಲ್ಲಿ ನೋಡಿಕೊಂಡು ಹೊಕ್ಕು—ಶಿರಸ್ಸನ್ನು ತಾಕಿಸುವ ಕರುಗಳೋಪಾದಿಯಲ್ಲಿ, ವೃಕ್ಷಗಳಿಂದ ಹೋರುವ ರಾಕ್ಷಸರೋಪಾದಿಯಲ್ಲಿ, ಕಾಲುಗಳಿಂದ ಒದ್ದಾಡುವ ಕುದುರೆಗಳ ರೀತಿಯಲ್ಲಿ ಕೊಕ್ಕುಗಳಿಂದ ತಿವಿಯುವ ತಿತ್ತಿರಿಪಕ್ಷಿಗಳೋಪಾದಿಯಲ್ಲಿ, ಕೊಂಬು ಕತ್ತಿಗಳುಳ್ಳ ಮದ್ದಾನೆಗಳ ಚಂದದಿಂದ, ವೃತ್ರ ದೇವೇಂದ್ರರೋಪಾದಿಯಲ್ಲಿ ಭಯಂಕರವಾದ ಬಾಹು ಯುದ್ಧವನ್ನು ಮಾಡಿದರು. ಮತ್ತು ಅನ್ಯೋನ್ಯ ಸೆಳೆಯುತ್ತ, ಎಳೆದುಹಾಕುತ್ತ, ತಳಕೆಳಕಾಗಿ ತಳ್ಳುತ್ತ, ಮೊಳಕಾಲುಗಳಿಂದ ತಿವಿಯುತ್ತ, ಅಟ್ಟಹಾಸವನ್ನು ಮಾಡುತ್ತ, ಒಬ್ಬರಿಗೊಬ್ಬರು ಮುಷ್ಟಿಪ್ರಹಾರಗಳಿಂದ ತಿವಿಯುತ್ತಲಿರುವ ಸಮಯದಲ್ಲಿ ಜರಾಸಂಧನು ಭೀಮನ ವಕ್ಷಸ್ಥಳವನ್ನು ಕುರಿತು ಮುಷ್ಟಿಘಾತದಿಂದ ತಿವಿದನು, ಭೀಮಸೇನನು ಮುಷ್ಟಿಪ್ರಹಾರದಿಂದ ಜರಾಸಂಧನ ವಕ್ಷಸ್ಥಳವನ್ನು ತಿವಿದು ನೋಯಿಸಿದನು ; ಸೊಂಡಿಲುಗಳನ್ನು ಸುತ್ತಿಕೊಂಡಿರುವ ಮದ್ದಾನೆಗಳೋಪಾದಿಯಲ್ಲಿ ಕಾಲದಂಡಗಳೋಪಾದಿಯಲ್ಲಿರುವ ಭುಜದಂಡಗಳಿಂದ ಒಬ್ಬರಿಗೊಬ್ಬರು ಸುತ್ತಿಕೊಂಡು ಸರಿ ಬಿತ್ತರಿಗಳಿಗೆ ಹೊಕ್ಕು ಮತ್ಸರದಿಂದ ಭೂಮಿಯಲ್ಲಿ ಕೆಡಹಿಸಿ, ಶೀಘ್ರವಾಗಿ ಎದ್ದು ಶ್ರಮವನ್ನೈದದೆ ಹೆಚ್ಚು ಕಡಮೆಗಳಿಲ್ಲದೆ ಭಯಂಕರವಾಗಿ ಆಶ್ಚರ್ಯಕರವಾದ ಬಾಹು ಯುದ್ಧವನ್ನು ಮಾಡಿದರು. ಕಾರ್ತೀಕಮಾಸ ಪ್ರಥಮ ದಿವಸದಲ್ಲಿ ಪ್ರಾರಂಭಿಸಿದ ಬಾಹು ಯುದ್ಧವು ಅಹೋರಾತ್ರಿಗಳು ಎಡೆಬಿಡದೆ ಹದಿನೈದು ದಿವಸಗಳು ನಡೆಯುತ್ತಿತ್ತು. ಆ ಬಳಿಕ ಚತುರ್ದಶೀ ದಿವಸದ ರಾತ್ರಿಯಲ್ಲಿ ಮಾಗಧನು ಬಲಹೀನನಾದ್ದರಿಂದ ಮಧುಸೂಧನನು ಭೀಮಸೇನನನ್ನು ನೋಡಿ 'ಎಲೈ ಭೀಮನೆ, ಮದಾಂಧನಾದ ಜರಾಸಂಧನು ನಿನ್ನ ಬಾಹುಬಲವನ್ನು ಸೈರಿಸಲಾರದೆ ಬಹು ಶ್ರಮಪಟ್ಟಿದ್ದಾನೆ ; ಒಂದು ಕ್ಷಣಮಾತ್ರವು ಸೈರಿಸಿ ಕೊಂದುಹಾಕಬೇಕು, ಅಂದನು. ಕೃಷ್ಣನ ವಾಕ್ಯವನ್ನು ಕೇಳಿ ಭೀಮ ಬಲ ಪರಾಕ್ರಮಶಾಲಿಯಾದ ಭೀಮಸೇನನು ಶತ್ರುವನ್ನು ಸಂಹರಿಸುವದಕ್ಕೆ ಉದ್ಯುಕ್ತನಾದನು."

## ೨೪ನೇ ಅಧ್ಯಾಯ.—ಜರಾಸಂಧವಧಪರ್ವ ಸಮಾಪ್ತಿ.

"ಕೇಳು ಜನಮೇಜಯನೆ, ಆ ಬಳಿಕ ಭೀಮನು ಕೃಷ್ಣಸ್ವಾಮಿಯನ್ನು ನೋಡಿ 'ಎಲೈ ಕೃಷ್ಣಸ್ವಾಮಿಯೆ, ನಿನಗೆ ಸಕಲ ಬಂಧುವಿನಾಶಕನಾದ ಈ ಮಾಗಧನನ್ನು ಈಗಲೇ ಕೊಂದು ಹಾಕುತ್ತೇನೆ' ಅಂದನು. ಕೃಷ್ಣಸ್ವಾಮಿಯು 'ಎಲೈ ಭೀಮನೆ, ನಿನಗೆ ತಂದೆಯಾದ ವಾಯುದೇವನ ದಿವ್ಯ ಬಲವನ್ನಾಶ್ರಯಿಸಿ, ಜರಾಸಂಧನನ್ನು ಕೊಲ್ಲುವದಕ್ಕೆ ಶೀಘ್ರವಾಗಿ ಯತ್ನವನ್ನು ಮಾಡು, ಮೊದಲು ಗೋಮಂತವೆಂಬ ಪರ್ವತದಲ್ಲಿ ಮಹಾರಥನಾದ ಮಾಗಧನು ಬಲದೇವನೊಡನೆ ತೊಡರಿ ಹೋರುವ ಸಮಯದಲ್ಲಿ ಅಶರೀರವಾಣಿಯು '—ಈ ಜರಾಸಂಧನ ಆಯುಸ್ಸು ತೀರಿದಾಗ ಭೀಮಸೇನನಿಂದ ಕೊಲ್ಲಲ್ಪಡುತ್ತಲಿದ್ದಾನೆ—' ಎಂದು ನುಡಿಯಿತು ; ನಾನು ಈತನು ಆ ಸಮಯದಲ್ಲಿ ಅವಧ್ಯನೆಂಬುದ ತಿಳಿದು ಈತನನ್ನು ಬಲದೇವನು ಕೊಂದು ಹಾಕದೆ ಇರುವ ರೀತಿಗೆ ಬಿಡಿಸಿದೆನೆ ಹೊರತು ಈ ಮಾಗಧನು ಒಬ್ಬನೇ ಹೊರತಾಗಿ ಆತನ ಕೈಗೆ ಸಿಕ್ಕಿ ಪ್ರಾಣಸಹಿತನಾಗಿ ಬಂದಂಥಾವನುಂಟೆ!' ಅಂದನು. ಭೀಮನು ವಾಯುದೇವನನ್ನು ತನ್ನ ಮನಸ್ಸಿನಲ್ಲಿ ಸ್ಮರಿಸಿ, ನಮಸ್ಕಾರವನ್ನು ಮಾಡಿ, ಮಹಾಬಲ ಸಂಪನ್ನನಾದ ಶ್ರೀ ಕೃಷ್ಣಸ್ವಾಮಿಯನ್ನು ಉಚಿತಪ್ರಕಾರದಿಂದ ಪೂಜಿಸಿ, ಅರ್ಜುನನನ್ನು ಆಲಂಗಿಸಿಕೊಂಡು, ತಿರುಗಿ ಜರಾಸಂಧನನ್ನು ಹಿಡಿದು ಮೇಲಕ್ಕೆ ಎತ್ತಿ ಹತ್ತುಸಾರಿ ಬಿರಬಿರನೆ ತಿರುಗಿಸಿ ಭೂಮಿಯಲ್ಲಿ ಮುಖ ವಡೆಯುವಹಾಗೆ ಕೆಡಹಿ ಕಾಲಿನಿಂದ ಆತನ ಬೆನ್ನನ್ನು ಮೆಟ್ಟಿ, ಸಿಂಹನಾದವನ್ನು ಮಾಡಿದನು. ಆತನಿಂದ ಅಧಿಕವಾಗಿ ಪೀಡಿತನಾದ ಮಾಗಧನು ಅನರ್ಥನಾದವನ್ನು ಮಾಡಿದನು. ಇವರಿಬ್ಬರ ಧ್ವನಿಗಳೂ ಒಂದಾಗಿ ಸಕಲ ಜನಗಳಿಗೂ ಭಯಂಕರವಾಗಿ ಮಾಗಧ ಪಟ್ಟಣದಲ್ಲಿರುವ ಸ್ತ್ರೀಜನಗಳಿಗೆ ಗರ್ಭಭೇದವಾಯಿತು! ಮತ್ತು ಭೀಮಸೇನನ ಮಹಾನಾದವನ್ನು ಕೇಳಿ 'ಹಿಮವತ್ಪರ್ವತವು ಸೀಳಿತೊ! ಭೂಮಂಡಲವೇ ಸೀಳಿತೊ! ಇಲ್ಲದಿದ್ದರೆ ಇಂಥಾ ಶಬ್ದ

ಗಳು ಹುಟ್ಟುವದೆ!' ಎಂದು ಸಕಲ ಜನಗಳೂ ಆಶ್ಚರ್ಯದಿಂದ ಕೇಳುತ್ತಿದ್ದರು. ಆ ಬಳಿಕ ಭೀಮನು ಜರಾಸಂಧನನ್ನು ಕೊಂದುಹಾಕಿ ಭುವನ ಭಯಂಕರನಾದ ಆತನನ್ನು ಕೊಂದದ್ದನ್ನು ಸಕಲರಿಗೂ ತಿಳುಹಿಸಬೇಕೆಂದೆಣಿಸಿ ಪ್ರಾಣಗಳಿಲ್ಲದೆ ಇದ್ದರೂ ನಿದ್ರೆಹೋಗುವವನೋಪಾದಿಯಲ್ಲಿರುವ ಜರಾಸಂಧನನ್ನು ತಂದು ಪಟ್ಟಣದ ಬಾಗಲಲ್ಲಿ ಹಾಕಿದನು. ಆ ಬಳಿಕ ಕೃಷ್ಣಸ್ವಾಮಿಯು ಜರಾಸಂಧನ ರಥವನ್ನು ಮುಸ್ತೈದೆಮಾಡಿಸಿ ಮೊದಲು ಭೀಮಾರ್ಜುನರನ್ನು ಆ ರಥದಮೇಲೆ ಕುಳ್ಳಿರಿಸಿ ಜರಾಸಂಧನ ಶೆರೆಮನೆಯಲ್ಲಿರುವ ಬಾಂಧವರಾದ ಕ್ಷತ್ರಿಯರೆಲ್ಲರನ್ನೂ ಬಿಡಿಸಿದನು. ಆ ಅರಸುಗಳು ಆ ಮಹಾಭಯವು ತಮಗೆ ತೊಲಗಿದ್ದರಿಂದ ಮಹಾನುಭಾವನಾಗಿ ಪೂಜಾರ್ಹನಾಗಿರುವ ವಾಸುದೇವನಿಗೆ ತಮ್ಮ ಸಕಲ ರತ್ನಗಳನ್ನೂ ಕಪ್ಪವಾಗಿ ಕೊಟ್ಟರು. ಆ ಬಳಿಕ ಮುರಾಂತಕನು ಶತ್ರುಸಂಹಾರವನ್ನುಮಾಡಿ, ಗಾಯಪಡೆಯದೆ, ನಿಖಿಲ ಶಸ್ತ್ರಾಸ್ತ್ರ ಸಂಪನ್ನನಾಗಿ, ರಾಜ ಸಮೂಹ ಪರಿವೃತನಾಗಿ, ಪೂರ್ವದಲ್ಲಿ ತಾರಕಾಮಯವೆಂಬ ಯುದ್ಧದಲ್ಲಿ ಇಂದ್ರೋಪೇಂದ್ರರು ಏರಿಕೊಂಡು ವಿಜಯವನ್ನೈದಿದ ಮಾಗಧನ ರಥವನ್ನು ಏರಿರುವ ಭೀಮನಿಗೂ ಅರ್ಜುನನಿಗೂ ಸಾರಥ್ಯವನ್ನು ಮಾಡುತ್ತ ಗಿರಿವ್ರಜಪಟ್ಟಣದ ದೆಸೆಯಿಂದ ಹೊರಟನು. ಆ ಸಮಯದಲ್ಲಿ ಆ ಪಟ್ಟಣದಲ್ಲಿರುವ ಸಕಲ ಜನಗಳೂ ಬಾಹುಬಲಸಂಪನ್ನರಾಗಿ ಮಹಾಕಾರ್ಯಸಿದ್ಧ್ಯಾಹಕರಾದ ಪಾಂಡುನಂದನರು ಕೃಷ್ಣಸಾರಥ್ಯವುಳ್ಳ ಆ ಮಹಾರಥದಲ್ಲಿ ಬಪ್ಪುತ್ತಿರಲು 'ಇವರು ಎಂಥಾವರಿಗೂ ನೋಡುವದಕ್ಕೆ ಅಶಕ್ಯರಾಗಿಧಾರೆ!' ಎಂದು ನಾನಾಪ್ರಕಾರವಾಗಿ ನುಡಿದರು. ಆ ಬಳಿಕ ಪುರುಷಶ್ರೇಷ್ಠರಾದ ಭೀಮಾರ್ಜುನ ವಾಸುದೇವರು ಮೂರುಮಂದಿಯೂ ವಾಯುವೇಗದಿಂದ ಬಪ್ಪುತ್ತಲಿರುವ ಕುದುರೆಗಳುಳ್ಳದ್ದಾಗಿ ತಪ್ತಸುವರ್ಣಾಲಂಕೃತವಾಗಿ ಕಿರುಗಂಟೆಗಳಿಂದ ಕಟ್ಟಲ್ಪಟ್ಟದ್ದಾಗಿ ಮೇಘಧ್ವನಿಯೋಪಾದಿಯಲ್ಲಿ ಧ್ವನಿಯುಳ್ಳಂಥಾದ್ದಾಗಿ ಯುದ್ಧದಲ್ಲಿ ವಿಜಯಪ್ರದವಾಗಿ ಶತ್ರುಸಂಹಾರಕವಾಗಿರುವ ಮೊದಲು ಇಂದ್ರನು ತೊಂಭತ್ತೊಂಭತ್ತು ಸಂಖ್ಯೆಯುಳ್ಳ ರಾಕ್ಷಸರನ್ನು ಕೆಡಹಿದ ದಿವ್ಯರಥವನ್ನೋಡಿ ಸಂತೋಷಪಟ್ಟು, ತಮ್ಮನ್ನು ನೋಡಬೇಕೆಂಬ ಸಂತೋಷದಿಂದ ಬರುತ್ತಲಿರುವ ಪಟ್ಟಣದ ಜನರಿಗೆ ನೇತ್ರಾನಂದವನ್ನು ಮಾಡುತ್ತ ರಾಜಮಾರ್ಗದಲ್ಲಿ ಬಂದರು. ಆ ಮಹಾ ರಥವು ವಾಯುವೇಗವುಳ್ಳ ಕುದುರೆಗಳಿಂದ ಬಪ್ಪಿ, ದೇವನಿರ್ಮಿತವಾದ್ದರಿಂದ ಇಂದ್ರಾಯುಧದೋಪಾದಿಯಲ್ಲಿ ಯೋಜನದ್ವಯ ಪರಿಮಿತವಾದ ಪ್ರದೇಶಕ್ಕೆ ಕಾಣಲ್ಪಡುತ್ತ, ಮಾರ್ಗನಿರೋಧಕವಾದ ವೃಕ್ಷಲತಾದಿಗಳಿಗೆ ಸಿಕ್ಕದೆ, ಕೃಷ್ಣಸ್ವಾಮಿಯ ನಿಯೋಗದಿಂದ ಕರಾಳವಾದ ವದನಗಳುಳ್ಳದ್ದಾಗಿ, ಭಯಂಕರ ಧ್ವನಿಗಳುಳ್ಳ ಭೂತಗಣಗಳೊಡನೆ ಸಹಸ್ರಕಿರಣ ಪರಿವೃತನಾಗಿರುವ ಸೂರ್ಯನೋಪಾದಿಯಲ್ಲಿ ಸಕಲ ಭೂತಗಳಿಗೂ ನೋಡುವದಕ್ಕೆ ಅಶಕ್ಯನಾದ ಗರುಡನಿಗೆ ನಿವಾಸ ಸ್ಥಾನವಾಗಿರುವ ಧ್ವಜದಿಂದ ಬಪ್ಪುತ್ತ, ಸಕಲ ಶಸ್ತ್ರಾಸ್ತ್ರಗಳಿಗೂ ಅಭೇದ್ಯವಾಗಿ, ಮೇಘಗಂಭೀರ ಧ್ವನಿಯಿಂದ ಬಪ್ಪುತ್ತಲಿರುವಂಥಾದ್ದಾಗಿ, ತಡೆಯಿಲ್ಲದೆ ಇರುವ ಗಮನವುಳ್ಳದ್ದಾಗಿ, ಮಹೇಂದ್ರನಿಂದ ವಸುವಿಗೆ ಕೊಡಲ್ಪಟ್ಟು ವಸುವಿನಿಂದ ಬೃಹದ್ರಥನಿಗೆ ಕೊಡಲ್ಪಟ್ಟು ಬೃಹದ್ರಥನಿಂದ ಜರಾಸಂಧನಿಗೆ ಕೊಡಲ್ಪಟ್ಟದ್ದಾಗಿ, ಆಶ್ಚರ್ಯಕರವಾಗಿರುವ ಅಂಥಾ ದಿವ್ಯ ರಥದಲ್ಲಿ ಭೀಮಾರ್ಜುನ ಸಮೇತನಾಗಿ ಶ್ರೀಕೃಷ್ಣಸ್ವಾಮಿಯು ಗಿರಿವ್ರಜಪಟ್ಟಣದಿಂದ ಹೊರಟು ಸಮಪ್ರದೇಶದಲ್ಲಿ ನಿಂತನು.

"ಆ ಸಮಯದಲ್ಲಿ ಗಿರಿವ್ರಜ ಪಟ್ಟಣದಲ್ಲಿರುವ ಬ್ರಾಹ್ಮಣರು ಮೊದಲಾದ ಪೌರಜನರೂ ಶೆರೆಯಿಂದ ಬಿಡಲ್ಪಟ್ಟ ಅರಸುಗಳೂ ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಕೈಕಾಣಿಕೆಗಳನ್ನು ಕೃಷ್ಣಸ್ವಾಮಿಗೆ ತಂದುಕೊಟ್ಟು 'ಎಲೈ ಮಹಾತ್ಮನೆ, ಕಾರ್ಯಧುರಂಧರನಾದ ನೀನು ಭೀಮಾರ್ಜುನರ ಸಹಾಯದಿಂದ ದುಷ್ಟನಿಗ್ರಹವನ್ನು ಮಾಡಿ ಧರ್ಮವನ್ನು ಪರಿಪಾಲಿಸುವದು ಆಶ್ಚರ್ಯವಲ್ಲ; ಲೋಕಕಂಟಕನಾದ ಜರಾಸಂಧನೆಂಬ ಮಡುವಿನಲ್ಲಿ ಬಿದ್ದು ದುಃಖವೆಂಬ ಕೆಸರಿನಲ್ಲಿ ಮುಳುಗಿ ಭಯಂಕರವಾದ ಈ ಗಿರಿವ್ರಜದಲ್ಲಿ ಬಹು ಕ್ಲೇಶವನ್ನು ಅನುಭವಿಸುತ್ತಿದ್ದ ನಮ್ಮನ್ನು ಬಿಡಿಸಿ ಸಕಲಲೋಕ ಪ್ರಕಾಶನಾದ ಕೀರ್ತಿಯನ್ನು ಪಡೆದೆ; ಇನ್ನು ಮಾಡತಕ್ಕ ಕಾರ್ಯವನ್ನು ಕಟ್ಟುಮಾಡಬೇಕು; ನಿನ್ನ ಆಜ್ಞೆಯನ್ನು ಶಿರಸಾವಹಿಸಿ ಎಂಥಾ ದುರ್ಘಟವಾದ ಕಾರ್ಯವನ್ನಾದರೂ ನೆರವೇರಿಸುತಲೀದೆವೆ'

ಎಂದು ನುಡಿದರು. ಶ್ರೀಕೃಷ್ಣಸ್ವಾಮಿಯು ಅವರೆಲ್ಲರನ್ನೂ ಬಹು ಮಾನಮಾಡಿ 'ಕೇಳಿರೈ ಅರಸುಗಳಿರಾ, ಧರ್ಮರಾಯನು ರಾಜಸೂಯ ಯಾಗವನ್ನು ಮಾಡುತಲಿದ್ದಾನೆ; ನೀವು ಅಲ್ಲಿಗೆ ಬಂದು ಸಾಮ್ರಾಜ್ಯವನ್ನು ಇಚ್ಛೈಸಿರುವ ಧರ್ಮಪ್ರವರ್ತಕನಾದ ಧರ್ಮರಾಯನಿಗೆ ನಿಮ್ಮ ಶಕ್ತ್ಯನುಸಾರವಾಗಿ ಸಹಾಯವನ್ನು ಮಾಡೀ' ಅಂದನು. ಅವರೆಲ್ಲರೂ ಹಾಗೆ ಆಗಲೆಂದು ಒಪ್ಪಿಕೊಂಡು ನಾನಾ ರತ್ನಗಳಿಂದಲೂ ಪುರುಷ ರತ್ನವಾದ ಶ್ರೀಕೃಷ್ಣಸ್ವಾಮಿಯನ್ನು ಪೂಜಿಸಿದರು. ಅವರಲ್ಲಿರುವ ದಯಾತಿಶಯದಿಂದ ಅವರು ಮಾಡಿದ ಪೂಜೆಗಳನ್ನು ಕೃಷ್ಣಸ್ವಾಮಿಯು ಅಂಗೀಕರಿಸಲು, ಆತನ ಅಪ್ಪಣೆಯನ್ನು ತೆಗೆದುಕೊಂಡು ತಮ್ಮ ತಮ್ಮ ಪಟ್ಟಣಕ್ಕೆ ಸುಖವಾಗಿ ಹೋಗುತ್ತಿದ್ದರು. ಆ ಸಮಯದಲ್ಲಿ ಜರಾಸಂಧನ ಮಗನಾದ ಸಹದೇವನು ಮಂತ್ರಿ ಪುರೋಹಿತ ಸಹಿತನಾಗಿ ಬಂದು ವಾಸುದೇವನ ಚರಣಾರವಿಂದಗಳಿಗೆ ನಮಸ್ಕರಿಸಿ 'ಎಲೈ ಮಹಾ ಪುರುಷನಾದ ಕೃಷ್ಣಸ್ವಾಮಿಯೆ, ನನ್ನ ತಂದೆಯಾದ ಜರಾಸಂಧನು ಮಾಡಿದ ಅಪಕಾರಗಳು ನನ್ನಿಂದ ಹೇಳುವದಕ್ಕೆ ಶಕ್ಯವಲ್ಲ; ನಾನು ನಿನ್ನ ಚರಣಾರವಿಂದಗಳನ್ನು ನೆರೆನಂಬಿದೆನು; ಆ ಅಪರಾಧಗಳನ್ನು ನಿನ್ನ ಚಿತ್ತದಲ್ಲಿ ಎಣಿಸದೆ ನಿನ್ನ ಕಟಾಕ್ಷವನ್ನು ನನ್ನಲ್ಲಿರಿಸಿ ರಕ್ಷಿಸು; ನನ್ನ ತಂದೆಗೆ ಉತ್ತರ ಕೃತ್ಯವನ್ನು ಮಾಡುವದಕ್ಕೆ ನಿಮ್ಮ ಮೂರು ಮಂದಿಯ ಅಪ್ಪಣೆಯನ್ನು ಬೇಡುತ್ತಲಿದ್ದೇನೆ' ಎಂದು ಪ್ರಾರ್ಥಿಸಿದನು. ಆ ಬಳಿಕ ಕೃಷ್ಣನು ಜರಾಸಂಧನಿಗೆ ಪರಲೋಕ ಕಾರ್ಯಗಳನ್ನು ಮಾಡಲು ಸಹದೇವನಿಗೆ ಅಪ್ಪಣೆಯನ್ನು ಕೊಡಲು ಆತನು ಮಂತ್ರಿ ಪುರೋಹಿತ ಸಮೇತನಾಗಿ ಪಟ್ಟಣಕ್ಕೆ ಬಂದು, ಚಂದನ ದೇವದಾರು ಕಾಲಾಗರುಗಳು ಮೊದಲಾದ ಕಾಷ್ಠಗಳಿಂದಲೂ ಅಭ್ಯರ್ಧಾರೆಗಳಿಂದಲೂ ಚಿತಾಲಂಕಾರವನ್ನು ಮಾಡಿ, ಅಗ್ನಿ ಸಂಸ್ಕಾರವನ್ನು ಮಾಡಿ, ಸಹೋದರ ಸಮೇತನಾಗಿ ತಿಲೋದಕಾದಿಗಳನ್ನು ಕೊಟ್ಟು, ಮತ್ತು ಆತನಿಗೆ ಸ್ವರ್ಗ ಸಾಧಕಗಳಾದ ಕಾರ್ಯಗಳನ್ನು ಮಾಡಿ, ಆ ಬಳಿಕ ಪಾಂಡವ ಸಮೇತನಾದ ಶ್ರೀವಾಸುದೇವನ ಸಮೀಪಕ್ಕೆ ಬಂದು ನಾನಾರತ್ನ ಕಾಂಚನಗಳನ್ನು ಗೋಸಮೂಹಗಳನ್ನು ಆಡು ಕುರಿ ಮೊದಲಾದ ಸಮೂಹಗಳನ್ನು ಆನೆ ಕುದುರೆಗಳನ್ನೂ ವಿಚಿತ್ರವಾದ ದಿವ್ಯ ಭೂಷಣಾಂಬರಗಳನ್ನೂ ಕೊಟ್ಟು 'ನಿನ್ನ ಮನಸ್ಸು ಬಂದರೀತಿಗೆ ಧರ್ಮರಾಯನಿಗೆ ಕೊಡು' ಅಂದನು. ಕೃಷ್ಣಸ್ವಾಮಿಯು ಅವನ್ನೆಲ್ಲ ತೆಗೆದುಕೊಂಡು ಆ ಸಹದೇವನಿಗೆ ಅಭಯ ಪ್ರದಾನವನ್ನು ಮಾಡಿ 'ನಮ್ಮ ಭೀಮನು ಮೊದಲಾದವರಲ್ಲಿ ನೀನೊಬ್ಬನು' ಎಂದು ಬಹು ಮಾನವನ್ನು ಮಾಡಿ, ಆತನಿಗೆ ಮಗಧರಾಜ್ಯ ಪಟ್ಟಾಭಿಷೇಕವನ್ನು ಮಾಡಿ ಕಳುಹಿಸಿದನು. ಆ ಬಳಿಕ ಶ್ರೀಕೃಷ್ಣಸ್ವಾಮಿಯು ಪಾಂಡವ ಸಮೇತನಾಗಿ ರಥಾರೂಢನಾಗಿ ಇಂದ್ರಪ್ರಸ್ಥ ಪಟ್ಟಣಕ್ಕೆ ಹೋಗಿ, ತಾವು ಬಂದದ್ದನ್ನು ಕೇಳಿ ಸಂತೋಷಪಡುತ್ತಲಿರುವ ಧರ್ಮರಾಯನ ಸನ್ನಿಧಿಗೆ ತಾನು ಮೊದಲೇ ಹೋಗಿ ಜರಾಸಂಧನನ್ನು ಕೊಂದು ಸಕಲರಾಜಸಮೂಹವನ್ನೂ ಸೆರೆಯಿಂದ ಬಿಡಿಸಿ, ಭೀಮಾರ್ಜುನರು ಕ್ಷೇಮದಿಂದ ಬಂದರೆಂದು ತಿಳುಹಿಸಿದನು. ಧರ್ಮರಾಯನು ಸಂತುಷ್ಟ ಚಿತ್ತನಾಗಿ ಶ್ರೀಕೃಷ್ಣಸ್ವಾಮಿಯನ್ನು ಉಚಿತಪ್ರಕಾರದಿಂದ ಪೂಜಿಸಿ, ಭೀಮಾರ್ಜುನರನ್ನು ಆಲಿಂಗಿಸಿಕೊಂಡು 'ಬಲಂಧುರಂಧರನಾದ ಜರಾಸಂಧನು ಪರಲೋಕ ಗತನಾದ್ದರಿಂದ ನಾವು ನಾವು ಯೋಚಿಸಿದ ಅರ್ಥವು ಕೈಕೂಡಿತು' ಎಂದು ನುಡಿದು, ಶ್ರೀವಾಸುದೇವನನ್ನು ಕುರಿತು 'ನಿನ್ನ ಕಟಾಕ್ಷದಿಂದಲ್ಲವೆ ಜಯಿಸುವದಕ್ಕೆ ಅಶಕ್ಯನಾದ ಜರಾಸಂಧನನ್ನು ಭೀಮನು ಜಯಿಸಿದನು; ಆದರಿಂದ ನಾನು ರಾಜಸೂಯಯಾಗಕ್ಕೆ ಯೋಗ್ಯನಾದೆನು; ಜಯಗಳೆಲ್ಲಾ ಲಭಿಸಿತು' ಎಂದು ಬಹುವಿಧೋಪಚಾರಗಳನ್ನು ನುಡಿದು ದಿವ್ಯರತ್ನ ವಿಚಿತ್ರವಾದ ಜರಾಸಂಧನ ರಥವನ್ನು ತನ್ನ ಮನೋರಥವನ್ನು ನೆರವೇರಿಸಿದ ಶ್ರೀವಾಸುದೇವನಿಗೆ ಒಪ್ಪಿಸಿದನು. ಅದನ್ನು ತೆಗೆದುಕೊಂಡು ಸೆರೆಯಿಂದ ಬಿಡಿಸಲ್ಪಟ್ಟ ಅರಸುಗಳನ್ನು ಧರ್ಮರಾಯನಿಗೆ ಕಾಣಿಸಲು, ಆತನು ಅವರನ್ನು ಅನೇಕ ಪ್ರಕಾರವಾಗಿ ಪೂಜಿಸಿ ಅವರವರ ದೇಶಗಳಿಗೆ ಕಳುಹಿಸಿದನು. ಅವರೆಲ್ಲ ಮಹಾಯೂ ಮಹೋನ್ನತಗಳಾದ ವಾಹನಗಳನ್ನೇರಿ ತಮ್ಮ ದೇಶಗಳಿಗೆ ಹೋದರು. ಸಕಲ ಕಾರ್ಯ ನಿರ್ವಾಹಕನಾದ ಶ್ರೀಕೃಷ್ಣಸ್ವಾಮಿಯು ತನ್ನ ಪಟ್ಟಣಕ್ಕೆ ಹೋಗುವಾಗ ಕುಂತಿಯೂ ದ್ರೌಪದಿಯೂ ಸುಭದ್ರೆಯೂ ಭೀಮಾರ್ಜುನ ನಕುಲ ಸಹದೇವರೂ ಧೌಮ್ಯನೂ ಆತನನ್ನು ಬಹುಮಾನ ಮಾಡಿ ಕಳುಹಿಸಿದರು.

“ ಕೇಳು ಜನಮೇಜಯನೆ, ಶ್ರೀವಾಸುದೇವನು ಕೋಟಿಸೂರ್ಯಸಮಾನವಾದ ಕಾಂತಿಯುಳ್ಳದ್ದಾಗಿ ಪ್ರಕಾಶಮಾನವಾದ ರಥವನ್ನು ಏರಿ ತನ್ನನ್ನು ಕಳುಹಿಸುವದಕ್ಕೆ ಸಂಗಡ ಬಂದು ಪ್ರದಕ್ಷಿಣ ನಮಸ್ಕಾರವನ್ನು ಮಾಡಿದ ಧರ್ಮರಾಯನನ್ನೂ ಆತನ ತಮ್ಮಂದರನ್ನೂ ಅವರ ಪಟ್ಟಣಕ್ಕೆ ಕಳುಹಿಸಿ ತಾನು ಸಂತುಷ್ಟಚಿತ್ತನಾಗಿ ಕೀರ್ತಿವಂತನಾಗಿ ದ್ವಾರಕಾಪಟ್ಟಣಕ್ಕೆ ಹೋದನು. ಆ ಬಳಿಕ ಧರ್ಮರಾಯನು ತಮ್ಮಂದರೊಡನೆ ಕೂಡಿ, ಸಂತೋಷಪಡುತ್ತ ದ್ರೌಪದೀ ದೇವಿಗೆ ಸಂತೋಷವನ್ನು ಮಾಡುತ್ತ ಧರ್ಮಮಾರ್ಗದಿಂದ ಪ್ರಜೆಗಳನ್ನು ಪರಿಪಾಲಿಸುತ್ತಿದ್ದನು. ”

## ೨೮ ನೇ ಅಧ್ಯಾಯ.—ದಿಗ್ವಿಜಯ ಪರ್ವ.

“ ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ನಾರದ ಮುನೀಂದ್ರನ ವಾಕ್ಯಗಳನ್ನು ಮನಸ್ಸಿನಲ್ಲಿ ಸ್ಮರಿಸಿ ‘ ಸಕಲರಾದ ಅರಸುಗಳನ್ನೂ ಜಯಿಸಿಯಲ್ಲವೆ ರಾಜಸೂಯ ಯಾಗವನ್ನು ಮಾಡಬೇಕು ’ ಎಂದು ನಿಟ್ಟುಸುರುಗಳನ್ನು ಬಿಡುತ್ತ ಯೋಚಿಸುತ್ತಿದ್ದರು. ಧನುರ್ವಿದ್ಯಾವಿಶಾರದನಾದ ಅರ್ಜುನನು ಆತನ ಮನಸ್ಸನ್ನು ತಿಳಿದು ಆತನ ಮನೋರಥವನ್ನು ನೆರವೇರಿಸ ಬೇಕೆಂದು ಭಾವಿಸಿ ಧರ್ಮರಾಯನನ್ನು ನೋಡಿ ‘ ಧನುಶ್ರೇಷ್ಠವಾದ ಗಾಂಡೀವವು, ಅಕ್ಷಯ ಬಾಣಗಳುಳ್ಳ ಬತ್ತಳಿಕೆಗಳು, ಸೂರ್ಯನೋಪಾದಿಯಲ್ಲಿ ಪ್ರಕಾಶಮಾನವಾದ ದಿವ್ಯ ರಥವು, ವಾಯು ವೇಗವುಳ್ಳ ಶ್ವೇತಾಶ್ವಗಳು, ಯುದ್ಧಸಾಧನಗಳಾದ ಆಯುಧಗಳೂ ಯಜ್ಞೇಶ್ವರನ ಪ್ರಸಾದದಿಂದ ನಮಗೆ ಉಂಟಾಗಿರುವದರಿಂದಲೂ—ದಿವ್ಯ ಸಭೆಯು, ಸಹಜವಾದ ಪರಾಕ್ರಮವು, ಶ್ರೀವಾಸುದೇವನ ಸಹಾಯವು, ಸ್ವಕೀಯವಾದ ರಾಜ್ಯವು, ಜರಾಸಂಧನನ್ನು ಕೊಂದದ್ದರಿಂದ ಬಂದ ಮಹತ್ತಾದ ಕೀರ್ತಿಯು, ಅಪರಿಮಿತವಾದ ಚತುರಂಗ ಬಲವೂ ಯುದ್ಧಕ್ಕೆ ಫಲವಾಗಿರುವದರಿಂದ ಈ ಭೂಮಿಯಲ್ಲಿರುವ ಸಕಲವಾದ ರಾಜಸಮೂಹವನ್ನು ಜಯಿಸಿ ಕಪ್ಪವನ್ನು ತೆಗದುಕೊಂಡು ನಿನ್ನ ಬೊಕ್ಕಸಗಳನ್ನು ತುಂಬಿಸುತಲಿದ್ದೇನೆ; ರಾಜಸೂಯಯಾಗವನ್ನು ಮಾಡು ’ ಅಂದನು. ವೀರಾಗ್ರೇಸರನಾದ ಅರ್ಜುನನ ವಾಕ್ಯವಂಕೇಳಿ ಕುರುವಂಶ ವರ್ಧನನಾದ ಧರ್ಮರಾಯನು ಧೌಮ್ಯ ಕೃಷ್ಣದ್ವೈಪಾಯನರು ಮೊದಲಾದ ಋಷಿಗಳೊಡನೆ ಕೂಡಿ ಮಿಕ್ಕಾದ ತಮ್ಮಂದರೂ ತಾನೂ ಸಂತೋಷವನ್ನು ಪಡೆಯುತ್ತಿರಲು, ಬುದ್ಧಿ ಸಂಪನ್ನನಾದ ವ್ಯಾಸ ಮುನೀಶ್ವರನು ಅರ್ಜುನನಂ ನೋಡಿ ‘ ಎಲೈ ಅರ್ಜುನನೇ, ನೀನಾಡಿದ ಮಾತುಗಳಷ್ಟೂ ಯಥಾರ್ಥಗಳೇ ಸರೀ! ಹೀಗೆ ನಿನಗೆ ಬುದ್ಧಿ ಹುಟ್ಟಿದ್ದು ಭಾಗ್ಯವಿಶೇಷದಿಂದಲ್ಲವೇ ! ಅಖಂಡಲ ಭೂಮಂಡಲವೆಲ್ಲವನ್ನು ಜಯಿಸುವ ಇಂಥಾ ಕುಮಾರನನ್ನು ಪಡೆದ ಪಾಂಡುರಾಯನು ಎಷ್ಟು ಧನ್ಯನು ! ನಿನ್ನ ಧನುರ್ವಿದ್ಯಾ ಕೌಶಲವು ಭೀಮನ ಭುಜಬಲವೂ ಶ್ರೀವಾಸುದೇವನ ನೀತಿಯೂ ನಕುಲ ಸಹದೇವರ ಶೌರ್ಯವೂ ಸಕಲರಾದ ಜನರ ಮನೋಭಿಷ್ಟಗಳನ್ನು ನೆರವೇರುವಹಾಗೆ ಮಾಡುವವು ! ಧರ್ಮರಾಯನು ರಾಜಸೂಯಯಾಗವನ್ನು ನಿರ್ವಿಘ್ನವಾಗಿ ಮಾಡಿ ಸಾರ್ವಭೌಮತ್ವವನ್ನೈದುವನು ! ಉತ್ತರದಿಗ್ಭಾಗವು ದೇವತೆಗಳಿಂದ ರಕ್ಷಿಸಲ್ಪಡುವದಾದ್ದರಿಂದ ಅತಿ ಪರಾಕ್ರಮ ಶಾಲಿಗಳಾದ ದೇವತೆಗಳೂ ಅರಸುಗಳೂ ಅಲ್ಲಿ ಉಂಟು; ಅವರನ್ನು ಜಯಿಸುವದಕ್ಕೆ ನೀನೇ ಸಮರ್ಥನಾದ್ದರಿಂದ ಆ ದಿಕ್ಕಿಗೆ ನೀನೇ ಹೋಗು ; ಜರಾಸಂಧ ಮರ್ದಕನಾದ ಭೀಮನು ಮೂಡಣ ದಿಕ್ಕಿಗೆ ಹೋಗಲಿ; ಮಹಾರಥನಾದ ಸಹದೇವನು ದಕ್ಷಿಣದಿಕ್ಕಿಗೆ ಹೋಗಲಿ ; ಸಮರ ವಿಶಾರದನಾದ ನಕುಲನು ವರುಣ ಪರಿಪಾಲಿತವಾದ ಪಶ್ಚಿಮದಿಕ್ಕಿಗೆ ಹೋಗಲಿ; ನೀವು ಹೀಗೆ ಮಾಡಿದರೆ ದಿಗ್ವಿಜಯವು ಕೈಕೂಡುವದು ’ ಅಂದನು. ವ್ಯಾಸಮುನೀಶ್ವರನ ವಾಕ್ಯಗಳಿಗೆ ಸಂತೋಷಪಟ್ಟು ಪಾಂಡವರು ಆತನನ್ನು ನಮಸ್ಕರಿಸಿ ‘ ಎಲೈ ಮುನೀಂದ್ರನೆ, ನೀನು ಹೇಳಿದ ರೀತಿಗೆ ನಡದುಕೊಳ್ಳುತ್ತಲಿದ್ದೇವೆ ’ ಎಂದು ನುಡಿದರು. ಆ ಬಳಿಕ ಧರ್ಮರಾಯನು ಅನೇಕವಾದ ಬ್ರಾಹ್ಮಣಸಮೂಹದೊಡನೆ ಕೂಡಿ ಸ್ವಸ್ತಿವಾಚನವನ್ನು ಮಾಡಿಸಿ ‘ ದುಷ್ಟನಿಗ್ರಹವನ್ನೂ ಶಿಷ್ಟಪರಿಪಾಲನವನ್ನು ಮಾಡುತ್ತ ದಿಗಂತರಗಳನ್ನು ಜಯಿಸಿ ವಿಜಯವನ್ನು ಕೈಕೊಳ್ಳಿ ! ’ ಎಂದು ತಮ್ಮಂದರನ್ನು ಹರಸಿದನು. ಆಗ ಅರ್ಜುನನು ಸಕಲ ಸೇನಾ ಸಮೇತನಾಗಿ ಅಗ್ನಿದತ್ತವಾದ ರಥವನ್ನೇರ

ಲು ಭೀಮನು ಮೊದಲಾದವರು ಸಕಲಸೇನಾ ಸಮೇತರಾಗಿ ದಿವ್ಯ ರಥಗಳನ್ನೇರಿ ಪುರೋಹಿತ ನಿರ್ದಿಷ್ಟವಾದ ಶುಭ ಮುಹೂರ್ತದಲ್ಲಿ (ಚೈತ್ರ) ಯಾತ್ರೆಗೆ ಹೊರಟರು; ಧರ್ಮರಾಯನು ಇಂದ್ರಪ್ರಸ್ಥ ಪಟ್ಟಣವಲ್ಲಿ ಸುಖವಾಗಿದ್ದನು. ಹೀಗೆ ವಿಜಯಾರ್ಥವಾಗಿ ಹೋದ ಭೀಮನು ಮೊದಲಾದ ನಾಲ್ಕು ಮಂದಿಯೂ ವ್ಯಾಸಮುನೀಶ್ವರನ ವಚನ ಪ್ರಕಾರದಿಂದ ಅರ್ಜುನನು ಉತ್ತರದಿಕ್ಕನ್ನೂ ಭೀಮನು ಪೂರ್ವದಿಕ್ಕನ್ನೂ ಸಹದೇವನು ದಕ್ಷಿಣದಿಕ್ಕನ್ನೂ ನಕುಲನು ಪಶ್ಚಿಮದಿಕ್ಕನ್ನೂ ಜಯಿಸಿದರು.

ಈ ಪ್ರಕಾರವಾಗಿ ನುಡಿದ ವೈಶಂಪಾಯನ ಮುನೀಶ್ವರನನ್ನು ನೋಡಿ ಜನಮೇಜಯರಾಯನು " ಎಲೈ ಮುನೀಶ್ವರನೆ, ನಮ್ಮ ವಂಶಕ್ಕೆ ಕರ್ತರಾದ ಪಾಂಡವರ ವಂಶವನ್ನು ಎಷ್ಟು ಕೇಳಿದರೂ ದಣುವಿಲ್ಲ; ಅವರು ನಾಲ್ಕು ದಿಕ್ಕುಗಳನ್ನೂ ಜಯಿಸಿದ ಪ್ರಕಾರವನ್ನು ವಿಸ್ತಾರವಾಗಿ ತಿಳುಹಿಸಬೇಕು " ಎನಲು, ವೈಶಂಪಾಯನನೆಂತೆಂದನು: " ಕೇಳು ಜನಮೇಜಯನೆ, ಭೀಮಾರ್ಜುನ ನಕುಲ ಸಹದೇವರು ನಾಲ್ಕು ಮಂದಿಯು ಸಮಸ್ತ ಭೂಮಂಡಲವನ್ನೂ ಜಯಿಸಿದರು; ಅವರಲ್ಲಿ ಅರ್ಜುನನ ಜಯಪ್ರತಾಪವನ್ನು ಮೊದಲು ಹೇಳುವೆನು ಕೇಳು: ಧರ್ಮರಾಯನು ಕೌರವ ರಾಜ್ಯದಲ್ಲಿ ಅರ್ಧ ರಾಜ್ಯವನ್ನು ಮೊದಲೇ ವಿಭಾಗ ಮಾಡಿಕೊಂಡು ಪರಿಪಾಲಿಸಿಕೊಂಡಿದ್ದು ಆ ಬಳಿಕ ಸಾಮ್ರಾಜ್ಯಾಭಿಲಾಷೆಯಿಂದ ಸಕಲ ಭೂಮಂಡಲವನ್ನು ಜಯಿಸಬೇಕೆಂದೆಣಿಸಿದ್ದರಿಂದ ವಿಜಯಾರ್ಥವಾಗಿ ಬರುವ ಅರ್ಜುನನನ್ನು ನೋಡಿ ಉತ್ತರ ದಿಗ್ಭಾಗದಲ್ಲಿ ಕೆಲವು ಅರಸುಗಳು ರಥ ಗಜ ಪದಾತಿ ಸಮೇತರಾಗಿ ಬಂದು ಯುದ್ಧ ಮಾಡಬೇಕೆಂದು ಕಾಣಿಸಿಕೊಂಡರು. ಪರಾಕ್ರಮ ಕಂಠೀರವನಾದ ಅರ್ಜುನನು ಮೇಘ ಮಂಡಲವನ್ನು ಹಾರಿಸುವ ವಾಯುವಿನೋಪಾದಿಯಲ್ಲಿ ಬಂದ ಅರಸುಗಳೆಲ್ಲರನ್ನೂ ಪಲಾಯನವನ್ನು ಮಾಡಿ, ಆ ಬಳಿಕ ಕುಳಿಂದ ದೇಶಾಧೀಶ್ವರನನ್ನು ಸುಲಭವಾಗಿ ಜಯಿಸಿ ಆತನನ್ನು ಸಂಗಡಲೇ ಕರಕೊಂಡು, ಸಾಲ್ವ ಪಟ್ಟಣಕ್ಕೆ ಹೋಗಿ ತನ್ನ ಪರಾಕ್ರಮವನ್ನು ತೋರಿಸಿ ಉಗ್ರಧನ್ವನನ್ನು ತನ್ನ ಅಧೀನ ಮಾಡಿಕೊಂಡು, ಆ ಬಳಿಕ ಧನವಂತನಾದ ದ್ಯುಮತ್ಸೇನನನ್ನು ಯುದ್ಧದಲ್ಲಿ ಜಯಿಸಿ ಆತನನ್ನೂ ಕರಕೊಂಡು, ಕಟಕದೇಶಕ್ಕೆ ಹೋಗಿ ಸುನಾಭನ ಪರಾಕ್ರಮವನ್ನು ಹೋಗಲಾಡಿಸಿ ಆತನನ್ನು ತನ್ನ ಸಂಗಡಲೇ ಕರಕೊಂಡು, ಅನಂತರ ಕಾಳ ಕುಟಕ ಕುಳಿಂದರೆಂಬ ಅರಸುಗಳನ್ನು ಜಯಿಸಿ, ಸುಮಂಡಲಕ್ಕೆ ಹೋಗಿ ಪಾಪಜಿತ್ತೆಂಬ ಅರಸನ್ನು ಜಯಿಸಿ ಆತನನ್ನೂ ಕರಕೊಂಡು, ಪ್ರತಿವಿಂಧ್ಯನನ್ನು ಜಯಿಸಿ, ಮತ್ತೂ ಸಪ್ತದ್ವೀಪಗಳಲ್ಲಿರುವ ಅರಸುಗಳ ಶೌರ್ಯವನ್ನು ಕೆಡಿಸಿ, ಈಶಾನ್ಯ ದಿಗ್ಭಾಗವನ್ನು ಪ್ರವೇಶಿಸಿ ಅಲ್ಲಿದ್ದ ಅರಸುಗಳೆಲ್ಲರನ್ನೂ ಜಯಿಸಿ ಅವರನ್ನೂ ಕರಕೊಂಡು, ಪರಮಕಾಂಭೋಜ ಹೃಷೀಕ ದೇಶಾಧಿಪತಿಗಳ ಗರ್ವ ಭಂಗವನ್ನೂ ಮಾಡಿ, ಉತ್ತರ ಋಷೀಕದೇಶವನ್ನು ಸುತ್ತು ಮುತ್ತಿಕೊಂಡು ಅತಿ ಘೋರವಾದ ಯುದ್ಧದಲ್ಲಿ ಅಲ್ಲಿದ್ದ ಅರಸುಗಳೆಲ್ಲರನ್ನೂ ಜಯಿಸಿ, ಅವರನ್ನು ಕರಕೊಂಡು ಪ್ರಾಗ್ಜ್ಯೋತಿಷ ಪಟ್ಟಣಕ್ಕೆ ಹೋದನು. ಅಲ್ಲಿ ಕಿರಾತ ಸೇನೆಗಳನ್ನು ಮತ್ತು ಸಮುದ್ರ ತೀರದಲ್ಲಿರುವ ನಾನಾ ಯೋಧಾನುಯೋಧರನ್ನೂ ಕೂಡಿಸಿಕೊಂಡು ಭಗದತ್ತನು ಅಸದೃಶವಾಗಿ ಆಶ್ಚರ್ಯಕರವಾಗಿ ಅತಿ ಘೋರವಾದ ಯುದ್ಧವನ್ನು ಎಂಟು ದಿವಸಗಳು ಮಾಡಿ, ಸ್ವಲ್ಪವಾದರೂ ಶ್ರಮಪಡದೇ ಇರುವ ಅರ್ಜುನನನ್ನು ನೋಡಿ ನಸುನಗುತ ' ಎಲೈ ಅರ್ಜುನನೆ, ನೀನು ದೇವೇಂದ್ರನ ಮಗನಾದ್ದರಿಂದ ಇಂಥಾ ಪರಾಕ್ರಮಶಕ್ತಿ ನಿನಗುಂಟು; ನಾನು ದೇವೇಂದ್ರನಿಗೆ ಮಿತ್ರನಾದ್ದರಿಂದ ಯುದ್ಧದಲ್ಲಿ ದೇವೇಂದ್ರನಿಗೆ ಸಮಾನನಾದವರೂ ಇನ್ನು ಮೇಲೆ ನಿನ್ನ ಕೂಡೆ ಯುದ್ಧವನ್ನು ಮಾಡುವನಕ್ಕೆ ನಾನು ಶಕ್ತನಲ್ಲ; ನೀನು ಹೇಳಿದ ಕಾರ್ಯವನ್ನು ಮಾಡುತಲಿದ್ದೇನೆ ಹೇಳು ' ಅಂದನು. ಅರ್ಜುನನು ಭಗದತ್ತನನ್ನು ನೋಡಿ ' ಕುರು ಪಾಂಡವ ಶ್ರೇಷ್ಠನಾದ ಧರ್ಮರಾಯನು ರಾಜಸೂಯ ಯಾಗವನ್ನು ಮಾಡುತ್ತಲಿದ್ಧಾನೆ; ಆತನಿಗೆ ಕಪ್ಪವನ್ನು ಕೊಡಬೇಕು; ನಮ್ಮ ತಂದೆಗೆ ಸ್ನೇಹಿತನಾದ್ದರಿಂದ ನಿನ್ನನ್ನು ಶಿಕ್ಷಿಸಲಾರೆನು; ನೀನು ಪ್ರೀತಿ ಪೂರ್ವಕವಾಗಿ ಕೊಟ್ಟದ್ದನ್ನು ತೆಗದುಕೊಳ್ಳುವೆನು ' ಅಂದನು. ಆ ಭಗದತ್ತನು ಸಂತೋಷಪಡುತ್ತ ' ನಿನಗೆ ಹ್ಯಾಗೋ ಹಾಗೆಯೇ ನನಗೂ ಧರ್ಮರಾಯನು ಪೂಜ್ಯನಾದ್ದರಿಂದ ರಾಜಸೂಯ ಯಾಗಕ್ಕೆ ಬೇಕಾದ ವಸ್ತುಗಳನ್ನು ಕೊಡುತ್ತಲಿದ್ದೇನೆ; ಮತ್ತು ನಿನಗೆ ಅಭೀಷ್ಟವಾದ ಕಾರ್ಯಗಳನ್ನು ಮಾಡುತ್ತಲಿದ್ದೇನೆ' ಎಂದು ಪ್ರಿಯವಚನಗಳನ್ನು ಆಡುತ್ತ ಅರ್ಜುನನನ್ನು ತನ್ನ ಪಟ್ಟ

ಣಕ್ಕೆ ಕರಕೊಂಡು ಹೋದನು. ಅರ್ಜುನನು ಒಂದು ತಿಂಗಳು ಪ್ರಾಗ್ಜ್ಯೋತಿಷ ಪಟ್ಟಣದಲ್ಲಿದ್ದು ಭಗದತ್ತನು ಕೊಟ್ಟ ವಸ್ತು ವಾಹನಗಳನ್ನು ತೆಗದುಕೊಂಡು, ಅಲ್ಲಿಂದ ಹೊರಟು ರಾಮಗಿರಿಯನ್ನು ಜಯಿಸಿ, ಅಲ್ಲಿಂದ ಭುವನ ಪರ್ವತಕ್ಕೆ ಹೋಗಿ ಅನಾವಿಲನೆಂಬ ಅರಸನ್ನು ಜಯಿಸಿದನು."

## ೨೯ನೇ ಅಧ್ಯಾಯ.—ದಿಗ್ವಿಜಯಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಪರಾಕ್ರಮ ಧುರಂಧರನಾದ ಅರ್ಜುನನು ಕುಬೇರ ಪರಿಪಾಲಿತವಾದ ಉತ್ತರದೇಶಕ್ಕೆ ಹೋಗಿ, ಅಭ್ಯಂತಗಿರಿಯು ಬಾಹ್ಯಗಿರಿಯು ಉಪಗಿರಿಯು ಮೊದಲಾದ ಏಳು ದುರ್ಗಗಳಿಗೆ ಅಧಿಪತಿಗಳಾದ ತುರುಕರನ್ನು ಜಯಿಸಿ, ರತ್ನ ಕಾಂಚನ ಮೊದಲಾದ ಕಪ್ಪಗಳನ್ನು ತೆಗದು ಕೊಂಡು, ಆವರು ವಶವರ್ತಿಗಳಾಗಿ ಸಂಗಡ ಬರಲು ನಾಲ್ಕು ಪ್ರಕಾರವಾದ ವಾದ್ಯಧ್ವನಿಗಳಿಂದಲೂ ಕುದುರೆಗಳ ಹೇಷಾರವಗಳಿಂದಲೂ ಆನೆಗಳ ಬೃಂಹಿತಗಳಿಂದಲೂ ಭೂಚಕ್ರವು ಅದರುತ್ತಿರಲು—ಬಾಲನಾಗಿ ಕೌಲೂತ ಪಟ್ಟಣಾಧಿಪತಿಯಾದ ಬೃಹತಮಹೀಪಾಲನು ಚತುರಂಗ ಬಲಸಮೇತನಾಗಿ ಆತ್ಯಾಶ್ಚರ್ಯಕರವಾಗಿ ಯುದ್ಧವನ್ನು ಮಾಡಲು ಆತನನ್ನು ಜಯಿಸಿ, ಆವನಿಂದ ಅರ್ಬುದ ಆನೆಗಳನ್ನೂ ನ್ಯರ್ಬುದ ಕುದುರೆಗಳನ್ನೂ ಮತ್ತು ಅನೇಕ ಕೋಟಿ ಧನಗಳನ್ನೂ ಕಪ್ಪವಾಗಿ ತೆಗದುಕೊಂಡು ಅವನನ್ನೂ ಕರಕೊಂಡು, ಸೇನಾ ಬಿಂದುವಿನ ಪಟ್ಟಣವನ್ನು ದಾಟಿ, ಮೋದಾ ಪುರವನ್ನು ಸೇರಿ ಅಲ್ಲಿರುವ ವಾಮದೇವನು ಸುವಾಮನು ಸುದಾಮನು ಪುಷ್ಕಲನು ಎಂಬ ಅರಸುಗಳನ್ನೂ ಉತ್ತರ ಕೌಲೂತ ದೇಶಗಳಲ್ಲಿರುವ ಅರಸುಗಳನ್ನೂ ಜಯಿಸಿ, ಅವರನ್ನೂ ಕರಕೊಂಡು ಅಲ್ಲಿ ಮುಖ್ಯವಾಗಿರುವ ಐದು ದೇಶಗಳನ್ನು ಆಕ್ರಮಿಸಿ, ಸೇನಾಬಿಂದುರಾಯನು ಆಳುವ ದೇವಪ್ರಸ್ಥ ಪಟ್ಟಣದಲ್ಲಿ ಪಾಳ್ಯವನ್ನು ಇಳಿಯಿಸಿ, ಅಲ್ಲಿಂದ ಹೊರಟು ವಿಶ್ವಗಶ್ವನೆಂಬ ಅರಸನನ್ನು ಜಯಿಸಿ, ಆ ಬಳಿಕ ಪರ್ವತೀಯ ಸೇನಾ ಸಮೇತನಾದ ಪೌರವನನ್ನು ಜಯಿಸಿ, ಅನ್ಯೋನ್ಯ ಸಹಾಯಗಳಾಗಿ ಪ್ರವರ್ತಿಸುತ್ತಿರುವ ಏಳು ಮಂದಿ ದಸ್ಯುಗಣವನ್ನು ಧಿಕ್ಕರಿಸಿ, ಕಾಶ್ಮೀರದೇಶಾಧೀಶ್ವರರಾದ ಕ್ಷತ್ರಿಯರನ್ನು ಗೆದ್ದು, ದಶಮಂಡಲಾಧಿಪತಿಯಾದ ಲೋಹಿತನನ್ನು ಅತಿಕ್ರಮಿಸಿ, ಆ ಬಳಿಕ ತ್ರಿಕರ್ತದ್ವಾರಿಕ ಕಂಕಣ ಅಭಿಸಾರದೇಶಾಧೀಶ್ವರರಾದ ಕ್ಷತ್ರಿಯರ ಗರ್ವವನ್ನು ಅಡಗಿಸಿ, ಕರೂಶದೇಶಾಧೀಶ್ವರನಾದ ರೋಚಮಾನನನ್ನು ಜಯಿಸಿ, ಸಿಂಹಪುರಕ್ಕೆ ಅಧಿಪತಿಯಾದ ಚಿತ್ರಾಯುಧನನ್ನು ಕೊಂದು, ವಂಗ ಗೌಳ ಉತ್ತರ ಚೋಳಾಧಿಪತಿಗಳನ್ನು ಜಯಿಸಿ, ಸಂತುಷ್ಟಾಂತರಂಗನಾಗಿ ಬಾಹ್ಲಿಕ ದೇಶಕ್ಕೆ ಹೋಗಿ ಅಲ್ಲಿದ್ದವರನ್ನು ಕರಕೊಂಡು, ದರದ ಕಾಂಭೋಜ ದೇಶಾಧಿಪತಿಗಳಾದ ಯವನ ಶಕ ಕಿರಾತ ಬರ್ವರ ಕಾಂಭೋಜ ಬಾಹ್ಲಿಕ ಪಾರಶಿಕ ಮೊದಲಾದ ಮ್ಲೇಚ್ಛವರ್ಗಗಳನ್ನು ಅನರ್ಗಳ ಪರಾಕ್ರಮದಿಂದ ನಿಗ್ರಹಿಸಿ, ಮತ್ತು ಈಶಾನದಿಕ್ಕಿಗೆ ಅಭಿಮುಖವಾಗಿ ಹೋಗಿ, ಅಲ್ಲಿದ್ದ ಅರಸುಗಳನ್ನು ಜಯಿಸಿ, ಸಂತುಷ್ಟಾಂತ ರಂಗನಾಗಿ ಅತಿವೇಗಶಾಲಿಗಳಾಗಿ ಗಿಣಿಹೊಟ್ಟೆಯೋಪಾದಿಯಲ್ಲಿ ವರ್ಣವುಳ್ಳ ಕುದುರೆಗಳನ್ನು ತೆಗದುಕೊಂಡು—ಈ ರೀತಿಯಿಂದ ಭಾರತವರುಷ ಪಟ್ಟಣವನ್ನು ಜಯಿಸಿ, ಮತ್ತು ದಿವ್ಯವರ್ಷಗಳಲ್ಲಿರುವ ಕುಲಪರ್ವತಾಧಿಪತಿಗಳಾದ ಅರಸುಗಳನ್ನು 'ಪಾದಾಕ್ರಾಂತರನ್ನು ಮಾಡಿದನು" ಎಂದು ವೈಶಂಪಾಯನ ಮುನೀಂದ್ರನು ಜನಮೇಜಯ ರಾಯನಿಗೆ ವಿವರಿಸಿದನು.

## ೩೦ನೇ ಅಧ್ಯಾಯ.—ದಿಗ್ವಿಜಯಪರ್ವ ಶೇಷ.

ಅನಂತರದಲ್ಲಿ ವೈಶಂಪಾಯನ ಮುನೀಂದ್ರನನ್ನು ಕುರಿತು ಜನಮೇಜಯನು ಇಂತೆಂದನು.

"ಎಲೈ ವೈಶಂಪಾಯನ ಮುನೀಂದ್ರನೆ, ಅರ್ಜುನನು ದಿವ್ಯವರ್ಷಗಳನ್ನೂ ಅಲ್ಲಿರುವ ಕುಲಪರ್ವತಗಳನ್ನೂ ಆ ಕುಲಪರ್ವತಾಧೀಶ್ವರರನ್ನೂ ಜಯಿಸಿದ ವೃತ್ತಾಂತವನ್ನೂ ಅವರ ಹೆಸರುಗಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ವಿವರಿಸಬೇಕು" ಎನಲು ವೈಶಂಪಾಯನ ಮುನೀಂದ್ರನಿಂತೆಂದನು ; "ಕೇಳು ಜನಮೇಜಯನೆ, ಈ ರೀತಿಯಲ್ಲಿ

ಭಾರತವರ್ಷವೆಲ್ಲವನ್ನು ಜಯಿಸಿ ಹಿಮವತ್ಪರ್ವತದ ಸಮೀಪದಲ್ಲಿರುವವರ ಮದವನ್ನು ಅಡಗಿಸಿ ಅಲ್ಲಿಂದ ಹೊರಟು ಶ್ವೇತಪರ್ವತವನ್ನು ತಲಪಿ ವಾಸ್ಯವನ್ನು ಇಳಿಯಿಸಿದನು. ಅಲ್ಲಿಂದ ಹೊರಟು ರಾಮಪುತ್ರಪರಿಪಾಲಿತವಾದ ಕಿಂಪುರುಷ ವರ್ಷವನ್ನು ಸುತ್ತ ಮುತ್ತಿ ಸಕಲ ಕ್ಷತ್ರಿಯ ಭಯಂಕರವಾದ ಯುದ್ಧವನ್ನು ಮಾಡಿ, ಅವರದೆಶೆಯಿಂದ ಕಪ್ಪವನ್ನು ತೆಗೆದುಕೊಂಡು, ಗುಹ್ಯಕರಕ್ಷಿತವಾದ ಕಟಪರ್ವತವನ್ನು ದಾಟಿ, ಬಹುಸೇನಾ ಸಮೇತನಾಗಿ ನಡದು ಹರಿವರ್ಷವನ್ನೂ ಅಲ್ಲಿ ಅತಿವಿನೋದವುಳ್ಳ ಪಟ್ಟಣಗಳನ್ನೂ ಅತ್ಯುನ್ನತವಾದ ವೃಕ್ಷಗಳನ್ನೂ ಅಮೃತೋಪಮಾನಗಳಾದ ಉದಕಗಳುಳ್ಳ ನದಿಗಳನ್ನೂ ದೇವತಾಸಮಾನರಾದ ಪುರುಷರನ್ನೂ ಸಕಲ ಸೌಂದರ್ಯ ಸಮೇತರಾದ ಸ್ತ್ರೀಯರನ್ನೂ ನೋಡಿ ಸಂತೋಷಪಡುತ್ತ ಅವರು ಕೊಟ್ಟ ಕಪ್ಪಗಳನ್ನು ತೆಗೆದುಕೊಂಡು, ಅತಿ ವಿಸ್ತಾರವುಳ್ಳ ನಿಷಧ ಪರ್ವತದಲ್ಲಿರುವವರನ್ನೂ ಜಯಿಸಿ ಅಲ್ಲಿಂದ ಇಳಾವೃತವರ್ಷಕ್ಕೆ ಹೋಗಿ, ಅಲ್ಲಿ ದೇವತಾ ಪ್ರಕಾಶಮಾನರಾಗಿ ಅಪೂರ್ವದರ್ಶನರಾಗಿ ಸಕಲವೈಭವ ಸಮೇತರಾಗಿರುವ ದಿವ್ಯ ಪುರುಷರನ್ನೂ ನವರತ್ನ ಕನಕಮಯಗಳಾದ ಮನೆಗಳನ್ನೂ ಅಪ್ಸರಸ್ತ್ರೀ ಸಮಾನರಾದ ಸ್ತ್ರೀಜನರನ್ನೂ ನೋಡಿ, ಅಲ್ಲಿರುವ ದಿವ್ಯ ಪುರುಷರನ್ನು ಗೆದ್ದು, ಅವರಿಂದ ದಿವ್ಯರತ್ನ ಭೂಷಣಾಂಬರಾದಿಗಳನ್ನು ತೆಗೆದುಕೊಂಡು, ಮತ್ತು ಬಡಗಣ ಮುಖನಾಗಿ, ಸುವರ್ಣಮಯವಾಗಿ ಪ್ರವೇಶಿಸುವದಕ್ಕೆ ಅಯೋಗ್ಯವಾಗಿ ಲಕ್ಷಯೋಜನ ಪರಿಮಿತವಾಗಿ ಜಾಜ್ವಲ್ಯಮಾನವಾಗಿ ಉತ್ತಮೋತ್ತಮವಾಗಿ ದಿವ್ಯವಾಗಿ ದೇವಗಂಧರ್ವ ಸಿದ್ಧ ಚಾರಣ ಸೇವಿತವಾಗಿ ನಿತ್ಯ ಪುಷ್ಪ ಫಲ ಸಮೇತವಾಗಿ ಅಪ್ರಮೇಯವಾಗಿ ಅಪಾರಮಹಿಮಾಸ್ಪದವಾಗಿ ಅಜೇಯವಾಗಿ ಸುಕೃತಿಜನ ಪ್ರಾಪ್ಯಸ್ಥಾನವಾಗಿ ನಾನಾಮೃಗ ಸಮಾಕೀರ್ಣವಾಗಿ ದಿವ್ಯೌಷಧಿಗಳಿಂದ ಪ್ರಕಾಶಮಾನವಾಗಿ ಬಹು ಪಕ್ಷಿಗಳ ಧ್ವನಿಯಿಂದ ಒಪ್ಪಿ ಸುವರ್ಣ ಶಿಖರಗಳಿಂದ ಸೂರ್ಯನ ತೇಜಸ್ಸನ್ನು ತಿರಸ್ಕರಿಸುತ್ತಿರುವ ಮಹಾ ಮೇರುಪರ್ವತವನ್ನು ನೋಡಿ, ಸಂತುಷ್ಟಚಿತ್ತನಾಗಿ, ಮಹಾ ಮೇರು ಪರ್ವತದ ದಕ್ಷಿಣ ಭಾಗದಲ್ಲಿರುವ ನಿತ್ಯ ಕುಸುಮ ಫಲಾಕೀರ್ಣವಾಗಿ ದೇವಗಣ ಸೇವಿತವಾಗಿ ಆಕಾಶವನ್ನು ಮುಟ್ಟುತ್ತಿರುವ ಕೊನೆ ಕೊಂಬುಗಳಿಂದ ಒಪ್ಪುತ್ತಲಿರುವ —ಯಾವ ಜಂಬೂ ವೃಕ್ಷದಿಂದ ಈ ದ್ವೀಪಕ್ಕೆ ಜಂಬೂದ್ವೀಪವೆಂಬ ಹೆಸರಾಯಿತೋ ಅಂಥಾ ಜಂಬೂ ವೃಕ್ಷವನ್ನು ನೋಡಿ, ಆ ಇಳಾವೃತವರ್ಷದಲ್ಲಿರುವ ಸಿದ್ಧ ಸಾಧ್ಯ ಕಿನ್ನರ ಕಿಂಪುರುಷರು ಮೊದಲಾದವರಿಂದ ಅನೇಕ ವಸ್ತುವಾಹನಗಳನ್ನೂ ತೆಗೆದುಕೊಂಡು, ಮೇರು ಪರ್ವತಕ್ಕೆ ಪ್ರದಕ್ಷಿಣವಾಗಿ ಬರುತ್ತಿದ್ದನು. ಆ ಸಮಯದಲ್ಲಿ ಸುವರ್ಣ ಕಮಲಗಳು ಸುವರ್ಣ ಜಲಗಳು ಸುವರ್ಣಮಯವಾದ ಸೈಕತಗಳೂ ಚಿನ್ನದ ನೈದಿಲು ಪುಷ್ಪಗಳೂ ಉಂಟಾಗಿ ಉಭಯತೀರಗಳಲ್ಲಿ ಈ ರೀತಿಯುಳ್ಳಿರುವ ಸುವರ್ಣವೃಕ್ಷಗಳಿಂದ ಮನೋಹರವಾಗಿ ರತ್ನಖಚಿತ ಸೋಪಾನಗಳುಳ್ಳಂಥಾದ್ದಾಗಿ ಗಂಧರ್ವಾಪ್ಸರೋಜನಗಳ ನೃತ್ಯ ಗೀತಗಳಿಂದಲೂ ನಾನಾ ವಿಚಿತ್ರವಾದ ಮೇಲು ಕಟ್ಟಣಗಳಿಂದಲೂ ಒಪ್ಪುತ್ತಲಿರುವ ರತ್ನ ಮಂಟಪಗಳಿಂದಲೂ ಪ್ರಕಾಶಮಾನವಾದ ತೀರಪ್ರದೇಶಗಳುಳ್ಳ ಜಂಬೂನದಿಯನ್ನು ನೋಡಿ, ಅದರ ಮಹಿಮೆಯನ್ನು ಸ್ತುತಿಸುತ, ಅದರ ಪ್ರಾಂತ್ಯದಲ್ಲಿರುವಂಥಾವರಾಗಿ ಮನೋಹರಾಕಾರರಾಗಿ ಜಂಬೂರಸಾಹಾರಿಗಳಾಗಿ ದಿವ್ಯಸ್ತ್ರೀ ಸಮೇತರಾಗಿ ನಿತ್ಯ ಸುಖೋಜ್ವಲರಾಗಿ ನಿತ್ಯ ಸಂತುಷ್ಟರಾಗಿರುವ ಪುರುಷರ ದೆಸೆಯಿಂದ ದಿವ್ಯ ರತ್ನ ಭೂಷಣ ಸುವರ್ಣ ಮೊದಲಾದ ವಸ್ತುವನ್ನು ಕಾಣಿಕೆಯಾಗಿ ತಕ್ಕೊಂಡು, ಮತ್ತು ಪಶ್ಚಿಮ ದೇಶಕ್ಕೆ ಹೋಗಿ ಸರ್ಪಾಧಿಪತಿಗಳಿಂದ ಸಂರಕ್ಷಿತವಾಗಿರುವ ಆ ದೇಶವನ್ನು ಜಯಿಸಿ, ಮತ್ತೂ ಅಲ್ಲಿಂದ ಹೊರಟು ಗಂಧಮಾದನ ಪರ್ವತಕ್ಕೆ ಬಂದು, ಅಲ್ಲಿರುವಂಥಾವರನ್ನು ಜಯಿಸಿ, ಸಕಲ ದಿವ್ಯ ರತ್ನ ಪರಿಪೂರ್ಣವಾದ ಕೇತುಮಾಲ ವರ್ಷದಲ್ಲಿರುವ ಪುರುಷರನ್ನು ಜಯಿಸಿ, ದುರ್ಲಭವಾದ ರತ್ನಗಳು ಮೊದಲಾದ ವಸ್ತು ವಿಶೇಷಗಳನ್ನು ತಕ್ಕೊಂಡು, ಅಲ್ಲಿಂದ ಹೊರಟು ಇಳಾವೃತ ಮಧ್ಯ ದೇಶಕ್ಕೆ ಬಂದು, ಮೇರುಮಂದರ ಮಧ್ಯ ದೇಶದಲ್ಲಿರುವ ಶೈಲೋದಕವೆಂಬ ನದೀ ಪ್ರಾಂತ್ಯದಲ್ಲಿ ನಿಬಿಡವಾಗಿರುವ ಬಿದುರಡವಿಯಲ್ಲಿ ನೆಲಸಿಕೊಂಡಿರುವ ಕಷರನ್ನು ತ್ರಿಷರನ್ನು ಪ್ರವಾಸರನ್ನು ದೀರ್ಘವೇಣಿಕರನ್ನು ಪಶುಪರನ್ನು ಕುಣಿಂದರನ್ನು ಟಂಕಣರನ್ನು ಜಯಿಸಿ, ಕಾಣಿಕೆಗಳನ್ನು ತಕ್ಕೊಂಡು, ಪರ್ವತಶ್ರೇಷ್ಠವಾದ ಮಾಲ್ಯವಂತವನ್ನು ಅತಿಕ್ರಮಿಸಿ, ಭದ್ರಾಶ್ವವರ್ಷಕ್ಕೆ ಹೋಗಿ, ಅಲ್ಲಿರುವ ಪುರುಷರನ್ನು ಸ್ವಾಧೀನಮಾಡಿಕೊಂಡು, ರತ್ನ ಕಾಂಚನಗಳನ್ನು ತಕ್ಕೊಂಡು, ನೀಲ ಪರ್ವತದಲ್ಲಿರುವಂಥಾವರನ್ನು ಜಯಿಸಿ, ಅಲ್ಲಿಂದ ಹೊರಟು ರಮ್ಯಕವ

ರ್ಷವನ್ನು ಪ್ರವೇಶಿಸಿ, ಅಲ್ಲಿರುವಂಥಾವರನ್ನು ಜಯಿಸಿ, ಗುಹ್ಯಕ ದೇಶಕ್ಕೆ ಬಂದು, ಅಲ್ಲಿ ಬಹು ವಿಚಿತ್ರವಾದ ಸುವರ್ಣ ಮೃಗ ಪಕ್ಷಿ ಕುಲಗಳನ್ನು ಯಜ್ಞಾರ್ಥವಾಗಿ ತಕ್ಕೊಂಡು, ಅಲ್ಲಿಂದ ಹೊರಟು ಶ್ವೇತಪರ್ವತದಲ್ಲಿರುವಂಥಾವರನ್ನು ಜಯಿಸಿ, ಹಿರಣ್ಯ ವರ್ಷವನ್ನು ಪ್ರವೇಶಿಸಿದನು. ಆ ಸಮಯದಲ್ಲಿ ಪಟ್ಟಣದ ಸ್ತ್ರೀಯರು ಆ ದೇಶ ಮಧ್ಯದಲ್ಲಿ ನಾನಾರತ್ನ ಖಚಿತಗಳಾದ ಉಪ್ಪರಿಗೆಗಳನ್ನೇರಿ ಸರ್ವಾಭರಣ ಭೂಷಿತರಾಗಿ ಮನೋಹರಾಕಾರನಾಗಿ ವೀರಾಗ್ರೇಸರನಾಗಿ ಮಹಾ ಕೀರ್ತಿ ಸಂಪನ್ನನಾಗಿ ಮಹಾರಾಜ ಚಿಹ್ನಾಲಂಕೃತನಾಗಿ ಧನುರ್ಧರನಾಗಿ ಧನವಂತನಾಗಿ ಸುಕುಮಾರನಾಗಿ ತೇಜೋವಿರಾಜಮಾನನಾಗಿ ಕಿರೀಟ ಯುಕ್ತನಾಗಿ ಸೇನಾಸಮೇತನಾಗಿ ಮಹೇಂದ್ರ ಸಮಾನನಾಗಿ ಮಹಾ ಬಲಶಾಲಿಯಾಗಿ ಶತ್ರು ಭಯಂಕರನಾದ ಅರ್ಜುನನನ್ನು ನೋಡಿ ಕುಮಾರಸ್ವಾಮಿಯಾಗಿ ಎಣಿಸಿ 'ಈ ಪರಾಕ್ರಮ ಕಂಡ್ರೆ ನಿನಗೆ ಎದುರಾಗಿ ಬರುವ ವೈರಿಗಳುಂಟೆ!' ಎಂದು ಬಹು ಪ್ರಕಾರವಾಗಿ ಸ್ತುತಿಸುತ್ತ ಪುಷ್ಪವೃಷ್ಟಿಗಳನ್ನು ಕರೆಯಲು, ಅಲ್ಲಿರುವ ಅರಸುಗಳ ದೆಸೆಯಿಂದ ಮಣಿ ಚಿನ್ನ ಹವಳ ವಸ್ತ್ರಾಭರಣ ಮೊದಲಾದ ವಸ್ತುಗಳನ್ನು ಕಾಣಿಕೆಯಾಗಿ ತಕ್ಕೊಂಡು ಅಲ್ಲಿಂದ ಶೃಂಗವಂತ ಪರ್ವತಕ್ಕೆ ಹೋದನು."

## ೩೧ನೇ ಅಧ್ಯಾಯ.—ದಿಗ್ವಿಜಯ ಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಅರ್ಜುನನು ಶೃಂಗವಂತಪರ್ವತಕ್ಕೆ ಉತ್ತರ ದಿಗ್ಭಾಗದಲ್ಲಿರುವ ಹರಿವರ್ಷವನ್ನು ಸೇರಿ, ಅಲ್ಲಿರುವ ವಿದ್ಯಾಧರ ಯಕ್ಷ ಪ್ರಮುಖರನ್ನು ಜಯಿಸಿ, ಅವರಿಂದ ಬಹು ದ್ರವ್ಯವನ್ನು ರತ್ನ ಭೂಷಣಾಂಬರಗಳನ್ನು ಯಜ್ಞಾರ್ಥಗಳಾದ ಕೃಷ್ಣಾಜಿನಗಳನ್ನು ವಿಚಿತ್ರವಾದ ನಾರು ಸೀರೆಗಳನ್ನು ತಕ್ಕೊಂಡು, ಅಲ್ಲಿಂದ ಸಕಲ ಸೈನ್ಯ ಸಮೇತನಾಗಿ ಉತ್ತರ ಕುರುದೇಶಗಳನ್ನು ಜಯಿಸಬೇಕೆಂದು ಹೋದನು. ಆಗ್ಗೆ ಮಹಾಬಲ ಪರಾಕ್ರಮ ಸಂಪನ್ನರಾಗಿ ಪರ್ವತ ಸಮಾನ ಶರೀರಗಳಾದ ದ್ವಾರಪಾಲಕರು ಬಂದು ಆತನನ್ನು ನೋಡಿ 'ಎಲೈ ಅರ್ಜುನನೆ, ನಿನ್ನಿಂದ ಈ ದಿವ್ಯವಾದ ಪಟ್ಟಣವು ಜಯಿಸುವದಕ್ಕೆ ಕೂಡದು; ಮನುಷ್ಯರಿಗೆ ಪ್ರವೇಶಿಸುವದಕ್ಕೆ ಅಶಕ್ಯವಾಗಿರುವದ್ದರಿಂದ ಉತ್ತರ ಕುರುಭೂಮಿ ಎನಿಸಿಕೊಳ್ಳುವದು; ಇಲ್ಲಿ ಜಗಳಮಾಡಬಾರದು; ಇಲ್ಲಿರುವ ದಿವ್ಯ ಪುರುಷರು ಮನುಷ್ಯರಿಗೆ ಅದೃಶ್ಯಾಕಾರರಾಗಿರುವರು; ಈ ದಿಕ್ಕಿಗೆ ಹೋದರೆ ನೀನು ಪುನಹ ಬರುವದು ದುರ್ಘಟ; ನಿನಗೆ ದಿಗ್ವಿಜಯವಾಯಿತು ಎಂದು ಸಕಲರಾದವರು ಸಂತೋಷ ಪಟ್ಟೆವು; ಯುದ್ಧದಿಂದ ದೇಶವನ್ನು ಜಯಿಸ ಬೇಕೆಂಬ ಮನೋರಥ ಹೊರತಾಗಿ ಮಿಕ್ಕಾದ ಕಾರ್ಯ ವುಂಟಾದರೆ ಹೇಳು; ಆ ಕಾರ್ಯವನ್ನು ಮಾಡುತಲಿಧೇವೆ' ಅಂದರು. ಅರ್ಜುನನು ಅವರನ್ನು ನೋಡಿ ಧರ್ಮರಾಯನು ವಾಸುದೇವನ ಅಪ್ಪಣೆಯಿಂದ ರಾಜಸೂಯವನ್ನು ಮಾಡುವದಕ್ಕೆ ಎಣಿಸಿ ಸಾಮ್ರಾಜ್ಯವನ್ನು ಬಯಸಿದ್ಧಾನೆ; ಆ ಸಾಮ್ರಾಜ್ಯವು ಲಭಿಸುವ ಹಾಗೆ ಮಾಡಬೇಕೆಂದು ಇಲ್ಲಿಗೆ ಬಂದೆನು; ನೀವು ಮನುಷ್ಯರಿಗೆ ಅದೃಶರಾದ ಕಾರಣ ನಾನು ಈ ದೇಶವನ್ನು ಯಾಕೆ ಪ್ರವೇಶಿಸಬೇಕು; ಧರ್ಮರಾಯನಿಗೆ ಕಾಣಿಕೆಗಳನ್ನು ಕೊಟ್ಟರೆ ಮರಳಿ ಹೋಗುತಲಿಧೇನೆ; ಇಲ್ಲದಿದ್ದರೆ ಆ ಶ್ರೀಕೃಷ್ಣಸ್ವಾಮಿಯೊಡನೆ ಬಂದು ನಿಮ್ಮ ಕೂಡೆ ಹೋರಿ ವಿಜಯವನ್ನು ಕೈಕೊಳ್ಳುತಲಿಧೇನೆ' ಎಂದು ನುಡಿದನು. ಆ ವಾಕ್ಯವನ್ನು ಕೇಳಿ ಆ ದ್ವಾರಪಾಲಕರು ದಿವ್ಯಾಭರಣಗಳನ್ನೂ ದಿವ್ಯ ಭೂಷಣಗಳನ್ನೂ ಅತಿ ಶುಭ್ರವಾದ ನಾರು ಸೀರೆಗಳನ್ನೂ ಕೊಟ್ಟರು. ಈ ಪ್ರಕಾರದಿಂದ ಅನೇಕರಾದ ಅರಸುಗಳನ್ನು ವರ್ಷಾಧಿಪತಿಗಳನ್ನು ಜಯಿಸಿ, ಉತ್ತರ ದಿಗ್ವಿಜಯವನ್ನು ಮಾಡಿಕೊಂಡು, ಸಹಸ್ರ ಸಂಖ್ಯೆಯುಳ್ಳ ಧನಗಳನ್ನೂ ಅಪರಿಮಿತ ನವರತ್ನ ರಾಶಿಗಳನ್ನೂ ತಿತ್ತಿರ ಪಕ್ಷಿವರ್ಣವುಳ್ಳಂಥಾದ್ದಾಗಿ ಗಿಣೀ ಹೊಟ್ಟೆಯ ಕಾಂತಿವುಳ್ಳಂಥಾದ್ದಾಗಿ ಮಲಿನ ಬಣ್ಣವುಳ್ಳಂಥಾದ್ದಾಗಿ ವಾಯುವೇಗ ಸಂಪನ್ನಗಳಾದ ಆನೆ ಕುದುರೆಗಳನ್ನೂ ಮತ್ತೂ ಯಾಗಾರ್ಹವಾದ ವಸ್ತು ನಿಚಯಗಳನ್ನೂ ತಕ್ಕೊಂಡು, ಚತುರಂಗಬಲ ಸಮೇತನಾಗಿ, ಮಹಾ ವೈಭವದಿಂದ ಇಂದ್ರಪ್ರಸ್ಥ ಪಟ್ಟಣಕ್ಕೆ ಬಂದು, ಸಮಸ್ತರಾದ ಅರಸುಗಳನ್ನು ಜಯಿಸಿ ತಂದ ಕಾಣಿಕೆಗಳನ್ನು ಧರ್ಮರಾಯನ ಸನ್ನಿಧಾನದಲ್ಲಿರಿಸಿ, ಆತನ ಅಪ್ಪಣೆಯನ್ನು ತಕ್ಕೊಂಡು ತನ್ನ ಅರಮನೆಗೆ ಹೋಗಿ ಸುಖದಿಂದಿದ್ದನೂ" ಎಂದು ವೈಶಂಪಾಯನ ಮುನೀಂದ್ರನು ಜನಮೇಜಯ ರಾಯನಿಗೆ ಹೇಳಿದನು.

## ೩೦ನೇ ಅಧ್ಯಾಯ.—ದಿಗ್ವಿಜಯಪರ್ವಶೇಷ.

ಅನಂತರದಲ್ಲಿ: ವೈಶಂಪಾಯನ ಮುನೀಂದ್ರನು ಜನಮೇಜಯ ರಾಯನನ್ನು ಕುರಿತು ಇಂತೆಂದನು:

"ಎಲೈ ಜನಮೇಜಯನೆ, ಇನ್ನು ಭೀಮಸೇನನ ದಿಗ್ವಿಜಯವನ್ನು ಹೇಳುತಲಿದ್ದೇನೆ ಕೇಳು; ಯುಧಿಷ್ಠಿರನಿಂದ ಅಪ್ಪಣೆಯನ್ನು ತಕ್ಕೊಂಡು ಭೀಮನು ಚತುರಂಗಬಲ ಸಮೇತನಾಗಿ ಶತ್ರುಭಯಂಕರನಾಗಿ ನಡದು, ರೋಚಮಾನನೆಂಬ ಅರಸನ್ನು ತಮ್ಮಂದಿರ ಸಹ ಸುಲಭವಾಗಿ ಜಯಿಸಿ, ಪಾಂಚಾಲ ಪಟ್ಟಣಕ್ಕೆ ಹೋಗಿ ಸಮಾಧಾನದಿಂದ ಕಾಣಿಕೆಗಳನ್ನು ತಕ್ಕೊಂಡು ' ವಿದೇಹ ಪಟ್ಟಣಕ್ಕೆ ಹೋಗಿ ಅಲ್ಲಿರುವ ಅರಸುಗಳನ್ನು ಶೀಘ್ರವಾಗಿ ಜಯಿಸಿ ಅಲ್ಲಿಂದ ಹೊರಟು ದಶಾರ್ಣಾಧೀಶ್ವರನಾದ ಸುವರ್ಮ ನರೇಂದ್ರನೊಡನೆ ಹೋರಿದನು. ಆತನು ಭೀಮನನ್ನು ತಾಕಿ, ಆಯುಧವನ್ನು ಹಿಡಿಯದೆ ಅದ್ಭುತವಾದ ಯುದ್ಧವನ್ನು ಮಾಡಿದನು. ಭೀಮಸೇನನು ಆತನ ಪರಾಕ್ರಮವನ್ನು ನೋಡಿ ಆಶ್ಚರ್ಯಪಟ್ಟು ಆತನ ಬಲವನ್ನೂ ಪುರವನ್ನೂ ಸುತ್ತಮುತ್ತಿ ಭಂಗಪಡಿಸಿ, ಅತಿ ದುಷ್ಕರವಾದ ಯುದ್ಧವನ್ನು ಮಾಡಿ ಜಯಿಸಿ, ಆತನು ವಶವರ್ತಿಯಾಗಲೂ ಆತನಿಗೆ ಸೇನಾಧಿಪತ್ಯವನ್ನು ಕೊಟ್ಟು ಆತನನ್ನು ಕರಕೊಂಡು ಅಲ್ಲಿಂದ ಹೊರಟು, ರಥ ಆನೆ ಕುದುರೆ ಕಾಲು ಮಂದಿ ಎಂಬ ಚತುರಂಗಬಲ ಸಮೇತನಾಗಿ ಭೂಮಿಯು ಕಂಪಿಸುವ ಹಾಗೆ ನಡದು, ಅಶ್ವಮೇಧ ಪಟ್ಟಣಾಧಿಪತಿಯನ್ನು ತಮ್ಮಂದಿರ ಸಹಿತವಾಗಿ ಜಯಿಸಿ, ಅಲ್ಲಿಂದ ದಕ್ಷಿಣವಾಗಿ ಹೊರಟು, ಪುಳಿಂದನ ದೇಶಾಧ್ಯಕ್ಷರಾದ ಸುಕುಮಾರ ಸುಮಿತ್ರರ ಭುಜಾಟೋಪವನ್ನು ಪರಿಹರಿಸಿದನು. ಮತ್ತೂ ಆ ಕೌರವ ಶ್ರೇಷ್ಠನಾದ ಭೀಮನು ಚೇದಿ ದೇಶವನ್ನು ಪ್ರವೇಶಿಸಿ, ತಾನು ಬಂದದ್ದಕ್ಕೆ ಸಂತೋಷಪಡುತ್ತ ಎದುರಾಗಿ ಬಂದ ಶಿಶುಪಾಲನು ಮಹೀಪಾಲನ ಕೂಡೆ ಸಂಧಿಯನ್ನು ಮಾಡಿಕೊಂಡು ಅನ್ಯೋನ್ಯವಾಗಿ ಕುಶಲ ಪ್ರಶ್ನೆಯನ್ನು ಮಾಡಿದನು. ಶಿಶುಪಾಲನು ಭೀಮಸೇನನನ್ನು ನೋಡಿ 'ಎಲೈ ಭೀಮನೆ, ರಾಜ್ಯವಷ್ಟೂ ನಿನ್ನ ಆಧೀನವಲ್ಲವೆ; ನೀನು ಬಂದದಕ್ಕೆ ಕಾರಣವೇನು? ತಿಳುಹಿಸು, ಎನಲು ಭೀಮನು ಧರ್ಮರಾಯನ ರಾಜಸೂಯ ಯಾಗದ ವೃತ್ತಾಂತವನ್ನು ತಿಳುಹಿಸಿದನು. ಶಿಶುಪಾಲನು ಅದನ್ನು ಕೇಳಿ ಸಂತೋಷಪಟ್ಟು ಆತನನ್ನು ಪಟ್ಟಣಕ್ಕೆ ಕರಕೊಂಡು ಹೋಗಲೂ ಬಕಾಂತಕನಾದ ಭೀಮನು ಅಲ್ಲಿ ಒಂದು ತಿಂಗಳಿದ್ದು, ಆತನು ಮಾಡಿದ ಸತ್ಕಾರವನ್ನು ಸ್ವೀಕರಿಸಿ, ಆತನ ಅಪ್ಪಣೆಯನ್ನು ತಕ್ಕೊಂಡು ಸೇನಾ ಸಮೇತನಾಗಿ ಮೂಡಣದಿಕ್ಕಿಗೆ ಹೋದನು."

---

## ೩೩ನೇ ಅಧ್ಯಾಯ.—ದಿಗ್ವಿಜಯಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಭೀಮನು ಕುಳಿಂಗ ದೇಶಾಧೀಶ್ವರನಾದ ಶ್ರೇಣಿಮಂತನ ಗರ್ವವನ್ನು ಅಡಗಿಸಿ, ಕೋಸಲ ದೇಶಕ್ಕೆ ಹೋಗಿ ಆ ಕೋಸಲ ದೇಶಾಧೀಶ್ವರರನ್ನು ಪರಿಹರಿಸಿ, ಅಯೋಧ್ಯಾ ಪಟ್ಟಣಕ್ಕೆ ಹೋಗಿ ಪಟುಭುಜ ಪರಾಕ್ರಮ ಶಾಲಿಯಾಗಿ ಸುಜ್ಞಶೀಲನಾದ ದೀರ್ಘಪ್ರಜ್ಞನೆಂಬ ಅರಸನ್ನು ಜಯಿಸಿ, ಅದಕ್ಕೆ ಉತ್ತರ ಭಾಗದಲ್ಲಿ ವಾಸಮಾಡಿಕೊಂಡಿರುವ ಗೋಪಾಲಕನು ಅಂತ ಪಾಲಕನು ಎಂಬ ಮಲ್ಲಾಧಿಪತಿಗಳನ್ನು ಭಂಗಪಡಿಸಿ, ಹಿಮವತ್ಪರ್ವತ ಪ್ರಾಂತ್ಯದಲ್ಲಿರುವ ಅನೇಕ ದೇಶಾಧೀಶ್ವರರನ್ನು ಸುಲಭವಾಗಿ ಗೆದ್ದು, ಆ ಬಳಿಕ ಕಕುಕ್ಷಿಮಂತವೆಂಬ ಪರ್ವತವನ್ನೇರಿ ಕಾಶೀರಾಜ್ಯಕ್ಕೆ ಹೋಗಿ ಸುಬಿಂದುವನ್ನು ಆಧೀನಮಾಡಿಕೊಂಡು, ಪಾರ್ಶ್ವಪಟ್ಟಣಾಧಿಪತಿಯಾದ ಕುದ್ಧನೆಂಬ ಗಜಪತಿಯನ್ನು ಯುದ್ಧದಲ್ಲಿ ಜಯಿಸಿ, ಮತ್ಸ್ಯ ಮಾಳವ ವಂಗ ಗಯ ಪಶು ಭೂಮಿ ಮೊದಲಾದ ದೇಶಾಧೀಶ್ವರರನ್ನೂ ಅಟವೀಯುಲೆಂಬ ಪರ್ವತದಲ್ಲಿರುವ ಗೋಪತಿಯರನ್ನೂ ಮರ್ದಿಸಿ ಕಾಣಿಕೆಗಳನ್ನು ತಕ್ಕೊಂಡು, ಉತ್ತರಾಭಿಮುಖವಾಗಿ ಹೋಗಿ, ಮತ್ಸ್ಯ ಭೂಮಿಯಲ್ಲಿರುವ ಅರಸುಗಳು ಬ್ಯಾಸರ ಅಧಿಪತಿಗಳು ಮತ್ತು ಮಣಿಮಂತ ಮೊದಲಾದ ಅರಸುಗಳನ್ನು ಜಯಿಸಿ, ಅಲ್ಲಿಂದ ಹೊರಟು ದಕ್ಷಿಣಾಭಿಮುಖವಾಗಿ ಹೊರಟು ದಕ್ಷಿಣ ದೇಶವನ್ನು ವಶಮಾಡಿಕೊಂಡು, ಶರ್ಮಸರ್ಮಳ ಪುರಾಧಿಪತಿಗಳನ್ನು ಸ್ವಾಂತವಚನಗಳಿಂದ ಸ್ವಾಧೀನಮಾ

ಡಿಕೊಂಡು, ವಿದೇಹಪಟ್ಟಣದ ರಾಯನಾದ ಜನಕರಾಯನನ್ನು ಜಯಿಸಿ, ಇಂದ್ರ ಪರ್ವತದ ಸಮೀಪದಲ್ಲಿರುವ ಏಳು ಮಂದಿ ಕಿರಾತಕರನ್ನು ಜಯಿಸಿ, ಸುಹುವ ಪ್ರಸುಹುವ ದೇಶಾಧಿಪತಿಗಳನ್ನು ಜಯಿಸಿ, ಮಗಧ ದೇಶಕ್ಕೆ ಹೋಗಿ ದಂಡನು ದಂಡಧಾರನು ಎಂಬ ಅರಸುಗಳನ್ನು ಜಯಿಸಿ, ಗಿರಿವ್ರಜ ಪಟ್ಟಣಕ್ಕೆ ಬಂದು ಜರಾಸಂಧನ ಮಗನಾದ ಸಹದೇವನನ್ನು ಬಹು ಮಾನವಾಗಿ ನೋಡಿ ಕಪ್ಪವನ್ನು ತಕ್ಕೊಳ್ಳದೆ ಸಹಾಯವಾಗಿ ಕರಕೊಂಡು, ಚತುರಂಗ ಬಲ ಸಮೇತನಾಗಿ ಪರ ಭಯಂಕರನಾಗಿರುವ ಕರ್ಣನನ್ನು ತಾಕಿ, ಅತಿಘೋರವಾದ ಯುದ್ಧದಲ್ಲಿ ಪರ್ವತಾಧ್ಯಕ್ಷನಾಗಿ ತೇಜೋಧುರೀಣನಾದ ಮೋದನೆಂಬ ಅರಸನ್ನು ಜಯಿಸಿ, ಮತ್ತು ಪರ್ವತವಾಸಿಗಳಾದ ಅರಸುಗಳನ್ನು ಜಯಿಸಿ, ಅಲ್ಲಿಂದ ಹೊರಟು ಪೌಂಡ್ರ ದೇಶಾಧಿಪತಿಯಾಗಿ ಮಹಾಬಲ ಶಾಲಿಯಾಗಿರುವ ವಾಸುದೇವನನ್ನು ಘೋರವಾದ ಯುದ್ಧದಲ್ಲಿ ನಿಗ್ರಹಿಸಿ, ಕಚ್ಛ ದೇಶಾಧೀಶ್ವರನಾದ ಕೌಶಿಕ ರಾಯನನ್ನು ಅತಿ ಕ್ರೂರವಾದ ಯುದ್ಧದಲ್ಲಿ ಮರ್ದಿಸಿ, ವಂಗರಾಜ್ಯಕ್ಕೆ ಹೋಗಿ ವಂಗ ದೇಶಾಧಿಪತಿಗಳಾದ ಸಮುದ್ರಸೇನ ಚಂದ್ರಸೇನರನ್ನು ಪಾದಾಕ್ರಾಂತರಾಗಿ ಮಾಡಿಕೊಂಡು, ತಾಮ್ರಲಿಪ್ತನು ಕಾಂಚನನೆಂಬ ವಂಗಾಧಿಪತಿಗಳನ್ನು ಜಯಿಸಿ, ಸಿಂಹ ದೇಶವನ್ನು ಪ್ರವೇಶಿಸಿ, ಸಮುದ್ರತೀರವಾಸಿಗಳಾದ ಮ್ಲೇಚ್ಛಕಿರಾತರನ್ನೂ ಮನುಷ್ಯ ಮಾಂಸಭಕ್ಷಕರಾದ ಕರ್ಣಪ್ರಾವರಣ ಕಾಕಮುಖ ಪ್ರಮುಖರಾದ ಅನೇಕ ರಾಕ್ಷಸಕುಲ ಸಂಭವರಾದವರನ್ನೂ ಮತ್ತು ಅನೇಕ ದೇಶಗಳನ್ನೂ ಜಯಿಸಿ, ಧನಕನಕ ವಸ್ತು ವಾಹನಗಳನ್ನು ತಕ್ಕೊಂಡು, ಲೌಹಿತ್ಯನಗರವನ್ನು ಸೇರಿ, ಅಲ್ಲಿರುವ ಮ್ಲೇಚ್ಛಸೇನಾಧಿ ಪತಿಗಳ ಸೊಕ್ಕನ್ನು ಮುರಿದು, ಅಗರು ಚಂದನ ಮೊದಲಾದ ಸುಗಂಧ ದ್ರವ್ಯಗಳನ್ನೂ ಮುಕ್ತಾಮಣಿ ಪ್ರವಾಳ ವಜ್ರಪ್ರಮುಖವಾದ ಅನೇಕ ರತ್ನಗಳನ್ನೂ ನೂರು ಕೋಟಿ ಸಂಖ್ಯೆಯುಳ್ಳ ಧನಗಳನ್ನೂ ಚಿನ್ನ ಬೆಳ್ಳಿಗಳ ರಾಶಿಗಳನ್ನೂ ತಕ್ಕೊಂಡು ಬಂದು ಧರ್ಮರಾಯನ ಸಮುಖದಲ್ಲಿರಿಸಿದನು " ಎಂದು ವೈಶಂಪಾಯನ ಮುನೀಂದ್ರನು ಜನಮೇಜಯರಾಯನಿಗೆ ಹೇಳಿದನು.

---

## ೩೪ ನೇ ಅಧ್ಯಾಯ.—ದಿಗ್ವಿಜಯ ಪರ್ವಶೇಷ.

ಅನಂತರದಲ್ಲಿ ; ವೈಶಂಪಾಯನ ಮುನೀಶ್ವರನು ಜನಮೇಜಯರಾಯನನ್ನು ಕುರಿತು ಇಂತೆಂದನು :

" ಕೇಳು ಜನಮೇಜಯನೆ, ಆ ಬಳಿಕ ಸಹದೇವನು ಧರ್ಮರಾಯನ ಅಪ್ಪಣೆಯಿಂದ ಚತುರಂಗಬಲ ಸಮೇತನಾಗಿ ದಕ್ಷಿಣದಿಕ್ಕಿಗೆ ಹೋಗಿ, ಮೊದಲು ಶೂರಸೇನಾಧಿ ಪತಿಯಾದ ರಾಜನನ್ನು ಮರ್ದಿಸಿ, ಮತ್ಸ್ಯದೇಶಾಧಿ ಪತಿಯನ್ನು ಸ್ವಾಧೀನ ಮಾಡಿಕೊಂಡು, ಅಲ್ಲಿಂದ ಹೊರಟು ರಾಜಶ್ರೇಷ್ಠನಾದ ದಂತವಕ್ರನ ಬಲವನ್ನು ಕೆಡಿಸಿ ಆತನ ದೆಸೆಯಿಂದ ಕಪ್ಪವನ್ನು ತಕ್ಕೊಂಡು, ಸುಕುಮಾರ ಸುಮಿತ್ರರೆಂಬ ಅರಸುಗಳನ್ನು ಗೆದ್ದು ಮತ್ತು ಇರುವ ಮತ್ಸ್ಯ ದೇಶಾಧಿ ಪತಿಗಳನ್ನೂ ಪಟಚ್ಚರ ಮಹೀಪತಿಗಳನ್ನೂ ಜಯಿಸಿ, ಬೇಡರ ದೇಶವನ್ನು ಹೊಕ್ಕು ಗೋಶೃಂಗ ಪರ್ವತದಲ್ಲಿ ವಾಸಮಾಡಿಕೊಂಡಿರುವ ಶ್ರೇಣಿಮಂತನೆಂಬ ದೊರೆಯನ್ನು ಯುದ್ಧದಲ್ಲಿ ಜಯಿಸಿ, ಅಲ್ಲಿಂದ ಹೊರಟು ಪರಾಕ್ರಮ ಧುರೀಣರಾಗಿ ಆ ಸಮೀಪವರ್ತಿಗಳಾದ ತೊಂಭತ್ತು ರಾಜ್ಯಾಧಿಪತಿಗಳನ್ನು ಜಯಿಸಿ, ಅಲ್ಲಿಂದ ಹೊರಟು ಕುಂತೀಭೋಜನ ರಾಜ್ಯಕ್ಕೆ ಹೋಗಿ ಆತನು ಸ್ನೇಹಭಾವದಿಂದ ಅನೇಕ ರತ್ನ ಕಾಂಚನಗಳನ್ನು ಕೊಡಲು, ಅವನ್ನು ತಕ್ಕೊಂಡು, ಚರ್ಮಣ್ವತೀ ತೀರಕ್ಕೆ ಹೋದನು. ಅಲ್ಲಿ ಜಂಭಕನ ಕುಮಾರಕನು ಮೊದಲು ವಾಸುದೇವನೊಡನೆ ತೊಡರಿ ಆತನಿಂದ ಪ್ರಾಣ ಸಹಿತವಾಗಿ ಬಿಡಲ್ಪಟ್ಟವನಾದ್ದರಿಂದ ಪೂರ್ವ ವೈರವನ್ನು ಸ್ಮರಿಸಿ ಸಹದೇವನನ್ನು ಕಾಣಿಸಿಕೊಳ್ಳಲು ಸಹದೇವನು ಆತನನ್ನು ಯುದ್ಧದಲ್ಲಿ ಜಯಿಸಿ, ಮತ್ತೂ ದಕ್ಷಿಣ ದಿಕ್ಕಿಗೆ ಹೋಗಿ, ಮೇಕರು ಪರಮೇಕರೆಂಬವರನ್ನು ಗರ್ವ ಭಂಗಮಾಡಿ ರತ್ನ ಕಾಂಚನ ಕಾಣಿಕೆಯಾಗಿ ತೆಕ್ಕೊಂಡು, ನರ್ಮದಾ ತೀರಕ್ಕೆ ಹೋಗಿ ಅವಂತಿ ದೇಶಾಧೀಶ್ವರರಾದ ವಿಂದಾನು ವಿಂದರನ್ನು ಘೋರವಾದ ಯುದ್ಧದಲ್ಲಿ ಜಯಿಸಿ ರತ್ನ ಧನ ವಸ್ತುಗಳನ್ನು ತಕ್ಕೊಂಡು, ಭೋಜಕಟವೆಂಬ ಪಟ್ಟಣಕ್ಕೆ ಹೋಗಿ ಭೀಷ್ಮಕನೆಂಬ ಅರಸಿನೊಡನೆ ಎರಡು ದಿವಸ

ಯುದ್ಧವನ್ನು ಮಾಡಿ, ಆತನ ಬಳಿಯಿಂದ ಕಾಣಿಕೆಯನ್ನು ತಕ್ಕೊಂಡು, ಮತ್ತು ಕೋಸಲ ದೇಶಾಧೀಶ್ವರರನ್ನು ಜಯಿಸಿ, ಭೋಜಕಟವನ್ನು ಪರಿಪಾಲಿಸುವ ರಾಯನನ್ನು ಜಯಿಸಿ, ಮತ್ತು ಅಲ್ಲಿಂದ ಹೊರಟು, ಆಟವಿಕರು ಕಾಲಕೇಯರು ಧರ್ಮಗ್ರಾಮನಿವಾಸಿಗಳು ಕ್ಷತ್ರಿಯರು ಮೊದಲಾದ ಅಡವಿಯಲ್ಲಿ ವಾಸಮಾಡಿಕೊಂಡಿರುವ ಶಬರರನ್ನು ತನ್ನ ಅಧೀನಮಾಡಿಕೊಂಡು, ಚಕ್ರಪುರಾಧ್ಯಕ್ಷನಾದ ಕಾರಂಧಮನೆಂಬ ಅರಸನ್ನು ನಿಗ್ರಹಿಸಿ, ಮತ್ತೂ ಅನೇಕ ಪುಳಿಂದರನ್ನು ಸಂಹರಿಸಿ, ದಕ್ಷಿಣದಿಕ್ಕಿಗೆ ಹೋಗಿ ಪಾಟಚ್ಚರವೆಂಬ ಪಟ್ಟಣವನ್ನು ಪರಿಪಾಲಿಸುವ ಅರಸನ ಕೂಡೆ ಎರಡು ದಿವಸ ಯುದ್ಧವನ್ನು ಮಾಡಿ, ಪೂರ್ವದಲ್ಲಿ ಸುಗ್ರೀವ ಪರಿಪಾಲಿತವಾಗಿ ಜಗತ್ಪ್ರಸಿದ್ಧಿಯನ್ನು ಪಡೆದ ಕಿಷ್ಕಿಂಧಾಪಟ್ಟಣವನ್ನು ಸುತ್ತಮುತ್ತಿ, ಮೈಂದದ್ವಿವಿದರೆಂಬ ವಾನರ ಪತಿಗಳೊಡನೆ ಏಳು ದಿವಸಗಳು ಯುದ್ಧವನ್ನುಮಾಡಿ ಅವರು ತನ್ನ ಪ್ರತಾಪಕ್ಕೆ ಮೆಚ್ಚಿ ಧರ್ಮರಾಯನ ಯಜ್ಞವು ನಿರ್ವಿಘ್ನವಾಗಿ ನೆರವೇರಲೀ ಎಂದು ಕೆಲವು ರತ್ನಗಳನ್ನು ಕೊಡಲು ಅವನ್ನು ತಕ್ಕೊಂಡು, ಸಕಲ ಸೇನಾ ಸಮೇತನಾಗಿ ಮಾಹಿಷ್ಮತೀ ಪಟ್ಟಣದ ಮೇಲೆ ಕಾಣಿಸಿಕೊಂಡನು. ಶೂರಾಗ್ರೇಸರನಾದ ನೀಲನು ಚತುರಂಗ ಬಲ ಸಮೇತನಾಗಿ ವೈರಿ ಭಯಂಕರನಾದ ಸಹದೇವನಮೇಲೆ ಕಾಣಿಸಿಕೊಳ್ಳಲೂ ಎರಡು ಸಮುದ್ರಗಳು ಕೂಡಿರುವ ಚಂದದಿಂದ ಉಭಯಸೈನ್ಯಗಳೂ ಸರ್ವಲೋಕ ಭಯಂಕರವಾದ ಸಮರವನ್ನು ಮಾಡುತ್ತಿದ್ದರು. ಆಗ ತೇಜೋಧುರಂಧರನಾದ ಯಜ್ಞೇಶ್ವರನು ಸಹದೇವನ ಸೈನ್ಯದಲ್ಲಿರುವ ಆನೆಗಳನ್ನು ರಥ ಪದಾತಿ ಸಮೂಹಗಳನ್ನು ಮತ್ತೂ ಅಲ್ಲಿರುವ ಯುದ್ಧಸಾಧನಗಳಷ್ಟನ್ನು ದಹಿಸುತ್ತ ಬರಲು ಸಹದೇವನು ಭಯಭ್ರಾಂತನಾಗಿ ಏನೂ ಅನ್ನಲಾರದೇ ಸುಮ್ಮನೆ ಇದ್ದನು” ಎಂದು ನುಡಿದ ವೈಶಂಪಾಯನನನ್ನು ನೋಡಿ ಜನಮೇಜಯನು “ಎಲೈ ಮುನೀಶ್ವರನೆ, ಹೀಗೆ ಯಜ್ಞಾರ್ಥವಾಗಿ ಬಂದ ಸಹದೇವನಲ್ಲಿ ಮಹಾನುಭಾವನಾದ ಯಜ್ಞೇಶ್ವರನು ವಿರೋಧ ಮಾಡುವದಕ್ಕೆ ಕಾರಣವೇನು ?” ಎಂದು ಕೇಳಿದನು. ಅನಂತರದಲ್ಲಿ ವೈಶಂಪಾಯನ ನಿಂತೆಂದನು.

“ಕೇಳು ಜನಮೇಜಯನೆ, ಮೊದಲು ಮಹಾನುಭಾವನಾದ ಯಜ್ಞೇಶ್ವರನು ಮಾಹಿಷ್ಮತೀ ಪುರದಲ್ಲಿ ಪರದಾರಾಸಕ್ತನಾದ್ದರಿಂದ ನಿಗ್ರಹಿಸಲ್ಪಟ್ಟನು ಎಂದು ಕೇಳಿದ್ದುಂಟು ; ಅದನ್ನು ನಿನಗೆ ತಿಳುಹಿಸುತಲಿದ್ದೇನೆ : ಮಾಹಿಷ್ಮತೀ ಪುರಾಧ್ಯಕ್ಷನಾದ ನೀಲನು ಯಜ್ಞೇಶ್ವರನನ್ನು ಉಪಾಸನಮಾಡುತ್ತಿರಲೂ ಅತಿ ಸೌಂದರ್ಯವತಿಯಾದ ಸುದರ್ಶನೆಯೆಂಬ ಆತನ ಕನ್ಯಾರತ್ನವು ಅಗ್ನಿಯನ್ನು ಪ್ರಜ್ವಲಿಸುವಹಾಗೆ ಮಾಡಬೇಕೆಂದು ಬೀಸಣಿಗೆಗಳಿಂದ ಬೀಸಿ ಬೇಸರಿತು ತಲೆ ಬಗ್ಗಿಸಿಕೊಂಡು ಫೂತ್ಕಾರವನ್ನು ಮಾಡಲು ಆ ಯಜ್ಞೇಶ್ವರನು ಅವಳ ಅಧರಪಲ್ಲವಾಸ್ವಾದನವನ್ನು ಮಾಡಿ, ಅದು ಮೊದಲುಗೊಂಡು ಅವಳಲ್ಲಿ ಅನುರಕ್ತನಾಗಿ, ಪ್ರವರ್ತಿಸುತ ಮತ್ತೂ ಬ್ರಾಹ್ಮಣ ವೇಷಧಾರಿಯಾಗಿ ಆ ಪಟ್ಟಣದಲ್ಲಿ ಜಾರನಾಗಿ ಸಂಚರಿಸುತ್ತಿರಲು, ತಳವಾರರು ಆತನನ್ನು ಹಿಡಿತಂದು ರಾಜ ಸನ್ನಿಧಾನದಲ್ಲಿ ನಿಲ್ಲಿಸಿದರು. ನೀಲನು ಆತನನ್ನು ಶಾಸ್ತ್ರೋಕ್ತಪ್ರಕಾರದಿಂದ ಶಿಕ್ಷಿಸುವದಕ್ಕೆ ಎಣಿಸಲು, ಆ ಯಜ್ಞೇಶ್ವರನು ಕೋಪೋದ್ದೀಪಿತನಾಗಿ ಧಗ್ಗೆಂದು ಉರಿದನು. ಹಾಗೆ ಉರಿಯುತಲಿರುವ ಯಜ್ಞೇಶ್ವರನನ್ನು ನೋಡಿ ಆಶ್ಚರ್ಯಪಟ್ಟು ಭಯಕಂಪಿತಗಾತ್ರನಾಗಿ ಆ ಮಹೀವಲ್ಲಭನು ಸಾಷ್ಟಾಂಗವಾಗಿ ನಮಸ್ಕರಿಸಿ ಅನೇಕ ಪ್ರಕಾರವಾಗಿ ಪ್ರಾರ್ಥಿಸಲು ಯಜ್ಞೇಶ್ವರನು ಸಂತೋಷಪಟ್ಟು ‘ಬೇಕಾದ ವರವನ್ನು ಬೇಡು’ ಅಂದನು. ನೀಲನು ಶತ್ರುವರ್ಗದ್ದೆಸೆಯಿಂದ ಭಯವಿಲ್ಲದರೀತಿಗೆ ತನಗೆ ಅಭಯವನ್ನು ಕೊಟ್ಟು ರಕ್ಷಿಸಬೇಕೆನಲು, ಅದು ಮೊದಲುಗೊಂಡು ಯಜ್ಞೇಶ್ವರನು ಆ ಪುರದಲ್ಲಿದ್ದುಕೊಂಡು ಬಂದ ಶತ್ರುಸೈನ್ಯವನ್ನು ದಹಿಸುತ್ತಲಿರುವನು. ಆ ಹೊತ್ತು ಮೊದಲುಕೊಂಡು ಆ ಪಟ್ಟಣದಲ್ಲಿರುವ ಸ್ತ್ರೀಯರು (ಯಜ್ಞೇಶ್ವರನ ಅನುಗ್ರಹದಿಂದ) ಇಚ್ಛಾವಿಹಾರದಿಂದ ಪ್ರವರ್ತಿಸಿದರೂ ದಂಡನಕ್ಕೆ ಯೋಗ್ಯರಲ್ಲದಿರುವರು.”

“ಕೇಳು ಜನಮೇಜಯನೆ, ಈಪ್ರಕಾರವಾಗಿ ತನ್ನ ಸೈನ್ಯವನ್ನು ದಹಿಸಿಕ್ಕೊಂಡು ಬರುವ ಯಜ್ಞೇಶ್ವರನನ್ನು ನೋಡಿ ಧರ್ಮಶೀಲನಾದ ಸಹದೇವನು ಅಗ್ನಿಭಯದಿಂದ ತಪಿಸುತಲಿರುವ ತನ್ನ ಸೈನ್ಯವನ್ನು ನೋಡಿ ಧೈರ್ಯವನ್ನವಲಂಬಿಸಿ ಪರ್ವತದೋಪಾದಿಯಲ್ಲಿ ಸ್ಥಿರನಾಗಿ ನಿಂತು ಕೈಕಾಲುಗಳನ್ನು ತೊಳಕೊಂಡು, ಯಜ್ಞೇಶ್ವರನ

ನ್ನು ಕುರಿತು ‘ಎಲೈ ಮಹಾಪುರುಷನೆ, ನಾವು ಮಾಡುವ ಪ್ರಯತ್ನವಷ್ಟು ನಿನಗೆ ಸಂತೋಷಮಾಡಬೇಕೆಂದು ನಿಶ್ಚೈಸಿದ್ಧೇವೆ! ನೀನು ಸಕಲ ದೇವಗಣಗಳಿಗೂ ಮುಖವೆನಿಸಿಕೊಂಡು ಯಜ್ಞೇಶ್ವರರೂಪದಿಂದ ಪ್ರವರ್ತಿಸುತಲಿದ್ದೀ! ಹವ್ಯಗಳನ್ನು ವಹಿಸುವಂಥಾವನಾದ್ದರಿಂದ ಹವ್ಯವಾಹನೆನಿಸಿಕೊಂಡಿದ್ದೀ! ಲೋಕಗಳಷ್ಟನ್ನೂ ಪಾವನ ಮಾಡುವವನಾದ್ದರಿಂದ ಪಾವಕನೆನಿಸಿಕೊಂಡಿದ್ದೀ! ವೇದಗಳಷ್ಟು ನಿನಗೋಸ್ಕರ ನಿರ್ಮಿತವಾದ್ದರಿಂದ ಜಾತವೇದನೆನಿಸಿಕೊಳ್ಳುತಿದ್ದೀ! ನಿನ್ನ ಮಹಿಮೆಯನ್ನು ಸ್ತುತಿಸುವದಕ್ಕೆ ಯಾರಿಗೆ ಶಕ್ಯವು! ಚಿತ್ರಭಾನುವು, ಸುರೇಶ್ವರನು, ಅನಲನು, ವಿಭಾವಸುವು, ಅಗ್ನಿಯು, ಇತರದುಸ್ಸಹನು, ಹುತಾಶನನು, ಜ್ವಲನನು, ಶಿಖಿಯು, ವೈಶ್ವಾನರನು, ಪಿಶಂಗವರ್ಣನು, ಬಹು ತೇಜೋವಿರಾಜಮಾನನು, ಪ್ಲವಂಗಮನು, ಕುಮಾರಜನಕನು, ಷಡ್ಗುಣೈಶ್ವರ್ಯ ಸಂಪನ್ನನು, ಹಿರಣ್ಯಗರ್ಭನು ಎಂಬ ಅನೇಕ ದಿವ್ಯ ನಾಮಗಳುಳ್ಳ ನಿನ್ನನ್ನು ನಮಸ್ಕರಿಸುತಲಿಧೇನೆ! ಇಂಥಾ ಮಹಾನುಭಾವನಾದ ನೀನು ಯಜ್ಞ ವಿಘ್ನವನ್ನು ಮಾಡುವದು ನಿನಗೆ ಯುಕ್ತವಲ್ಲಾ’ ಎಂದು ಭೂಮಿಯಲ್ಲಿ ಹಾಸಿರುವ ದರ್ಭಾಸ್ತರಣದಲ್ಲಿ ಶಾಸ್ತ್ರೋಕ್ತ ಪ್ರಕಾರದಿಂದ ಪ್ರಾಯೋಪವೇಶವನ್ನು ಮಾಡಿದನು. ಯಜ್ಞೇಶ್ವರನು ಆತನಲ್ಲಿ ಪ್ರೀತಿಯನ್ನು ಮಾಡಿ, ಮರ್ಯಾದೆಯಲ್ಲಿರುವದನ್ನು ಅತಿಕ್ರಮಿಸದೇ ಇರುವ ಸಮುದ್ರದೋಪಾದಿಯಲ್ಲಿ ಆತನನ್ನು ಅತಿಕ್ರಮಿಸಲಾರದೆ ಮಂದಗಮನದಿಂದ ಆತನ ಸಮೀಪಕ್ಕೆ ಹೋಗಿ ‘ಎಲೈ ಮಾದ್ರೀನಂದನನೆ, ನಿನ್ನ ಅಭಿಪ್ರಾಯವನ್ನು ತಿಳಿಯುವದಕ್ಕೋಸ್ಕರ ಇಷ್ಟು ಮಾಡಿದೆನು; ಧರ್ಮರಾಯನು ದೇವದೇವನಾಗಿ ದೇವಕೀನಂದನನಾದ ಶ್ರೀಕೃಷ್ಣಸ್ವಾಮಿಯ ಭುಜಬಲವನ್ನು ಆಶ್ರಯಿಸಿ, ಯಜ್ಞಮಾಡುವದಕ್ಕೆ [illegible]ಸಿಧಾನೆಂದು ನಾನು ತಿಳಿದಿರುವೆನಾದ್ದರಿಂದ ಇದಕ್ಕೆ ವಿಘ್ನವನ್ನು ಮಾಡುವದಿಲ್ಲ; ಪೂರ್ವದಲ್ಲಿ ‘—ಈ ಪಟ್ಟಣವನ್ನು ಪರಿಪಾಲಿಸುತಲಿದೇನೆ—’ ಎಂದು ಈ ನೀಲನೆಂಬ ರಾಜನಿಗೆ ವರವನ್ನು ಕೊಟ್ಟಿಧೇನೆ; ಅದು ಹಾಗಿರಲಿ: ನಿನ್ನ ಮನಸ್ಸಿನಲ್ಲಿರುವ ಅಭೀಷ್ಟವನ್ನು ಹೇಳು ಕೊಡುತಲಿಧೇನೆ; ಏಳು, ಅಂದನು. ಸಹದೇವನು ಶೀಘ್ರವಾಗೆದ್ದು ನಮಸ್ಕಾರವನ್ನು ಮಾಡಿ ಬಹುಪ್ರಕಾರದಿಂದ ಸ್ತುತಿಸಲು ಯಜ್ಞೇಶ್ವರನು ಸಂತೋಷಪಟ್ಟು ಆಚೆಗೆ ಹೋ[illegible]ನು. ನೀಲನೆಂಬ ರಾಯನು ಸಹದೇವನ ಸಮುಖಕ್ಕೆ ಬಂದು ಸಮಾಧಾನ ವಚನಗಳಿಂದ ಸತ್ಕಾರಗಳನ್ನು ಮಾಡಿದನು. ಸಹದೇವನು ನೀಲನು ಮಾಡಿದ ಪೂಜೆಯನ್ನು ಅಂಗೀಕರಿಸಿ ಕಾಣಿಕೆಯನ್ನು ತಕ್ಕೊಂಡು ಮತ್ತೂ ದಕ್ಷಿಣದಿಕ್ಕಿಗೆ ಹೋಗಿ, ತ್ರಿಪುರನಗರಾಧೀಶ್ವರನಾಗಿ ಅಮಿತಪರಾಕ್ರಮಶಾಲಿಯಾದ ಅರಸನ್ನು ಸ್ವಾಧೀನಮಾಡಿಕೊಂಡು, ವೇತನ ಪುರಾಧ್ಯಕ್ಷನನ್ನು ಶಿಕ್ಷಿಸಿ, ಸುರಾಷ್ಟ್ರ ದೇಶಕ್ಕೆ ಹೋಗಿ, ಆಹುತಿ ಕೌಶಿಕಾಚಾರ್ಯರೆಂಬ ಅರಸುಗಳ ಶೌರ್ಯಗಳನ್ನು ಅಡಗಿಸಿ, ಮಹೇಂದ್ರಸಖನಾಗಿ ಪ್ರಜ್ಞಾಶಾಲಿಯಾದ ಭೀಷ್ಮಕನ ಸಮೀಪಕ್ಕೆ (ತಾನಲ್ಲೇ ಇದ್ದುಕೊಂಡು) ದೂತರನ್ನು ಕಳುಹಿಸಿದನು. ಆತನು ರುಕ್ಮಿಣೀ ಕುಮಾರಕವರ್ಗದೊಡನೆ ಕೂಡಿ ಬಂದು ಶ್ರೀಕೃಷ್ಣಸ್ವಾಮಿಯ ಮಾಹಾತ್ಮ್ಯವನ್ನು ಮನಸ್ಸಿಲ್ಲೆಣಿಸಿ, ಸಹದೇವನ ಆಜ್ಞೆಯನ್ನು ಶಿರಸಾವಹಿಸಿ, ಪ್ರೀತಿಪೂರ್ವಕವಾಗಿ ರತ್ನಭೂಷಣ ವಸ್ತ್ರಾದಿಗಳನ್ನು ಕೊಟ್ಟನು. ಸಹದೇವನು ಅವನ್ನು ತಕ್ಕೊಂಡು ಶೂರ್ಪಾರಕರನು ತಾಲಾಕಟನು ದಂಡಕನು ಎಂಬ ಮೂರು ಮಂದಿಗಳ ಗರ್ವವನ್ನು ಭಂಗಮಾಡಿ, ಕಾಳಗಿರಿಯು ಮುರುಚಿ ಪಟ್ಟಣವು ತಾಮ್ರದ್ವೀಪವು ರಾಮಕಪರ್ವತವು ಇವು ಮೊದಲಾದ ಪಟ್ಟಣಗಳನ್ನು ಜಯಿಸಿ, ಸಂಜಯಂತಿನಗರಕ್ಕೆ ಹೋಗಿ, ಪಾಷಂಡ ಕರಹಾಟಕರನ್ನು ಆಳುವ ದೊರೆಗಳ ಸಮೀಪಕ್ಕೆ ದೂತರನ್ನು ಕಳುಹಿಸಿ, ಅವರ ದೆಸೆಯಿಂದ ಕಾಣಿಕೆಗಳನ್ನು ತಕ್ಕೊಂಡು, ಭೃಗಕಥಕ ಪಟ್ಟಣದಲ್ಲಿ ಪಾಳ್ಯವನ್ನು ಇಳಿಸಿ, ಬರ್ಬರರು ಪಾರಸೀಕರರು ಮತ್ತು ಇರುವ ಸಕಲ ದ್ವೀಪವಾಸಿಗಳಾದ ಅರಸುಗಳನ್ನು ಜಯಿಸಿ, ಅವರ ದೆಸೆಯಿಂದ ಕಾಣಿಕೆಗಳನ್ನು ತಕ್ಕೊಂಡು, ಕುಳಕರು ದರದರು ಸಿಂಧೂರರು ಮೂಲಕರು ಮಹಾಬಲ ಸಮೇತರಾದ ವಿದರ್ಭರು ಮೊದಲಾದ ಏಳು ವನ ದುರ್ಗಾಧಿಪತಿಗಳನ್ನು ಮನುಷ್ಯ ಮುಖಾಂತರದಿಂದ ಸ್ವಾಧೀನಮಾಡಿಕೊಂಡು, ಚೋಳ ಪಾಂಡ್ಯ ದ್ರಾವಿಡ ಕೇರಳ ಭೂಪತಿಗಳನ್ನು ದೂತರ ಮುಖಾಂತರದಿಂದ ಸ್ವವಶಮಾಡಿಕೊಂಡು, ಸಿಂಹಳ ದ್ವೀಪವಾಸಿಗಳನ್ನು ಸುಲಭವಾಗಿ ಜಯಿಸಿ, ಆಂಧ್ರರನ್ನು ತಾಲವರನ್ನು ಕಳಿಂಗರನ್ನು ಜಯಿಸಿ, ಪುರೋತ್ತಮನಿವಾಸಿಯಾದ ರೋಚಮಾನನು ಯುದ್ಧಕ್ಕೆ ಬರಲು ಆತ

ನನ್ನು ಜಯಿಸಿ ಕಪ್ಪವನ್ನು ತಕ್ಕೊಂಡು, ಮತ್ತೂ ಅಡವಿಗಳಲ್ಲಿ ದ್ವೀಪಗಳಲ್ಲಿರುವಂಥಾವರನ್ನು ಯುದ್ಧದಲ್ಲಿ ಜಯಿಸಿ, ಅಲ್ಲಿಂದ ಹೊರಟು ತಾಮ್ರಪರ್ಣೀ ತೀರಕ್ಕೆ ಬಂದು ಕನ್ಯಾತೀರ್ಥವನ್ನು ದಾಟಿದನು. ಈ ಪ್ರಕಾರವಲ್ಲಿ ಸಹದೇವನು ದಕ್ಷಿಣ ದಿಗ್ವಿಜಯವನ್ನು ಮಾಡಿಕೊಂಡು, ಸಮುದ್ರತೀರದಲ್ಲಿ ಇದ್ದುಕೊಂಡು ಬುದ್ಧಿಸಂಪನ್ನರಾದ ಮಂತ್ರಿಗಳೊಡನೆ ಕೆಲವುಹೊತ್ತು ಆಲೋಚಿಸಿ, ಭೀಮನ ಮಗನಾದ ಘಟೋತ್ಕಚನನ್ನು ಸ್ಮರಿಸಿದನು. ಅತ್ಯುನ್ನತಗಾತ್ರನಾಗಿ ಆಜಾನುಬಾಹು ದೀರ್ಘವಾಗಿ ಬಾಹುಬಲಶಾಲಿಯಾಗಿ ಸರ್ವಾಲಂಕಾರ ಶೋಭಿತನಾದ ಘಟೋತ್ಕಚನು ತತ್ಕ್ಷಣದಲ್ಲಿಯೆ ಸಮೀಪಕ್ಕೆ ಬಂದು ವಿನಯದಿಂದ ನಮಸ್ಕರಿಸಿ ಕೈಮುಗಿದು ‘ನನ್ನನ್ನು ಸ್ಮರಿಸುವದಕ್ಕೆ ಕಾರಣವೇನು?’ ಎಂದು ಕೇಳಿದನು. ಸಹದೇವನು ಅಲ್ಲಿಯೇ ಇದ್ದುಕೊಂಡು ಮೇರುಶಿಖರದೋಪಾದಿಯಲ್ಲಿರುವ ಆತನನ್ನು ಮಹಾತ್ಮನಾಗಿ ಪುಲಸ್ತ್ಯಬ್ರಹ್ಮನ ಮಗನಾದ ವಿಭೀಷಣನಿಂದ ಆಗತಕ್ಕಂಥಾ ಕಾರ್ಯಕ್ಕೆ ಆತನ ಸನ್ನಿಧಾನಕ್ಕೆ ಕಳುಹಿಸಿದನು. ಆತನು ಶೀಘ್ರವಾಗಿ ಹೋಗಿ ವಿಭೀಷಣನಿಗೆ ತಿಳುಹಿಸಲು, ಆ ಧರ್ಮಶೀಲನಾದ ವಿಭೀಷಣನು ಶ್ರೀಕೃಷ್ಣಸ್ವಾಮಿಯೂ ಮಾಡಿದ್ದು ಎಂದು ತಿಳಿದು ಸಹದೇವನ ಆಜ್ಞೆಯನ್ನು ಶಿರಸಾವಹಿಸಿ ನಾನಾವಿಧ ರತ್ನಗಳನ್ನು ಚಂದನಾಗರು ಮೊದಲಾದ ಪರಿಮಳ ದ್ರವ್ಯಗಳನ್ನು ಅನರ್ಘ್ಯಗಳಾದ ಮಣಿವಸ್ತ್ರ ಧನಾದಿಗಳನ್ನು ಕೊಟ್ಟನು” ಎಂದು ವೈಶಂಪಾಯನನು ನುಡಿಯಲು ಜನಮೇಜಯನಿಂತೆಂದನು :

“ಎಲೈ ವೈಶಂಪಾಯನ ಮುನೀಶ್ವರನೆ, ಘಟೋತ್ಕಚನು ಬಂದದ್ದು, ಆತನು ಲಂಕಾಪಟ್ಟಣಕ್ಕೆ ಹೋದದ್ದು, ವಿಭೀಷಣನನ್ನು ನೋಡಿದ್ದು, ಸಹದೇವನು ಕಾವೇರೀ ದರ್ಶನವನ್ನು ಮಾಡಿದ್ದು, ಅಲ್ಲಿರುವ ಅರಸುಗಳನ್ನು ಜಯಿಸಿದ್ದು ಮೊದಲಾದವನ್ನು ವಿಸ್ತಾರವಾಗಿ ಹೇಳಬೇಕು” ಎಂದು ಕೇಳಿದನು. ವೈಶಂಪಾಯನನಿಂತೆಂದನು : “ಸಹದೇವನು ಮಾಡಿದ ಸಾಹಸವನ್ನು ಹೇಳುತಲಿದೇನೆ ಕೇಳು : ಹಾಗೆ ಅಡವಿಗಳಲ್ಲಿಯೂ ದ್ವೀಪಗಳಲ್ಲಿಯೂ ಇರುವಂಥಾವರನ್ನು ಜಯಿಸಿ, ಚೋಳದೇಶವನ್ನು ಹೊಕ್ಕು, ಕಾಡುಮತ್ತಿ, ನೀರುಮತ್ತಿ, ತೊರೆಮತ್ತಿ, ಕರಿಲೋದುಗ, ಬಿಳೀಲೋದುಗ, ಕೆಂಪಿನಲೋದುಗ, ಹುಣಸೆ ಹೂಡಗ, ಮುತ್ತುಗ, ಮುಳ್ಳುಮುತ್ತುಗ, ಬಾಳೀ, ಕರ್ಪೂರಬಾಳೆ, ಬನ್ನಿ, ಸೀವನ್ನಿ, ನೆಲ್ಲಿ, ಕಾಡುನೆಲ್ಲಿ, ಕಿರುನೆಲ್ಲಿ, ಆಲ, ಬ್ಯಾಲ, ನೀಲಾಶೋಕ, ರಕ್ತಾಶೋಕ, ಬಸಿರ, ವಕುಳ, ಅತ್ತಿ, ಕಲ್ಲತ್ತಿ, ಹಿರಿತಿಲಕ, ಕಿರಿತಿಲಕ, ಅರಳಿ, ಅರಘವಾಳ, ಕಡಬೆ, ಕಗ್ಗಲು, ಯುಲವದ, ಹುಲಿಗಿರಿ, ಅಶ್ವಕರ್ಣ, ಅಂಕೋಲೆ, ಬಂದುಗೆ, ಬಾವನ್ನ, ಕಿರೀತೇರಣ, ಹಿರ್ಲಿತೇರ, ಕೆಂಪಿನತೇರಣ, ಹಳದ ತೇರಣ, ಬಾಗೆ, ಸೀಗೆ, ಮಲ್ಲಿಗೆ, ಕಾಡುಮಲ್ಲಿಗೆ, ನಿಂಬೆ, ದಾಡಿಂಬೆ, ಹಿಪ್ಪೆ, ಕಾಡುಹಿಪ್ಪೆ, ಹೊನ್ನೆ, ಸುರಹೊನ್ನೆ, ಮೊಲ್ಲೆ, ಕಾಡುಮೊಲ್ಲೆ, ಸಂಪಿಗೆ, ನಾಗಸಂಪಿಗೆ, ವನಸಂಪಿಗೆ, ಮೊಟಲೀ, ಕಿರಿಮೊಟಲೀ, ಆದರ್ಗಂತಿಗೆ, ಇರುವಂತಿಗೆ, ಶಾವಂತಿಗೆ, ಕೊಸಕು, ಕಾಡುಕೊಸಕು, ತಾಳೀ, ಬಿಳೀತಾಳೆ, ಜಾಜಿ, ಹಸುರುಜಾಜಿ, ಕಣಿಗಿಲೆ, ದೇವಕಣಿಗಿಲೆ, ಪನಸ, ಪಾದಿರಿ, ಅಡಕೆ, ತೆಂಗು, ಮಾವು, ಶೀಮಾವು, ಬಿದುರುಕಾಗೆ, ಬಿದುರುಬೆತ್ತ, ಮುಳ್ಳುಬೆತ್ತ, ಹಬ್ಬೆ, ನೀರುಹಬ್ಬೆ ಮೊದಲಾದ ವೃಕ್ಷಗಳಿಂದಲೂ ಲತೆಗಳಿಂದಲೂ ಒಪ್ಪುತ್ತಲಿರುವ ಉಭಯ ಪಾರ್ಶ್ವಗಳಿಂದಲೂ—ಹಂಸ, ರಾಜಹಂಸ, ಹಸುರುಬಣ್ಣದಹಕ್ಕಿ, ಕಾರಂಡವಕ್ಕಿ, ಮಿಂಚುಲಿಗೆಹಕ್ಕಿ, ನಾರಸವಕ್ಕಿ, ಜೆಳ್ಳಕ್ಕಿ, ಕೊಚೆವಕ್ಕಿ, ಚಕ್ರವಕ್ಕಿ, ನೀರುಕಾಗೆ, ನೀರುಕೋಳಿ, ಮುಂಡುಮುಳ್ಳುಗ, ಸಮುದ್ರದ ಕಾಗೆಗಳು, ಇವು ಮೊದಲಾದ ಜಲಪಕ್ಷಿಗಳಿಂದಲೂ—ವೇದವೇದಾಂಗ ಪಾರಂಗತರಾದ ಬ್ರಾಹ್ಮಣರಿಂದಲೂ, ಪುಣ್ಯಾಶ್ರಮಗಳಿಂದಲೂ, ಜಗತಿಗಳು ಹುಟ್ಟಿರುವ ಮರಗಳಿಂದಲೂ ಒಪ್ಪಿ ಉಭಯ ತೀರಗಳಲ್ಲಿ ಇರುವ ವೃಕ್ಷಗಳಿಂದಲೂ ಪುಷ್ಪಮಾಲಿಕೆಗಳಿಂದ ಅಲಂಕರಿಸಲ್ಪಟ್ಟ ಸ್ತ್ರೀಯೋಪಾದಿಯಲ್ಲಿ ಪ್ರಕಾಶಿಸಲ್ಪಟ್ಟಂಥಾದ್ದಾಗಿ ನಾನಾಪುಷ್ಪಸಮೇತವಾದ ಲತಾಗೃಹಗಳಿಂದ ನವರತ್ನ ಭೂಷಣಾಲಂಕೃತೆಯಾದ ಸ್ತ್ರೀರತ್ನದೋಪಾದಿಯಲ್ಲಿ ತೋರುತ ತಾವರೆ ಕನ್ನೈದಲು ಜಂಗಣಿಗೆಲು ಮೊದಲಾದ ಪುಷ್ಪಗಳ ರಜಸ್ಸಿನಿಂದ ಚಂದನಲೇಪದಿಂದ ಅಲಂಕೃತೆಯಾದ ಚಂಚಲಾಕ್ಷಿಯ ತೆರವನ್ನು ಅಂಗೀಕರಿಸುತ ಹೃದ್ಯವಾಗಿ ಅಪ್ಸರೋಗಣಸೇವಿತವಾಗಿ, ಪರಮಪಾವನ ತೀರ್ಥಸಹಿತವಾಗಿ ಮೂರು ಲೋಕಗಳನ್ನೂ ಪವಿತ್ರಮಾಡುವಂಥಾದ್ದಾಗಿ, ಪಾಪರಹಿತವಾಗಿ, ಸಕಲ ಪ್ರಾಣಿಗಳಿಗೂ ಆಧಾರವಾಗಿ ಅತಿವಿಸ್ತಾರವುಳ್ಳದ್ದಾಗಿ, ಮಳಲೊಟ್ಟುಗಳಿಂದ ಶೋಭಿತವಾಗಿ, ಸ್ವಾದೂದಕ ಪರಿಪೂರ್ಣವಾಗಿ, ಪುಣ್ಯಸ್ವರೂಪವಾದ ಕಾವೇ

ರಿಯನ್ನು ನೋಡಿ ಸಂತುಷ್ಟ ಚಿತ್ತನಾಗಿ 'ನಮ್ಮ ರಾಜ್ಯದಲ್ಲಿರುವ ಗಂಗಾನದಿಯೋಪಾದಿಯಲ್ಲಿ ಈ ರಾಜ್ಯದಲ್ಲಿ ಕಾವೇರಿಯು ಪ್ರಕಾಶಿಸುತಲಿದೆ!' ಎಂದು ತನ್ನ ಸಂಗಡ ಬಂದವರಕೂಡೆ ಆ ನದಿಯ ಮಹಾತ್ಮ್ಯವನ್ನು ಬಹು ಪ್ರಕಾರವಾಗಿ ಸ್ತುತಿಸುತ ಸಕಲ ಸೇನಾಸಮೇತನಾಗಿ ಆ ಮಹಾನದಿಯನ್ನು ಬಿಟ್ಟು ದಕ್ಷಿಣತೀರದಲ್ಲಿ ಹೋಗುತ್ತಿದ್ದನು. ಆತನು ಬಂದದ್ದನ್ನು ಕೇಳಿ ಆತನನ್ನು ನೋಡಬೇಕೆಂಬ ಮನಸ್ಸಿನಿಂದ ಚೋಳದೇಶದಲ್ಲಿರುವ ಸಮಸ್ತ ದ್ರಾವಿಡ ಜನಗಳೂ ರಮಣೀಯ ಸೌಂದರ್ಯಶಾಲಿಗಳಾದ ಸ್ತ್ರೀಜನಗಳೂ ಬಂದು ಮನ್ಮಥನಿಗೆ ಸಮಾನನಾಗಿ ಅತಿ ವಿಶಾಲಲೋಚನನಾಗಿ ಸುಕುಮಾರನಾಗಿ ಮಹೇಂದ್ರ ಸನ್ನಿಭನಾದ ಸಹದೇವನನ್ನು ನೋಡಿ ನಾನಾಪ್ರಕಾರವಾದ ಕಾಣಿಕೆಗಳನ್ನು ಕೊಟ್ಟು, ಱವೆಗಳನ್ನು ಹಾಕದೆ ನೋಡುತ ಬಹು ಪ್ರಕಾರವಾಗಿ ಶುಭಗೀತಗಳಾದ ಸ್ತೋತ್ರಗಳಿಂದ ಸ್ತುತಿಸಿದರು. ಅವರಷ್ಟುಮಂದಿಯನ್ನೂ ಕೃಪಾಕಟಾಕ್ಷದಿಂದ ನೋಡುತ ಬಹುಮಾನವನ್ನು ಮಾಡಿ, ಸಹದೇವನು ಅಲ್ಲಿಂದ ಹೊರಟು ಚೋಳರಾಯನ ಸಮೀಪಕ್ಕೆ ದೂತರನ್ನು ಕಳುಹಿಸಿ ಕಪ್ಪವನ್ನು ತಕ್ಕೊಂಡು ಪಾಂಡ್ಯ ದೇಶವನ್ನು ಪ್ರವೇಶಿಸಿ, ಆನೆಗಳು ಹುಲಿಗಳು ಮೊದಲಾದ ಅನೇಕ ಮೃಗಗಳಿಂದಲೂ ಗಿಣಿ ನವಿಲು ಮೊದಲಾದ ಅನೇಕ ಪಕ್ಷಿಗಳಿಂದಲೂ ಒಪ್ಪುತ್ತಲಿರುವ ಅಡವೀಮಾರ್ಗವನ್ನು ದಾಟಿ, ಪಾಂಡ್ಯರಾಜ್ಯಕ್ಕೆ ಹೋಗಿ, ತನ್ನ ಮಾವನಾದ ಮಲಯಧ್ವಜ ಪಾಂಡ್ಯರಾಯನ ಸಮುಖಕ್ಕೆ ದೂತರನ್ನು ಕಳುಹಿಸಿದನು. ಆತನು ಸಹದೇವನ ಆಜ್ಞೆಯನ್ನು ಶಿರಸಾವಹಿಸಿ ಅನೇಕ ವಸ್ತುವಾಹನಗಳನ್ನು ಕೊಡಲು,—ಪಾಂಡ್ಯರಾಯನ ಮಗಳಾಗಿ ಅತ್ಯಂತ ಸೌಂದರ್ಯಶಾಲಿಯಾಗಿ ದ್ರಾವಿಡ ಕಾಂತಾರತ್ನವಾಗಿ ಧನಂಜಯನಿಗೆ ಪತ್ನಿಯಾದ ಚಿತ್ರಾಂಗದೆಯು ಸಹದೇವನು ಬಂದದ್ದನ್ನು ಕೇಳಿ ಮುಕ್ತಾಮಣಿ ಭೂಷಣಾಂಬರಗಳನ್ನು ಅನೇಕವಾಗ ಕಳುಹಿಸಲು, ಸಹದೇವನು ಸಂತೋಷದಿಂದ ಅವನ್ನು ತಕ್ಕೊಂಡು, ಅಣ್ಣನಮಗನಾದ ಬಭ್ರುವಾಹನನಿಗೆ ಬಹುವಿಧ ರತ್ನಾಂಬರಗಳನ್ನು ಕೊಟ್ಟು, ಪುತ್ರವಾತ್ಸಲ್ಯದಿಂದ ಆತನಲ್ಲಿ ಪ್ರೀತಿಯನ್ನು ಮಾಡಿ ಕಳುಹಿಸಿ, ಮತ್ತೂ ಮಣಲೂರು ಪಟ್ಟಣಾಧಿಪತಿಯ ಸಮೀಪಕ್ಕೆ ದೂತರನ್ನು ಕಳುಹಿಸಿ, ಆತನ ದೆಸೆಯಿಂದ ಕಪ್ಪವನ್ನು ತಕ್ಕೊಂಡು ಸಮಸ್ತವಾದ ದ್ರಾವಿಡ ಜನರೂ ಸುತ್ತಿಕೊಂಡಿರಲು, ಅಲ್ಲಿಂದ ಹೊರಟು ಅಗಸ್ತ್ಯ ಮುನೀಶ್ವರನಿಗೆ ಆವಾಸಸ್ಥಾನವಾಗಿ ಸ್ವರ್ಗದೋಪಾದಿಯಲ್ಲಿರುವ ಮಲಯಪರ್ವತಕ್ಕೆ ಪ್ರದಕ್ಷಿಣವಾಗಿ ಬಂದು ನಿರ್ಮಲವಾಗಿ ಸೀತಳವಾಗಿ ಮನೋಹರಗಳಾಗಿರುವ ಸ್ವಾದುಜಲಗಳುಳ್ಳ ತಾಮ್ರಪರ್ಣೀ ನದಿಯನ್ನು ದಾಟಿ, ಸಮುದ್ರತೀರದಲ್ಲಿ ಪಾಳಯವನ್ನು ಇಳಿಸಿದನು."

## ೩೫ ನೇ ಅಧ್ಯಾಯ.—ದಿಗ್ವಿಜಯಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಮಾದ್ರೀಪುತ್ರನಾದ ಸಹದೇವನು ಪ್ರಜ್ಞಾವಂತರಾದ ತನ್ನ ಮಂತ್ರಿಗಳೊಡನೆ ಆಲೋಚಿಸಿ, ಭೀಮಸೇನನ ಮಗನಾದ ಘಟೋತ್ಕಚನನ್ನು ಸ್ಮರಿಸಲು, ಆತನು ಅತ್ಯುನ್ನತಾಕಾರನಾಗಿ, ಆಜಾನುದೀರ್ಘಬಾಹುವಾಗಿ, ಕರೀಮೇಘದೋಪಾದಿಯಲ್ಲಿ ಶರೀರವರ್ಣವುಳ್ಳವನಾಗಿ, ಭಯಂಕರವಾದ ಕೋರೆದಾಡೆಗಳುಳ್ಳಂಥಾವನಾಗಿ, ಕೆಂಪಾಗಿರುವ ಮಂಡೇಕೂದಲುಗಳೂ ಗಡ್ಡವೂ ಉಳ್ಳಂಥಾವನಾಗಿ, ವಿಕೃತವಾದ ಅವಯವಗಳುಳ್ಳಂಥಾವನಾಗಿ, ಮಹಾಬಲಸಂಪನ್ನನಾಗಿ, ತಪ್ತಕಾಂಚನ ಕುಂಡಲನಾಗಿ, ವಿಚಿತ್ರವಾದ ಕಿರೀಟ ಹಾರ ಭುಜಕೀರ್ತಿ ಕಿರುಘಂಟೆ ಮಣಿಭೂಷಣಗಳು ಮೊದಲಾದ ಸಕಲ ಭೂಷಣ ಭೂಷಿತನಾಗಿ, ಮೃದುವಾದ ವಸ್ತ್ರವನ್ನು ಧರಿಸಿ ನಡುವಿನಲ್ಲಿ ಕಠಾರಿಯನ್ನು ಕಟ್ಟಿ ರಕ್ತಚಂದನವನ್ನು ಧರಿಸಿ, ಆಕ್ಷಣದಲ್ಲೇ ಬಂದು ಭೂಮಿಯು ಕಂಪಿಸುವ ಹಾಗೆ ಮುಂದೆ ನಿಂತನು. ಆ ಪರ್ವತಾಕಾರನನ್ನು ನೋಡಿ ಸಕಲ ಜನಗಳೂ ಭಯಭ್ರಾಂತರಾಗಿ ಹುಲ್ಲೆಗಳು ಬೆದರಿ ಓಡುವ ರೀತಿಗೆ ನಾಲ್ಕು ದಿಕ್ಕುಗಳಲ್ಲಿಯೂ ಓಡಿಹೋದರು. ಘಟೋತ್ಕಚನು ಪುಲಸ್ತ್ಯನನ್ನು ನಮಸ್ಕರಿಸುವ ರಾವಣನೋಪಾದಿಯಲ್ಲಿ ಭೀಮನಿಗೆ ತಮ್ಮನಾದ ಸಹದೇವನಿಗೆ ನಮಸ್ಕಾರವನ್ನು ಮಾಡಿ ವಿನಯಸಂಪನ್ನನಾಗಿ ಕೈಮುಗಿದು 'ಎಲೈ ಮಹಾತ್ಮನೆ, ನನ್ನನ್ನು ಸ್ಮರಿಸುವದಕ್ಕೆ ನಿಮಿತ್ತವೇನು?' ಅಂದನು. ಆ ಮಾದ್ರೀನಂದ

ನನು ಅಣ್ಣನ ಮಗನನ್ನು ತಬ್ಬಿಕೊಂಡು, ಸಂತೋಷಾತಿಶಯದಿಂದ ಶಿರಸ್ಸನ್ನು ಆಘ್ರಾಣಿಸುತ ತನ್ನ ದಯಾ ವಿಲೋಚನದಿಂದ ನೋಡಿ, ‘ ಎಲೈ ಭೀಮನಂದನನೆ, ನೀನು ಲಂಕಾದ್ವೀಪಕ್ಕೆ ಹೋಗಿ ಮಹಾತ್ಮನಾದ ವಿಭೀಷಣನೊಡನೆ ನಾನು ಬಂದಿರುವದನ್ನು ತಿಳುಹಿಸಿ ಅನೇಕ ಪ್ರಕಾರಗಳಾದ ಕಾಣಿಕೆಗಳನ್ನು ರಾಜಸೂಯಾರ್ಥವಾಗಿ ತೆಗದುಕೊಂಡು ಬಾ ; ಆತನು ಕಾಣಿಕೆಯನ್ನು ಕೊಡದೇ ಇದ್ದರೆ ‘—ಕೃಷ್ಣಸಹಾಯದಿಂದ ಧರ್ಮರಾಯನು ಸಹೋದರ ಸಹಿತನಾಗಿ ರಾಜಸೂಯ ಯಾಗವನ್ನು ಮಾಡುತಲಿರ್ಧಾನೆ ; ಇಷ್ಟು ಮಾತ್ರವು ನೀನು ತಿಳಿದಿರು ; ಸುಖವಾಗಿರು ; ನಾನು ಸುಖನಾಗಿ ಹೋಗಿ ಬರುತಲಿದ್ದೇನೆ—’ ಎಂದು ನಮ್ಮ ಮಹಾತ್ಮ್ಯವನ್ನು ತಿಳಿಯಹೇಳಿ ತಿರಿಗೂ ಬಾ ; ಅಂದನು. ಘಟೋತ್ಕಚನು ಸಹದೇವನ ಶಾಸನವನ್ನು ಶಿರಸಾವಹಿಸಿ, ಸಂತುಷ್ಟ ಹೃದಯನಾಗಿ, ಆತನಿಗೆ ಪ್ರದಕ್ಷಿಣವನ್ನು ಮಾಡಿ, ಲಂಕಾಭಿಮುಖವಾಗಿ ನಡದು, ಆಮೆ ಮೊಸಳೆ ಮತ್ಸ್ಯ ಮೊದಲಾದ ಜಲಜಂತುಗಳಿಂದ ಕೂಡಿ ಅನೇಕವಾದ ಮುತ್ತಿನ ಚಿಪ್ಪುಗಳು ಶಂಖಗಳುಳ್ಳಂಥಾ ಸಮುದ್ರತೀರದಲ್ಲಿ ನಿಂತು, ಶ್ರೀರಾಮ ಸೇತುವನ್ನು ನೋಡುತ ರಾಮಸ್ವಾಮಿಯ ದಿವ್ಯ ಮಹಾತ್ಮ್ಯವನ್ನು ಸ್ತುತಿಸುತ ದಕ್ಷಿಣ ತೀರವನ್ನು ಸೇರಿ, ಚಿನ್ನದ ಕೋಟೆಗಳಿಂದಲೂ ಶುಭಕರಗಳಾದ ಪಟ್ಟಣದ ಬಾಗಲುಗಳಿಂದಲೂ ಸಾವಿರ ಸಂಖ್ಯೆಯುಳ್ಳ ಮುತ್ತುಗಳಿಂದಲೂ ಮಣಿಗಳಿಂದಲೂ ಒಪ್ಪುತಲಿರುವ ಉದ್ಯಾನವನಗಳಿಂದಲೂ ನಿರ್ಮಿಸಲ್ಪಟ್ಟಂಥಾದ್ದಾಗಿ ನಾನಾರತ್ನ ವಿಚಿತ್ರಗಳಾದ ಗವಾಕ್ಷಗಳಿಂದಲೂ ಚಿನ್ನದ ತೋರಣಗಳಿಂದಲೂ ವಿವಿಧ ರತ್ನ ಖಚಿತಗಳಾದ ರಾಜಮಾರ್ಗಗಳಿಂದಲೂ ಸಕಲ ಸಮಯಗಳಲ್ಲಿಯೂ ಪುಷ್ಪ ಫಲ ಸಮೇತವಾಗಿ ದಿವ್ಯಗಂಧ ಪರಿಪೂರ್ಣಗಳಾದ ವೃಕ್ಷಗಳಿಂದಲೂ ಒಪ್ಪುತ ದಿವ್ಯ ದುಂದುಭಿಗಳಿಂದ ಅತಿಮನೋಹರವಾಗಿ ದೇವೇಂದ್ರನ ಪಟ್ಟಣದೋಪಾದಿಯಲ್ಲಿ ಪ್ರಕಾಶಿಸುತಲಿರುವ ಲಂಕಾ ಪಟ್ಟಣವನ್ನು ಪ್ರವೇಶಿಸಿ, ಶೂಲ ಕೃಪಾಣ ಮೊದಲಾದ ಆಯುಧಗಳನ್ನು ಧರಿಸಿ ನಾನಾವೇಷ ಭೂಷಿತರಾಗಿ ಸಕಲ ಕಾರ್ಯ ವಿಶಾರದರಾಗಿರುವ ರಾಕ್ಷಸರ ಮುಖ್ಯರು ಮತ್ತು ದಿವ್ಯ ಮಾಲ್ಯಾಂಬರಾಭರಣ ಭೂಷಿತರಾಗಿ ಮದ್ಯಪಾನ ಮದದಿಂದ ಕೆಂಪಾದ ಕಣ್ಣುಗಳುಳ್ಳಂಥಾವರಾಗಿ ಬಳುಕುತಿರುವ ಪ್ರೋರವಾರಗಳೂ ನಯನಗಳೂ ವುಳ್ಳಂಥಾವರಾಗಿ ನೋಡುವದಕ್ಕೆ ಯೋಗ್ಯವಾದ ಆಕಾರವುಳ್ಳಂಥಾ ಸ್ತ್ರೀಜನಗಳೂ ಆಶ್ಚರ್ಯಭರಿತರಾಗಿ ತನ್ನನ್ನು ನೋಡುತ್ತಿರಲು ದೇವೇಂದ್ರನ ಅರಮನೆಯೋಪಾದಿಯಲ್ಲಿರುವ ವಿಭೀಷಣನ ಮನೆಯನ್ನು ನೋಡಿ, ಅಲ್ಲಿಗೆ ಹೋಗಿ ದ್ವಾರಪಾಲಕನನ್ನು ಕರೆದು ‘ ಕುರುಕುಲಾಗ್ರಗಣ್ಯನಾದ ಪಾಂಡುರಾಯನ ಕಡೇ ಮಗನಾದ ಸಹದೇವನು ಶ್ರೀಕೃಷ್ಣಸ್ವಾಮಿಗೆ ಸ್ನೇಹಿತನಾಗಿ ತನಗೆ ಅಣ್ಣನಾಗಿರುವ ಧರ್ಮರಾಯನು ತನ್ನನ್ನು ಕಳುಹಿಸಲು, ಆತನು ರಾಜಸೂಯ ಯಾಗಕ್ಕೋಸ್ಕರ ದಕ್ಷಿಣ ದಿಗ್ವಿಜಯಕ್ಕೆ ಬರಲು ಆತನ ಅಪ್ಪಣೆಯಿಂದ ಕಾಣಿಕೆಯನ್ನು ತೆಕೊಳ್ಳುವದಕ್ಕೆ ನಾನು ಇಲ್ಲಿಗೆ ಬಂದೆನು ; ನಾನು ಬಂದದ್ದನ್ನು ನಿಮ್ಮ ಧೊರೆಗೆ ಶೀಘ್ರವಾಗಿ ಅರಿಕೆಮಾಡು ’ ಅಂದನು. ಆ ದ್ವಾರಪಾಲಕನು ‘ ಹಾಗೆ ಆಗಲೀ ’ ಎಂದು ರಾಜಸನ್ನಿಧಾನಕ್ಕೆ ಶೀಘ್ರವಾಗಿ ಹೋಗಿ ವಿನೀತನಾಗಿ ಕೈಮುಗಿದು ದೂತವಚನವನ್ನು ಬಿನ್ನವಿಸಿದನು. ವಿಭೀಷಣನು ದೂತ ವಾಕ್ಯ ವೃತ್ತಾಂತವನ್ನು ಕೇಳಿ ತನ್ನ ಸಮೀಪಕ್ಕೆ ಆತನನ್ನು ಕರದುಕೊಂಡು ಬರಬೇಕೆನ್ನಲು ದೌವಾರಿಕನು ಬಂದು ‘ ಎಲೈ ಮಹಾತ್ಮನೆ, ರಾಕ್ಷಸೇಂದ್ರನಾದ ವಿಭೀಷಣನು ನಿನ್ನನ್ನು ಕರಕೊಂಡು ಬರಹೇಳಿದನು ; ಶೀಘ್ರವಾಗಿ ಬಾ ’ ಅಂದನು. ಘಟೋತ್ಕಚನು ಆತನ ಸಂಗಡಲೇ ಹೋಗಿ ಕೈಲಾಸ ಶಿಖರಕ್ಕೆ ಸಮಾನವಾಗಿ ಕಾಂಚನಾಲಂಕೃತವಾಗಿ ಸುವರ್ಣ ಪ್ರಾಕಾರಯುಕ್ತವಾಗಿ ನಾನಾರತ್ನಗಳಿಂದ ರಚಿಸಲ್ಪಟ್ಟ ಬಾಗಲುಗಳಿಂದಲೂ ಉಪ್ಪರಿಗೆಗಳಿಂದಲೂ ಕೂಡಿರುವಂಥಾದ್ದಾಗಿ ಚಿನ್ನದಿಂದಲೂ ಬೆಳ್ಳಿಯಿಂದಲೂ ವಜ್ರವೈಡೂರ್ಯ ಸ್ಫಟಿಕಗಳಿಂದಲೂ ನಿರ್ಮಿತಗಳಾದ ಸ್ತಂಭಗಳಿಂದ ಕೂಡಿಯು ಸುವರ್ಣ ಸ್ತಂಭಾಲಂಕೃತಗಳಾಗಿರುವ ನಾನಾಧ್ವಜ ಪತಾಕಗಳ ಸಮೂಹಗಳಿಂದ ಶೋಭಿತವಾಗಿ ಚಿತ್ರಮಾಲ್ಯಾಲಂಕೃತವಾಗಿ ಚಿನ್ನ ಜಗತಿಗಳಿಂದ ಅಲಂಕೃತವಾಗಿ ಅಸಮಾನ ವೈಭವದಿಂದ ಒಪ್ಪುತಲಿರುವ ಆತನ ಅರಮನೆಯನ್ನು ಹೊಕ್ಕು ತಂತ್ರೀಧ್ವನಿಗಳಿಂದ ಮನೋಹರವಾಗಿ ಸಮತಾನ ಮಿತಾಕ್ಷರವಾಗಿ ನಿಬಿಡವಾದ್ಯಧ್ವನಿ ಸಂಕುಲವಾಗಿರುವ ಮಧುರಸ್ವರವನ್ನು ಕೇಳುತ ಅನೇಕ ಕಕ್ಷ್ಯಾಂತರಗಳನ್ನು ದಾಟಿ, ದಿವ್ಯ ಭೂಷಣಾಲಂಕೃತ ಶರೀರನಾಗಿ ದಿವ್ಯ ಮಾಲ್ಯಾಂಬರಗಳನ್ನು ಧರಿಸಿ ದಿವ್ಯ ರತ್ನ ಸಿಂಹಾಸ

ಮಾನ ಕಿರೀಟ ಕುಂಡಲಧರನಾಗಿ ಸೂರ್ಯಾಗ್ನಿ ಪ್ರಭಾಭಾಸಮಾನನಾಗಿ ಸುವರ್ಣಮಯವಾಗಿ ಶ್ರೇಷ್ಠವಾಗಿ ಸೂರ್ಯನೋಪಾದಿಯಲ್ಲಿ ಪ್ರಕಾಶಮಾನವಾಗಿ ಮುಕ್ತಾಮಣಿ ಶೋಭಿತವಾದ ಸಿಂಹಾಸನದಲ್ಲಿ ಸುಖವಾಗಿ ಕುಳ್ಳಿತುಕೊಂಡಿರಲು, ನಾಲ್ಕು ದಿಕ್ಕುಗಳಲ್ಲಿಯೂ ಮಂತ್ರಿವರ್ಗವು ಓಲಗಿಸಲು, ದೇವಗಣ ಪರಿವೃತವಾಗಿ ದಿವ್ಯ ಮಾಲ್ಯಾಂಬರಗಳನ್ನು ಧರಿಸಿ ದೇವೇಂದ್ರನೋಪಾದಿಯಲ್ಲಿ ಪ್ರಕಾಶಿಸುತ ಯಕ್ಷರಕ್ಷೋಗಣಗಳೂ ಸೌಂದರ್ಯ ಸಮೇತರಾದ ಸ್ತ್ರೀಜನಗಳೂ ಓಲಗಿಸಲು, ಸ್ತುತಿಪಾಠಕರು ಬಹುಪ್ರಕಾರವಾಗಿ ಹೊಗಳಲು, ಸಕಲಾಲಂಕೃತ ವಿಭೂಷಿತರಾದ ಸ್ತ್ರೀಜನಗಳು ಉಭಯ ಪಾರ್ಶ್ವಗಳಲ್ಲಿ ನಿಂತು ಸುವರ್ಣರತ್ನ ದಂಡಗಳುಳ್ಳ ಚಾಮರಗಳನ್ನು ಬೀಸಲು, ತೇಜೋರಾಶಿಯಾಗಿ ಕುಬೇರ ವರುಣ ಸಮಾನನಾಗಿ ಧರ್ಮನಿರತನಾಗಿ ರಾಕ್ಷಸೇಶ್ವರನಾದ ವಿಭೀಷಣನನ್ನು ನೋಡಿ, ಕೈಕಟ್ಟಿಕೊಂಡು ದೇವೇಂದ್ರನ ಸಮೀಪದಲ್ಲಿ ಚಿತ್ರರಥನೋಪಾದಿಯಲ್ಲಿ ನಿಂತನು. ಆ ರಾಕ್ಷಸೇಶ್ವರನು ಆತನನ್ನು ಯಥೋಚಿತವಾಗಿ ಸಾಂತ್ವವಚನಗಳಿಂದ ಬಹುಮಾನ ಮಾಡಿ 'ನಿನ್ನನ್ನು ಕಾಣಿಕೆಯನ್ನು ತಕ್ಕೊಂಡು ಬರಲು ಸನ್ನ ಸನ್ನಿಧಾನಕ್ಕೆ ಕಳುಹಿಸಿದ ನಿಮ್ಮ ಅರಸನ ವಂಶವನ್ನು ಆತನ ಹೆಸರನ್ನು ಆತನ ಸಹೋದರರ ತೆರವನ್ನು ಆತನ ಪಟ್ಟಣವನ್ನು ಆತನ ದೇಶವನ್ನು ಸವಿಸ್ತಾರವಾಗಿ ಪ್ರತ್ಯೇಕಪ್ರತ್ಯೇಕವಾಗಿ ಹೇಳು' ಎಂದು ಕೇಳಿದನು."

---

## ೩೬ನೇ ಅಧ್ಯಾಯ.—ದಿಗ್ವಿಜಯ ಪರ್ವ.

"ಕೇಳು ಜನಮೇಜಯನೇ, ಆ ಬಳಿಕ ಭೀಮನ ಮಗನಾದ ಘಟೋತ್ಕಚನು ವಿಭೀಷಣನ ವಾಕ್ಯವನ್ನು ಕೇಳಿ 'ಎಲೈ ರಾಕ್ಷಸೇಶ್ವರನೆ, ಚಂದ್ರ ವಂಶದಲ್ಲಿ ಭರತ ಕುಲ ಶ್ರೇಷ್ಠನಾದ ಪಾಂಡುರಾಯನುಂಟು; ಆತನಿಗೆ ಮಹೇಂದ್ರ ಸಮಾನ ಪರಾಕ್ರಮವುಳ್ಳಂಥಾ ಐದುಮಂದಿ ಕುಮಾರಕರು ಹುಟ್ಟಿದರು; ಅವರೊಳಗೆ ಜ್ಯೇಷ್ಠ ಪುತ್ರನಾದ ಧರ್ಮರಾಯನು ಅಜಾತಶತ್ರುವೆಂಬ ಹೆಸರಿನಿಂದ ಪ್ರಸಿದ್ಧನಾಗಿ '—ಧರ್ಮನಂದನನಾಗಿ ಸದ್ಧರ್ಮವೇ ಪ್ರತ್ಯಕ್ಷವಾಗಿ ಹುಟ್ಟಿತೊ!—' ಎಂದು ಸಕಲ ಜನಗಳೂ ಸ್ತುತಿಸಲು, ಅಪರಿಮಿತ ಪರಾಕ್ರಮ ಧುರೀಣರಾದ ತಮ್ಮಂದಿರ ಸಹಾ ತಾನೂ ಭೂಚಕ್ರವನ್ನು ಭುಜಬಲ ಪರಾಕ್ರಮದಿಂದ ಜಯಿಸಿ, ಗಂಗಾಯಮುನಾ ಮಧ್ಯದೇಶದಲ್ಲಿ ಹಾಸ್ತಿನಗರವು ಇಂದ್ರಪ್ರಸ್ಥ ಪಟ್ಟಣವು ಎಂಬ ಎರಡು ಪಟ್ಟಣಗಳೊಳಗೆ ಗಂಗಾ ದಕ್ಷಿಣತೀರದಲ್ಲಿ ಹಸ್ತಿನಾಪಟ್ಟಣವೆಂಬ ಪ್ರಧಾನ ಪಟ್ಟಣವನ್ನು ಪಿತೃಜ್ಯೇಷ್ಠನಾದ ಧೃತರಾಷ್ಟ್ರನ ಕುಮಾರವರ್ಗಕ್ಕೆ ಕೊಟ್ಟು, ತಾನು ತಮ್ಮಂದಿರೊಡನೆ ಸಹ ಇಂದ್ರಪ್ರಸ್ಥ ಪಟ್ಟಣದಲ್ಲಿ ಧರ್ಮನಿರತನಾಗಿ ರಾಜ್ಯವನ್ನು ಪರಿಪಾಲಿಸುತ ಸುಖವಾಗಿದ್ದು, ರಾಜಸೂಯಯಾಗವನ್ನು ಮಾಡಬೇಕೆಂದು ಎಣಿಸಿ, ಸುಕುಮಾರನಾಗಿ ಮಹಾಶೌರ್ಯಧುರ್ಯನಾಗಿ ಜಗದ್ವಿಖ್ಯಾತ ಪರಾಕ್ರಮಶಾಲಿಯಾಗಿ ಕಾರ್ತವೀರ್ಯಸಮಾನ ಶೌರ್ಯವಂತನಾಗಿ ಬಾಹುಬಲಶಾಲಿಯಾಗಿ ದಿವ್ಯಾಸ್ತ್ರಮಹಿಮೆಯಲ್ಲಿ ಪರಶುರಾಮನಿಗೆ ಸಮಾನನಾಗಿ ಯುದ್ಧರಂಗದಲ್ಲಿ ದಶರಥರಾಮನಿಗೆ ಸಮಾನನಾಗಿ ಸೌಂದರ್ಯದಲ್ಲಿ ದೇವೇಂದ್ರನಿಗೆ ಸಮಾನನಾಗಿ ದೇವದಾನವ ಗಂಧರ್ವ ಪಿಶಾಚ ಗುಹ್ಯಕ ರಾಕ್ಷಸೋರಗ ಮನುಷ್ಯ ಗಣಗಳಿಂದ ಜಯಿಸುವದಕ್ಕೆ ಅಶಕ್ಯನಾಗಿ ದೇವಗಣದೊಡನೆ ಕೂಡಿರುವ ದೇವೇಂದ್ರನನ್ನು ಯುದ್ಧರಂಗದಲ್ಲಿ ಜಯಿಸಿ ಖಾಂಡವವನವನ್ನು ಯಜ್ಞೇಶ್ವರನಿಗೆ ಆಹುತಿಯಾಗಿ ಕೊಟ್ಟು ಆ ಯಜ್ಞೇಶ್ವರನ ದೆಸೆಯಿಂದ ಗಾಂಡೀವ ಶ್ವೇತಾಶ್ವಮೊದಲಾದ ದೇವತೆಗಳಿಗೂ ದುರ್ಲಭವಾದ ಅನೇಕ ದಿವ್ಯಾಸ್ತ್ರಗಳನ್ನು ಪಡದು ಮಹಾನುಭಾವನಾಗಿ ಸಕಲ ಲೋಕೇಶ್ವರನಾದ ಶ್ರೀಕೃಷ್ಣನ ತಂಗಿಯಾದ ಕಾಂತಾಶಿರೋಮಣಿಯಾಗಿರುವ ಸುಭದ್ರಾದೇವಿಯನ್ನು ಮದುವೆಯಾಗಿ, (ಶ್ರೀಕೃಷ್ಣಸ್ವಾಮಿ ತಮ್ಮಲ್ಲಿರುವ ಸ್ನೇಹವಾತ್ಸಲ್ಯದಿಂದ ಯಾವಾಗಲೂ ಎಡಬಿಡದೇ ಇರಲು) ಅಂಥಾ ಸಕಲ ಗುಣಶ್ರೇಷ್ಠನಾಗಿ ತನ್ನ ಎರಡನೇ ತಮ್ಮನಾದ ಅರ್ಜುನನನ್ನು ಉತ್ತರದಿಕ್ಕಿಗೆ ಕಳುಹಿಸಿ—ಅರ್ಜುನನಿಗೆ ಅಣ್ಣನಾದ ಸಿಂಹ ಪರಾಕ್ರಮಶಾಲಿಯಾಗಿ ಹತ್ತು ಸಾವಿರ ಆನೆಗಳಿಗೆ ಸಮಾನವಾದ ಶರೀರಬಲವುಳ್ಳಂಥಾವನಾಗಿ ಮಹನೀಯ ತೇಜೋಧನನಾಗಿ ಅಪ್ರಮೇಯ ಪರಾಕ್ರಮನಾಗಿ ಆಜಾನುಬಾಹುವಾಗಿರುವ ತನ್ನ ತಮ್ಮನಾದ ಭೀಮಸೇನನನ್ನು ಪೂರ್ವದಿಕ್ಕಿಗೆ ಕಳುಹಿಸಿ—ಆ ಭೀಮನಿಗೆ ಎ

ನೇ ತಮ್ಮನಾಗಿ ಸಾಕ್ಷಾತ್ಕರಿಸಿಯಿರುವ ಮನ್ಮಥನೋಪಾದಿಯಲ್ಲಿ ರೂಪರೇಖಾ ವಿರಾಜಮಾನ ಮೂರ್ತಿಯಾಗಿ ಜಗತ್ಪ್ರಸಿದ್ಧನಾದ ನಕುಲನನ್ನು ಪಶ್ಚಿಮದಿಕ್ಕಿಗೆ ಕಳುಹಿಸಿ, ಆತನಿಗೆ ಸಹೋದರನಾದ ಸಹದೇವನನ್ನು ದಕ್ಷಿಣದಿಕ್ಕಿಗೆ ಕಳುಹಿಸಲು, ನಕುಲಾನುಜನಾದ ಸಹದೇವನು ಕಳುಹಿಸಲು ನಾನು ಇಲ್ಲಿಗೆ ಬಂದೆನು; ನಾನು ಭೀಮಸೇನನಿಗೆ ಹಿಡಿಂಬಿಯೆಂಬ ರಾಕ್ಷಸ ಸ್ತ್ರೀಯಲ್ಲಿ ಹುಟ್ಟಿದಂಥಾ ಮಹಾಬಲಸಂಪನ್ನನಾಗಿ ಪಾಂಡವ ಕಾರ್ಯಾರ್ಥವಾಗಿ ಸಂಚರಿಸುತಲಿರುವೆನು; ನಾನು ಘಟೋತ್ಕಚನೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆದಿಧೇನೆ; ಇದು ಹಾಗಿರಲಿ: ಈಪ್ರಕಾರ ಉತ್ತರದಿಕ್ಕಿಗೆ ಹೋದ ಅರ್ಜುನನು ಅನೇಕ ಸಹಸ್ರಯೋಜನ ಪರಿಮಿತವಾದ ಭೂಮಂಡಲದಲ್ಲಿ ಸಂಚರಿಸಿ ಸಕಲ ರಾಷ್ಟ್ರ ಅರಸುಗಳನ್ನು ಜಯಿಸಿ ಸ್ವರ್ಗದ್ವಾರಪರಿಯಂತವು ಹೋಗಿ ದಿವ್ಯರತ್ನ ಭೂಷಣಾಂಬರ ಧನ ಕನಕ ಮೊದಲಾದ ವಸ್ತುಗಳನ್ನು ಕಾಣಿಕೆಯಾಗಿ ತಕ್ಕೊಂಡು ಬಂದು ಧರ್ಮರಾಯನಿಗೆ ಕೊಡಲು, ಭೀಮನು ನಕುಲನು ಮೂತಲು ಪಡವಲು ದಿಕ್ಕುಗಳನ್ನು ಜಯಿಸಿ ಬಹು ರತ್ನ ಕಾಂಚನಾದಿಗಳನ್ನು ತಂದು ಧರ್ಮರಾಯನಿಗೆ ಕೊಡಲು ಆತನು ರಾಜಸೂಯಯಾಗಕ್ಕೆ ಉದ್ಯುಕ್ತನಾಗಿಧಾನೆ; ಸಹದೇವನು ದಕ್ಷಿಣ ದಿಗ್ಭಾಗವನ್ನೆಲ್ಲಾ ಜಯಿಸಿ ನನ್ನನ್ನು ಇಲ್ಲಿಗೆ ಕಾಣಿಕೆಯನ್ನು ತೆಗದುಕೊಂಡು ಬರಲು ಕಳುಹಿಸಲು, ನಾನು ಇಲ್ಲಿಗೆ ಬಂದೆನು; ಈಗ ನಿನಗೆ ಪಾಂಡವರ ಮಹಿಮೆಯನ್ನು ಸಂಕ್ಷೇಪವಾಗಿ ಹೇಳಿದೆನು; ಇದು ಹಾಗಿರಲಿ: ಧರ್ಮರಾಯನ ಮಹಾತ್ಮ್ಯವನ್ನು ಭೀಮನು ಮೊದಲಾದವರ ಪರಾಕ್ರಮವನ್ನು ಸಕಲ ಜಗದೀಶ್ವರನಾದ ಶ್ರೀಕೃಷ್ಣಸ್ವಾಮಿಯ ಮಹಾತ್ಮ್ಯವನ್ನು ರಾಜಸೂಯಯಾಗದ ಅತಿಶಯವನ್ನು ನಿನ್ನ ಮನಸ್ಸಿನಲ್ಲಿ ವಿಚಾರಿಸಿಕೊಂಡು ಶೀಘ್ರವಾಗಿ ಕಾಣಿಕೆಯನ್ನು ಕೊಡು' ಎಂದು ಘಟೋತ್ಕಚನು ವಿಭೀಷಣನಿಗೆ ಹೇಳಿದನು."

---

## ೩೮ನೇ ಅಧ್ಯಾಯ.—ದಿಗ್ವಿಜಯಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಘಟೋತ್ಕಚನು ಹೇಳಿದ ವಾಕ್ಯವನ್ನು ಕೇಳಿ, ಧಾರ್ಮಿಕ ಶ್ರೇಷ್ಠನಾಗಿ ರಕ್ಷೋಗಣಾಧ್ಯಕ್ಷನಾಗಿ ವಿಶೇಷಜ್ಞಾನ ಸಂಪನ್ನನಾದ ವಿಭೀಷಣನು ಸಂತುಷ್ಟ ಹೃದಯನಾಗಿ ಕೆಲವು ಹೊತ್ತು ಆಲೋಚಿಸಿ 'ಈ ಯಾಗಾರಂಭಕ್ಕೆ ಕಾರಣನು ಶ್ರೀಕೃಷ್ಣನು ಎಂತಲೂ ಆತನು ಜಗದೀಶ್ವರನು ಎಂತಲೂ ಮನಸ್ಸಿನಲ್ಲಿ ನಿಶ್ಚಯಿಸಿದ್ದೇನೆ' ಎಂದು ಆತನ ಯಜ್ಞವನ್ನು ಪ್ರೀತಿಪೂರ್ವಕವಾಗಿ ಅಂಗೀಕರಿಸಿ ವಿಚಿತ್ರವಾದ ರತ್ನ ಕಂಬಳಿಗಳನ್ನು ನಾನಾರತ್ನ ಖಚಿತಗಳಾದ ಜಂತದ ಮಂಚಗಳನ್ನು ಅನರ್ಘ್ಯವಾದ ಭೂಷಣಗಳನ್ನು ಅಸಂಖ್ಯವಾದ ಮುಕ್ತಾಮಣಿ ಪ್ರವಾಳಗಳನ್ನು ಬಹು ವಿಧವಾದ ಚಿನ್ನ ಬೆಳ್ಳಿ ಪಾತ್ರೆಗಳನ್ನು ನಿರಾಜಿವಸ್ತ್ರಗಳನ್ನು ಯಜ್ಞ ತೋರಣಗಳಿಗೆ ಯೋಗ್ಯವಾದ ಮುಕ್ತಾಮಾಲಿಕಾ ವಿರಾಜಮಾನಂಗಳಾಗಿರುವ ಹದಿನಾಲ್ಕು ಚಿನ್ನದ ಮಾಲೆ ಮರಗಳನ್ನು ಚಿನ್ನದ ಕಮಲಗಳನ್ನು ಅನೇಕ ರತ್ನ ಖಚಿತವಾದ ಆಯುಧಗಳನ್ನು ನವರತ್ನ ವಿಭೂಷಿತವಾದ ಅಂದಳ ಪಾಲಕಿಗಳನ್ನು ಮಹಾ ರಾಜಯೋಗ್ಯವಾದ ಕಿರೀಟ ಕುಂಡಲಗಳನ್ನು ಚಿನ್ನದ ಕವಚಗಳನ್ನು ಚಿನ್ನದ ಪುಷ್ಪಮಾಲ್ಯಗಳನ್ನು ಚಂದ್ರ ಸಂಕಾಶಗಳಾಗಿ ಶತಾವರ್ತಗಳುಳ್ಳ ಶಂಖಗಳನ್ನು ಮನೋಹರಗಳಾದ ದಿವ್ಯ ಚಂದನಗಳನ್ನು ಅನೇಕ ರತ್ನ ಧನರಾಶಿಗಳನ್ನು ಮತ್ತೂ ವಸ್ತ್ರ ಕಂಬಳಾದ್ಯನೇಕ ವಸ್ತುಗಳನ್ನು ಕೊಟ್ಟು ಅವನ್ನೆಲ್ಲಾ ಹೊತ್ತುಕೊಂಡು ಹೋಗುವದಕ್ಕೆ ಎಂಭತ್ತೆಂಟು ಸಾವಿರ ರಾಕ್ಷಸ ಶ್ರೇಷ್ಠರನ್ನು ಕಟ್ಟುಮಾಡಿ ಕಳುಹಿಸಲು; ಘಟೋತ್ಕಚನು ವಿಭೀಷಣನಿಗೆ ಪ್ರದಕ್ಷಿಣ ಪೂರ್ವಕವಾಗಿ ನಮಸ್ಕಾರವನ್ನು ಮಾಡಿ ವಿನೀತನಾಗಿ ಕೈಮುಗಿದು ಅಪ್ಪಣೆಯನ್ನು ತಕ್ಕೊಂಡು ಸಮುದ್ರವನ್ನು ದಾಟಿ ಸಹದೇವನ ಸನ್ನಿಧಾನಕ್ಕೆ ಹೋದನು. ಆಗ ಅತಿಭಯಂಕರಾಕಾರವುಳ್ಳಂಥಾ ಘಟೋತ್ಕಚನು ಮೊದಲಾದ ರಾಕ್ಷಸರನ್ನು ನೋಡಿ ದ್ರಾವಿಡ ಸೇನೆಗಳು ಬೆದರಿ ನಾಲ್ಕು ದಿಕ್ಕುಗಳಿಗೆ ಓಡಿದರು. ಅನಂತರದಲ್ಲಿ ಭೀಮಸೇನನ ಮಗನಾದ ಘಟೋತ್ಕಚನು ಸಹದೇವನಿಗೆ ನಮಸ್ಕಾರವನ್ನು ಮಾಡಿ ಕೈಮುಗಿದು ವಿಭೀಷಣನು ಕೊಟ್ಟ ಕಾಣಿಕೆಗಳನ್ನೆಲ್ಲಾ ಸಮುಖದಲ್ಲಿರಿಸಿದನು; ಅವನು ಅ

ದಷ್ಟನನ್ನು ನೋಡಿ ಸಂತೋಷಪಟ್ಟು ದ್ರಾವಿಡ ಸೈನ್ಯವನ್ನು ತಮ್ಮ ಸ್ಥಾನದಲ್ಲಿರುವಹಾಗೆ ಕಟ್ಟುಮಾಡಿ, ತಾನು
ಪ್ರಯಾಣೋನ್ಮುಖನಾಗಿ ಹೊರಟನು. ಕೇಳು ಜನಮೇಜಯನೆ, ಈ ಪ್ರಕಾರವಾಗಿ ನಾಲ್ಕು ಉಪಾಯಗಳಿಂದ
ದಕ್ಷಿಣ ದಿಗ್ವಿಜಯವನ್ನು ಮಾಡಿ ವಿಭೀಷಣನಿಂದ ಕಳುಹಿಸಲ್ಪಟ್ಟ ರಾಕ್ಷಸರೂ ಸಮಸ್ತರೂ ಯಾಗ ಸಾಮಗ್ರಿಗಳ
ನ್ನು ಹೊತ್ತುಕೊಂಡು ಬರುತ್ತಿರಲು, ಸಕಲಸೇನಾಸಮೇತನಾಗಿ ನಡದು ಇಂದ್ರಪ್ರಸ್ಥ ಪಟ್ಟಣಕ್ಕೆ ಬಂದು. ರತ್ನ
ಕಾಂಚನ ಮೊದಲಾದ ವಸ್ತುಗಳನ್ನೂ ಅರಸುಗಳು ಕೊಟ್ಟ ಸಮಸ್ತವಾದ ಕಪ್ಪಗಳನ್ನೂ ಧರ್ಮರಾಯನ ಸಮು
ಖದಲ್ಲಿರಿಸಿ ನಮಸ್ಕರಿಸಿ ಕೈಮುಗಿದು ವಿನಯಪೂರ್ವಕವಾಗಿ ನಿಂತಿರಲು, ಆತನು ವಿಭೀಷಣನಿಂದ ಕೊಡಲ್ಪಟ್ಟ ಅನ
ರ್ಘ್ಯವಾದ ವಸ್ತು ವಿಶೇಷಗಳನ್ನು ನೋಡಿ ಸಂತೋಷಪಟ್ಟು. ಸಹಸ್ರಕೋಟಿ ಅಧಿಕ ಸಂಖ್ಯೆಯುಳ್ಳ ರತ್ನಕಾಂಚನ
ರಾಶಿಗಳನ್ನೂ ಹಸ ಯುಮ್ಮೆ ಆಡು ಕುರಿ ಮೊದಲಾದ ಸಮಸ್ತ ವಸ್ತುಗಳನ್ನೂ ತಂದ ತನ್ನ ಕಡೇ ತಮ್ಮನಿಗ
ಅತಿಪ್ರೀತಿಯಿಂದ ಅನೇಕ ಬಹುಮಾನವನ್ನು ಮಾಡಿದನು " ಎಂದು ವೈಶಂಪಾಯನ ಮುನೀಶ್ವರನು ಜನಮೇಜಯ
ರಾಯನಿಗೆ ಹೇಳಿದನು.

---

## ೩೮ ನೇ ಅಧ್ಯಾಯ.—ದಿಗ್ವಿಜಯ ಪರ್ವ ಸಮಾಪ್ತಿ.

ಅನಂತರದಲ್ಲಿ: ವೈಶಂಪಾಯನ ಮುನೀಂದ್ರನು ಜನಮೇಜಯರಾಯನನ್ನು ಕುರಿತು ಇಂತೆಂದನು :

" ಕೇಳು ಜನಮೇಜಯನೇ, ಆ ಬಳಿಕ ಮೊದಲು ಶ್ರೀಕೃಷ್ಣಸ್ವಾಮಿಯಿಂದ ಜಯಿಸಲ್ಪಟ್ಟ ಪಶ್ಚಿಮ ದಿಗ್ಭಾ
ಗವನ್ನು ಜಯಿಸಿದ ನಕುಲನ ಮಹಿಮೆಯನ್ನು ವಿವರಿಸುತಲಿದೇನೆ ಕೇಳು : ಹಾಗೆ ಧರ್ಮರಾಯನ ಅಪ್ಪಣೆಯ
ನ್ನು ತಕ್ಕೊಂಡು ನಕುಲನ ರಥಚಕ್ರ ಕ್ರೇಂಕಾರಗಳು ಕರಿಬೃಂಹಿತ ಘೀಂಕಾರಗಳು ಭೇರೀ ಭಾಂಕಾರಗಳು ವೀ
ರಭಟರ ಸಿಂಹನಾದಗಳು ಕುದುರೆಗಳ ಹೇಷಾರವಗಳು ಭೂನಭೋಂತರಗಳನ್ನು ವ್ಯಾಪಿಸಲು, ಚತುರಂಗ
ಬಲಸಮೇತನಾಗಿ ಇಂದ್ರಪ್ರಸ್ಥ ಪಟ್ಟಣವನ್ನು ಬಿಟ್ಟು ಹೊರಟು ಪಶ್ಚಿಮದಿಕ್ಕಿಗೆ ಅಭಿಮುಖವಾಗಿ ಹೋಗಿ ಧನ
ಧಾನ್ಯ ಸಮೇತವಾಗಿ ಅತಿ ಮನೋಹರವಾಗಿ ಷಣ್ಮುಖನಿಗೆ ಪ್ರೀತಿಕರವಾಗಿರುವ ರೋಹಿತಕಪಟ್ಟಣದಲ್ಲಿ ಪಾಳ್ಯವ
ನ್ನು ಇಳಿಸಿ, ಆ ಪಟ್ಟಣದಲ್ಲಿರುವ ಶೂದ್ರ, ಜಾತಿ ಸಂಭವರನ್ನು ಯುದ್ಧದಲ್ಲಿ ಜಯಿಸಿ, ಮರುದೇಶಕ್ಕೆ ಹೋಗಿ ಬಹು
ಧಾನ್ಯಕ ಶಿರೀಷಕ ಹೈಮ ನಾಮಗಳಿಂದ ಒಪ್ಪುತಲಿರುವ ಪ್ರದೇಶಗಳನ್ನು ಜಯಿಸಿ, ಅಲ್ಲಿಂದ ಹೊರಟು ಶೈರೀಂದ್ರಕ
ಪಾರದರನ್ನು ದೂತಮುಖದಿಂದ ಸ್ವಾಧೀನಮಾಡಿಕೊಂಡು, ತ್ರಿಗರ್ತ ದೇಶಾಧಿಪತಿಗಳನ್ನು ಜಯಿಸಿ, ಮಾಳವರನ್ನು
ಮರ್ದಿಸಿ, ಅಂಬಷ್ಠರ ಅಹಂಕಾರವನ್ನು ಅಡಗಿಸಿ, ಮಧ್ಯದೇಶವಾಸಿಗಳನ್ನು ಯುದ್ಧದಲ್ಲಿ ಜಯಿಸಿ, ವಾಟಧಾನ(?)ಗಣ
ಗಳ ಕೋಪವನ್ನು ಅಡಗಿಸಿ, ಅಲ್ಲಿಂದ ಹೊರಟು ಪುಷ್ಕರಾರಣ್ಯಕ್ಕೆ ತಿರಿಗಿ ಬಂದು ಅಲ್ಲಿರುವ ಉತ್ಸವ ಸಂಕೇತಗಣ
ಗಳನ್ನುಗೆದ್ದು, ಮತ್ತೂ ಸಿಂಧೂನದೀ ತೀರದಲ್ಲಿರುವ ಗ್ರಾಮಣೀಯರನ್ನು ಆಭೀರರನ್ನು ಸರಸ್ವತೀ ನದೀತೀರ
ವಾಸಿಗಳನ್ನು ಮತ್ಸ್ಯೋಪ ಜೀವಿಗಳನ್ನು ಭಂಗಪಡಿಸಿ, ಪಂಚನದವನ್ನು ಮಿತ್ರಭೋಗವನ್ನು ಸಿಂಹನಾದವನ್ನು
ಮತ್ತೂ ಅಪರಮತರನ್ನು ಚಾರಮುಖದಿಂದ ಸ್ವವಶಮಾಡಿಕೊಂಡು, ಉತ್ತರ ಜ್ಯೋತಿಷವು ದನ್ನಾಟಕವು
ದ್ವಾರಪಾಲಗಳೆಂಬ ಪಟ್ಟಣಗಳನ್ನು ಸ್ವವಶಾಮಾಡಿಕೊಂಡು, ಮತ್ತೂ ಸ್ವವಶವಾದ ಪಶ್ಚಿಮದೇಶದಲ್ಲಿ ಹಾರಗಳನ್ನು
ಪುಷ್ಪ ಮಾಲಿಕೆಗಳನ್ನು ಧರಿಸಿ ಕ್ರೀಡಿಸುತಲಿರುವ ಅರಸುಗಳನ್ನು ಹರಹೂಣರನ್ನು ಸ್ವವಶಮಾಡಿಕೊಂಡು, ಅರ
ಣ್ಯೋಮಯಮನಸ್ಥಾನಗಳನ್ನು ಗೆದ್ದು, ಅಂಬಕ ದೇಶಕ ಬದ್ಧಕರು ಮೊದಲಾದ ಅರಸುಗಳ ದೆಸೆಯಿಂದ ದೂತ
ಮುಖದಿಂದ ಕಪ್ಪಗಳನ್ನು ತಕ್ಕೊಂಡು, ಅಲ್ಲೇ ಇದ್ದುಕೊಂಡು ಶ್ರೀ ಕೃಷ್ಣಸ್ವಾಮಿಯ ಸನ್ನಿಧಾನಕ್ಕೆ ತಕ್ಕಂಥಾವ
ರನ್ನು ಕಳುಹಿಸಿ, ಆತನು ಯಾಗವಸಹಿತನಾಗಿ ಆತನ ಆಜ್ಞೆಯನ್ನು ಅಂಗೀಕರಿಸಲು, ಅಲ್ಲಿಂದ ಹೊರಟು, ಮ
ದ್ರದೇಶಕ್ಕೆ ಹೋಗಿ ಕಾಲಕ ಪುರಾಧ್ಯಕ್ಷನು ಶಾಕಲ್ಯ ಪುರಾಧ್ಯಕ್ಷನು ತನ್ನ ಸೋದರಮಾವನು ಆದ ಶಲ್ಯನ ದೆಸೆ
ಯಿಂದ ಅನೇಕ ರತ್ನ ಕಾಂಚನಗಳಿಂದ ಸತ್ಕಾರವನ್ನು ಪಡದು ಅನಂತರದಲ್ಲಿ ಸಮುದ್ರ ಮಧ್ಯ ದ್ವೀಪವಾಸಿಗಳಾಗಿ

ಅತಿಕ್ರೂರರಾಗಿ ಮ್ಲೇಚ್ಛರಾದ ಬಾಹ್ಲೀಕ ಬರ್ಬರಾದಿಗಳನ್ನೂ ಅವರ ಪೋರ್ಬಾಳಿಗಳನ್ನೂ ಅಡಗಿಸಿ, ಕಪ್ಪಗಳನ್ನು ತೆಕ್ಕೊಂಡು—ಈಪ್ರಕಾರ ಪಶ್ಚಿಮದಿಗ್ಭಾಗವನ್ನು ಜಯಿಸಿ, ಸಮುಸ್ತರಾದ ಅರಸುಗಳು ಕೊಟ್ಟಂತ ಕಪ್ಪಗಳನ್ನು ಹತ್ತುಸಾವಿರ ಸಂಖ್ಯೆಯುಳ್ಳ ಒಂಟೆಗಳ ಮೇಲೇರಿಸಿಕೊಂಡು ಇಂದ್ರಪ್ರಸ್ಥ ಪಟ್ಟಣಕ್ಕೆ ಬಂದು ಸಕಲ ಧನಂಗಳನ್ನು ಧರ್ಮರಾಯನ ಸನ್ನಿಧಿಯಲ್ಲಿ ಇರಿಸಿ ನಿಲ್ಲಲು ಧರ್ಮರಾಯನು ಸಂತೋಷಪಟ್ಟನು.”

## ೩೩ನೇ ಅಧ್ಯಾಯ.—ರಾಜಸೂಯಿಕ ಪರ್ವ.

ಅನಂತರದಲ್ಲಿ ವೈಶಂಪಾಯನ ಮುನೀಶ್ವರನು ಜನಮೇಜಯ ರಾಯನನ್ನು ಕುರಿತು ಇಂತೆಂದನು:

“ಕೇಳು ಜನಮೇಜಯನೆ, ಈ ರೀತಿಯಲ್ಲಿ ನಾಲ್ಕು ದಿಕ್ಕುಗಳನ್ನೂ ಜಯಿಸಿ ಬಂದ ಭೀಮಸೇನನು ಮೊದಲಾದ ತಮ್ಮಂದರೊಡನೆ ಕೂಡಿ, ಧರ್ಮನಿರತನಾದ ಧರ್ಮನಂದನನು ಪ್ರಜೆಗಳಲ್ಲಿ ಅನುರಾಗವುಳ್ಳಂಥಾವನಾಗಿ ಸಮುಸ್ತರಾದವರಿಗೂ ಹಿತನಾಗಿ ನೀತಿಮಾರ್ಗದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಯಾಚಕರಿಗೆ ಕೊಡುವದರಲ್ಲಿ ಕೋಪಮಾಡಬಾರದೆಂತಲೂ ಒಬ್ಬನೀವ ಕಾರ್ಯ ಮಾಡಿಸಿಕೊಳ್ಳುವದರಲ್ಲಿ ನಿರ್ಬಂಧ ಮಾಡಬಾರದೆಂತಲೂ ಧರ್ಮವನ್ನು ತಪ್ಪದೆ ಇರಬೇಕೆಂತಲೂ ಹೇಳುವದೇ ಹೊರತಾಗಿ ಮತ್ತೊಂದು ಹೇಳದೇ ಪ್ರವರ್ತಿಸಿ ಸಮುಸ್ತರಾದ ಜನಗಳೂ ತಾಯಿತಂದೆಗಳೋಪಾದಿಯಲ್ಲಿ ಎಣಿಸುವಂಥಾವನಾಗಿದ್ದನು. ಆತನಿಗೆ ಲೋಕದಲ್ಲಿ ವಿರೋಧಿಯಾದವನು ಒಬ್ಬನೂ ಇಲ್ಲದ್ದರಿಂದ ಆತನು ಅಜಾತಶತ್ರುವೆಂಬ ಹೆಸರಿನಿಂದ ಪ್ರಸಿದ್ಧನಾದನು. ಧರ್ಮರಾಯನು ಸತ್ಯವನ್ನು ತಪ್ಪದೆ ಪ್ರಜೆಗಳನ್ನು ಪರಿಪಾಲಿಸುತ ದುಷ್ಟನಿಗ್ರಹ ಶಿಷ್ಟಪರಿಪಾಲನಮಾಡುತ ಮರ್ಯಾದೆಯನ್ನು ತಪ್ಪದೆ ಕಪ್ಪವನ್ನು ತೆಕ್ಕೊಳ್ಳುವದರಿಂದ ನಾಲ್ಕುವರ್ಣದವರೂ ತಮ್ಮ ತಮ್ಮ ಧರ್ಮಗಳನ್ನು ತಪ್ಪದೇ ಪ್ರವರ್ತಿಸುತ್ತಲಿದ್ದರು; ಮತ್ತೂ ಪರ್ಜನ್ಯನು ಕಾಲವನ್ನು ತಪ್ಪದೇ ವರ್ಷಿಸಲೂ ಶಾಂತಿಪೌಷ್ಟಿಕಗಳು ನಡೆಯುತ್ತಿರಲೂ ಸಕಲ ದೇಶಗಳೂ ಸಕಲ ಸಸ್ಯಸಮೃದ್ಧಗಳಾಗಿದ್ದವು. ಸಕಲ ಜನಗಳೂ ಉಪದ್ರವಗಳನ್ನು ಲೇಶವು ಅರಿಯದೆ ಆರೋಗ್ಯಭಾಗ್ಯವುಳ್ಳಂಥಾವರಾಗಿ ಸಟೆಯನ್ನಾಡದೆ ನಿರ್ವಿಘ್ನವಾಗಿ ಸಕಲ ಸತ್ಕರ್ಮಗಳನ್ನು ಆಚರಿಸುತ್ತಿರಲೂ ಭೂಮಂಡಲವು ಸಸ್ಯಾಭಿವೃದ್ಧಿಯುಳ್ಳಂಥಾದ್ದಾಗಿ ಸಕಲ ವೃಕ್ಷಗಳೂ ಪುಷ್ಪ ಫಲ ಸಮೇತಗಳಾಗಿರಲೂ, ಬ್ರಾಹ್ಮಣರು ಪುತ್ರಸಂತತಿಯುಳ್ಳಂಥಾವರಾಗ ವೈಶ್ಯರು ಕೃಷಿ ಗೋರಕ್ಷಣಗಳಿಂದೊಪ್ಪುತಲಿರಲೂ ನಾಲ್ಕು ವರ್ಣದವರೂ ಧರ್ಮರಾಯನು ಮಾಡುವಂಥಾ ಕಾರ್ಯಗಳಲ್ಲಿ ಅಧಿಕೋತ್ಸಾಹದಿಂದ ಪ್ರವರ್ತಿಸುತ್ತಿದ್ದರು. ಮತ್ತೂ ಆತನ ರಾಜ್ಯದಲ್ಲಿ ಕಳ್ಳರಿಂದಲಾದರೂ ವಂಚಕರಿಂದಲಾದರೂ ಅರಸಿಗೆ ಆಪ್ತರಿಂದಲಾದರೂ ಪರಸ್ಪರ ವಿರೋಧದಿಂದಲಾದರೂ ಧರ್ಮವಿರುದ್ಧಗಳಾದ ಕಾರ್ಯಗಳು ನಡಿಯಲಿಲ್ಲಾ; ಅತಿವೃಷ್ಟಿಯನ್ನೂ ಅನಾವೃಷ್ಟಿಯನ್ನೂ ರೋಗಪೀಡೆಯನ್ನೂ ಅರಿಯದೆ ಪೌರಜನಗಳು ಧರ್ಮರಾಯನಿಗೆ ತಮ್ಮಲ್ಲಿ ಯಾವ ಪ್ರಕಾರದಿಂದ ಮನಸ್ಸಿಗೆ ಸಂತೋಷ ಹುಟ್ಟುವದೊ ಎಂದು ಆತನಿಗೆ ಪ್ರಿಯವಾದ ಕಾರ್ಯವನ್ನು ಆಚರಿಸುತ್ತಿದ್ದರು. ಈಪ್ರಕಾರದಲ್ಲಿ ನ್ಯಾಯವನ್ನು ತಪ್ಪದೆ ಸಂಪಾದಿಸಿದ ಧನದಿಂದ ಆತನ ಬೊಕ್ಕಸಗಳು ನೂರು ಸಾವಿರ ವರ್ಷಗಳು ವೆಚ್ಚಮಾಡಿದರೂ ತಗ್ಗದೇ ಇರುವ ದ್ರವ್ಯದಿಂದ ಪರಿಪೂರ್ಣವಾಗಿದ್ದವು.

“ಕೇಳು ಜನಮೇಜಯನೆ, ಕೆಲವು ಕಾಲದಲ್ಲಿ ಧರ್ಮರಾಯನು ಅನೇಕವಾಗಿರುವ ಪಶುಗಳನ್ನು ಸುವರ್ಣರಾಶಿಗಳನ್ನು ವಿಚಾರಿಸಿ ರಾಜಸೂಯ ಯಾಗವನ್ನು ಮಾಡಬೇಕೆಂದೆಣಿಸಿದನು; ಸಕಲ ಸುಹೃಜ್ಜನಗಳು ಯಜ್ಞಮಾಡುವದಕ್ಕೆ ಅದೇ ಸಮಯವೆಂದೂ ಅದೇ ಪ್ರಕಾರಕ್ಕೆ ಮಾಡಬೇಕೆಂದೂ ಸಭಾಸ್ಥಳದಲ್ಲಿಯೂ ಏಕಾಂತದಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ಹೇಳಿದರು. ಆ ಸಮಯದಲ್ಲಿ ತ್ರಿಕಾಲಜ್ಞಾನಸಂಪನ್ನನಾಗಿ ಅನಾದಿಪುರುಷನಾಗ ವೇದಾಂತವೇದ್ಯನಾಗಿ ಯೋಗಿಜನರು ನೋಡುವದಕ್ಕೆ ಯೋಗ್ಯನಾಗಿ ಜಗತ್ಕಾರಣನಾಗಿ ಸರ್ವವ್ಯಾಪಕನಾಗಿ ನಾ

ಶರಹಿತನಾಗಿ ಸರ್ವೇಶ್ವರನಾಗಿ ಕೇಶಿಸೂದನನಾಗಿ [illegible]ಗಿ ಯದುವೃಷ್ಣಿವಂಶ ಸಂರಕ್ಷಕನಾಗಿ ಆಪದ್ಬಾಂಧವನಾಗಿ ವೈರಿಭಂಜನನಾದ ಶ್ರೀಕೃಷ್ಣಸ್ವಾಮಿಯು ದ್ವಾರಕಾ ಪಟ್ಟಣವನ್ನು ರಕ್ಷಿಸುವದಕ್ಕೆ ತನ್ನ ತಂದೆಯಾದ ವಸುದೇವನನ್ನು ನಿಯಮಿಸಿ, ಧರ್ಮನಂದನನಿಗೆ ಬಹುವಿಧಗಳಾದ ಕಪ್ಪಗಳನ್ನು ತಕ್ಕೊಂಡು ಸಕಲ ಸೇನಾಸಮೇತನಾಗಿ ರಥಚಕ್ರಧ್ವನಿಗಳು ಭೂಮ್ಯಂತರಿಕ್ಷಗಳನ್ನು ವ್ಯಾಪಿಸುತ್ತಿರಲು ಇಂದ್ರಪ್ರಸ್ಥ ಪಟ್ಟಣವನ್ನು ಪ್ರವೇಶಿಸಿ, ಸೂರ್ಯನಿಲ್ಲದಿರುವ ಸ್ಥಳಕ್ಕೆ ಬರುವ ಸೂರ್ಯನ ಚಂದದಿಂದಲೂ ವಾಯುವಿಲ್ಲದೇ ಇರುವ ಪ್ರದೇಶಕ್ಕೆ ಬರುವ ಮಲಯಾನಿಲದ ತೆರದಿಂದಲೂ ಪೌರಜನಗಳಿಗೆ ಸಂತೋಷವನ್ನು ಮಾಡುತ ಬರುತಲಿರುವ ಶ್ರೀಕೃಷ್ಣಸ್ವಾಮಿಗೆ ಎದುರಾಗಿ ಹೋಗಿ ಧರ್ಮರಾಯನು ತನ್ನ ಮನೆಗೆ ಕರತಂದು ಉಚಿತಾಸನದಲ್ಲಿ ಕುಳ್ಳಿರಿಸಿ, ಭೀಮಾರ್ಜುನರು ಮೊದಲಾದ ತಮ್ಮಂದರು ವ್ಯಾಸ ಧೌಮ್ಯ ಪ್ರಮುಖರಾದ ಮುನೀಶ್ವರರು ಆತನನ್ನು ಸ್ತುತಿಸುತ್ತಿರಲು, ಕುಶಲ ಪ್ರಶ್ನೆಯನ್ನು ಮಾಡಿ, ಶ್ರೀಕೃಷ್ಣಸ್ವಾಮಿಯನ್ನು ಕುರಿತು 'ಎಲೈ ಮಧುಸೂದನನೆ, ನಿನ್ನ ದಯಾವಿಶೇಷದಿಂದ ಸಕಲ ಭೂಮಂಡಲವನ್ನೂ ಜಯಿಸಿ ಸ್ವವಶವನ್ನು ಮಾಡಿಕೊಂಡು ಹೇರಳಗಳಾದ ಧನಗಳನ್ನು ಸಂಪಾದಿಸಿದೆನು; ಇಂಥಾ ದ್ರವ್ಯದಿಂದ ಶಾಸ್ತ್ರೋಕ್ತಪ್ರಕಾರವಾಗಿ ರಾಜಸೂಯಯಾಗವನ್ನು ಮಾಡಿ ಬ್ರಾಹ್ಮಣ ಸಂತರ್ಪಣವನ್ನೂ ಅಗ್ನಿಸಂತರ್ಪಣವನ್ನೂ ಮಾಡಬೇಕೆಂದೆಣಿಸಿದವನಾದ್ದರಿಂದ ನೀನೂ ಈ ಭೀಮನು ಮೊದಲಾದ ನನ್ನ ತಮ್ಮಂದರೂ ಯಾಗವನ್ನುಪಕ್ರಮಿಸುವದಕ್ಕೆ ಅಪ್ಪಣೆಯನ್ನು ಕೊಡಬೇಕು; ನಾನು ದೀಕ್ಷಿತನಾಗಿ ಈ ಯಜ್ಞವನ್ನು ಸಾಂಗವಾಗಿ ಮಾಡಿ ಸಮಸ್ತ ಪಾಪಗಳ ದೆಸೆಯಿಂದ ವಿಮುಕ್ತನಾಗುತಲಿದೇನೆ; ಇಲ್ಲದಿದ್ದರೆ ಈ ಸಕಲ ಧನಗಳನ್ನೂ ತಕ್ಕೊಂಡು ನೀನು ಯಾಗವನ್ನು ಮಾಡಿದರೆ ನಾನು ಕೃತಾರ್ಥನಾಗುತಲಿದೇನೆ; ಇದು ಸಮ್ಮತವಲ್ಲದಿದ್ದರೆ ನನಗೆ ದೀಕ್ಷೆಗೆ ಅಪ್ಪಣೆಯನ್ನು ಕೊಡು' ಅಂದನು. ಶ್ರೀಕೃಷ್ಣಸ್ವಾಮಿಯು ಧರ್ಮರಾಯನನ್ನು ನೋಡಿ ಆತನ ಸದ್ಗುಣಗಳನ್ನು ಬಹು ಪ್ರಕಾರವಾಗಿ ಸ್ತುತಿಸುತ 'ರಾಜಶ್ರೇಷ್ಠನಾದ ನೀನೇ ಈ ಯಜ್ಞವನ್ನು ಮಾಡಿ ಸಾಮ್ರಾಜ್ಯವನ್ನು ವಹಿಸುವದಕ್ಕೆ ಯೋಗ್ಯನಾದ್ದರಿಂದ ನೀನು ಮಾಡಿದರೆ ನಾವು ಇಷ್ಟುಮಂದಿಯೂ ಕೃತಾರ್ಥರಾಗುತಲಿದೇವೆ; ನಾವು ಯಾವರೀತಿಯಿಂದಲಾದರೂ ನಿನ್ನ ಶ್ರೇಯೋಲಾಭಗಳನ್ನು ಬಯಸಿರುವವರು; ನನ್ನನ್ನೂ ಬೇಕಾದ ಕಾರ್ಯಗಳಲ್ಲಿ ನಿಯಮಿಸಿ ನಿನ್ನ ಮನೋಭೀಷ್ಟವಾದ ಈ ಯಜ್ಞವನ್ನು ಮಾಡಿ ಸಾಮ್ರಾಜ್ಯವನ್ನು ನೆರವೇರಿಸು' ಅಂದನು. ಧರ್ಮರಾಯನು ಶ್ರೀಕೃಷ್ಣಸ್ವಾಮಿಯನ್ನು ನೋಡಿ 'ನನ್ನ ಮನೋರಥವು ನೆರವೇರುವದಕ್ಕೆ ಸಂಕಲ್ಪಿಸಿರುವ ನಿನ್ನಂಥಾ ಮಹಾನುಭಾವನು ಇರುವಾಗ ನನ್ನ ಮನೋರಥವು ಸಫಲವಾಗುವದಕ್ಕೂ ಸಕಲ ಕಾರ್ಯಗಳೂ ಲಭಿಸುವದಕ್ಕೂ ಸಂಶಯವುಂಟೆ!' ಅಂದನು.

"ಕೇಳು ಜನಮೇಜಯನೇ, ಆ ಬಳಿಕ ಶ್ರೀ ಕೃಷ್ಣಸ್ವಾಮಿಯ ಅಪ್ಪಣೆಯನ್ನು ತಕ್ಕೊಂಡು ಸಹೋದರಸಮೇತನಾಗಿ ರಾಜಸೂಯಯಾಗಕ್ಕೆ ಬೇಕಾದ ಸಾಧನಗಳನ್ನು ಸಂಪಾದಿಸುವದಕ್ಕೆ ಉದ್ಯುಕ್ತನಾಗಿ ಸಹದೇವನನ್ನು ಕುರಿತು 'ಧೌಮ್ಯನು ಮೊದಲಾದ ಬ್ರಾಹ್ಮಣರು ಹೇಳುವ ಪ್ರಕಾರ ಶುಭಕರಗಳಾದ ಯಾಗ ಸಾಮಗ್ರಿಯಗಳನ್ನು ಸಂಪಾದಿಸು; ರಸ ಗಂಧ ಸಮೇತವಾದ ಭಕ್ಷ್ಯಭೋಜ್ಯಾದಿ ವಸ್ತುಗಳೊಳಗೆ ಬ್ರಾಹ್ಮಣರಿಗೆ ಯಾವ ಸಮಯದಲ್ಲಿ ಯಾವದು ಬೇಕಾಗಿರುವದೊ ಅದನ್ನು ಕೊಡುವದಕ್ಕೆ ಇಂದ್ರಸೇನನು ವಿಲೋಕನು ರುಕ್ಮನು ಸಮಿಕನು ಧ್ವಜಸೇನನು ಎಂಬ ಐದುಮಂದಿಯನ್ನುನೇಮಿಸು' ಎಂದು ಕಟ್ಟುಮಾಡಿದನು. ಮಂತ್ರಿ ಸಮೇತನಾದ ಸಹದೇವನು ಆದೇಪ್ರಕಾರವಾಗಿ ಸಿದ್ಧಮಾಡಿ ಅಣ್ಣನನ್ನು ಕುರಿತು 'ನೀವು ಕಟ್ಟುಮಾಡಿದ ಪ್ರಕಾರದಿಂದ ಸಕಲ ಯಜ್ಞಸಾಮಗ್ರಿಯಗಳು ಸಂಪಾದಿಸಲ್ಪಟ್ಟವೆ' ಎಂದು ತಿಳುಹಿಸಿದನು. ಆ ಸಮಯದಲ್ಲಿ ವ್ಯಾಸಮಹಾಮುನೀಶ್ವರನು ಮೂರ್ತಿಮಂತಗಳೋಪಾದಿಯಲ್ಲಿ ಪ್ರಕಾಶಿಸುತಲಿರುವ ಋತ್ವಿಕ್ಕುಗಳನ್ನು ಕರತರಿಸಿ ವೇದ ವೇದಾಂಗ ಪಾರಂಗತನಾಗಿ ಧನಂಜಯರೆಂಬ ಮುನೀಶ್ವರರೊಳಗೆ ಮುಖ್ಯನಾಗಿ ಸಾಮವೇದ ಸ್ವರೂಪನಾಗಿ ಸುಸಾಮನೆಂಬ ಹೆಸರುಳ್ಳ ಬ್ರಾಹ್ಮಣೋತ್ತಮನನ್ನು ಉದ್ಗಾತನಾಗಿಯೂ ಬ್ರಹ್ಮನಿಷ್ಠನಾದ ಯಾಜ್ಞವಲ್ಕ್ಯಮುನೀಶ್ವರನನ್ನು ಅಧ್ವರ್ಯುವಾಗಿಯೂ ವಸುಕುಮಾರನಾಗಿರುವ ಪೈಲ ಮಹಾಮುನೀಶ್ವರನನ್ನೂ ಧೌಮ್ಯನನ್ನೂ ಹೋತರಾಗಿಯೂ ನೇಮಿಸಿ ದ.

ನು ಆ ಯಾಗಕ್ಕೆ ಬ್ರಹ್ಮನಾಗಿ ಒಪ್ಪುತ್ತಿರಲು ಇವರ ಮಕ್ಕಳೂ ಶಿಷ್ಯರೂ ಮಿಕ್ಕಾದ ಋತ್ವಿಕ್ಕುಗಳಾಗಿದ್ದರು ಈ ರೀತಿಯಿಂದ ಮಹಾನುಭಾವನಾದ ವ್ಯಾಸಮಹಾಮುನೀಶ್ವರನು ಶಿಷ್ಯಗಣಸಮೇತನಾಗಿ ಸದಸ್ಯವನ್ನು ಮಾಡುತ್ತಿರಲು, ದೃಢಮತ ಋತ್ವಿಕ್ಕುಗಳು ಪುಣ್ಯಾಹವಾಚನಗಳನ್ನು ಮಾಡಿಸಿ ಶಾಸ್ತ್ರೋಕ್ತಪ್ರಕಾರದಿಂದ ಯಾಗಶಾಲೆಯನ್ನು ನಿರ್ಮಿಸಿ ಆ ಯಾಗಶಾಲೆಯಲ್ಲಿ ಇಂದ್ರಾದಿದೇವತೆಗಳಿಗೆ ಅತಿ ವಿಶಾಲಗಳಾಗಿ ರತ್ನಖಚಿತವಾದ ಮನೆಗಳನ್ನು ನಿರ್ಮಿಸುವಹಾಗೆ ಕಟ್ಟುಮಾಡಿಸಿದರು."

## ೪೦ ನೇ ಅಧ್ಯಾಯ.—ರಾಜಸೂಯಿಕ ಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ಸಮಸ್ತರಾದ ಅರಸುಗಳನ್ನೂ ಕರಿಯುವದಕ್ಕೆ ಜನಗಳನ್ನು ಕಳುಹಿಸುವಹಾಗೆ ಸಹದೇವನಿಗೆ ಕಟ್ಟುಮಾಡಲು, ಆತನು ನಾನಾದೇಶಗಳಲ್ಲಿರುವ ನಾಲ್ಕುವರ್ಣದವರನ್ನೂ ಕರಕೊಂಡು ಬರಲು ಬೇಕಿನವರನ್ನು ಕಳುಹಿಸಿದನು. ಅವರು ವೇಗಯುಕ್ತವಾದ ವಾಹನಗಳನ್ನೇರಿ ಸಹದೇವನ ಅಪ್ಪಣೆಯಿಂದ ಸಕಲ ದೇಶಗಳಿಗೂ ಹೋಗಿ ಸಮಸ್ತರಾದ ಅರಸುಗಳನ್ನೂ ಕರದರು. ಮತ್ತೂ ಧರ್ಮರಾಯನು ನಕುಲನನ್ನು ಕುರಿತು 'ನೀನು ಹಸ್ತಿನಾಪಟ್ಟಣಕ್ಕೆ ಹೋಗಿ ಭೀಷ್ಮ ದ್ರೋಣ ಧೃತರಾಷ್ಟ್ರ ಕೃಪ ವಿದುರ ಸೋಮದತ್ತ ಭೂರಿಶ್ರವ ದುರ್ಯೋಧನ ಮೊದಲಾದ ಸಹೋದರವರ್ಗವು ಮತ್ತೂ ಇರುವ ಮಿತ್ರ ಜನಗಳು ಮೊದಲಾದವರನ್ನು ಕರಕೊಂಡು ಬಾ' ಎಂದು ಕಳುಹಿಸಿದನು. ಅನಂತರದಲ್ಲಿ: ಬ್ರಾಹ್ಮಣಶ್ರೇಷ್ಠರು ಜ್ಯೇಷ್ಠಾ ನಕ್ಷತ್ರದ ಮೊದಲನೇ ಪಾದದಲ್ಲಿ ಅಮಾವಾಸ್ಯಾದಿಪರ್ವದಲ್ಲಿ ಧರ್ಮರಾಯನನ್ನು ರಾಜಸೂಯ ಯಾಗದಲ್ಲಿ ದೀಕ್ಷೆಯನ್ನು ಮಾಡಿಸಲು ಧರ್ಮರಾಯನು ಕೃಷ್ಣಾಜಿನವನ್ನು ಧರಿಸಿ ಶರೀರದಲ್ಲಿ ಬೆಣ್ಣೆಯನ್ನು ತೊಡಕೊಂಡು ದೀಕ್ಷೆಯನ್ನು ವಹಿಸಿದನು. ಬ್ರಾಹ್ಮಣೋತ್ತಮರು ತಮ್ಮಂದರು ಅಮಾತ್ಯರು ಸುಹೃಜ್ಜನಗಳು ನಾನಾ ದೇಶಗಳ ದೆಸೆಯಿಂದ ಬಂದ ಬ್ರಾಹ್ಮಣಶ್ರೇಷ್ಠರು ಇವರೆಲ್ಲರೂ ತಮಗಾಗಿ ಮೊದಲೇ ಅನ್ನಪಾನಶಯನಾಸನಗಳು ಮೊದಲಾದ ಸಮಸ್ತವಾದ ವಸ್ತುಸ್ತೋಮಗಳಿಂದ ತುಂಬಿ ಶಿಲ್ಪಿಗಳ ದೆಸೆಯಿಂದ ನಿರ್ಮಿಸಿ ಸಜ್ಜುಮಾಡಿಸಿರುವಂಥಾ ಅರಮನೆಗಳಲ್ಲಿ ಇಳುಕೊಂಡು ಮನಸ್ಸು ಬಂದರೀತಿಗೆ ಸಕಲ ಭೋಗಗಳನ್ನೂ ಅನುಭವಿಸುತ ನಟನರ್ತಕ ಮೊದಲಾದವರ ವಿದ್ಯಾವಿಶೇಷಗಳನ್ನು ನೋಡುತ ಇತಿಹಾಸಗಳನ್ನು ಒಬ್ಬೊಬ್ಬರಿಗೊಬ್ಬರು ಹೇಳಿಕೊಳ್ಳುತ, ಸಂತುಷ್ಟಚಿತ್ತರಾಗಿದ್ದರು. ಬ್ರಾಹ್ಮಣರು ಭೋಜನಮಾಡುವದರಲ್ಲಿ 'ಬೇಕಾದ ವಸ್ತುಗಳನ್ನು ಬಡಿಸಿ' ಎನ್ನುತಲೂ 'ಚೆನ್ನಾಗಿ ಊಟಮಾಡಿ' ಎನ್ನುತಲೂ ಈಪ್ರಕಾರವಾಗಿ ಪ್ರಿಯವಚನಗಳು ಕೇಳಲ್ಪಡುತ್ತಿದ್ದವು. ಆ ಬಳಿಕ ಧರ್ಮರಾಯನು ಹತ್ತು ಲಕ್ಷ ಗೋದಾನ ಶಯ್ಯಾದಾನ ಕನ್ಯಾದಾನ ಸುವರ್ಣದಾನ ಮೊದಲಾದ ದಾನಗಳನ್ನು ಬ್ರಾಹ್ಮಣರಿಗೆ ಕೊಡುತಿರಲು ಸ್ವರ್ಗದಲ್ಲಿ ಮಾಡಲ್ಪಟ್ಟ ಮಹೇಂದ್ರನ ಯಜ್ಞದೋಪಾದಿಯಲ್ಲಿ ಭೂಲೋಕದಲ್ಲಿ ತ್ರಿಲೋಕಪತಿಯಾದ ಧರ್ಮರಾಯನ ಯಜ್ಞವು ಪ್ರಸಿದ್ಧವಾಯಿತು."

## ೪೧ ನೇ ಅಧ್ಯಾಯ.—ರಾಜಸೂಯಿಕ ಪರ್ವಶೇಷ.

"ಕೇಳು ಜನಮೇಜಯನೇ, ಆ ಸಮಯದಲ್ಲಿ ಸಕಲ ದೇಶಾಧಿಪತಿಗಳೂ ನಾನಾ ಪ್ರಕಾರವಾದ ಕಪ್ಪಗಳನ್ನು ತಕ್ಕೊಂಡು ದಿವ್ಯ ರಥಗಳನ್ನೇರಿ ಬರುತಲಿರುವ ದೇವತೆಗಳ ತೆರದಿಂದ ಧರ್ಮರಾಯನು ಮಾಡುವ ರಾಜಸೂಯ ಯಾಗವನ್ನೂ ಆತನ ದಿವ್ಯ ಸಭಾಭವನವನ್ನೂ ನೋಡಬೇಕೆಂದು ಸಂತೋಷದಿಂದ ಇಂದ್ರಪ್ರಸ್ಥ ಪಟ್ಟಣಕ್ಕೆ ಬಂದರು. ನಕುಲನು ಹಸ್ತಿನಾಪಟ್ಟಕ್ಕೆ ಹೋಗಿ ಅವರನ್ನು ಕರೆಯಲು ಭೀಷ್ಮ ದ್ರೋಣ ಧೃತರಾಷ್ಟ್ರ ಅಶ್ವತ್ಥಾಮ್ನ ವಿದುರರೂ ದುರ್ಯೋಧನನು ಆತನ ತಮ್ಮಂದರೂ ಮಿಕ್ಕಾದವರೂ ಇಂದ್ರಪ್ರಸ್ಥಪಟ್ಟಣಕ್ಕೆ ಬಂದರು. ಮತ್ತು

ಗಾಂಧಾರ ದೇಶಾಧಿಪತಿಯಾದ ಸುಬಲನು ಆತನ ಮಗನಾದ ಶಕುನಿಯು, ಅಚಲನು, ವೃಷತನು, ವದಾನ್ಯಶ್ರೇಷ್ಠನಾದ ಕರ್ಣನು, ವೃತನು, ಮದ್ರದೇಶಾಧಿಪತಿಯಾದ ಶಲ್ಯನು, ಮಹಾರಥನಾದ ಬಾಹ್ಲೀಕನು, ಸೋಮದತ್ತನು, ಭೂರಿಶ್ರವನು, ಶಲ್ಯನು, ಸಿಂಧು ದೇಶಾಧಿಪತಿಯಾದ ಜಯದ್ರಥನು, ಯಜ್ಞಸೇನನು ಆತನ ಕುಮಾರಕರು; ಸಾಲ್ವನು, ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನು, ಬೃಹದ್ಬಲನು, ಪೌಂಡ್ರಕ ವಾಸುದೇವನು, ವಂಗ ಕಳಿಂಗ ಕಾಶ್ಮೀರ ಕುಂತಳ ದ್ರಾವಿಡ ಸಿಂಹಳ ಪಾಂಡ್ಯ ಇವು ಮೊದಲಾದ ಸಮಸ್ತ ದೇಶಗಳ ಅಧಿಪತಿಗಳು, ಕುಂತಿಭೋಜನು, ವಾಸವಾಸ್ಯನು, ಸುದ್ಯುವು, ಬಾಹ್ಲೀಕ ದೇಶಪರಿಪಾಲಕರಾಗಿ ಶೂರರಾಗಿರುವ ಅರಸುಗಳು ವಿರಾಟನು ಆತನ ಮಕ್ಕಳು, ಮಹಾರಥಿಕರಾದ ಪಾಂಚಾಲರಾಯರು, ಮತ್ತೂ ನಾನಾ ದೇಶಾಧೀಶ್ವರರಾದ ಅರಸುಗಳು ಅವರ ಮಕ್ಕಳು, ಮಹಾಶೌರ್ಯ ಸಂಪನ್ನನಾದ ಶಿಶುಪಾಲನು, ಯುದ್ಧದಲ್ಲಿ ಜಯಿಸುವದಕ್ಕೆ ಅಶಕ್ಯನಾದ ಬಲರಾಮನು, ಅನಿರುದ್ಧನು ಬಭ್ರುವು ಸಾರಣನು ಮಾಗಧನು ಪ್ರದ್ಯುಮ್ನನು ಚಾರುದೇಷ್ಣನು ನಿಷಠನು ಉಲ್ಮುಕನು ಎಂಬ ಹೆಸರುಗಳುಳ್ಳ ಮಹಾರಥಿಕರಾದ ವೃಷ್ಣಿಶ್ರೇಷ್ಠರು, ಮಧ್ಯದೇಶವಾಸಿಗಳಾದ ಮಹೀಪತಿಗಳು, ಸಮುದ್ರತೀರದಲ್ಲಿಯೂ ಪರ್ವತಗಳಲ್ಲಿಯೂ ಇರುವ ಮ್ಲೇಚ್ಛಕಿರಾತರು ಧರ್ಮರಾಯನ ಯಜ್ಞಸಂದರ್ಶನಾರ್ಥವಾಗಿ ಇಂದ್ರಪ್ರಸ್ಥಪಟ್ಟಣಕ್ಕೆ ಬಂದರು. ಧರ್ಮರಾಯನು ಅವರಿಗೆ ಸುವರ್ಣಮಯವಾದ ಗವಾಕ್ಷಗಳು, ನಾನಾರತ್ನ ಖಚಿತಗಳಾದ ನೆಲಕಟ್ಟುಗಳು, ಮನೋಹರಗಳಾದ ಸೋಪಾನಗಳು, ರಾಜಯೋಗ್ಯಗಳಾದ ಸಿಂಹಾಸನಗಳು, ರತ್ನಕಂಬಳಿ ಪುಷ್ಪಮಾಲಿಕೆ ಚಂದನಾಗರು ಧೂಪಗಳು ಮೊದಲಾದ ದ್ರವ್ಯಗಳು, ಹಂಸತೂಲಿಕಾತಲ್ಪಗಳು, ಮಣಿಮಯಗಳಾದ ಮಂಚಗಳು ಉಂಟಾಗಿ—ನಾನಾಧಾತು ವಿಚಿತ್ರವಾಗಿ ಹಿಮವತ್ಪರ್ವತದ ಶಿಖರದೋಪಾದಿಯಲ್ಲಿ ನೋಡುವದಕ್ಕೆ ಯೋಗ್ಯವಾಗಿರುವ ಸಜ್ಜೆಗಳಿಂದಲೂ ಅನೇಕ ತೋಟ್ಟಗಳಿಂದಲೂ ಸರಸ್ಸುಗಳಿಂದಲೂ ಒಪ್ಪಿ—ಕೈಲಾಸ ಶಿಖರಗಳೋಪಾದಿಯಲ್ಲಿ ಅತ್ಯುನ್ನತಗಳಾಗಿ ಕಣ್ಣುಗಳಿಗೆ ಹಬ್ಬವನ್ನುಮಾಡುವ ಮನೆಗಳನ್ನು ಕೊಡಿಸಿ ಉಚಿತಪ್ರಕಾರದಿಂದ ಬಹುಮಾನಮಾಡಿದನು. ಹೀಗೆ ನಾನಾದೇಶಗಳ ದೆಸೆಯಿಂದ ಬಂದ ಅರಸುಗಳಿಂದಲೂ ಮಹಾತ್ಮರಾದ ಬ್ರಾಹ್ಮಣರಿಂದಲೂ ಧರ್ಮರಾಯನ ಸಭಾಮಂಡಲವು ಸಮಸ್ತವಾದ ದೇವತೆಗಳ ಸಮೂಹದಿಂದ ಒಪ್ಪುತಲಿರುವ ಸ್ವರ್ಗದೋಪಾದಿಯಲ್ಲಿ ತೋರಿತು.

## ೪೦ನೇ ಅಧ್ಯಾಯ.—ರಾಜಸೂಯಿಕಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಯಾಗವನ್ನು ಮಾಡುವ ಸಮಯದಲ್ಲಿ ಸಹದೇವನೂ ಇಂದ್ರಸೇನನು ಮೊದಲಾದ ಸಾರಥಿಗಳೂ ಮೊದಲು ಧರ್ಮರಾಯನು ಕಟ್ಟುಮಾಡಿದ ರೀತಿಗೆ ಕಾರ್ಯಗಳಲ್ಲಿ ಪ್ರವರ್ತಿಸಿದರು. ಆ ಬಳಿಕ ಹಸ್ತಿನಾಪಟ್ಟಣದ್ದೆಸೆಯಿಂದ ಬಂದ ಭೀಷ್ಮ ದ್ರೋಣ ಪ್ರಮುಖರಿಗೆ ಯುಧಿಷ್ಠಿರನು ಎದುರಾಗಿ ಬಂದು ನಮಸ್ಕಾರವನ್ನು ಮಾಡಿ 'ಅನೇಕ ಧನರತ್ನ ರಾಶಿಗಳನ್ನು ಸಂಪಾದಿಸಿಹೇನೆ ; ನನ್ನ ಮನೆಯೂ ನನ್ನ ದ್ರವ್ಯವೂ ನಿಮ್ಮದೇ ; ಈ ಯಜ್ಞದಲ್ಲಿ ನೀವು ನಿಮ್ಮ ಮನಸ್ಸು ಬಂದರೀತಿಗೆ ವೆಚ್ಚವನ್ನು ಮಾಡಿ ನನ್ನನ್ನು ಕೃತಾರ್ಥನಾಗಿ ಮಾಡಬೇಕು' ಎಂದು ನುಡಿದು ಭಕ್ಷ್ಯಭೋಜ್ಯಾಧಿಕಾರಕ್ಕೆ ಯುಯುತ್ಸುವಿನನ್ನು, ಪಙ್ತಿಗಳನ್ನು ಮಾಡಿಸುವದಕ್ಕೂ ಭೋಜನವನ್ನು ವಿಚಾರಿಸುವದಕ್ಕೂ ಉಚ್ಛಿಷ್ಟವನ್ನು ಎತ್ತಿಹಾಕಿಸಿ ಸ್ಥಳಶುದ್ಧಿಯನ್ನು ಮಾಡಿಸುವದಕ್ಕೂ ದುಶ್ಶಾಸನನನ್ನು, ತುಪ್ಪ ಜೇನುತುಪ್ಪ ಸಕ್ಕರೆ ಮೊದಲಾದ ಮಧುರ ದ್ರವ್ಯಗಳನ್ನು ಇಚ್ಛಾನುಸಾರವಾಗಿ ವೆಚ್ಚಮಾಡುವದಕ್ಕೆ ವಿದುರನನ್ನು, ಬ್ರಾಹ್ಮಣ ಪೂಜೆಯನ್ನು ಮಾಡುವದಕ್ಕೆ ಅಶ್ವತ್ಥಾಮನನ್ನು, ಅರಸುಗಳನ್ನು ಪೂಜಿಸುವದಕ್ಕೆ ಸಂಜಯನನ್ನು, ಬಹುಮಾನವಾಯಿತೋ ಇಲ್ಲವೋ ಎಂದು ವಿಚಾರಿಸುವದಕ್ಕೆ ಭೀಷ್ಮ ದ್ರೋಣರನ್ನು, ರತ್ನ ಕಾಂಚನ ದ್ರವ್ಯಗಳು ಮೊದಲಾದ ದಕ್ಷಿಣೆಗಳನ್ನು ಕೊಡುವದಕ್ಕೆ ಕೃಪಾಚಾರ್ಯನನ್ನು, ಇದಷ್ಟನ್ನೂ ವಿಚಾರಿಸುವದಕ್ಕೂ ಸಮಸ್ತ ದೇಶಗಳದ್ದೆಸೆಯಿಂದ ಬಂದ ಜನಗಳು ತಂದುಕೊಡುವ ಕಪ್ಪಗಳನ್ನು ವಿಚಾರಿಸಿ ತಕ್ಕೊಳ್ಳುವದಕ್ಕೂ ದುರ್ಯೋಧನನನ್ನೂ ಮತ್ತೂ ಮಿಕ್ಕಾದ ಕೆಲವರನ್ನು ಬೇಕಾದ ಕಾರ್ಯಗಳಲ್ಲಿ ಕಟ್ಟುಮಾಡಿದನು. ಮತ್ತು

ಕುಂತಿ ಗಾಂಧಾರಿಗಳನ್ನು ಸೊಸೆಯರೊಡನೆ ಕೂಡಿ ಸಮಸ್ತ ಸ್ತ್ರೀಜನಗಳನ್ನೂ ಪೂಜಿಸುವದಕ್ಕೆ ಕಟ್ಟುಮಾಡಿಸಿ ಮಹಾಪುರುಷನಾದ ಶ್ರೀಕೃಷ್ಣಸ್ವಾಮಿಯು ಹೇಳಿದಂಥಾ ಕಾರ್ಯಗಳನ್ನು ಮಾಡುವದಕ್ಕೆ ಅರ್ಜುನನಿಗೆ ಕಟ್ಟುಮಾಡಿದನು. ಬಾಹ್ಲಿಕ ಧೃತರಾಷ್ಟ್ರ ಸೋಮದತ್ತ ಜಯದ್ರಥರು ಪ್ರಭುತ್ವದಿಂದ ಸರ್ವಸ್ವತಂತ್ರದಿಂದ ಇರುತ್ತಿದ್ದರು; ಆ ಸಮಯದಲ್ಲಿ ಸಕಲ ದೇಶಗಳ ದೆಸೆಯಿಂದ ಬಂದ ಅರಸುಗಳು 'ನಾನು ಕೊಡುವ ಧನದಿಂದ ಈ ಯಾಗವು ನೆರವೇರಬೇಕು; ಧರ್ಮರಾಯನಿಗೆ ನನ್ನಲ್ಲಿ ಪ್ರೀತಿಹುಟ್ಟಬೇಕು' ಎನ್ನುತ ಒಬ್ಬರಿಗೊಬ್ಬರು ಸ್ಪರ್ಧೆಯನ್ನು ಮಾಡಿ ಒಬ್ಬರಿಗಿಂತಲೂ ಒಬ್ಬರು ಅಧಿಕವಾಗಿ ಧನವನ್ನು ತಂದು ತಂದು ಕೊಡುತ್ತಿದ್ದರು; ಎಷ್ಟು ಧನಹೀನನಾದರೂ ಸಾವಿರ ಸಂಖ್ಯೆಗೆ ಕಡಮೆಯಾಗಿ ದ್ರವ್ಯವನ್ನು ತಂದುಕೊಟ್ಟಂಥಾವನು ಒಬ್ಬನೂ ಇಲ್ಲ; ಮತ್ತು ರಾಜರೋಗ್ಯಗಳಾದ ವಿಚಿತ್ರ ವಿಮಾನಗಳಿಂದಲೂ, ನಾನಾರತ್ನ ಖಚಿತಗಳಾದ ರಾಜಸದನಗಳಿಂದಲೂ, ಸುವರ್ಣನಿರ್ಮಿತಗಳಾದ ಕೊಳಗಳಿಂದಲೂ, ಅನೇಕ ವರ್ಣಯುಕ್ತವಾಗಿ ಸಕಲವಸ್ತು ಪರಿಪೂರ್ಣವಾಗಿ ಮನೋಹರಗಳಾಗಿರುವ ಬ್ರಾಹ್ಮಣ ಗೃಹಗಳಿಂದಲೂ, ಸಮಸ್ತರಾದ ಅರಸುಗಳು ತಂದುಕೊಡುವ ಕಪ್ಪಗಳಿಂದಲೂ, ಆತನ ಯಾಗವು ಅಧಿಕವಾಗಿ ಪ್ರಕಾಶಿಸುತ್ತಿತ್ತು. ಹೀಗೆ ಮಹಾವೈಭವದಿಂದ ಧರ್ಮರಾಯನು ವರುಣನೋಪಾದಿಯಲ್ಲಿ ಪ್ರಕಾಶಿಸುತ ಗಾರ್ಹಪತ್ಯವು ಆಹವನೀಯವು ದಕ್ಷಿಣಾಗ್ನಿಯು ಸಭ್ಯವು ಅವಸಥ್ಯವು ಔಪಾಸನಾಗ್ನಿಯು ಎಂಬ ಷಡಗ್ನಿಗಳಿಂದ ಯಾಗವನ್ನು ಮಾಡುತ ಬಹು ದಕ್ಷಿಣೆಗಳಿಂದಲೂ ಸಕಲ ಮನೋಭೀಷ್ಟ ವಸ್ತು ಪ್ರದಾನಗಳಿಂದಲೂ ಸಕಲ ಜನಗಳಿಗೂ ಸಂತೋಷವನ್ನು ಮಾಡಿಸಿದನು. ಆ ಸಮಯದಲ್ಲಿ ಸಕಲ ಜನಗಳೂ ಭಕ್ಷ್ಯಭೋಜ್ಯಗಳನ್ನು ಮಾಡಿ ಗಂಧಮಾಲ್ಯಭೂಷಣಗಳನ್ನು ಧರಿಸಿ ಸಂತೋಷಪಡುತ್ತಿದ್ದರು. ಆ ಬಳಿಕ ಶಿಕ್ಷಾಸಮರ್ಥರಾದ ಮಹಾ ಮುನಿಶ್ರೇಷ್ಠರು ಮಾಡುವ ಇಡಾಜ್ಯ ಹೋಮಾಹುತಿಗಳ ದೆಸೆಯಿಂದ ಆ ಯಜ್ಞದಲ್ಲಿ ಸಕಲ ದೇವತೆಗಳೂ ತೃಪ್ತಿಯನ್ನು ಪಡದರು. ಮತ್ತೂ ದಕ್ಷಿಣೆಗಳಿಂದ ಬ್ರಾಹ್ಮಣರೂ ರತ್ನಕಾಂಚನ ಪ್ರದಾನದಿಂದ ಸಕಲ ವರ್ಣದವರೂ ಸಂತೋಷಪಟ್ಟರು"

---

## ೪೩ನೇ ಅಧ್ಯಾಯ.—ರಾಜಸೂಯಿಕ ಪರ್ವ ಸಮಾಪ್ತಿ.

"ಕೇಳು ಜನಮೇಜಯನೆ, ಆ ಬಳಿಕ ಸುತ್ಯಾಹಸ್ಸಿನದಿನದಲ್ಲಿ ಸಕಲರಾಜ ಸಮೇತರಾದ ನಾರದಾದಿ ಮಹಾ ಮುನೀಶ್ವರರು ಬ್ರಹ್ಮಸಭಾ ಮಧ್ಯದಲ್ಲಿ ದೇವಗಣ ಪರಿವೃತರಾದ ಬ್ರಹ್ಮಋಷಿಗಳ ಚಂದದಿಂದ ಯಜ್ಞವೇದಿಕಾಮಧ್ಯದಲ್ಲಿ ಸದಸ್ಯರಾಗಿದ್ದರು. ಕೆಲವರು ಕರ್ಮಮಧ್ಯದಲ್ಲಿ ಪ್ರಾತಃಸವನವನ್ನು ಮಾಡಿ ಸುಮ್ಮನೇ ಇರುವ ಸಮಯದಲ್ಲಿ ತಮ್ಮ ತಮ್ಮ ವಿದ್ಯಾಭ್ಯಾಸಗಳನ್ನು ಮೆರೆಯಿಸುವದಕ್ಕೋಸ್ಕರ—ಆಗಿರುವದು ಅಲ್ಲವೆಂತಲೂ ಅಲ್ಲದ್ದು ಹೌದೆಂತಲೂ 'ಇದು ಹಾಗೆ ಸರಿ' 'ಮತ್ತೊಂದು ಅಲ್ಲಾ' ಎನ್ನುತಲೂ ಬಹುಪ್ರಕಾರವಾಗಿ ವಿತಂಡಾವಾದ ಮಾಡುವಂಥಾವರು, ಶಾಸ್ತ್ರಸಿದ್ಧವಾದ ಯುಕ್ತಿಗಳಿಂದ ಸ್ವಲ್ಪವಾದ ಅರ್ಥವನ್ನು ವಿಸ್ತಾರವಾಗಿ ಹೇಳುವಂಥಾವರು, ವಿಸ್ತಾರವಾಗಿರುವ ಅರ್ಥಗಳನ್ನು ಸ್ವಲ್ಪವಾಗಿ ಸಂಕ್ಷೇಪವಾಗಿ ಹೇಳುವಂಥಾವರು, ಪ್ರತಿವಾದವನ್ನು ಉಪನ್ಯಾಸ ಮಾಡಿ ಅನೇಕಾರ್ಥಗಳನ್ನು (ಮಾಂಸಖಂಡವನ್ನು ತುಮುರಾಗಿ ಖಂಡಿಸುವ ಗಿಡುಗನೋಪಾದಿಯಲ್ಲಿ) ಹಿತವಚನಗಳಿಂದ ಖಂಡಿಸ್ಸುವಂಥಾವರೂ ಆಗಿ ಧರ್ಮಾರ್ಥಕಾಮ ಸಮೇತಗಳಾದ ಇತಿಹಾಸಗಳಿಂದ ಹೊತ್ತು ಕಳೆಯುತ್ತಿರಲು—ಮಹರ್ಷಿಗಳು ಬ್ರಾಹ್ಮಣರು ಅರಸುಗಳು ಇವರು ಮೊದಲಾದವರುಗಳಿಂದ ಯಾಗವೇದಿಕೆಯು ನಕ್ಷತ್ರ ಸಮೂಹದಿಂದ ಪ್ರಕಾಶಿಸುತಲಿರುವ ಆಕಾಶವನ್ನು ಒಪ್ಪಿತು. ಆ ವೇದಿಮಧ್ಯದಲ್ಲಿ ವ್ರತಹೀನನು ಶೂದ್ರನು ಒಬ್ಬನೂ ಇರಲಿಲ್ಲ. ಆ ಸಮಯದಲ್ಲಿ ನಾರದಮಹಾಮುನೀಶ್ವರನು ಧರ್ಮರಾಯನ ಮಹಾವೈಭವವನ್ನೂ ಆತನ ಯಜ್ಞದಲ್ಲಿರುವ ಸಮೃದ್ಧಿಯನ್ನೂ ನೋಡಿ ಸಂತೋಷಪಡುತ ಪೂರ್ವದಲ್ಲಿ ಬ್ರಹ್ಮಸಭಾ ಭವನದಲ್ಲಿ ನಾರಾಯಣನು 'ನಾನು ಭೂಮಿಯಲ್ಲಿ ಅವತರಿಸಿ ಭೂಭಾರವನ್ನು ಪರಿಹರಿಸುತಲಿದ್ದೇನೆ: ನೀವಷ್ಟುಮಂದಿಯೂ ಭೂಲೋಕದಲ್ಲಿ ಅರಸುಗಳಾಗಿ ಹುಟ್ಟಿ ಪರಸ್ಪರ ಕಲಹದಿಂದ ಹತರಾಗಿ ಸ್ವರ್ಗವನ್ನು ಸೇರಿ' ಎಂದು ದೇವತೆಗಳನ್ನು ಉದ್ದೇಶಿಸಿ ನುಡಿ

ಗ ವಾಕ್ಯವನ್ನು ಮನಸ್ಸಿನಲ್ಲಿ ಸ್ಮರಿಸಿ ಜಗಧೀಶ್ವರನಾದ ಪುಂಡರೀಕಾಕ್ಷನನ್ನು ಸ್ಮರಿಸುತ 'ಆ ಹೊತ್ತಿನ ಪ್ರತಿಜ್ಞೆಯನ್ನು ಪರಿಪಾಲಿಸುವದಕ್ಕೋಸ್ಕರ ಯದುವಂಶದಲ್ಲಿ ಅವತರಿಸಿರುವ ಶ್ರೀಕೃಷ್ಣಸ್ವಾಮಿಯು ಶ್ರೀಮಹಾವಿಷ್ಣುವಲ್ಲವೆ! ಆ ದೇವತೆಗಳೇ ಅಲ್ಲವೇ ಈ ಅರಸುಗಳು! ಈ ಸಮಸ್ತ ರಾಜಮಧ್ಯದಲ್ಲಿ ನಕ್ಷತ್ರಗಣ ಪರಿವೃತನಾದ ಪೂರ್ಣಚಂದ್ರನೋಪಾದಿಯಲ್ಲಿ ಪ್ರಕಾಶಿಸುತ್ತಲಿರುವ ಈ ಯದುವಲ್ಲಭನ ಭುಜಬಲವನ್ನು ಆಶ್ರಯಿಸಿ ಅಲ್ಲವೇ ಮಹೇಂದ್ರನು ಮೊದಲಾದ ದೇವತೆಗಳು ಸುಖವಾಗಿದ್ದಾರೆ! ಇಂಥಾ ಪರಮಪುರುಷನು ತನ್ನ ಯಜ್ಞಕ್ಕೆ ಬಂದು ಪೂಜೆಗಳನ್ನು ಅಂಗೀಕರಿಸುವದಕ್ಕೆ ಧರ್ಮರಾಯನು ಎಷ್ಟು ಪುಣ್ಯಮಾಡಿದನೋ! ಇನ್ನುಮೇಲೆ ಈ ಜಗತ್ಕಾರಣಭೂತನಾದ ಮಾಧವನಲ್ಲವೆ ಸಕಲ ಕ್ಷತ್ರಿಯ ಸಂಹಾರವನ್ನು ಮಾಡುತಲಿದಾನೆ!' ಎಂದು ಲೋಕೇಶ್ವರನಾಗಿ ಷಡ್ಗುಣೈಶ್ವರ್ಯ ಸಂಪನ್ನನಾಗಿ ಸಕಲಲೋಕ ಸಂರಕ್ಷಕನಾಗಿ ಯಾಗಾರಾಧ್ಯನಾಗಿ ವಿಶ್ವವ್ಯಾಪಕನಾಗಿ ಪುರಾಣಪುರುಷನಾದ ಶ್ರೀಜನಾರ್ದನನನ್ನು ಹೃದಯಕಮಲದಲ್ಲಿರಿಸಿಕೊಂಡು ಚಿಂತಿಸುತ ಸಂತೋಷಭರಿತನಾಗಿದ್ದನು."

## ೪೪ ನೇ ಅಧ್ಯಾಯ.—ಅರ್ಘ್ಯಾಪಹರಣ ಪರ್ವ.

"ಕೇಳು ಜನಮೇಜಯನೆ, ಆ ಬಳಿಕ ಪಾಂಚಾಲರಾಯನೂ ಯದುವೃಷ್ಣಿ ಭೂಪಾಲಕರೂ ಪುತ್ರಮಿತ್ರ ಸಮೇತರಾಗಿ ಅಪಾರವಾದ ವಸ್ತುವಿಶೇಷಗಳನ್ನು ಕಪ್ಪವಾಗಿ ತಕ್ಕೊಂಡು, ವಿಶೇಷವಾಗಿ ಬೀಗರಾದ್ದರಿಂದ ಪಾಂಡವರು ಮಾಡುವ ರಾಜಸೂಯಾಧ್ವರವನ್ನು ಸ್ವಕಾರ್ಯವಾಗೆಣಿಸಿ ಸಂತೋಷಪಡುತ, ದೂರದೇಶವಾಸಿಗಳಾಗಿವರೂ ಅಪಾರವಾದ ಧನವನ್ನೂ ತಂದವರೂ ಆದ್ದರಿಂದ ಅವಭೃತಸ್ನಾನ ದಿವಸಕ್ಕೆ ಬಂದರು. ಯಾದವಶ್ರೇಷ್ಠನಾಗಿ ಚಕ್ರಾಯುಧಧರನಾಗಿ ವೈರಿಭಂಜನನಾಗಿರುವ ಶ್ರೀಕೃಷ್ಣಸ್ವಾಮಿಯು ತನ್ನ ಮನೆಯಿಂದ ಹೊರಟು ದಿವ್ಯ ರಥವನ್ನೇರಿ ಸಮಸ್ತ ಜನಗಳೂ ಸುತ್ತಿಕೊಂಡು ಓಲಗಿಸಲೂ ರಥನೇಮಿಧ್ವನಿಗಳು ದಿಗಂತಗಳನ್ನು ವ್ಯಾಪಿಸಲೂ ಧರ್ಮರಾಯನ ಯಾಗಶಾಲೆಯನ್ನು ಪ್ರವೇಶಿಸಿದನು. ಬಲಶೌರ್ಯಾಧುರ್ಯರಾಗಿ ಸಿಂಹಪರಾಕ್ರಮಶಾಲಿಗಳಾಗಿರುವ ಶಿಶುಪಾಲನು ದಂತವಕ್ರನು ಮೊದಲಾದ ಅರಸುಗಳು ನಾನಾವಿಧ ಭೂಷಣ ಭೂಷಿತರಾಗಿ ಮಿಂಚುಬಳ್ಳಿಗಳೊಡನೆ ಕೂಡಿರುವ ಮೇಘಗಳ ವಿಲಾಸವು ಅಂಗೀಕರಿಸಿರುವಹಾಗೆ ಕಾಣಿಸಿಕೊಂಡರು. ಧರ್ಮರಾಯನು ಮೊದಲಾದವರು ಪ್ರತ್ಯುತ್ಥಾನವನ್ನು ಮಾಡಿ ಯಥೋಚಿತವಾಗಿ ಪೂಜಿಸಲೂ ಎಲ್ಲರು ಸುಖವಾಗಿ ಕುಳಿತುಕೊಂಡಿದ್ದರು. ಆ ಸಮಯದಲ್ಲಿ ಭೀಷ್ಮನು ಧರ್ಮರಾಯನನ್ನು ನೋಡಿ 'ಪೂಜ್ಯರಾದ ಅರಸುಗಳು ಸಕಲದೇಶಗಳ ದೆಸೆಯಿಂದ ಬಂದು ಬಹುದಿವಸಗಳಿಂದ ಇಲ್ಲಿರುವರಾದ್ದರಿಂದ ಇವರುಗಳು ಪೂಜಿಸುವದಕ್ಕೆ ಯೋಗ್ಯರು; ಆಚಾರ್ಯನು ಋತ್ವಿಜನು ಸ್ನಾತಕನು ಪರಮಮಿತ್ರನು ಪಟ್ಟಾಭಿಷಿಕ್ತನಾದ ಅರಸು ಬೀಗನು ಈ ಆರುಮಂದಿಯೂ ಬಂದು ವರುಷವಾದಮೇಲೆ ಬಂದರೆ ಪೂಜೆಮಾಡಬೇಕೆಂದು ಶಾಸ್ತ್ರವು ಹೇಳುತಲಿದೆ; ಅದ್ದರಿಂದ ಇವರೊಳಗೆ ಜ್ಯೇಷ್ಠ ಕನಿಷ್ಠಭಾವವನ್ನು ಗುಣಾಗುಣಗಳನ್ನು ಯಥಾಕ್ರಮವಾಗಿ ತಿಳಿದು ಅಷ್ಟುಮಂದಿಗೂ ಪೂಜೆಯನ್ನು ಮಾಡಿಸು' ಅಂದನು. ಧರ್ಮರಾಯನು ಭೀಷ್ಮನನ್ನು ನೋಡಿ 'ಎಲೈ ಮಹಾತ್ಮನೆ, ಇವರ ಮಹತ್ವವನ್ನು ನೀನೇ ತಿಳಿದು ಅಗ್ರಪೂಜೆಗೆ ಯೋಗ್ಯನಾದವನು ಈತನೂ ಎಂದು ಯಾವ ಪುರುಷನನ್ನು ನಿಯಮಿಸುತಲಿದ್ದೀಯೊ ಆತನನ್ನು ಪೂಜಿಸುತಲಿದೇನೆ' ಅಂದನು. ಭೀಷ್ಮನು ಅಗ್ರಪೂಜೆಗೆ ವಾಸುದೇವನೇ ಸರಿಯೆಂದು ಮನಸ್ಸಿನಲ್ಲಿ ನಿಶ್ಚೈಸಿ ಧರ್ಮರಾಯನನ್ನು ನೋಡಿ 'ತೇಜೋನಿಧಿಯಾಗಿ, ತ್ರಿಕಾಲಜ್ಞಾನ ಸಂಪನ್ನನಾಗಿ, ಸರ್ವವ್ಯಾಪಕನಾಗಿ, ಯೋಗೀಶ್ವರ ಧ್ಯಾನ ಗಮ್ಯನಾಗಿ, ಶೀಲವೃದ್ಧರಿಗೂ ಜ್ಞಾನವೃದ್ಧರಿಗೂ ವಯೋವೃದ್ಧರಿಗೂ ಪೂಜ್ಯನಾಗಿ, ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಭೂತನಾಗಿ, ಆಪನ್ನಿವಾರಕನಾಗಿ, ಅಚ್ಯುತನಾಗಿ, ಜಗದಾತ್ಮಕನಾಗಿ, ಅನಂತಕಲ್ಯಾಣಗುಣಾಭಿರಾಮನಾಗಿ, ಬಲರಾಮನಿಗೆ ಸಹೋದರನಾದ ಶ್ರೀಕೃಷ್ಣಸ್ವಾಮಿಯು ನಕ್ಷತ್ರಗ್ರಹಗಳ ಮಧ್ಯದಲ್ಲಿ ಸೂರ್ಯನೋಪಾದಿಯಲ್ಲಿ ಈ ಅರಸುಗಳೊಳಗೆ ತೇಜೋಬಲಪರಾಕ್ರಮಗಳಿಂದ ಅಧಿಕನಾಗಿ ತಾನೇ ಪ್ರಕಾಶಿಸುತಲಿರುವನಾದ್ದರಿಂದ ಈ ಶ್ರೀ

ಕೃಷ್ಣಸ್ವಾಮಿಯು ಅಗ್ರಪೂಜಾಯೋಗ್ಯನು' ಎಂದು ನುಡಿದು ಸಹದೇವನನ್ನು ಕರದು 'ಶ್ರೀ ಕೃಷ್ಣಸ್ವಾಮಿಗೆ ಪೂಜೆಯನ್ನು ಮಾಡು' ಅಂದನು. ಸಹದೇವನು ಪಶುವನ್ನೂ ಅರ್ಘ್ಯವನ್ನೂ ಮಧುಪರ್ಕವನ್ನೂ ಶ್ರೀಕೃಷ್ಣಸ್ವಾಮಿಗೆ ಕೊಟ್ಟು ಆತನ ಪಾದಗಳನ್ನು ಮುಟ್ಟಿ ನಮಸ್ಕರಿಸಿ ನಿಲ್ಲಲು ಶ್ರೀಕೃಷ್ಣಸ್ವಾಮಿಯು ಆ ಪೂಜೆಯನ್ನು ಅಂಗೀಕರಿಸಿದನು. ಆ ಸಮಯದಲ್ಲಿ ಸಮಸ್ತರಾದ ಅರಸುಗಳೂ ಒಬ್ಬೊರಿಗೊಬ್ಬರು ಮುಖಗಳನ್ನು ನೋಡಿಕೊಳ್ಳುತ್ತ ಏನೂ ಅನ್ನಲಾರದೇ ಸುಮ್ಮನೇ ಇರಲು ಶಿಶುಪಾಲನು ಕೋಪೋದ್ದೀಪಿತನಾಗಿ ಕೃಷ್ಣಸ್ವಾಮಿಯನ್ನು ಪೂಜಿಸಿದ್ದಕ್ಕೆ ಸಹಿಸಲಾರದೆ ಧರ್ಮರಾಯನನ್ನೂ ಭೀಷ್ಮನನ್ನೂ ನಿಂದಿಸುತ ಸಭೆಯಲ್ಲಿರುವವರನ್ನು ನೋಡಿ '—ಯಾರನ್ನು ಪೂಜಿಸುವೆನು ?—' ಎಂದು ಕೇಳಿದಂಥವನು ಒಂದು ವಿಜಾತಿಯಲ್ಲಿ ಹುಟ್ಟಿದಂಥಾವನು ! '—ಕೃಷ್ಣನನ್ನು ಪೂಜಿಸು—' ಎಂದು ನಿಯಮಿಸಿದಂಥಾವನು ಒಂದು ನದಿಯಲ್ಲಿ ಹುಟ್ಟಿದಂಥಾವನು ! ಪೂಜೆಯನ್ನು ಅಂಗೀಕರಿಸಿದಂಥಾವನು ಒಬ್ಬ ಗೊಲ್ಲನು ! ಪೂಜೆಮಾಡಿದಂಥಾವನು ಒಂದು ಜಾತ್ಯಂತರದಲ್ಲಿ ಹುಟ್ಟಿದಂಥಾವನು ! ಹೀಗೆ ಅಷ್ಟುಮಂದಿಯೂ ವಿಜಾತಿಯಾದವರು ಕೂಡಿದರು ; ಇದು ಬಹು ಚೆನ್ನಾಯಿತು ! ಮಹಾಕುಲಸಂಭವರಾದ ಈ ಅರಸುಗಳು ಸುಮ್ಮನೇ ಇರ್ದಾರೆ !' ಎಂದು ಹಾಸ್ಯವನ್ನು ಮಾಡುತ ಮತ್ತೂ ಧರ್ಮರಾಯನನ್ನು ಕುರಿತು "ಮಹಾನುಭಾವರಾಗಿ ಇಲ್ಲಿರುವಂಥಾ ಅರಸುಗಳ ಮಹಾತ್ಮ್ಯವನ್ನು ತಿಳಿದೋ ಅಥವಾ ತಿಳಿಯದೆಯೋ ಉಪೇಕ್ಷೆಯಿಂದಲೂ ಇವರನ್ನು ಬಿಟ್ಟು ಯಾದವನನ್ನು ಪೂಜಿಸಿದೆ! ಲೋಕದಲ್ಲಿ ಪೂಜ್ಯನನ್ನೂ ಮಾಡಿದೆ.'"

## ೪೫ ನೇ ಅಧ್ಯಾಯ.—ಅರ್ಘ್ಯಾಪಹರಣಪರ್ವಶೇಷ.

"'ಎಲೈ ಧರ್ಮರಾಯನೆ, ಮಹಾನುಭಾವರಾದ ಅನೇಕ ಅರಸುಗಳು ಪೂಜಾಯೋಗ್ಯರಾಗಿರಲು ರಾಜಭಾವರಹಿತನಾದ ಕೃಷ್ಣನು ಯಾವ ರೂಪದಿಂದ ಪೂಜ್ಯನಾದನು ? ಸ್ನೇಹದಿಂದಲ್ಲವೆ ಯಾದವನಿಗೆ ಪೂಜೆಯನ್ನು ಮಾಡಿದೆ ; ಪಾಂಡುರಾಯನ ಮಕ್ಕಳಾದ ನಿಮಗೆ ಇದು ಉಚಿತವೆ ? ನೀವು ಚಿಕ್ಕವರಾದ್ದರಿಂದ ಧರ್ಮಸೂಕ್ಷ್ಮವನ್ನು ತಿಳಿಯದೇ ಹೋದಿರಿ ; ಈ ಭೀಷ್ಮನು ವೃದ್ಧನಾಗಿದ್ದರೂ ಕೊಂಚವಾದ ಬುದ್ಧಿಯುಳ್ಳವನಾದ್ದರಿಂದ ಕೃಷ್ಣನನ್ನು ಪೂಜಿಸುವದು ನಿಮಗೆ ಉಚಿತವೆಂದು ಹೇಳಿದನೇ ಹೊರ್ತಾಗಿ ಧರ್ಮವನ್ನು ತಿಳಿದು ಹೇಳಲಾರದೇ ಹೋದನು ! ಕೃಷ್ಣನು ವಯೋವೃದ್ಧನೆಂದು ಪೂಜೆಯನ್ನು ಮಾಡಿದೆಯೊ—ಈತನಿಗೆ ತಂದೆಯಾದ ವಸುದೇವನಿರಲು, ಆತನ ಪುತ್ರನು ಹ್ಯಾಗೆ ಪೂಜಾಯೋಗ್ಯನು ! ಬಂಧು ಶ್ರೇಷ್ಠನು ಎಂದು ಪೂಜಿಸಿದೆಯೊ—ಸಕಲ ಗುಣಶ್ರೇಷ್ಠನಾದ ದ್ರುಪದರಾಯನನ್ನು ಬಿಟ್ಟು ಕೃಷ್ಣನು ಹ್ಯಾಗೆ ಪೂಜಾಯೋಗ್ಯನು ? ಆಚಾರ್ಯನೆಂದು ಪೂಜಿಸಿದೆಯೊ—ದ್ರೋಣಾಚಾರ್ಯನಿರುವಾಗ ಕೃಷ್ಣನಿಗೆ ಹ್ಯಾಗೆ ಪೂಜೆಮಾಡಿಸಿದೆ ? ಋತ್ವಿಜನೆಂದು ಪೂಜಿಸಿದೆಯೊ—ಬ್ರಹ್ಮನಿಷ್ಠನಾದ ವ್ಯಾಸ ಮುನೀಶ್ವರನಿರುವಾಗ ಕೃಷ್ಣನಿಗೆ ಹ್ಯಾಗೆ ಪೂಜೆಮಾಡಿದೆ ? ಮತ್ತೂ ಭರತವಂಶಕ್ಕೆ ಧನುರ್ವಿದ್ಯಾವಿಶಾರದನಾಗಿ ಸ್ವಚ್ಛಂದ ಮರಣನಾಗಿ ಪುರುಷಶ್ರೇಷ್ಠನಾಗಿ ಶಂತನುರಾಯನ ಮಗನಾದಭೀಷ್ಮನು ಇರುವಾಗ ಹ್ಯಾಗೆ ಕೃಷ್ಣನನ್ನು ಪೂಜೆಮಾಡಿದೆ ? ಎಲೈ ಧರ್ಮರಾಯನೆ, ಮಹಾಬಲಪರಾಕ್ರಮಶಾಲಿಯಾದ ಭಗದತ್ತನು ಜಯತ್ಸೇನನು ಮಾಗಧನು ಕಾಳಿಂಗನು ಇವರಷ್ಟು ಮಂದಿಯೂ ಇರುವಾಗ ಕೃಷ್ಣನನ್ನು ಹ್ಯಾಗೆ ಪೂಜಿಸಿದೆ ? ಮತ್ತೂ ಭರತವಂಶಕ್ಕೆ ಧನುರ್ವಿದ್ಯಾಗುರುವಾದ ಕೃಪಾಚಾರ್ಯನು, ಸಕಲ ಶಾಸ್ತ್ರವಿಶಾರದನಾದ ಅಶ್ವತ್ಥಾಮನು ಕಿಂಪುರುಷಾಚಾರ್ಯನಾದ ದ್ರುಮನು ಧನುರ್ವಿದ್ಯಾಕೌಶಲದಲ್ಲಿಯೂ ಪರಾಕ್ರಮದಲ್ಲಿಯೂ ಅರ್ಜುನನಿಗೆ ಸಮಾನನಾದ ಏಕಲವ್ಯನು, ಪಟುಶೌರ್ಯಧುರ್ಯನಾದ ಕೃಪಾಚಾರ್ಯನು, ಮಗಧೇಶ್ವರನಾದ ಜಯತ್ಸೇನನು, ಕೀರ್ತಿಧುರಂಧರನಾದ ಕಳಿಂಗನು, ಪ್ರಾಕ್ಕೋಸಲೇಶ್ವರನಾದ ಬೃಹದ್ಬಲನು, ಮಹಾವೀರನಾದ ವಿರಾಟನು, ಶೂರಾಗ್ರೇಸರನಾದ ದರದನು, ವೈರಿದುಸ್ಸಹನಾದ ಭೀಷ್ಮಕನು, ಪಾಂಡ್ಯದೇಶಾಧಿಪತಿಯಾದ ಕೃತಧ್ವಂಸನು, ರಾಜಶ್ರೇಷ್ಠನಾದ ರುಕ್ಮಿಯು, ಮಹಾರಾಜಶ್ರೇಷ್ಠನಾದ ದಂತವಕ್ರನು, ಮದ್ರದೇಶಾಧಿಪತಿಯಾದ ಶಲ್ಯನು, ಶೂರನಾದ ಸುರಾಷ್ಟ್ರಾಧಿಪತಿಯು, ಸಿಂಹಸಮಾನನಾದ

ಮಾಳವನು, ಪಾಂಡ್ಯ ಭೂಪತಿಯು, ಕೃತಕ್ಷಣನು, ಸುಜ್ಞಾನಶೀಲನಾದ ವೈದೇಹನು ಮೊದಲಾದ ಮಹಾತ್ಮರು ಇಷ್ಟುಮಂದಿ ಇರುವಾಗ ಗೋಪಾಲಬಾಲಕನು ನಿನಗೆ ಹ್ಯಾಗೆ ಪೂಜ್ಯನಾದನು? ಮತ್ತು ಪರಶುರಾಮನಿಗೆ ಪ್ರಿಯ ಶಿಷ್ಯನಾಗಿ ಭುಜಬಲಶಾಲಿಯಾಗಿ ಜರಾಸಂಧನನ್ನು ಜಯಿಸಿದಂಥಾ ಕರ್ಣನು, ಅವಂತೀದೇಶಾಧೀಶ್ವರರಾದ ವಿಂದಾನು ವಿಂದರು, ಕಾಂಭೋಜದೇಶಾಧೀಶ್ವರನಾದ, ಸುದಕ್ಷಿಣನು ರಾಜಶ್ರೇಷ್ಠನಾದ ಸಾಲ್ವನು, ಅರ್ಜುನನಿಗೆ ಸ್ನೇಹಿತನಾಗಿ ಗಂಧರ್ವನಾಯಕನಾದ ಚಿತ್ರರಥನು, ಅತಿರಥಶ್ರೇಷ್ಠರಾಗಿ ಕುರುವಂಶದೀಪಕರಾಗಿರುವ ಬಾಹ್ಲೀಕ ಸೋಮದತ್ತ ಭೂರಿಶ್ರವರು, ಸುಬಲನ ಮಗನಾದ ಶಕುನಿಯು, ಮಹಾಬಲಶಾಲಿಯಾದ ಸೈಂಧವನೂ, ತಮ್ಮ ತೇಜೋವಿಜೃಂಭಣ ದಿಂದ ಪ್ರಕಾಶಿಸುತ್ತಿರಲು, ಇವರಷ್ಟುಮಂದಿಯನ್ನೂ ನಿರಾಕರಿಸಿ ಕೃಷ್ಣನನ್ನು ಹ್ಯಾಗೆ ಪೂಜಿಸಿದೆ? ಲೋಕ ದಲ್ಲಿ ಋತ್ವಿಜನು ಆಚಾರ್ಯನು ಪಟ್ಟಾಭಿಷಿಕ್ತನಾದ ಅರಸು ಸ್ನಾತಕವ್ರತನು ಅಳಿಯನು ಮಾವನು ಇವರೊಳಗೆ ಒಬ್ಬನೂ ಅಲ್ಲದೇ ಇರುವ ಈ ಕೃಷ್ಣನನ್ನು ಹ್ಯಾಗೆ ಪೂಜಿಸಿದೆ? ಅಲ್ಲದೇ ಸ್ನೇಹದಿಂದ ಪೂಜಿಸಿದೆನು ಎಂದು ಹೇಳುತ್ತೀಯೊ—ಹೇಳುತಲಿಧ್ದೇನೆ ಕೇಳು: '—ಧರ್ಮಪ್ರಧಾನನಾದ ಈ ಧರ್ಮರಾಯನಿಗೆ ಪಾರ್ಥಿವತ್ವವು ಉಂ ಟಾಗಬೇಕು—' ಎನ್ನುತಲೇ ಹೊರ್ತಾಗಿ ಭಯದಿಂದಲಾದರೂ ಲೋಭದಿಂದಲಾದರೂ ಮುಖದಾಕ್ಷಿಣ್ಯದಿಂದಲಾದ ರೂ ನಾವು ಕಪ್ಪಗಳನ್ನುಕೊಟ್ಟವರಲ್ಲಾ; ಹಾಗಿದ್ದರೂ ನಮ್ಮನ್ನು ಎಣಿಸದೆ ಅವಮಾನಮಾಡಿದೇ! ಪೂಜಾಯೋಗ್ಯ ಲಕ್ಷಣಗಳೊಳಗೆ ಒಂದು ಲಕ್ಷಣವಾದರೂ ಇಲ್ಲದಿರುವ ಈ ಹೀನನಿಗೆ ಪೂಜೆಮಾಡಿದ್ದರಿಂದ ನಮಗೆ ಇದಕ್ಕಿಂತಲೂ ಬೇರೆ ಅವಮಾನವುಂಟೆ?' ಎಂದು ನುಡಿದು ಶ್ರೀಕೃಷ್ಣಸ್ವಾಮಿಯನ್ನು ಕುರಿತು 'ಪಾಂಡವರು ದೀನರಾಗಿ ಭೀತರಾ ದ್ದರಿಂದ ನಿನ್ನನ್ನು ಪೂಜಿಸಿದರೆ ಈ ಮಹಾಕುಲದಲ್ಲಿ ಹುಟ್ಟಿರುವ ಮಹಾ ಅರಸುಗಳ ಮಧ್ಯದಲ್ಲಿ '—ನನಗೆ ಪೂ ಜೆಯನ್ನು ಮಾಡಿಸಿಕೊಂಡೆನು—' ಎಂದು ಇಷ್ಟುಮಾತ್ರದಿಂದಲೇ ಗರ್ವಿಸಬ್ಯಾಡ: ಯಾರೂ ಇಲ್ಲದೇ ಇರುವಂ ಥಾ ಸ್ಥಳದಲ್ಲಿ ದೇವತಾಯೋಗ್ಯವಾದ ಅನ್ನವನ್ನು ನಾಯಿತಕ್ಕೊಂಡು ಹೋದರೆ ಅದಕ್ಕೆ ಪ್ರತಿಷ್ಠೆ ಬರುವದೆ? '—ಈ ಧರ್ಮರಾಯನು ಇಷ್ಟುಮಂದಿ ಅರಸುಗಳನ್ನೂ ಅವಮಾನಿಸಿ ನನ್ನನ್ನು ಪೂಜಿಸಿದನು—' ಎಂದು ಹೆಮ್ಮೆ ಪಡಬ್ಯಾಡ; ಈತನಿಗೂ ಪೂಜೆಗೂ ಎಷ್ಟು ದೂರವೆಂದು ಕೌರವರಷ್ಟುಮಂದಿಯೂ ನಿನ್ನನ್ನೇ ಹಾಸ್ಯಮಾಡುತಲಿಧಾ ರೆ! ಮಹಾರಾಜಯೋಗ್ಯವಾದ ಪೂಜೆಯು ರಾಜಕುಲಸಂಭವನಲ್ಲದೇ ಇರುವ ನಿನಗೆ ಮಾಡಿದ್ದು ನಪುಂಸಕನಿಗೆ ಕನ್ಯೆಯನ್ನು ಕೊಟ್ಟಹಾಗೂ ಅಂಧಕನಿಗೆ ಚಿತ್ರವನ್ನು ತೋರಿಸಿದಹಾಗೂ ಆಯಿತು!' ಎಂದು ನುಡಿದು ರಾಜಸ ಮೂಹವನ್ನು ನೋಡಿ 'ಇಂಥಾ ವಿವೇಕ ಸಂಪನ್ನರಾದ ಗಾಂಗೇಯ ಕೌಂತೇಯ ಯಾದವರ ಸ್ವರೂಪವನ್ನು ಕಂ ಡೆವು! ಇಂಥಾ ಕುರಿಗಳು ಎಷ್ಟುಮಂದಿ ಇಲ್ಲಾ!' ಎಂದು ಪರಮಾಸನದ್ದೆಸೆಯಿಂದ ಎದ್ದು ತನ್ನ ಬಂಧುಜನ ಸಹಿತ ನಾಗಿ ಸಭಾಸ್ಥಾನದ್ದೆಸೆಯಿಂದ ಹೊರಟನು."

## ೪೬ ನೇ ಅಧ್ಯಾಯ.—ಅರ್ಘ್ಯಾರ್ಘ್ಯಪಹರಣ ಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ಶಿಶುಪಾಲನ ಸಮೀಪಕ್ಕೆ ಹೋಗಿ ಆತನನ್ನು ಕುರಿ ತು ಸಮಾಧಾನ ಪೂರ್ವಕವಾಗಿ ಮಧುರಭಾಷೆಗಳಿಂದ 'ಎಲೈ ಮಹಾತ್ಮನೆ, ಸಭಾಮಧ್ಯದಲ್ಲಿ ನಿಷ್ಕಾರಣವಾಗಿ ಹೀಗೆ ಗುಡುಗುತಾ ಮಾತನಾಡುವದು ನಿನ್ನಂಥಾವನಿಗೆ ಉಚಿತವೆ? ಇದಕ್ಕಿಂತಲೂ ಅಧರ್ಮವೇನಿದೆ? ಲೋಕದಲ್ಲಿ ಅ ಸಾವನು ಸಜ್ಜನರನ್ನು ನಿಂದಿಸುವನೆ? ಶಂತನುರಾಯನ ಮಗನಾದ ಭೀಷ್ಮನನ್ನು ಅಧರ್ಮವಾದಿಯಾಗಿ ಎಣಿ ಬ್ಯಾಡ; ನಿನಗಿಂತಲು ವಯೋವೃದ್ಧರಾದ ಸಮಸ್ತರಾದ ಅರಸುಗಳು ಶ್ರೀಕೃಷ್ಣನನ್ನು ಪೂಜಿಸುವದಕ್ಕೆ ಸ ಮ್ಮತಿಸಿರುವದ್ದರಿಂದ ನೀನೂ ಹಾಗೇ ಅಂಗೀಕರಿಸಬೇಕು; ಈ ಶ್ರೀಕೃಷ್ಣಸ್ವಾಮಿಯ ಮಹಾತ್ಮ್ಯವನ್ನು ಭೀಷ್ಮ ನು ತಿಳಿದಿರುವ ರೀತಿಗೆ ನೀನು ತಿಳಿಯದೇ ಅಲ್ಲವೆ ಇಷ್ಟು ನಿಂದಿಸಿದೆ!' ಅಂದನು ಭೀಷ್ಮನು ಧರ್ಮರಾಯನನ್ನು ನೋಡಿ 'ಸಕಲಜನಪೂಜ್ಯನಾದ ಕೃಷ್ಣನನ್ನು ಪೂಜಿಸುವದಕ್ಕೆ ಸಹಿಸಲಾರದಿರುವ ಈತನು ಒಳ್ಳೇ ಮಾತು

ಳಿಂದ ಸಮಾಧಾನಮಾಡಲ್ಪಡುವದಕ್ಕೆ ಪಾತ್ರನಲ್ಲ; ಕ್ಷತ್ರಿಯನಾದವನು ಯುದ್ಧದಲ್ಲಿ ಜಯಿಸಿ ದಯಾಳುವಾಗಿ ಹಿಂಸೆಯನ್ನು ಮಾಡದೆ ಬಿಟ್ಟವನನ್ನೂ ಗುರುವಾಗಿ ಎಣಿಸುವದು ನೀತಿಮಾರ್ಗವು; ಈ ಸಮಸ್ತರಾದ ಅರಸುಗಳಲ್ಲಿ ಶ್ರೀಕೃಷ್ಣಸ್ವಾಮಿಯಿಂದ ಪರಾಜಿತನಲ್ಲದೇ ಇರುವಂಥಾವನು ಒಬ್ಬನೂ ಇಲ್ಲದೇ ಇರುವದ್ದರಿಂದ ಆತನು ನಮಗೆ ಮಾತ್ರವೇ ಪೂಜ್ಯನಲ್ಲಾ—ಮೂರು ಲೋಕದವರಿಗೂ ಪೂಜ್ಯನು! ಚರಾಚರಾತ್ಮಕವಾದ ಜಗತ್ತೆಲ್ಲಾ ಈ ಶ್ರೀಕೃಷ್ಣನ ಅಧೀನವಾದ್ದರಿಂದ ಲೋಕದಲ್ಲಿರುವ ಮಹಾನುಭಾವರಾದವರೊಳಗೆ ಈತನೇ ಪೂಜ್ಯನು! ಈ ಶಿಶುಪಾಲನ ಕೂಡೆ ಉಪಚಾರೋಕ್ತಿಗಳಿಂದ ಪ್ರಯೋಜನವೇನು?' ಎಂದು ನುಡಿದು ಶಿಶುಪಾಲನನ್ನು ನೋಡಿ 'ನಾನು ಮಹಾತ್ಮರಾದ ಋಷೀಶ್ವರರ ದೆಸೆಯಿಂದ ಈ ಶ್ರೀಕೃಷ್ಣಸ್ವಾಮಿಯು ಹುಟ್ಟಿದ್ದು ಮೊದಲುಗೊಂಡು ಮಾಡಿದ ಅತಿಮಾನುಷ ಪರಾಕ್ರಮಗಳನ್ನೂ ಈತನ ಅನಂತಕಲ್ಯಾಣ ಗುಣಗಳನ್ನೂ ಅಧಿಕವಾಗಿ ಕೇಳಿಯೂ ನೋಡಿಯೂ ಇದ್ದೇನಾದ್ದರಿಂದ ಈತನಿಗೆ ಪೂಜೆಯನ್ನು ಮಾಡಿಸಿದೆನೆ ಹೊರ್ತಾಗಿ ಈತನಲ್ಲಿ ಸ್ನೇಹದಿಂದಲಾದರೂ ಬಂಧುತ್ವದಿಂದಲಾದರೂ ಆತನಿಂದ ಕಾರ್ಯವನ್ನು ಎಣಿಸಿಯಾದರೂ ಆತನ ಭಯದಿಂದಲಾದರೂ ಪೂಜೆಯನ್ನು ಮಾಡಿಸಿದವನಲ್ಲಾ, ಮತ್ತೂ ಸಜ್ಜನ ಪೂಜ್ಯನಾಗಿ ಸಕಲಜನ ಸಂರಕ್ಷಕನಾಗಿರುವ ಈತನಲ್ಲಿ ಹೊರ್ತಾಗಿ ಕೀರ್ತಿಯೂ ಪ್ರತಾಪವೂ ಲಕ್ಷ್ಮಿಯೂ ಔದಾರ್ಯವೂ ಪ್ರಜ್ಞೆಯೂ ವಿನಯವೂ ಧೈರ್ಯವೂ ಪುಷ್ಟಿಯೂ ವೇದವೇದಾಂಗ ವಿದ್ಯೆಯೂ ವಿಜ್ಞಾನವೂ ಉತ್ಸಾಹವು ಮೊದಲಾದ ಸದ್ಗುಣಗಳಷ್ಟು ಮತ್ತೊಬ್ಬನಲ್ಲಿ ಉಂಟೆ! ಆದ್ದರಿಂದ ಸಕಲರಾದ ಅರಸುಗಳಿಗಿಂತಲೂ ಮಹಾನುಭಾವನೆಂದು ತಿಳಿದು ಆಚಾರ್ಯನು ತಂದೆಯು ಗುರುವು ಋತ್ವಿಜನು ನೃಪತಿಯು ಸ್ನಾತಕವ್ರತಿಯು ಮಿತ್ರನು ಇವರಷ್ಟುಮಂದಿಯೂ ಈ ಕೃಷ್ಣನೇ ಎಂದೆಣಿಸಿ ಪೂಜೆಯನ್ನು ಮಾಡಿದೆವು. ಅರಸುಗಳಿರಾ, ಇದನ್ನು ನೀವು ಅಂಗೀಕರಿಸಬೇಕು; ಬ್ರಾಹ್ಮಣರೊಳಗೆ ಜ್ಞಾನವಂತನು ಕ್ಷತ್ರಿಯರೊಳಗೆ ಶೌರ್ಯವಂತನು ಶ್ರೇಷ್ಠನಾಗಿರುವದರಿಂದ ವೇದವೇದಾಂಗ ವಿಜ್ಞಾನವೂ ಅಪರಿಮಿತಪರಾಕ್ರಮವೂ ಈತನಲ್ಲಿಯೇ ಉಂಟು; ಎಂದು ಪೂಜೆಯನ್ನು ಮಾಡಿದೆವು; ಸಕಲ ಲೋಕಗಳ ಸೃಷ್ಟಿಸ್ಥಿತಿಲಯಗಳಿಗೆ ಶ್ರೀಕೃಷ್ಣಸ್ವಾಮಿಯು ಕಾರಣವಾಗಿರುವನು! ಚರಾಚರಾತ್ಮಕವಾದ ಪ್ರಪಂಚವಷ್ಟೂ ಈತನಲ್ಲಿಯೆ ಇದೆ! ಪ್ರಕೃತಿಶರೀರನಾಗಿ ಅವ್ಯಕ್ತಾತ್ಮನಾಗಿ ಜ್ಞಾನಮಯನಾಗಿ ಅನಾದಿಪುರುಷನಾಗಿ ಜಗತ್ಕರ್ತನಾಗಿ ಸರ್ವೋತ್ತಮನಾದ ಶ್ರೀಮಹಾವಿಷ್ಣುವಾದ ಆದಿಪುರುಷನೇ ಈ ಶ್ರೀಕೃಷ್ಣನಾದ್ದರಿಂದ ಈತನ್ನೇ ಸರ್ವೋತ್ತಮನೆಂದು ಪೂಜೆಯನ್ನು ಮಾಡಿದೆವು; ದೇವತೆಗಳೊಳಗೆ ಯಜ್ಞೇಶ್ವರನಹಾಗೂ ಛಂದಸ್ಸುಗಳಲ್ಲಿ ಗಾಯತ್ರಿಹಾಗೂ ಪರ್ವತಗಳಲ್ಲಿ ಮೇರುಪರ್ವತದಹಾಗೂ ಪಕ್ಷಿಗಳಲ್ಲಿ ಗರುಡನಹಾಗೂ ಸಕಲ ಲೋಕಗಳಲ್ಲಿಯೂ ಈ ಶ್ರೀಕೃಷ್ಣನು ಮುಖ್ಯನು! ಮತ್ತು ಬುದ್ಧಿಯು ಮನಸ್ಸು ಮಹತ್ವವು ವಾಯುವು ತೇಜಸ್ಸು ಉದಕವು ಆಕಾಶವು ಮೊದಲಾದ ಇಪ್ಪತ್ತುನಾಲ್ಕು ಭೂತಗಳು ಜರಾಯುಜಗಳು ಅಂಡಜಗಳು ಸ್ವೇದಜಗಳು ಉದ್ಭಿಜ್ಜಗಳು ನಕ್ಷತ್ರಗಳು ಸೂರ್ಯನು ಚಂದ್ರನು ಗ್ರಹಗಳು ದಿಕ್ಕುಗಳು ವಿದಿಕ್ಕುಗಳು ಇವಷ್ಟು ಶ್ರೀಕೃಷ್ಣಸ್ವಾಮಿಯಲ್ಲೇ ಇರುವವು! ಬ್ರಹ್ಮನು ರುದ್ರನು ಪುರಾಣಪುರುಷನೂ ಈತನೇ ಎಂದು ತಿಳಿ! ಹೀಗೆ ವಿಶ್ವಾತ್ಮಕನಾಗಿ ಸರ್ವೇಶ್ವರನಾಗಿ ಸಕಲ ದೇಶಕಾಲ ಪರಿಪೂರ್ಣನಾಗಿ ನಾಶರಹಿತನಾಗಿರುವ ಶ್ರೀಮಹಾವಿಷ್ಣುವು ಲೀಲಾಮಾನುಷ ರೂಪವನ್ನು ಧರಿಸಿ ಈ ಶ್ರೀಕೃಷ್ಣಸ್ವಾಮಿಯಾಗಿರುವದನ್ನು ಅರಿಯದೇ ಈ ಶಿಶುಪಾಲನು ಅಲ್ಪಬುದ್ಧಿಯಿಂದ ಇಂಥಾ ನಿಷ್ಠುರೋಕ್ತಿಯನ್ನು ನುಡಿಯುತಲಿಧಾನೆ; ಲೋಕದಲ್ಲಿ ಬುದ್ಧಿವಂತನಾದ ಮನುಷ್ಯನು ಧರ್ಮವನ್ನೇ ಆಚರಿಸುವದಕ್ಕೆ ಯೋಚಿಸುವನು; ದುರ್ಬುದ್ಧಿಯುಳ್ಳ ಮನುಷ್ಯನು ಪಾಪವನ್ನೇ ಆಚರಿಸುವನು. ಈ ಶಿಶುಪಾಲನು ದುಷ್ಟಬುದ್ಧಿಯುಳ್ಳವನಾದ್ದರಿಂದ ದುರ್ಭಾಷೆಗಳನ್ನೇ ನುಡಿದು ಪಾಪವನ್ನೇ ಸಂಪಾದಿಸುತಲಿಧಾನೆ; ಬಾಲವೃದ್ಧಸಹಿತರಾಗಿ ಮಹಾತ್ಮಕರಾಗಿರುವ ಸಕಲವಾದ ಅರಸುಗಳೊಳಗೆ ಶ್ರೀಕೃಷ್ಣಸ್ವಾಮಿಯನ್ನು ಪೂಜಿಸದೇ ಇರುವಂಥಾವನೂ ಆತನನ್ನು ಪೂಜಿಸಬಾರದನ್ನುವಂಥಾವನೂ ಉಂಟೆ? ಈತನಿಗೆ ಪೂಜೆಯನ್ನು ಮಾಡಬಾರದೂ ಎಂದು ಶಿಶುಪಾಲನು ಹೇಳುತಲಿಧಾನಲ್ಲಾ! ಇವನು ಹೀಗೆ ಹೇಳಿದರೂ ಹೇಳಲಿ; ಯಥೋಚಿತವಾಗಿ ಪೂಜೆಯು ನಡಿಯಲಿ' ಅಂದನು.

"ಕೇಳು ಜನಮೇಜಯನೆ, ಈಪ್ರಕಾರವಾಗಿ ನುಡಿದ ಭೀಷ್ಮನ ವಾಕ್ಯಗಳನ್ನು ಕೇಳಿ ಕೋಪೋದ್ದೀಪಿತನಾಗಿರುವ ಶಿಶುಪಾಲನನ್ನು ನೋಡಿ ಸಹದೇವ ನಿಂತೆಂದನು : 'ಕೇಳು ಶಿಶುಪಾಲನೆ, ನಾವು ನೀತಿಮಾರ್ಗದಿಂದ ನಡದೇವೇ ಹೊರ್ತಾಗಿ ಮತ್ತೊಂದಲ್ಲಾ ; ದಾಕ್ಷಿಣ್ಯಕ್ಕಾದರೂ ಮಾಡಲಿಲ್ಲಾ : ಇದು ನಿನಗೆ ಅಯುಕ್ತವಾಗಿ ತೋರಿತು ; ಸಕಲವಾದ ಅರಸುಗಳೊಳಗೆ ಬಲಪರಾಕ್ರಮಗಳ ದೆಸೆಯಿಂದ ಶ್ರೀಕೃಷ್ಣನೇ ಸರ್ವೋತ್ಕೃಷ್ಟನಾದ್ದರಿಂದ ಆತನಿಗೆ ಅರ್ಘ್ಯವನ್ನು ಕೊಟ್ಟೆವು ; ಇದು ಸಕಲ ನರಪಾಲಸಮ್ಮತವು ; ಯಾರಿಗೆ ಸಮ್ಮತವಲ್ಲದೇ ಇದೆಯೋ ಆತನ ಶಿರಸ್ಸನ್ನು ಮೆಟ್ಟಿದ ಪಾದವು ಇದು' ಎಂದು ಎಡದಪಾದದಿಂದ ಭೂಮಿಯನ್ನು ತಾಟಿಸಿ 'ಯಾರಾದರೂ ಇದಕ್ಕೆ ಉತ್ತರವನ್ನು ಹೇಳಿ' ಎಂದು ನುಡಿದನು. ಆ ಸಮಯದಲ್ಲಿ ಸಕಲ ರಾಜಮಧ್ಯದಲ್ಲಿರುವ ಆತನ ಶಿರಸ್ಸಿನಮೇಲೆ ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು; ಅಭಿಮಾನಶಾಲಿಗಳಾದ ಅರಸುಗಳಲ್ಲಿ ಒಬ್ಬನಾದರೂ ಏನೂ ಅನ್ನಲಾರದೇ ಸುಮ್ಮನೇ ಇದ್ದರು. ಶಿಶುಪಾಲನು ಸ್ವಭಾವದಿಂದ ಕೆಂಪಾದ ಕಣ್ಣುಗಳನ್ನು ಕೋಪದಿಂದ ಮತ್ತೂ ಕೆಂಪಾಗಿ ಮಾಡುತ್ತ ರೋಷಾವೇಶದಿಂದಿರುವದನ್ನು ತಿಳಿದು ಭೀಷ್ಮನು ಸಭೆಯಲ್ಲಿರುವಂಥಾವರನ್ನು ನೋಡಿ 'ಈಗ ಸಹದೇವನು ಶ್ರೀಕೃಷ್ಣನ ಮಹತ್ವವನ್ನು ತಿಳಿದು ನುಡಿದ ನುಡಿಗಳು ಯಥಾರ್ಥಗಳೇ ಸರಿ ; ಇದಷ್ಟನ್ನೂ ನಿಮ್ಮ ಮನಸ್ಸಿನಲ್ಲಿ ವಿಚಾರಿಸಿ ತಿಳಯಿರೀ' ಎಂದು ನುಡಿದನು."

---

೪೭ನೇ ಅಧ್ಯಾಯ.—ಅರ್ಘ್ಯಾಪಹರಣ ಪರ್ವ ಶೇಷ. (ಶ್ರೀಕೃಷ್ಣವರ್ಣನೆ.)

"ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ಈಪ್ರಕಾರದಲ್ಲಿ ನುಡಿದ ಭೀಷ್ಮನ ವಾಕ್ಯವನ್ನು ಕೇಳಿ 'ಎಲೈ ಮಹಾತ್ಮನೆ, ಈ ವಾಸುದೇವನ ಮಹಿಮೆಯು ಶ್ರವಣಾನಂದವಾಗಿಧೆ ; ಈತನ ಸ್ವರೂಪವನ್ನೂ ಅದ್ಭುತವಾದ ಚರಿತ್ರಗಳನ್ನೂ ಆನುಪೂರ್ವಿಯನ್ನೂ ದಿವ್ಯಾವತಾರಗಳನ್ನೂ ವಿಸ್ತಾರವಾಗಿ ವಿವರಿಸು' ಎಂದು ಕೇಳಿದನು. ಭೀಷ್ಮನು ಎರಡನೇ ದೇವೇಂದ್ರನೋಪಾದಿಯಲ್ಲಿರುವ ಶ್ರೀ ವಾಸುದೇವನ ಸನ್ನಿಧಾನದಲ್ಲಿ ಸಕಲ ರಾಜಸಮೂಹವೂ ಕೇಳುತ್ತಿರಲು ಶ್ರೀಕೃಷ್ಣಸ್ವಾಮಿಯ ಚರಿತ್ರವನ್ನು ಹೇಳ ತೊಡಗಿದನು. ಅದೆಂತೆನೆ :—

"ಕೇಳು ಧರ್ಮರಾಯನೆ, ಭೂತಭವಿಷ್ಯದ್ವರ್ತಮಾನ ಕಾಲತ್ರಯಗಳಲ್ಲಿ ಈತನು ಮಾಡಿದ ಕಾರ್ಯಗಳನ್ನು ಹೇಳುವದಕ್ಕೆ ಯಾರಿಂದಲು ಕೂಡದು ; ಅವುಗಳೊಳಗೆ ಕೆಲವನ್ನು ವಿವರಿಸುತಲಿಧೇನೆ ; ಸಾವಧಾನಚಿತ್ತದಿ ಕೇಳು : ಮೊದಲು ಅವ್ಯಕ್ತರೂಪವಾಗಿದ್ದು ಈಗ ವ್ಯಕ್ತಸ್ವರೂಪನಾಗಿ ತೋರುತಲಿರುವ ಶ್ರೀಕೃಷ್ಣನು ಪೂರ್ವದಲ್ಲಿ ಸರ್ವತಂತ್ರ ಸ್ವತಂತ್ರನಾಗಿ ಪಿತಾಮಹಜನಕನಾಗಿ ಸಾವರ ತಲೆಗಳು ಸಾವರ ಮುಖಗಳು ಸಾವರ ಭುಜಗಳು ಸಾವರ ಪಾದಗಳೂ ಉಳ್ಳಂಥಾವನಾಗಿ ಪುರುಷೋತ್ತಮನಾಗಿ ಸಾವರ ನಾಮಗಳುಳ್ಳಂಥಾವನಾಗಿ ನಿತ್ಯನಾಗಿ ಶಾಶ್ವಿತನಾಗಿ ನಾಶರಹಿತನಾಗಿ ಸಾವರ ಕಿರೀಟಗಳುಳ್ಳಂಥಾವನಾಗಿ ಅನೇಕ ವರ್ಣಗಳುಳ್ಳಂಥಾವನಾಗಿ ಮಹಾಕಾಂತಿಯುಳ್ಳಂಥಾವನಾಗಿ ಆದಿದೇವನಾಗಿ ಪ್ರಕೃತಿಗಿಂತಲೂ ಪರನಾಗಿ ಸರ್ವವ್ಯಾಪಕನಾಗಿ ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನಾಗಿದ್ದನು. ಆತನು ಮೊದಲು ಉದಕವನ್ನು ಸೃಜಿಸಿ, ಆ ಉದಕದಲ್ಲಿ ಕಮಲವನ್ನು ಸೃಜಿಸಿ, ಆ ಕಮಲದಲ್ಲಿ ಚತುರ್ಮುಖ ಬ್ರಹ್ಮನನ್ನೂ ಸಕಲ ಜಗತ್ತನ್ನೂ ಸೃಜಿಸಿದನು. ಇದು ಜಗತ್ತು ಹುಟ್ಟಿದ ಪ್ರಕಾರವು ; ಇನ್ನೂ ಮಹಾಪ್ರಳಯದಲ್ಲಿ ಬ್ರಹ್ಮಾದಿ ದೇವತೆಗಳೂ ಚರಾಚರಾತ್ಮಕವಾದ ಪ್ರಪಂಚವೂ ಮಹಾ ಪ್ರಕೃತಿಯಲ್ಲಿ ಲೀನವಾಗಿರುವಲ್ಲಿ ಸರ್ವಾತ್ಮಕನಾದ ಆದಿಪುರುಷನಿಗೆ ಸ್ವರ್ಗವು ಶಿರಸ್ಸು, ಆಕಾಶವು ನಾಭಿಯು, ಪೃಥಿವೀ ಪಾದಗಳು, ಅಶ್ವಿನೀದೇವತೆಗಳು ಕಿವಿಗಳು, ಸೂರ್ಯಚಂದ್ರರು ನೇತ್ರಗಳು, ಇಂದ್ರ ವೈಶ್ವಾನರರು ಮುಖವು, ಮತ್ತೂ ಇರುವ ದೇವತೆಗಳು ಅವಯವಗಳಾಗಿ ಸೂತ್ರದಲ್ಲಿ ಮಣಿಗಣಗಳು ಇರುವಹಾಗೆ ಸಕಲ ಪ್ರಪಂಚವೂ ಈ ಆದಿಮಹಾಪುರುಷನಾದ ನಾರಾಯಣನಲ್ಲಿ ತೋರುತಲಿರುವದು. ಅಂಥಾ ಪ್ರಳಯಕಾಲದಲ್ಲಿ ಸರ್ವಪ್ರಪಂಚವು ಪ್ರಕೃತಿಯಲ್ಲಿ ಲೀನವಾಗಿರುವಾಗ ಮಹಾಯೋಗೀಶ್ವರನಾಗಿ ಸರ್ವಜ್ಞನಾಗಿ ಸಕಲ ಶಕ್ತಿ ಸಂಪನ್ನನಾದ ಲಕ್ಷ್ಮೀಕಾಂತನು ತನ್ನ ಅಂಶದಿಂದ ಹಿರಣ್ಯಗರ್ಭನನ್ನು ಹುಟ್ಟಿಸಿದನು ; ಸರ್ವಭೂತಾಧ್ಯಕ್ಷನಾದ ಆ ಹಿರಣ್ಯಗರ್ಭನು ಸನತ್ಕುಮಾರನು

ರುದ್ರನು ಸಪ್ತಋಷಿಗಳು ಮೊದಲಾದವರನ್ನು ಸೃಜಿಸಿ. ಆ ಬಳಿಕ ಸಕಲ ಲೋಕಗಳನ್ನೂ ಸೃಜಿಸುವನು; ಆ ಬ್ರಹ್ಮರುದ್ರಾದಿ ದೇವತೆಗಳ ದೆಸೆಯಿಂದ ಚರಾಚರಾತ್ಮಕವಾದ ಪ್ರಪಂಚವು ಹುಟ್ಟುವದು; ಹೀಗೇ ಮನ್ವಂತರಗಳು ಯುಗಗಳು ಪ್ರಳಯಗಳು ಬ್ರಹ್ಮಕಲ್ಪಗಳೂ ಚಕ್ರವು ತಿರುಗುವರೀತಿಯಿಂದ ಅನೇಕಕೋಟಿ ಸಂಖ್ಯೆಯಿಂದ ತಿರುಗುತಲಿರುವವು; ಆದ್ದರಿಂದ ಸಕಲ ಪ್ರಪಂಚವೂ ವಿಷ್ಣುಮಯವೆಂದು ತಿಳಿ. ಹೀಗೆ ನಾರಾಯಣನು ಸಕಲ ಲೋಕ ಹಿತಾರ್ಥವಾಗಿ ಚತುರ್ಮುಖನನ್ನು ಸೃಜಿಸಿ ಕ್ಷೀರಸಾಗರದಲ್ಲಿ ಸುಖವಾಗಿ ವಾಸಮಾಡಿಕೊಂಡಿರುವದರಿಂದ ಈ ಲೋಕಕ್ಕೆ ಪದ್ಮಸಂಭವನು ಪಿತಾಮಹನೆನಿಸಿಕೊಳ್ಳುವನು; ಆತನಿಗೆ ಜನಕನಾದ್ದರಿಂದ ಶ್ರೀಮನ್ನಾರಾಯಣನು ಲೋಕಗಳಿಗೆ ಪ್ರಪಿತಾಮಹನೆನಿಸಿಕೊಳ್ಳುವನು' ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು."

## ೪೮ನೇ ಅಧ್ಯಾಯ.—ಅರ್ಘ್ಯೋಪಹರಣಪರ್ವಶೇಷ.

ಅನಂತರದಲ್ಲಿ: ಭೀಷ್ಮನು ಧರ್ಮರಾಯನನ್ನು ಕುರಿತು ಇಂತೆಂದನು:

"ಕೇಳು ಧರ್ಮರಾಯನೆ, ನಾರಾಯಣನಾಗಿ ಹರಿಯಾಗಿ ಮಹಾನುಭಾವನಾಗಿರುವ ಈ ಶ್ರೀಕೃಷ್ಣನು ಲೋಕಸಂರಕ್ಷಣಾರ್ಥವಾಗಿ ಬ್ರಹ್ಮನಾಗಿಯೂ ಸೂರ್ಯಚಂದ್ರರಾಗಿಯೂ ಧರ್ಮವಾಗಿಯೂ ಮತ್ತು ಬಹುರೂಪಗಳಿಂದ ಹುಟ್ಟುವದನ್ನು—ಈತನ ದಿವ್ಯಾವತಾರಗಳನ್ನು—ವಿವರಿಸುತಲಿದೇನೆ ಕೇಳು: ದೇವದೇವನಾದ ಜಗನ್ನಾಥನು ಸಾವಿರ ಯುಗಗಳು ಯೋಗನಿದ್ರೆಯನ್ನು ಮಾಡಿ ಎಚ್ಚರಿತುಕೊಂಡು ಪ್ರಪಂಚವನ್ನು ನಿರ್ಮಿಸುವದಕ್ಕೋಸ್ಕರ ಬ್ರಹ್ಮ ಕಪಿಲ ಪರಮೇಷ್ಠಿ ಮೊದಲಾದ ದೇವತೆಗಳನ್ನೂ ಮನುಶಂಕರ ಸನತ್ಕುಮಾರರನ್ನೂ ಸಪ್ತಋಷಿಗಳನ್ನೂ ಸೃಜಿಸಿದನು. ಸ್ಥಾವರಜಂಗಮಾತ್ಮಕವಾದ ಈ ಲೋಕವು ದೇವ ದಾನವ ಗರುಡೋರಗರು ಮೊದಲಾದವರು ಇಲ್ಲದೆ ಸಮುದ್ರಮಧ್ಯದಲ್ಲಿ ಮುಳುಗಿರಲು, ಯುದ್ಧಾಭಿಲಾಷೆಯುಳ್ಳವರಾಗಿ ಜಯಿಸುವದಕ್ಕೆ ಅಶಕ್ಯರಾಗಿ ಮೃಣ್ಮಯ ಶರೀರಿಗಳಾಗಿ ಸಹೋದರರಾಗಿ ಮಧುಕೈಟಭರೆಂಬ ಇಬ್ಬರು ರಾಕ್ಷಸರು ಈ ಕೃಷ್ಣನ ಕರ್ಣಮಲಗಳ ದೆಸೆಯಿಂದ ಹುಟ್ಟಿ ಪ್ರಳಯಸಾಗರ ಮಧ್ಯದಲ್ಲಿ ಮುಳುಗಿದ್ದರು. ಆ ಸಮಯದಲ್ಲಿ ಬ್ರಹ್ಮದೇವನಿಂದ ನಿಯೋಗಿಸಲ್ಪಟ್ಟ ವಾಯುವು ಅವರ ದೇಹಗಳನ್ನು ಹೊಕ್ಕು ಪ್ರಾಣಸ್ವರೂಪವಾಗಿ ನೆಲಸಿಕೊಂಡಿದ್ದನು. ಅಷ್ಟದಿಕ್ಕುಗಳಲ್ಲಿ ಪರಿಪೂರ್ಣವಾದ ಶರೀರಗಳಿಂದ ಒಪ್ಪುತ್ತಲಿರುವ ಆ ದಾನವರ ಸಮೀಪಕ್ಕೆ ಹೋಗಿ ಬ್ರಹ್ಮದೇವನು ಹಸ್ತಸ್ಪರ್ಶವನ್ನು ಮಾಡಿ ಕಠಿನ ಶರೀರವುಳ್ಳಂಥಾವನಿಗೆ 'ಕೈಟಭನು' ಎಂತಲೂ ಮೃದುಶರೀರವುಳ್ಳಂಥಾವನಿಗೆ 'ಮಧು' ಎಂತಲೂ ಹೆಸರಿಕ್ಕಿದನು. ಆ ದೈತ್ಯರು ಬಲಪರಾಕ್ರಮ ಗರ್ವಿತರಾಗಿ ಸಕಲ ಲೋಕಗಳಲ್ಲಿಯೂ ನಿರ್ಭಯದಿಂದ ಸಂಚರಿಸುತ ಯುದ್ಧಕುತೂಹಲರಾಗಿ ಸತ್ಯಲೋಕಕ್ಕೆ ಹೋಗಲು; ಅವರನ್ನು ನೋಡಿ ಹಿರಣ್ಯಗರ್ಭನು ಮಹಾಸಲಿಲ ಮಧ್ಯದಲ್ಲಿ ಮುಳುಗಿ ಮಹಾವಿಷ್ಣುವಿನ ನಾಭಿಯಲ್ಲಿ ಹುಟ್ಟಿರುವ ದಿವ್ಯ ಕಮಲವನ್ನು ಪ್ರವೇಶಿಸಿ ಅನೇಕ ದಿವ್ಯ ಯುಗಗಳು ಜಲಮಧ್ಯದಲ್ಲಿ ಚಾಂಚಲ್ಯವನ್ನು ಬಿಟ್ಟಿದ್ದನು. ಆ ಬಳಿಕ ಬಹುಕಾಲ ಉದಕದಲ್ಲಿ ತಿರುಗಿ ಆ ಮಧುಕೈಟಭರು ಯುದ್ಧಸನ್ನದ್ಧರಾಗಿ ತನ್ನ ಸಮೀಪಕ್ಕೆ ಬಂದದ್ದನ್ನು ನೋಡಿ ಮಹಾವಿಷ್ಣುವು ಕೋಪದಿಂದ ಕೆಂಪಾದ ಕಣ್ಣುಗಳುಳ್ಳಂಥಾವನಾಗಿ ಶೀಘ್ರವಾಗಿ ಎದ್ದು ಅನೇಕ ದಿವ್ಯ ಸಹಸ್ರ ವರ್ಷಗಳು ಏಕಾರ್ಣವವಾದ ತ್ರೈಲೋಕ್ಯದಲ್ಲಿ ಅತಿಘೋರವಾದ ಯುದ್ಧವನ್ನು ಮಾಡಿದನು. ದಾನವರು ಬಹುಪ್ರಕಾರವಾಗಿ ಪೆಟ್ಟುಬಿದ್ದು ಆ ಮಹಾವಿಷ್ಣುವನ್ನು ನೋಡಿ 'ಮಹಾತ್ಮನೆ, ನಿನ್ನ ಯುದ್ಧಕ್ಕೆ ಸಂತೋಷಪಟ್ಟೆವು; ಈ ಲೋಕದಲ್ಲಿ ನೀನೇ ಮುಖ್ಯನಾದ್ದರಿಂದ ಯುದ್ಧದಲ್ಲಿ ನಿನ್ನಿಂದ ಮೃತಿಯನ್ನೈದುತಲಿದ್ದೇವೆ; ನಮ್ಮನ್ನು ಉದಕವಿಲ್ಲದ ತಾವಿನಲ್ಲಿ ವಧಿಸು; ನಮ್ಮನ್ನು ಯಾವ ಪುರುಷನು ವಧಿಸುತಲಿದಾನೆಯೊ ಆತನಿಗೆ ನಾವು ಮಕ್ಕಳಾಗಿ ಹುಟ್ಟುತಲಿದೇವೆ' ಅಂದರು. ನಾರಾಯಣನು 'ಹಾಗೇ ಹಾಗಲೀ' ಎಂದು ಆ ಇಬ್ಬರನ್ನೂ ಎರಡು ಕೈಗಳಿಂದ ಹಿಡಿದು ತೊಡೆಗಳಲ್ಲಿರಿಸಿಕೊಂಡು ಉದಕಮಧ್ಯದಲ್ಲಿ ಹಾಕಿದನು. ಆಗ ಅವರಿಬ್ಬರ ಶಿರಸ್ಸುಗಳು ಕೂಡಿ ಒಂ

ವಾಗಿ ಉದಕದ ತೆರೆಗಳಲ್ಲಿ ತೇಲಿಯಾಡಲು, ಮೇದೋಭರವು ಹೊರಟು ಉದಕವನ್ನು ಆಕ್ರಮಿಸಿತು. ಆ ಮೇಲೆ ಶ್ರೀವಾಸುದೇವನು ಚರಾಚರಾತ್ಮಕವಾದ ಭೂತಗಳನ್ನು ಸೃಜಿಸಿದನು ; ಈ ಭೂಮಿಯು ಅಸುರರ ಕಳೇಬರಗಳ ದೆಸೆಯಿಂದ ಹೊರಟ ಮೇದಸ್ಸಿನಿಂದ ಪ್ರಾಪ್ತವಾದ್ದರಿಂದ 'ಮೇದಿನಿ' ಎಂಬ ಹೆಸರಿನಿಂದ ಪ್ರಸಿದ್ಧವಾಗಿ ಆ ಕೈಟಭಾಂತಕನ ಕೃಪಾವಿಶೇಷದಿಂದ ಶಾಶ್ವತವಾಗಿ ನಿಂತಿತು."

---

೪೯ ನೇ ಅಧ್ಯಾಯ.—ಅರ್ಘ್ಯಾಭಿಹರಣಪರ್ವಶೇಷ. (ಶ್ರೀಕೃಷ್ಣವರ್ಣನೆ).

"ಕೇಳು ಧರ್ಮರಾಯನೇ, ಹಾಗೆ ಸಮುದ್ರಮಧ್ಯದಲ್ಲಿ ಮಲಗಿರುವ ಪದ್ಮನಾಭನ ನಾಭೀಕಮಲದ್ದೆಸೆಯಿಂದ ಆತನ ಅಂಶಭೂತರಾದ ಚತುರ್ಮುಖ ಮೊದಲಾದ ದೇವಋಷಿಗಣಗಳು ಹುಟ್ಟಿದವರಾದ್ದರಿಂದ ಅದು ಪೌಷ್ಕರಕಾವತಾರವೆನಿಸಿಕೊಳ್ಳುವದು. ಆ ಜಗದೀಶ್ವರನಿಗೆ ಇಂಥಾ ಅವತಾರಗಳು ಅನೇಕಸಾವಿರಗಳಾಗಿರುವವು ಎಂದು ಪ್ರಸಿದ್ಧವಾಗಿರುವದು ; ಅವುಗಳನ್ನು ವಿವರಿಸುವದಕ್ಕೆ ಬ್ರಹ್ಮರುದ್ರಾದಿಗಳಿಗೂ ಶಕ್ಯವಲ್ಲದೇ ಇರುವದರಿಂದ ನಾನು ತಿಳಿದಷ್ಟು ಹೇಳುತಲಿದೇನೆ. ಪುರಾಣಪುರುಷನಾಗಿ ವೇದಾಂತವೇದ್ಯನಾಗಿ ಸುರಶ್ರೇಷ್ಠನಾದ ಆ ಮಹಾವಿಷ್ಣುವು ಪರ್ವತವನಸಮೇತವಾಗಿ ಸಮುದ್ರಮಧ್ಯದಲ್ಲಿ ಮುಳುಗಿರುವ ಭೂಮಿಯನ್ನು ಎತ್ತುವದಕ್ಕೆ ಅವತರಿಸಿರುವ ಯಜ್ಞವರಾಹಾವತಾರವನ್ನು ತಿಳುಹಿಸುತಲಿದೇನೆ ಕೇಳು : ನಾಲ್ಕುವೇದಗಳೂ ಯೂಪಗಳು ಭಯಂಕರವಾದ ಕೋರೆಹಿಗಳು, ಯಜ್ಞಗಳು ದಂತಗಳು, ನಗುನವು ಮುಖವಿವರವು, ಅಗ್ನಿಹೋತ್ರನು ನಾಲಿಗೆಯು, ದರ್ಭೆಗಳು ರೋಮಗಳು, ಮಂತ್ರಸಮೂಹವು ಶಿರಸ್ಸು, ಅಹೋರಾತ್ರಗಳು ನೇತ್ರಗಳು, ವೇದಗಳು ಶ್ರುತಿಭೂಷಣಗಳು, ಆಜ್ಯವು ಮೂಗು, ಸ್ರುವಪಾತ್ರೆಗಳು ಸೊಳ್ಳೆಯು, ಸಾಮಗಾನವು ಘುರಘುರ ಧ್ವನಿಯು, ಸತ್ಯಧರ್ಮ ಕೀರ್ತಿಗಳು ಶರೀರ ಕಾಂತಿಗಳು, ಕ್ರಿಯಾಕಲಾಪಗಳು ಪಾದವಿನ್ಯಾಸಗಳು, ಪ್ರಾಯಶ್ಚಿತ್ತವು ಮುಖವು, ಪಶುಬಂಧಗಳು ಮೊಳಕಾಲುಗಳು, ಉದ್ಗಾತೃಹೋಮವು ಲಿಂಗವು, ಪಶುಗಳು ವ್ರೀಹೀಯುವಾದಿ ಬೀಜಗಳು, ಔಷಧೀ ಬಾಹ್ಯಾಭ್ಯಂತರ ಶರೀರಗಳು, ಮಂತ್ರಗಳು ಶಲ್ಯಗಳು, ಯಜ್ಞವೇದಿಗಳು ಸ್ಕಂಧಗಳು, ಹವಿಸ್ಸು ಗಂಧಗಳು, ಹವ್ಯಕವ್ಯಗಳು ವೇಗವು, ಪ್ರಾಗ್ವಂಶವು ಶರೀರವು, ದಕ್ಷಿಣ ಹೃದಯವು ಪಶುಪಾಕರಣವು, ಬಾಷ್ಪಗಳು ಪ್ರವರ್ಗ್ಯಹೋಮವು, ಸುಳಿಯು ಯಜ್ಞಶಾಲೆಯು ಉಳ್ಳಂಥಾವನಾಗಿ ತಪೋನಿಧಿಯಾಗಿ ಪ್ರಾಯಶ್ಚಿತ್ತಮಯನಾಗಿ ಧರ್ಮಾರ್ಥಕನಾಗಿ ಮನೋಹರಾಕಾರನಾಗಿ ತೇಜೋಧುರಂಧರನಾಗಿ ಯೋಗೀಶ್ವರ ಕವೀಶ್ವರನಾಗಿ ಮಣಿಶೃಂಗಪರ್ವತಾಕಾರನಾಗಿ ಯಜ್ಞವರಾಹಮೂರ್ತಿಯಾಗಿ ಅವತರಿಸಿರುವ ಪುರಾಣಪುರುಷನಾದ ನಾರಾಯಣನು ಮಹಾಜಲದ ಮಧ್ಯೆ ಮುಳುಗಿರುವ ತನ್ನ ಕಾಂತೆಯಾದ ಭೂದೇವಿಯನ್ನು ಮಾರ್ಕಂಡೇಯನು ನೋಡುತ್ತಿರಲು, ಸಕಲಲೋಕ ಸಂರಕ್ಷಣಾರ್ಥವಾಗಿ ದಂಷ್ಟ್ರಾಗ್ರದಿಂದ ಉದ್ಧರಿಸಿ ಚರಾಚರಾತ್ಮಕವಾದ ಪ್ರಪಂಚವನ್ನು ಸೃಜಿಸಿ ತ್ರಿಲೋಕಕಂಟಕರಾದ ದೈತ್ಯದಾನವರನೇಕರನ್ನು ಸಂಹರಿಸಿದನು ; ಇದು ವರಾಹಾವತಾರ ಕ್ರಮವು. ಇನ್ನು ಹಿರಣ್ಯಕಶಿಪುವನ್ನು ಸಂಹರಿಸುವದಕ್ಕೆ ಅವತರಿಸಿದ ಶ್ರೀಜಗನ್ನಾಥನ ನೃಸಿಂಹಾವತಾರ ಮಹಿಮೆಯನ್ನು ತಿಳುಹಿಸುತಲಿದೇನೆ."

---

೫೦ ನೇ ಅಧ್ಯಾಯ.—ಅರ್ಘ್ಯಾಭಿಹರಣಪರ್ವಶೇಷ. (ಶ್ರೀಕೃಷ್ಣವರ್ಣನೆ.)

"ಎಲೈ ಧರ್ಮರಾಯನೆ, ಪೂರ್ವದಲ್ಲಿ ದನುಜಕುಲಾಧ್ಯಕ್ಷನಾಗಿ ಬಲಪರಾಕ್ರಮ ಗರ್ವಿತನಾಗಿ ತ್ರೈಲೋಕ್ಯಕಂಟಕನಾದ ಹಿರಣ್ಯಕಶಿಪುವೆಂಬ ಅಸುರಶ್ರೇಷ್ಠನು ಉಪವಾಸವ್ರತನಾಗಿ ಮೌನನಿಷ್ಠನಾಗಿ ಶಮದಮಾದಿ ಸಂಪನ್ನನಾಗಿ ಬ್ರಹ್ಮಚರ್ಯ ವ್ರತನಿಷ್ಠನಾಗಿ ಹಿಮವತ್ಪರ್ವತದಲ್ಲಿ ಬ್ರಹ್ಮದೇವನನ್ನು ಕುರಿತು ಹನ್ನೊಂದುಸಾವಿರದ ಐನೂರು ವರುಷಗಳು ಅತಿಘೋರವಾದ ತಪಸ್ಸನ್ನು ಮಾಡಿದನು. ಆತನ ಶಮದಮಾದಿ ಸಂಪತ್ತಿಗೆ ಬಹು ಸಂತೋಷಪಟ್ಟು

ಬ್ರಹ್ಮದೇವನು ಸೂರ್ಯನೋಪಾದಿಯಲ್ಲಿ ಪ್ರಕಾಶಿಸುವಂಥಾದ್ದಾಗಿ ರಾಜಹಂಸಯುಕ್ತವಾಗಿರುವ ವಿಮಾನವನ್ನು ಏರಿ ದ್ವಾದಶಾದಿತ್ಯರು ಏಕಾದಶ ರುದ್ರರು ದಶದಿಕ್ಕುಗಳು ನವಗ್ರಹಗಳು ಅಷ್ಟವಸುಗಳು ಸಪ್ತಋಷಿಗಳು ಅಶ್ವಿನೀದೇವತೆಗಳು ಸಿದ್ಧ ಸಾಧ್ಯ ಗರುಡ ಗಂಧರ್ವ ಕಿನ್ನರ ಕಿಂಪುರುಷ ಪ್ರಮುಖರು ನದೀನದಗಳು ಸಮುದ್ರಗಳು ನಕ್ಷತ್ರಗಳು ಮುಹೂರ್ತಗಳು ದೇವರ್ಷಿಗಳು ರಾಜರ್ಷಿಗಳು ಅಪ್ಸರೋಗಣಗಳೂ ಸುತ್ತಿಕೊಂಡು ಓಲಗಿಸಲು, (ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಬ್ರಹ್ಮದೇವನು) ಆತನ ಸಮೀಪಕ್ಕೆ ಹೋಗಿ 'ಎಲೈ ಬಾಲಕನೆ, ನಿನ್ನ ತಪೋಮಹಿಮೆಯಿಂದ ಸಂತೋಷಪಟ್ಟೆನು; ಬೇಕಾದ ವರಗಳನ್ನು ಕೇಳು ಕೊಡುತಲಿದೇನೆ; ನಿನ್ನ ಅಭೀಷ್ಟವನ್ನು ವಿವರಿಸು' ಅಂದನು. ಆ ದಾನವೇಂದ್ರನು ಕೈಮುಗಿದು ಬ್ರಹ್ಮದೇವನನ್ನು ಕುರಿತು ಇಂತೆಂದನು: 'ದೇವಾಸುರ ಗಂಧರ್ವರ ದೆಸೆಯಿಂದಲೂ ಯಕ್ಷ ರಾಕ್ಷಸೋರಗರ ದೆಸೆಯಿಂದಲೂ ಮನುಷ್ಯ ಪಿಶಾಚರ ದೆಸೆಯಿಂದಲೂ ಮಹಾಋಷಿಗಳ ಶಾಪದ್ದೆಸೆಯಿಂದಲೂ ಶಸ್ತ್ರಾಸ್ತ್ರಗಳ ದೆಸೆಯಿಂದಲೂ ಪರ್ವತಗಳ ದೆಸೆಯಿಂದಲೂ ವೃಕ್ಷಗಳ ದೆಸೆಯಿಂದಲೂ ಪಶುಪಕ್ಷಿ ಮೃಗಗಳ ದೆಸೆಯಿಂದಲೂ ಶುಷ್ಕಾರ್ದ್ರದ್ರವ್ಯಗಳ ದೆಸೆಯಿಂದಲೂ ಭೂಮಿಯಲ್ಲೂ ಅಂತರಿಕ್ಷದಲ್ಲೂ ಹಗಲಿನಲ್ಲೂ ರಾತ್ರಿಯಲ್ಲೂ ಸ್ವರ್ಗದಲ್ಲಿಯೂ ಅಂತಃಪ್ರದೇಶಗಳಲ್ಲಿಯೂ ಬಹಿಃಪ್ರದೇಶಗಳಲ್ಲಿಯೂ ನನಗೆ ಮರಣವಿಲ್ಲದ ಹಾಗೆ ವರವನ್ನು ಕೊಡಬೇಕು' ಅಂದನು. ಬ್ರಹ್ಮದೇವನು 'ಹಾಗೆ ಆಗಲಿ!' ಎಂದು ವರವನ್ನು ಕೊಟ್ಟು ಆತನ ಮನೋರಥವನ್ನು ನೆರವೇರಿಸಿ ಋಷಿಗಣ ಸಮೇತನಾಗಿ ಸತ್ಯಲೋಕಕ್ಕೆ ಹೋದನು. ಆ ಬಳಿಕ ಗಂಧರ್ವರು ಮೊದಲಾದ ದೇವಸಮೂಹಗಳು ಆತನಿಗೆ ವರವನ್ನು ಕೊಟ್ಟದ್ದನ್ನು ಕೇಳಿ ಬ್ರಹ್ಮದೇವನ ಸಮೀಪಕ್ಕೆ ಹೋಗಿ 'ಎಲೈ ಮಹಾತ್ಮನೆ, ಆ ದಾನವನಿಗೆ ಹೀಗೆ ಮರಣವಿಲ್ಲದಿರುವ ರೀತಿಗೆ ನೀವು ಅನುಗ್ರಹಿಸಿದವರಾದ್ದರಿಂದ ಇನ್ನುಮೇಲೆ ಆತನು ಸಕಲ ಲೋಕಗಳನ್ನೂ ಜಯಿಸದೇ ಬಿಡುವನೆ! ಆದ್ದರಿಂದ ಸರ್ವಭೂತೇಶ್ವರನಾಗಿ ಸ್ವಯಂಭುವಾಗಿ ಪ್ರಪಂಚ ಸೃಷ್ಟಿಕರ್ತನಾಗಿ ಶಾಶ್ವತನಾಗಿ ಮಹಾನುಭಾವನಾದ ನೀನೇ ಆತನನ್ನು ಕೊಲ್ಲುವದಕ್ಕೆ ಉಪಾಯವನ್ನು ಯೋಚಿಸಬೇಕು' ಅಂದರು. ಬ್ರಹ್ಮದೇವನು ದೇವತೆಗಳನ್ನು ದಯಾದೃಷ್ಟಿಯಿಂದ ನೋಡಿ 'ಕೇಳಿರೈ ದೇವತೆಗಳಿರಾ, ಆ ಅಸುರನು ಮಾಡಿದ ಕ್ರೂರತಪಸ್ಸಿಗೆ ಅಂಥಾ ವರವನ್ನು ಕೊಡಬೇಕಾಯಿತು; ಆದರೂ ಆತನ ಸುಕೃತಫಲವು ತೀರಿದ ಮೇಲೆ ಮಹಾವಿಷ್ಣುವು ಯಾವರೀತಿಯಿಂದಲಾದರೂ ಕೊಂದುಹಾಕುತಲಿದಾನೆ' ಅಂದನು. ಆ ವಾಕ್ಯವನ್ನು ಕೇಳಿ ಸಮಸ್ತರಾದ ದೇವತೆಗಳೂ ಸಂತೋಷಪಡುತ ತಮ್ಮ ತಮ್ಮ ಸ್ಥಾನಗಳಿಗೆ ಹೋದರು.

"ಕೇಳು ಧರ್ಮರಾಯನೆ, ಆ ಬಳಿಕ ವರದಾನದಿಂದ ಗರ್ವಿತನಾದ ಆ ದೈತ್ಯೇಂದ್ರನು ತನ್ನ ಭುಜಬಲದಿಂದ ಸಕಲ ಲೋಕಗಳಿಗೆ ಬಾಧೆಯನ್ನು ಮಾಡುತ, ಅನೇಕ ದೈತ್ಯಸೇನಾಪರಿವೃತನಾಗಿ ಚಕ್ರವಾಳ ಪರಿವೃತವಾದ ಸಪ್ತದ್ವೀಪಗಳನ್ನೂ ದಿವ್ಯಗಳಾದ ಲೋಕಾಂತರಗಳನ್ನೂ ಸ್ವಾಧೀನಮಾಡಿಕೊಂಡು, ಬಹುಭೋಗಗಳನ್ನು ಅನುಭವಿಸುತ, ಸ್ವರ್ಗವನ್ನು ಆಕ್ರಮಿಸಿ, ಮದೋನ್ಮತ್ತನಾಗಿ, ಚಂದ್ರಸೂರ್ಯರು ಅಗ್ನಿವಾಯುಗಳು ವರುಣ ಯಮರು ಇಂದ್ರನು ಕುಬೇರನು ಕಿಂಪುರುಷರು ಹತ್ತುದಿಕ್ಕುಗಳು ಅಂತರಿಕ್ಷವು ನಕ್ಷತ್ರಗಳು ಉದಕವು ಕಾಮಕ್ರೋಧಗಳೂ ತಾನೇ ಆಗಿರಬೇಕೆಂದೆಣಿಸಿ, ಅವರ ಸ್ಥಾನಗಳಷ್ಟನ್ನೂ ಪರಾಕ್ರಮದಿಂದ ಆಕ್ರಮಿಸಿ, ಸಕಲ ದೇವತೆಗಳಿಂದ ಆಗುವಂಥಾ ಕೃತ್ಯಗಳನ್ನು ತಾನೇ ಮಾಡುತ, ಸತ್ಯಧರ್ಮನಿರತರಾಗಿ ಜಿತೇಂದ್ರಿಯರಾಗಿ ವ್ರತಪರಾಯಣರಾಗಿ ಮಹಾನುಭಾವರಾದ ಮುನೀಶ್ವರರ ಆಶ್ರಮಗಳನ್ನು ಹೊಂದಿ, ಅವರನ್ನು ಬಹುಪ್ರಕಾರವಾಗಿ ಬಾಧಿಸುತ, ಯಜ್ಞಾರ್ಹರಾದ ದೇವತೆಗಳನ್ನು ಪರಿಹರಿಸಿ, ಅಸುರರನ್ನು ಯಾಗಗಳನ್ನು ತಕ್ಕೊಳ್ಳುವದಕ್ಕೆ ಯೋಗ್ಯರಾಗಿ ಮಾಡಿ, ಮತ್ತೂ ದೇವತೆಗಳು ಎಲ್ಲಿ ಹೋಗಿ ಅಡಗಿದ್ದರೂ ಅಲ್ಲಿಗೆ ಹೋಗಿ ಆ ಸ್ಥಳಗಳನ್ನು ಸ್ವಾಧೀನಮಾಡಿಕೊಂಡು, ಐದುಕೋಟಿಯೂ ಅರವತ್ತೊಂದು ಲಕ್ಷದ ಅರವತ್ತೊಂದು ಸಾವಿರ ವರುಷಗಳು ದಿವ್ಯ ಭೋಗಾನುಭವದಿಂದ ಸಂತುಷ್ಟಹೃದಯನಾಗಿದ್ದನು. ಆ ಅಸುರನ ದೆಸೆಯಿಂದ ಭಯಾರ್ತರಾದ ಇಂದ್ರಾದಿ ದೇವತೆಗಳು ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮದೇವನಿಗೆ ಸಾಷ್ಟಾಂಗ ದಂಡಪ್ರಣಾಮಗಳನ್ನು ಮಾಡಿ, ಜಯಶಬ್ದಗಳಿಂದ ಸ್ತುತಿಸಿ, ಕೈಮುಗಿದು 'ಸ್ವಾಮಿ

ಬ್ರಹ್ಮದೇವನೆ, ಹಿರಣ್ಯಕಶಿಪುವಿನಿಂದ ಯಾವಾಗಲೂ ಪೀಡಿತರಾಗಿ ಶರಣುವನ್ನೈದಿದ ನಮ್ಮನ್ನು ಕೃಪಾಕಟಾಕ್ಷದಿಂದ ನೋಡಿ ರಕ್ಷಿಸು ' ಎಂದು ಪ್ರಾರ್ಥಿಸಿದರು. ಬ್ರಹ್ಮದೇವನು ಅವರನ್ನು ನೋಡಿ ' ನಿಮಗೆ ಒಂದು ರಹಸ್ಯವನ್ನು ಹೇಳುತಲಿದೇನೆ ಕೇಳಿ : ಪುರುಷೋತ್ತಮನಾಗಿ ವಿಶ್ವಶರೀರಿಯಾಗಿ ಕೋಟಿಸೂರ್ಯಪ್ರಕಾಶಮಾನನಾಗಿ ಅವ್ಯಕ್ತನಾಗಿ ಅಚಿಂತನಾಗಿ ನಾಶರಹಿತನಾಗಿ ಸರ್ವಭೂತೇಶ್ವರನಾಗಿ ಪ್ರಕೃತಿಗಿಂತಲೂ ಪರನಾಗಿರುವ ನಾರಾಯಣನು ನಮಗೆ ರಕ್ಷಕನಾಗಿದ್ದಾನೆ; ಆತನ ದೆಸೆಯಿಂದ ನಾನು ಹುಟ್ಟಿದೆ; ನನ್ನ ದೆಸೆಯಿಂದ ಪ್ರಪಂಚವು ಹುಟ್ಟಿತು; ನಿಮಗಷ್ಟೊ ಲಕ್ಷ್ಮೀಕಾಂತನು ಹ್ಯಾಗೆ ಅಧೀಶ್ವರನೊ ಹಾಗೆ ನನಗೂ ಆತನೇ ಆದೀಶ್ವರನಾದ್ದರಿಂದ ಯಾವರೀತಿಯಿಂದ ನೋಡಿದರೂ ಆ ದೈತ್ಯನನ್ನು ಆ ಮಹಾವಿಷ್ಣುವೇ ಸಂಹರಿಸುತಲಿದಾನೆ; ಆತನಿಗೆ ಅಸಾಧ್ಯವಾದ ಕಾರ್ಯವು ಲೋಕದಲ್ಲಿಲ್ಲಾ; ನಾವಷ್ಟು ಮಂದಿಯೂ ನಾರಾಯಣನ ಸಂದರ್ಶನಕ್ಕೆ ಹೋಗಬೇಕು ' ಎಂದು ನುಡಿದು, ಆದಿತ್ಯರು ಮರುತ್ತುಗಳು ವಿಶ್ವೇದೇವತೆಗಳು ವಸುಗಳು ರುದ್ರರು ಮಹಾಋಷಿಗಳು ಅಶ್ವಿನೀದೇವತೆಗಳು ಮೊದಲಾದ ದೇವತೆಗಳು ತನ್ನನ್ನು ಸುತ್ತಿಕೊಂಡು ಬರಲು, ಕ್ಷೀರಸಾಗರಕ್ಕೆ ಹೋಗಿ, ಅದರ ಮಧ್ಯಪ್ರದೇಶದಲ್ಲಿರುವ ಶ್ವೇತದ್ವೀಪದಲ್ಲಿ ಶೇಷಶಯನನಾಗಿ ದೇದೀಪ್ಯಮಾನನಾಗಿ ಶಾಶ್ವತನಾಗಿ ವೇದಮಯನಾಗಿ ಸಕಲ ಮಂತ್ರಪ್ರತಿಪಾದಿತನಾಗಿ ಸರ್ವಶಕ್ತಿಸಂಪನ್ನನಾಗಿ ಲೋಕತ್ರಯಾತ್ಮಕನಾಗಿ ಜಗತ್ಪೂಜ್ಯನಾಗಿ ಅನಂತನಾಗಿರುವ ಲಕ್ಷ್ಮೀಪತಿಯನ್ನು ನೋಡಿ, ಭಕ್ತಿಯಿಂದ ಪುಳುಕಾಂಕಿತವಾದ ಶರೀರವುಳ್ಳವನಾಗಿ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ' ಎಲೈ ಪುಂಡರೀಕಾಕ್ಷನೆ, ಶರಣಾಗತರಾದ ನಮ್ಮನ್ನು ಕೃಪಾದೃಷ್ಟಿಯಿಂದ ನೋಡಿ ಭುವನ ಭಯಂಕರನಾದ ಅಸುರೇಶ್ವರನನ್ನು ನಿಗ್ರಹಿಸಿ ಲೋಕಗಳನ್ನು ರಕ್ಷಿಸು ' ಎಂದು ಪ್ರಾರ್ಥಿಸಿದನು. ಬ್ರಹ್ಮದೇವನು ಮೊದಲಾದ ಸಕಲ ದೇವತಾ ಸಮೂಹವನ್ನು ನೋಡಿ ಮನ್ಮಥಜನಕನಾದ ಮಹಾವಿಷ್ಣುವು ' ಎಲೈ ದೇವತೆಗಳಿರಾ, ನಿಮಗೆ ಅಭಯವನ್ನು ಕೊಟ್ಟೆನು; ನಿರ್ಭಯದಿಂದ ನೀವು ನಿಮ್ಮ ಸ್ಥಾನಗಳಿಗೆ ಹೋಗೀ; ದಾನವ ಸೇನೆಯೊಡನೆ ಕೂಡಿ ಸುರಾಸುರರಿಗೆ ಜಯಿಸುವದಕ್ಕೆ ಅಶಕ್ಯವಾದ ಹಿರಣ್ಯಕಶಿಪುವಿನನ್ನು ನಾನು ಈಗಲೇ ಸಂಹರಿಸುತಲಿದೇನೆ ' ಅಂದನು. ಆಗ ಸರ್ವೇಶ್ವರನನ್ನು ಕುರಿತು ಬ್ರಹ್ಮದೇವನಿಂತೆಂದನು : ' ಈ ದೇವತೆಗಳೆಲ್ಲರು ಖಿನ್ನರಾಗಿದ್ಧಾರೆ; ಆ ದೈತ್ಯನಿಗೆ ಕಾಲವು ಸನ್ನಿಹಿತವಾಗಿಧೆ; ಶೀಘ್ರದಲ್ಲಿ ಸುರದ್ರೋಹಿಯನ್ನು ನಿಗ್ರಹಿಸಬೇಕು ' ಎಂದು ಪ್ರಾರ್ಥಿಸಿದನು. ಲಕ್ಷ್ಮೀಕಾಂತನು ' ಹಾಗೇ ಆಗಲೀ ' ಎಂದು ಬ್ರಹ್ಮದೇವನು ಮೊದಲಾದ ದೇವತಾಸಮೂಹವನ್ನು ತಮ್ಮ ತಮ್ಮ ಸ್ಥಾನಗಳಿಗೆ ಕಳುಹಿಸಿ, ನೃಸಿಂಹರೂಪವನ್ನು ಧರಿಸಿ, ಕೈಯಿಂದ ಕೈಯನ್ನು ತೀಡುತ ಭೀಮಾಕಾರನಾಗಿ ಪ್ರಳಯಕಾಲಾಂತಕನೋಪಾದಿಯಲ್ಲಿ ಕೋಪಿಸಿಕೊಂಡು ದಾನವೇಂದ್ರನ ಸಮೀಪಕ್ಕೆ ಬಂದನು; ಅದ್ಭುತಾಕಾರದಿಂದ ಭಯಂಕರವಾದ ನೃಸಿಂಹಮೂರ್ತಿಯನ್ನು ನೋಡಿ ಕೋಪೋದ್ದೀಪಿತರಾಗಿ ದೈತ್ಯವೀರಭಟರು ಪಟುಪರಾಕ್ರಮಧುರೀಣರಾಗಿ ಅನೇಕ ಶಸ್ತ್ರಾಸ್ತ್ರಗಳನ್ನು ಒಮ್ಮಡಿಯಾಗಿ ಸುರಿದರು; ಆತನು ಅದಷ್ಟನ್ನೂ ನೂಕುತ ಅತಿಕಠಿನವಾದ ಪಾದಘಾತಗಳಿಂದ ಅನೇಕಸಾವರ ಸಂಖ್ಯೆಯುಳ್ಳ ದನುಜ ಸಮೂಹಗಳನ್ನು ಕೆಡಹುತ ಬರುತಿರಲು, ಕಪ್ಪಾದ ಮೇಘದೋಪಾದಿಯಲ್ಲಿ ಕಾಣಿಸುತಲಿರುವ ಶರೀರವುಳ್ಳವನಾಗಿ ಮೇಘಧ್ವನಿಯುಳ್ಳವನಾಗಿ ಮೇಘಸಮಾನವಾದ ವೇಗವುಳ್ಳಂಥಾ ಆ ದುಷ್ಟದೈತ್ಯನು ಅಕುಂಠಿತಪರಾಕ್ರಮಶಾಲಿಯಾದ ನೃಸಿಂಹಸ್ವಾಮಿಯಮೇಲೆ ಕಾಣಿಸಿಕೊಂಡು ಅತಿಘೋರವಾದ ಯುದ್ಧವನ್ನು ಮಾಡಿದನು; ಆಗ ನೃಸಿಂಹಸ್ವಾಮಿಯು ಕೋಪಿಸಿಕೊಂಡಿರುವ ಹೆಬ್ಬುಲಿಯು ಪರಾಕ್ರಮವುಳ್ಳಂಥಾವನಾಗಿ ಭುಜಬಲಪರಾಕ್ರಮಶಾಲಿಯಾದ ಆ ಹಿರಣ್ಯಕಶಿಪುವನ್ನು ಹಿಡಿದು ತನ್ನ ತೊಡೆಯಲ್ಲಿರಿಸಿಕೊಂಡು ವಜ್ರಾಯುಧ ಸಮಾನಗಳಾದ ತನ್ನ ನಖಗಳಿಂದ ಸಂಧ್ಯಾಸಮಯದಲ್ಲಿ ಹೊಸಲಿನಲ್ಲಿ ಅವನನ್ನು ಸಂಹರಿಸಿ ಸಕಲ ದೈತ್ಯರನ್ನೂ ಕೊಂದು ಮೂರುಲೋಕಗಳಿಗೂ ಸಂತೋಷವನ್ನು ಮಾಡಿದನು. ಇದು ನೃಸಿಂಹಾವತಾರ ವೈಭವವು. ಇನ್ನು ವಾಮನಾವತಾರ ವೃತ್ತಾಂತವನ್ನು ವಿವರಿಸುತಲಿದೇನೆ " ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

---

## ೪೯ನೇ ಅಧ್ಯಾಯ.—ಅರ್ಘ್ಯಾಪಹರಣ ಪರ್ವ ಶೇಷ. (ಶ್ರೀಕೃಷ್ಣವರ್ಣನೆ.)

ಆಬಳಿಕ ಭರತಕುಲ ಶ್ರೇಷ್ಠನಾದ ಭೀಷ್ಮನು ಧರ್ಮರಾಯನನ್ನು ಕುರಿತು "ಕೇಳು ಧರ್ಮನಂದನನೆ, ಪೂರ್ವದಲ್ಲಿ ತ್ರೇತಾಯುಗದಲ್ಲಿ ಪರಾಕ್ರಮಶಾಲಿಯಾಗಿ ಅಸಮಾನಬಲನಾಗಿ ವಿರೋಚನನ ಮಗನಾದ ಬಲಿ ಎಂಬ ದೈತ್ಯವಲ್ಲಭನು ದೈತ್ಯಸೇನಾಸಮೇತನಾಗಿ ನಡದು ಯುದ್ಧದಲ್ಲಿ ಮಹೇಂದ್ರನನ್ನು ಜಯಿಸಿ ಆತನಿಗೆ ವಾಸಸ್ಥಾನವಾದ ಅಮರಾವತೀಪಟ್ಟಣವನ್ನು ಆಕ್ರಮಿಸಿದನು. ದೇವೇಂದ್ರನು ಮೊದಲಾದ ಸಮಸ್ತ ದೇವತೆಗಳೂ ಭಯಭ್ರಾಂತರಾಗಿ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮದೇವನನ್ನು ಕರಕೊಂಡು ಕ್ಷೀರಸಾಗರಕ್ಕೆ ಹೋಗಿ ಸರ್ವೇಶ್ವರನಾದ ವಾಸುದೇವನನ್ನು ಬಹು ಪ್ರಕಾರವಾಗಿ ಸ್ತುತಿಸಿದರು. ಆರ್ತಜನರಕ್ಷಕನಾದ ಪುಂಡರೀಕಾಕ್ಷನು ಅವರಿಗೆ ಅಭಯವನ್ನು ಕೊಟ್ಟು ಕಳುಹಿಸಿ ದೇವಮಾತೆಯಾದ ಅದಿತಿ ಗರ್ಭದಲ್ಲಿ ವಿಷ್ಣು ನಾಮಧೇಯದಿಂದ ಇಂದ್ರನಿಗೆ ತಮ್ಮನಾಗಿ ಜನಿಸಿದನು. ಕೆಲವು ಕಾಲದಮೇಲೆ ಶೌರ್ಯಧುರ್ಯನಾದ ವಿರೋಚನನ ಮಗನು ಕ್ರತುಶ್ರೇಷ್ಠವಾದ ಅಶ್ವಮೇಧ ಯಜ್ಞವನ್ನು ಮಾಡುತ್ತಿರುವ ಸಮಯದಲ್ಲಿ ಆ ಉಪೇಂದ್ರನು ಶಿಖಾಯಜ್ಞೋಪವೀತವನ್ನೂ ಮುಂಡಿತವಾದ ಶಿರಸ್ಸನ್ನೂ ಪಾಲಾಶದಂಡವನ್ನೂ ಬ್ರಹ್ಮಚರ್ಯವನ್ನು ಧರಿಸಿ, ವಾಮನರೂಪದಿಂದ ಆತನ ಯಜ್ಞಶಾಲೆಯನ್ನು ಪ್ರವೇಶಿಸಿ, ಬಲಿಚಕ್ರವರ್ತಿಯ ಸನ್ನಿಧಾನವನ್ನು ಸೇರಿ, ದಕ್ಷಿಣೆ ಕೊಡುವ ಕಾಲದಲ್ಲಿ ತನಗೆ ಮೂರು ಹೆಜ್ಜೆಗಳ ಭೂಮಿಯನ್ನು ಕೊಡಬೇಕೆಂದು ಕೇಳಿದನು. ಬಲಿಯು ಹಾಗೆ ಕೊಡುವದಕ್ಕೆ ಸಮ್ಮತಿಸಿದನು. ಆಗ ವಟುವೇಷಧಾರಿಯಾದ ಆ ಅನಾದಿ ಬ್ರಹ್ಮಚಾರಿಯು ಹತ್ತುದಿಕ್ಕುಗಳಲ್ಲಿಯು ತುಂಬಿ ವಿಜೃಂಭಿಸುವಹಾಗೆ ತನ್ನ ಶರೀರವನ್ನು ಬೆಳಸಿ, ಸ್ವರ್ಗಮರ್ತ್ಯ ಪಾತಾಳಗಳನ್ನು ಮೂರು ಹೆಜ್ಜೆಗಳಿಂದ ಆಕ್ರಮಿಸಿದನು! ಆತನ ಪಾದ ವಿಕ್ಷೇಪದಿಂದ ಪೀಡಿತರಾಗಿ ಘೋರಾಕಾರಿಗಳಾಗಿ ಕುಲಪರ್ವತಗಳೋಪಾದಿಯಲ್ಲಿ ಉನ್ನತರಾಗಿ ವಿವಿಧ ವೇಷಧಾರಿಗಳಾಗಿ ಬಹುವಿಧಾಯುಧಹಸ್ತರಾಗಿ ರಕ್ತಮಾಲ್ಯಾಲಂಕೃತರಾಗಿ ಜಯಿಸುವದಕ್ಕೆ ಅಶಕ್ಯರಾದ ವಿಪ್ರಚಿತ್ತಿ ಮೊದಲಾದ ದೈತ್ಯಶ್ರೇಷ್ಠರು ಸಕಲ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಲು, ಅದಷ್ಟನ್ನೂ ಗಣನೆಮಾಡದೆ ಹಸ್ತಪಾದಘಾತಗಳಿಂದ ರಾಕ್ಷಸರನ್ನು ಕೊಂದು ಅತ್ಯಂತಪರಾಕ್ರಮದಿಂದ ಸಕಲ ಲೋಕಗಳನ್ನೂ ಭೂಮಂಡಲವನ್ನೂ ಆಕ್ರಮಿಸುತ ತ್ರಿವಿಕ್ರಮ ಮೂರ್ತಿಯು ವಿಜೃಂಭಿಸಿ ಬೆಳೆಯುತ್ತಿದ್ದನು! ಆ ಸಮಯದಲ್ಲಿ ಚಂದ್ರಾದಿತ್ಯರು ಕೆಲವು ಹೊತ್ತು ಆತನ ವಕ್ಷಸ್ಥಳದಲ್ಲಿ ತೋರಿ ಆ ಬಳಿಕ ನಾಭಿಪ್ರಮಾಣದಲ್ಲಿ ತೋರಿ ಅನಂತರದಲ್ಲಿ ಜಾನುಪ್ರಮಾಣದಲ್ಲಿ ತೋರುತ್ತಿದ್ದರು! ಹೀಗೆ ವೃದ್ಧಿಯನ್ನೈದುತ್ತಿರುವ ಸಮಯದಲ್ಲಿ ಆ ಮಹಾವಿಷ್ಣುವಿನ ಚರಣಾಂಗುಷ್ಟವನ್ನು ತಾಕಿ ಬ್ರಹ್ಮಾಂಡಭಾಂಡವು ಒಡೆದು ವರುಣಜಲವು ಆತನ ಪಾದಗಳ ಸಂಗಡಲೇಬಂದು ಗಂಗಾನದೀರೂಪದಿಂದ ಪಾತಾಳಲೋಕವನ್ನು ಪ್ರವೇಶಿಸಿತು! ಹೀಗೆ ಅತ್ಯುನ್ನತವಾಗಿ ಬೆಳದ ಆತನ ದಿವ್ಯದೇಹದಲ್ಲಿ ಪ್ರಪಂಚವಷ್ಟೂ ಶಿಕ್ಕಿಕೊಂಡಿದ್ದದ್ದರಿಂದ ಈತನಿಂದ ವ್ಯಾಪ್ತವಲ್ಲದೆ ಇರುವ ಪ್ರದೇಶವು ಇಲ್ಲಾ ಎಂದು ಸಕಲವಾದ ದೇವತೆಗಳೂ ಮೋಹದಿಂದ ಆತನ ತೇಜಸ್ಸನ್ನು ನೇತ್ರಗಳಿಂದ ನೋಡುವದಕ್ಕೆ ಅಶಕ್ಯರಾಗಿ ಸುಮ್ಮನೇ ಇದ್ದರು! ಹೇಳುವದಕ್ಕೆ ಅಶಕ್ಯವಾದ ಅಂಥಾ ಅದ್ಭುತ ಕಾರ್ಯಗಳನ್ನು ಮಾಡಿದರೂ ಸ್ವಲ್ಪವಾದರೂ ಆಶ್ಚರ್ಯಪಡದೆ ಈ ಮಹಾಪುರುಷನು ಸಕಲ ಸಂಪತ್ತಿನಿಂದ ಪರಿಪೂರ್ಣವಾಗಿರುವ ತ್ರೈಲೋಕ್ಯವನ್ನು ದೇವೇಂದ್ರನಿಗೆ ಕೊಟ್ಟನು; ಇದು ವೇದವೇದಾಂಗ ಪಾರಂಗತರಾದ ಬ್ರಾಹ್ಮಣರಿಂದ ಕೀರ್ತಿತವಾದ ವಾಮನಾವತಾರ ಪ್ರಕಾರವು. ಇನ್ನು ಮನುಷ್ಯಾವತಾರಗಳನ್ನು ಹೇಳುತಲಿದೇನೆ" ಎಂದು ಭೀಷ್ಮನು ಧರ್ಮರಾಯನಿಗೆ ವಿವರಿಸಿದನು.

## ೫೦ನೇ ಅಧ್ಯಾಯ.—ಅರ್ಘ್ಯಾಪಹರಣ ಪರ್ವ ಶೇಷ. (ಶ್ರೀಕೃಷ್ಣವರ್ಣನೆ.)

ಆ ಬಳಿಕ ಭೀಷ್ಮನು ಧರ್ಮರಾಯನನ್ನು ನೋಡಿ ಇಂತೆಂದನು : "ಕೇಳು ಕುಂತೀನಂದನನೆ, ಪೂರ್ವಕಾಲದಲ್ಲಿ ಧರ್ಮಗಳು ವೇದಗಳು ಯಾಗಾದಿ ಸತ್ಕರ್ಮಗಳು ಶಿಥಿಲವಾಗಿ ಚಾತುರ್ವರ್ಣ್ಯವೂ ಸಂಕರವಾಗಿ ಅಸತ್ಯವು ಹೆಚ್ಚಿ ಪ್ರಜೆಗಳಿಗೆ ನಾಶವು ಸಂಭವಿಸಲು ಈ ಕೃಷ್ಣನು ದತ್ತಾತ್ರೇಯ ಋಷಿಯಾಗಿ ಅವತರಿಸಿ, ಚಾತುರ್ವರ್ಣ್ಯವನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ವಿಂಗಡಿಸಿ, ಶ್ರುತಿಗಳು ವೇದಾಂಗಗಳು ಮೊದಲಾದವನ್ನು ಕ್ಷತ್ರಿಯರನ್ನೂ ತಿರಿಗೂ

ವುಂಟುಮಾಡಿ ವನದಲ್ಲಿ ತಪೋನಿಷ್ಠನಾಗಿದ್ದನು. ಆಗ ಆತನ ಸಮೀಪಕ್ಕೆ ಹೇಹಯದೇಶಾಧೀಶ್ವರನಾದ ಕಾರ್ತವೀರ್ಯಾರ್ಜುನನು ಬಂದು ಅತ್ಯಂತ ಭಕ್ತಿಯುಕ್ತನಾಗಿ ಅಹಂಕಾರ ಮಮಕಾರಾದಿಗಳನ್ನು ಬಿಟ್ಟು ಶಿಶ್ರೂಷೆಯನ್ನು ಮಾಡುತ ಬಹುಕಾಲವು ಪೂಜಿಸುತಿದ್ದನು. ಬುಧಜನ ಸೇವ್ಯಮಾನನಾಗಿ ಅತ್ಯಂತ ಹಿತನಾಗಿರುವ ದತ್ತಾತ್ರೇಯ ಮುನೀಂದ್ರನು ಸಂತುಷ್ಟಚಿತ್ತನಾಗಿ 'ನಿನಗೆ ಅಮರತ್ವವು ಒಂದು ಹೊರತಾಗಿ ಬೇಕಾದ ವರಗಳನ್ನು ಕೊಡುತಲಿದ್ದೇನೆ, ಬೇಡಿಕೊ' ಎನಲು ಆ ಅರ್ಜುನನು ವಿನಯದೊಡನೆ ಕೂಡಿ ಕೈಮುಗಿದು ಆತನನ್ನು ಕುರಿತು 'ಎಲೈ ಮಹಾತ್ಮನೆ, ನನಗೆ ಐಶ್ವರ್ಯವು ಔದಾರ್ಯವು ಸತ್ಯಭಾಷಣವು ಸುಸ್ಥಿರವಾದ ಬಲವು ಅಸೂಯ ಇಲ್ಲದಿರುವದು ಸಹಸ್ರ ಭುಜಗಳು ಉಂಟಾಗಬೇಕೆಂಬುವದು ಮೊದಲನೇ ವರವು; ಜರಾಯುಜಗಳು ಅಂಡಜಗಳು ಇವು ಮೊದಲಾದ ಚರಾಚರಾತ್ಮಕವಾದ ಪ್ರಪಂಚವನ್ನು ಧರ್ಮಮಾರ್ಗದಿಂದ ನಾನು ಪರಿಪಾಲಿಸಬೇಕೆಂಬುವದು ಎರಡನೇ ವರವು; ಸಮಸ್ತ ಶತ್ರುವರ್ಗಗಳನ್ನೂ ನಿಗ್ರಹಿಸಿ ನಾನಾ ಪ್ರಕಾರಗಳಾದ ಯಜ್ಞಗಳಿಂದ ಮಹೇಂದ್ರನು ಮೊದಲಾದ ದೇವತೆಗಳನ್ನೂ ಪಿತೃಗಳನ್ನೂ ಮುನೀಂದ್ರರನ್ನೂ ಬ್ರಾಹ್ಮಣರನ್ನೂ ಸಂತುಷ್ಟರಾಗುವ ಹಾಗೆ ಮಾಡುವದು ಮೂರನೇ ವರವು; ಸ್ವರ್ಗ ಮರ್ತ್ಯ ಪಾತಾಳ ಲೋಕಗಳಲ್ಲಿ ತ್ರಿಕಾಲಗಳಲ್ಲಿಯೂ ತನಗೆ ಸಮಾನನೂ ಅಧಿಕನಾಗಿರುವಂಥಾವನೂ ಯಾವ ಪುರುಷನಿಗೆ ಇಲ್ಲವೋ ಅಂಥಾ ಪುರುಷನಿಂದ ನನಗೆ ಮರಣವು ಲಭಿಸುವದು ನಾಲ್ಕನೇ ವರವು; ಹೀಗೆ ಅನುಗ್ರಹವನ್ನು ಮಾಡಬೇಕು' ಎಂದು ಪ್ರಾರ್ಥಿಸಲು ಆ ಮಹಾನುಭಾವನು 'ಹಾಗೇ ಆಗಲೀ' ಎಂದು ಆ ನಾಲ್ಕು ವರಗಳನ್ನೂ ಕೊಟ್ಟನು. ಅವನ್ನು ಪಡದು ಕಾರ್ತವೀರ್ಯನು ಮಹಾಬಲಪರಾಕ್ರಮ ಸಂಪನ್ನನಾಗಿ ಇಂದ್ರ ದ್ವೀಪವು ತಾಮ್ರ ದ್ವೀಪವು ಗಾಂಧರ್ವ ದ್ವೀಪವು ವಾರುಣ ದ್ವೀಪವು ಸೌಮ್ಯ ದ್ವೀಪವು ಗಭಸ್ತಿಮ ದ್ವೀಪವು ಮತ್ತೂ ಮೊದಲು ಅರಸುಗಳಿಂದ ಜಯಿಸುವದಕ್ಕೆ ಕೂಡದೇ ಇದ್ದ ಸಕಲ ದ್ವೀಪಗಳನ್ನೂ ಜಯಿಸಿ, ಆಕಾಶಮಧ್ಯದಲ್ಲಿ ಪ್ರಕಾಶಿಸುತ್ತಲಿರುವ ಸೂರ್ಯನೋಪಾದಿಯಲ್ಲಿ ತೋರುತ, ಮಾಹಿಷ್ಮತೀ ಪಟ್ಟಣದಲ್ಲಿದ್ದುಕೊಂಡು ರಾಜನೀತಿ ಮಾರ್ಗವನ್ನು ತಪ್ಪದೇ ಲಕ್ಷವರ್ಷಗಳು ರಾಜ್ಯಪರಿಪಾಲನವನ್ನು ಮಾಡಿದನು. ಆತನ ವಿಮಾನಗಳು ಸ್ವರ್ಣಮಯಗಳಾಗಿರಲು ತನ್ನ ಭುಜಬಲದಿಂದ ಪರಿಪಾಲಿಸಲ್ಪಟ್ಟ ರಾಜ್ಯವನ್ನು ನಾಲ್ಕು ಪಾಲುಮಾಡಿ—ಶುಭಕರವಾದ ಯಾಗಗಳನ್ನು ಮಾಡಿ ಜನರಂಜನವನ್ನು ಮಾಡುವದಕ್ಕೆ ಒಂದು ಪಾಲು, ಸೇನೆಗಳಗೊಂದು ಪಾಲು, ಮಹಾವನ ಮಧ್ಯದಲ್ಲಿ ಗ್ರಾಮಗಳಲ್ಲಿರುವ ಕಳ್ಳರನ್ನು ಜಯಿಸುವದಕ್ಕೆ ಹೋಗುವ ಸೇನೆಗೆ ಒಂದು ಪಾಲು, ಮನವಾರ್ತೆಗೆ ಒಂದು ಪಾಲು—ಹೀಗೆ ಧನವ್ಯಯವನ್ನು ಮಾಡುತ, ಸಕಲ ಸಾಮಂತ ಭೂಪತಿಗಳ ದೆಸೆಯಿಂದ ಕಪ್ಪಗಳನ್ನು ತಕ್ಕೊಳ್ಳುತ, ತನ್ನ ಆಜ್ಞೆಯನ್ನು ಮೀರಿದ ಕಾಗೆ ಹೆಗ್ಗಣ ಮೊದಲಾದವನ್ನೂ ನಿಗ್ರಹಿಸುತ, ಜ್ಞಾನಧುರಂಧರನಾಗಿ ಧರಾಚಕ್ರವನ್ನು ಪರಿಪಾಲಿಸುತಲಿದ್ದನು. ಆತನ ರಾಷ್ಟ್ರದಲ್ಲಿರುವ ಪ್ರಜೆಗಳು ಬಾಗಲುಗಳನ್ನು ಹಾಕುವದನ್ನು ಬಿಟ್ಟು ನಿರ್ಭಯವಾಗಿರಲು ರಾಷ್ಟ್ರವನ್ನೂ ಮನುಷ್ಯರನ್ನೂ ಸ್ತ್ರೀಯರನ್ನು ಧೇನುಗಳನ್ನು ಆಡು ಕುರಿ ಮೊದಲಾದವನ್ನೂ ತಾನೇ ಪರಿಪಾಲಿಸಿಕೊಂಡಿದ್ದನು. ಮತ್ತೂ ಆ ರಾಯನು ಸಮುದ್ರವನ್ನು ಪ್ರವೇಶಿಸಿದರೂ ಯೋಗಮಹಿಮೆಯಿಂದ ವಸ್ತ್ರವು ನೆನಯದೇ ಇರುವನು. ಇಂಥಾ ಕಾರ್ತವೀರ್ಯಾರ್ಜುನನ ಮಹಾತ್ಮ್ಯವು ಭೂತಭವಿಷ್ಯದ್ವರ್ತಮಾನ ಕಾಲಗಳ ಅರಸುಗಳಿಗೆ ದುರ್ಲಭವು. ಹೀಗೆ ಕಾರ್ತವೀರ್ಯಾರ್ಜುನನು ದತ್ತಾತ್ರೇಯ ಮುನೀಶ್ವರನ ಮಹಾಪ್ರಸಾದದಿಂದ ಮಹಾಮಹಿಮೆಗಳುಂಟಾಗಿ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಇದು ದತ್ತಾತ್ರೇಯಾವತಾರವು. ಇನ್ನು ಪರಶುರಾಮಾವತಾರವನ್ನು ವಿವರಿಸುತಲಿದ್ದೇನೆ" ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

---

## ೫೩ ನೇ ಅಧ್ಯಾಯ.—ಅರ್ಘ್ಯಾಭಿಹರಣ ಪರ್ವ ಶೇಷ. (ಶ್ರೀಕೃಷ್ಣವರ್ಣನೆ.)

ಆ ಬಳಿಕ ಭೀಷ್ಮನು ಧರ್ಮರಾಯನನ್ನು ನೋಡಿ "ಕೇಳು ಧರ್ಮನಂದನನೆ, ಮೊದಲು ಕೃತಯುಗದಲ್ಲಿ ನಾರಾಯಣನು ಭೃಗುವಂಶ ಶ್ರೇಷ್ಠನಾದ ಜಮದಗ್ನಿ ಮಹಾಮುನೀಶ್ವರನಿಗೆ ಪರಶುರಾಮನೆಂಬ ಹೆಸರಿನಿಂದ ಪುತ್ರನಾಗಿ ಅವತರಿಸಿ, ಕಾರ್ತವೀರ್ಯಾರ್ಜುನನನ್ನು ನಿಗ್ರಹಿಸಿ, ಮಹಾಬಲಶಾಲಿಯಾಗಿ ಒಪ್ಪುತ್ತಿದ್ದನು. ಕಾರ್ತವೀರ್ಯನ ಮಗನು ತನ್ನ ವಿಧಿಪ್ರೇರಣೆಯಿಂದ ಆತನಿಗೆ ಅಪರಾಧವನ್ನು ಮಾಡಿ ಕೋಪೋದ್ದೀಪಿತನಾಗಿ ದಿವ್ಯರಥಾರೂಢನಾಗಿ ಬಂದು

ಘೋರವಾದ ಯುದ್ಧವನ್ನು ಮಾಡಿದನು. ಪರಶುರಾಮನು ಅತಿ ಪರಾಕ್ರಮಶಾಲಿಯಾದ ಕಾರ್ತವೀರ್ಯನನ್ನು ರಥದ್ದೆಸೆಯಿಂದ ಭೂಮಿಯಲ್ಲಿ ಕೆಡಹಿ ತನ್ನ ಕೊಡಲಿಯಿಂದ ಕೊಂದು, ಯಜ್ಞವನ್ನು ಮಾಡುತಲಿರುವ ಜಂಭಾಸುರನನ್ನು ಋತ್ವಿಕ್ಸಹಿತವಾಗಿ ಸಂಹರಿಸಿ, ಶತದುಂದುಭಿಯನ್ನು ಮರ್ದಿಸಿ, ಸರಸ್ವತೀನದೀತೀರದಲ್ಲಿ ಬಹು ರಥ ತುರಗ ಸಹಿತವಾಗಿ ಬೊಂಬೇಮಾಡಿಕೊಂಡು ತನ್ನ ಮೇಲೆ ಕಾಣಿಸಿಕೊಂಡ ಅರುಲಕ್ಷದ ನಾಲ್ವತ್ತು ಸಾವರ ಸಂಖ್ಯೆಯುಳ್ಳ ಕ್ಷತ್ರಿಯೋತ್ತಮರನ್ನು ಧನುರ್ವಿದ್ಯಾ ಕೌಶಲದಿಂದ ಸಂಹರಿಸಿದನು. ಮತ್ತೂ ಬ್ರಾಹ್ಮಣದ್ರೋಹಿಗಳಾಗಿ ಬಾಹುಬಲಶಾಲಿಗಳಾದ ಹದಿನಾಲ್ಕು ಸಾವರ ಅರಸುಗಳನ್ನು ಯುದ್ಧದಲ್ಲಿ ಪೆಟ್ಟಕ್ಕಿ, ಹದಿನಾರು ಸಾವರ ಅರಸುಗಳನ್ನು ಪುಡಿಚೂರ್ಣವಾಗಿ ಮಾಡಿ, ಸಾವರ ಅರಸುಗಳನ್ನು ಒನಕೆಯಿಂದ ಚಚ್ಚಿ, ಸಾವರ ಅರಸುಗಳನ್ನು ಕತ್ತಿಯಿಂದ ಕತ್ತರಿಸಿ, ಮತ್ತೂ ಹದಿನಾಲ್ಕು ಸಾವರ ಅರಸುಗಳನ್ನು ಸಮೂಲವಾಗಿ ಕೊಂದನು. ಮತ್ತು ಕೆಲವು ಅರಸುಗಳು ಬ್ರಾಹ್ಮಣರನ್ನು ಬಾಧಿಸಲು ಬ್ರಾಹ್ಮಣರಷ್ಟುಮಂದಿಯೂ ಬಂದು 'ಎಲೈ ಭೃಗುನಂದನನೆ, ಕ್ಷತ್ರಿಯರ ದೆಸೆಯಿಂದ ಪೀಡಿತರಾದ ನಮ್ಮನ್ನು ರಕ್ಷಿಸೂ' ಎಂದು ಮೊರೆಯಿಡಲು ಆ ಮಹಾನುಭಾವನು ಆ ಆರ್ತಧ್ವನಿಯನ್ನು ಕೇಳಿ ಸಹಿಸಲಾರದೆ ಕೋಪದಿಂದ ಜೈತ್ರಯಾತ್ರೆಯನ್ನು ಹೊರಟು ಕಾಶ್ಮೀರ, ದರದ, ಕುಂತಿ, ಕ್ಷುದ್ರಕ, ಮಾಳವ, ಶಕ, ಚೇದಿ, ಕಾಶ, ಕರೂಶ, ಋಷಿಕ, ಕ್ರಥ, ಕೈಶಿಕ, ವಂಗ, ಕಳಿಂಗ, ಮಾಗಧ, ಕಾಶಿ, ಕೋಸಲಾಧೀಶ್ವರರನ್ನೂ, ರಾತ್ರಾಯಣ, ವೀತಿಹೋತ್ರ, ಕಿರಾತಮೂರ್ತಿಕಾರವಪ್ರಮುಖರನ್ನೂ ಮತ್ತೂ ಇರುವ ಮನುಜೇಂದ್ರರನ್ನು ತೀಕ್ಷ್ಣವಾದ ಬಾಣಗಳಿಂದ ಯಮಲೋಕಕ್ಕೆ ಕಳುಹಿಸಿದನು. ಈಪ್ರಕಾರದಿಂದ ಇಪ್ಪತ್ತೊಂದುಸಾರಿ ಸಮಸ್ತ ಕ್ಷತ್ರಿಯರನ್ನೂ ಸಂಹರಿಸಿ ಮೇರುಮಂದರ ಸಮೇತವಾದ ಭೂಮಂಡಲವೆಲ್ಲವನ್ನೂ ಕ್ಷತ್ರಿಯ ರಹಿತನಾಗಿ ಮಾಡಿ—ಇಂದ್ರನ ಕೋಪವೇನು? ದಾಸವಾಳದ ಹೂವೇನು!—ಇವುಗಳ ಕೆಂಪಿನ ವರ್ಣವನ್ನು ಧಿಕ್ಕರಿಸುವಂಥಾ ಕೆಂಪು ವರ್ಣವುಳ್ಳ ಅವರ ರಕ್ತಪ್ರವಾಹಗಳಿಂದ ಕೊಳಗಳನ್ನು ಮಾಡಿಸಿ ಅವಲ್ಲಿ ಸ್ನಾನವನ್ನು ಮಾಡಿ, ಹದಿನೆಂಟು ದ್ವೀಪಗಳನ್ನೂ ಸ್ವವಶಮಾಡಿಕೊಂಡು, ಕೋಪವನ್ನು ಬಿಟ್ಟು, ಅಶ್ವಮೇಧಯಾಗ ಸಹಸ್ರಗಳನ್ನು ನರಮೇಧಯಾಗ ಶತವನ್ನು ಮಾಡಿ, ಚತುಸ್ಸಮುದ್ರಮುದ್ರಿತವಾಗಿ ನಿಷ್ಕಲ್ಮಷವಾಗಿ ನಿರುಪದ್ರವವಾದ ಭೂಮಂಡಲವನ್ನೂ ಹದಿನೆಂಟು ಮೊಳಗಳ ಪ್ರಮಾಣವುಳ್ಳಂಥಾದ್ದಾಗಿ ಸುವರ್ಣಮಯವಾಗಿ ಪುರುಷ ಪ್ರಮಾಣಕ್ಕೆ ಅಧಿಕವಾದ ಉದ್ದವುಳ್ಳಂಥಾದ್ದಾಗಿ ಚತುರಶ್ರವಾಗಿರುವ ಒಂದು ವೇದಿಕೆಯನ್ನು ಕಾಶ್ಯಪನಿಗೆ ಕೊಟ್ಟನು ಎಂದು ದೊಡ್ಡವರು ಕಥೆಗಳನ್ನು ಹೇಳುವರು. ಮತ್ತೂ ಅನೇಕ ಯಾಗಗಳನ್ನು ಮಾಡಿ ಅನೇಕ ದಕ್ಷಿಣೆಗಳನ್ನು ಕೊಟ್ಟು ಆಕಾಶಮಾರ್ಗದಲ್ಲಿ ತಿರುಗುತಲಿರುವ ಸೌಭಪುರಕ್ಕೆ ಅಧ್ಯಕ್ಷನಾದ ಸಾಲ್ವನಮೇಲೆ ದಿವ್ಯರಥಾರೂಢನಾಗಿ ಕಾಣಿಸಿಕೊಂಡು ನೂರುವರ್ಷಗಳು ಘೋರವಾದ ಯುದ್ಧವನ್ನು ಮಾಡಿದನು. ಆಗ ದೇವತಾ ಕನ್ಯಕೆಯರು ಆಕಾಶಮಾರ್ಗದಿಂದ ಬಂದು ಆ ಪರಶುರಾಮನನ್ನು ಕುರಿತು 'ಎಲೈ ಭೃಗುನಂದನನೆ, ನೀನು ಭೃಗುವಂಶವರ್ಧನನು; ಇನ್ನುಮೇಲೆ ದ್ವಾಪರದಲ್ಲಿ ಚಕ್ರಗದಾಪ್ರಮುಖಗಳಾದ ದಿವ್ಯಾಯುಧಗಳನ್ನು ಧರಿಸಿ ದೀನ ಸಂರಕ್ಷಣನಾದ ಶ್ರೀಕೃಷ್ಣನು ಪ್ರದ್ಯುಮ್ನ ಸಾಂಬ ಸಮೇತನಾಗಿ ಸಾಲ್ವಸೌಭಪುರವನ್ನು ಸಾಧಿಸುತಲಿದ್ದಾನೆ; ಈಗ ನಿನ್ನಿಂದ ಆಗುವದಿಲ್ಲಾ; ಅದ್ದರಿಂದ ಶಸ್ತ್ರಾಸ್ತ್ರವ್ಯಾಪಾರಗಳನ್ನು ಬಿಟ್ಟುಬಿಡು' ಅಂದರು. ಪರಶುರಾಮನು ಅವರ ವಾಕ್ಯವನ್ನು ಕೇಳಿ, ಮುಂದೆ ಆಗತಕ್ಕಂಥಾ ಕಾರ್ಯವನ್ನು ತಿಳಿದು, ತಾನು ಸಮರ್ಥನಾದರೂ ಸಾಲ್ವನನ್ನು ಸಂಹರಿಸದೆ ರಥವನ್ನೂ ಕವಚವನ್ನೂ ಆಯುಧವನ್ನೂ ಪರಶುವನ್ನೂ ಶರಗಳನ್ನೂ ಧನುಸ್ಸನ್ನೂ ಜಲಮಧ್ಯದಲ್ಲಿರಿಸಿ, ಹ್ರೀಯು ಶ್ರೀಯು ಕೀರ್ತಿಯು ಪ್ರಜ್ಞೆಯು ತೇಜಸ್ಸು ಉಂಟಾಗಿ ಮಹಾರಣ್ಯಕ್ಕೆ ಹೋಗಿ, ನಿಯಮವನ್ನು ಹಿಡಿದು ತಪಸ್ಸನ್ನು ಮಾಡಿದನು. ಮಹಾನುಭಾವನಾಗಿ ಋಷಿಶ್ರೇಷ್ಠನಾಗಿ ಸಕಲಲೋಕ ಪ್ರಸಿದ್ಧನಾಗಿರುವ ಪರಶುರಾಮನು ಶ್ರೀ ಗೋವಿಂದನ ಅಂಶ ಭೂತವು ಎಂದು ತಿಳೀ" ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

೫೪ನೇ ಅಧ್ಯಾಯ.—ಅರ್ಘ್ಯಾಹರಣ ಪರ್ವ ಶೇಷ. (ಶ್ರೀಕೃಷ್ಣವರ್ಣನೆ.)

ಆ ಬಳಿಕ ಭೀಷ್ಮನು ಧರ್ಮರಾಯನನ್ನು ನೋಡಿ “ ಎಲೈ ಧರ್ಮರಾಯನೆ, ಮೊದಲು ಇಪ್ಪತ್ತುನಾಲ್ಕನೇ ಯುಗದಲ್ಲಿ ಚೈತ್ರಮಾಸದಲ್ಲಿ ಪುನರ್ವಸೂ ನಕ್ಷತ್ರಯುಕ್ತವಾದ ನವಮೀದಿವಸದಲ್ಲಿ ಅವ್ಯಯನಾಗಿ ಶಾಶ್ವತನಾಗಿ ವಿಶ್ವವ್ಯಾಪಕನಾಗಿರುವ ಶ್ರೀಮಹಾವಿಷ್ಣುವು ತನ್ನ ದಿವ್ಯಸ್ವರೂಪವನ್ನು ನಾಲ್ಕುಪಾಲುಮಾಡಿ ದಶರಥರಾಯನ ಮಗನಾಗಿ ಅವತರಿಸಿ, ಕೋಟಿಸೂರ್ಯ ಪ್ರಭಾಸಮಾನನಾಗಿ ಶ್ರೀರಾಮನಾಮಧೇಯವನ್ನು ಅಂಗೀಕರಿಸಿ, ಜಗತ್ಪ್ರಸಿದ್ಧನಾಗಿದ್ದನು. ಎಲೈ ಧರ್ಮನಂದನನೆ, ರಾಮಸ್ವಾಮಿಯನ್ನೇ ಕೃಷ್ಣಸ್ವಾಮಿಯಾಗಿ ಭಾವಿಸು. ಶ್ರೀರಾಮಸ್ವಾಮಿಯು ವಿಶ್ವಾಮಿತ್ರನ ಯಾಗಕ್ಕೆ ವಿಘ್ನವನ್ನು ಮಾಡುತ್ತಿದ್ದ ಸುಬಾಹುವನ್ನು ಕೊಂದು, ಮಾರೀಚನನ್ನು ಓಡಿಸಿ, ಕೌಶಿಕ ಮುನೀಂದ್ರನ ದೆಸೆಯಿಂದ ಸಕಲ ಶತ್ರುವಿನಾಶಕಾರಣಗಳಾಗಿ ಅಪ್ರತಿಹತಗಳಾಗಿರುವ ದಿವ್ಯಶಸ್ತ್ರಾಸ್ತ್ರಗಳನ್ನು ಪಡೆದು, ಮಹಾನುಭಾವನಾದ ಜನಕರಾಯನು ಮಾಡುವ ಯಜ್ಞವನ್ನು ನೋಡಬೇಕೆಂಬ ಇಚ್ಛೆಯಿಂದ ವಿಶ್ವಾಮಿತ್ರನ ಸಂಗಡಲೇ ಹೋಗಿ, ಶ್ರೇಷ್ಠವಾದ ಈಶ್ವರ ಧನುಸ್ಸನ್ನು ಲೀಲಾಮಾತ್ರದಿಂದ ಮುರಿದು, ನಿಖಿಲಗುಣವಿಖ್ಯಾತೆಯಾದ ಸೀತಾದೇವಿಯನ್ನು ಮದುವೆಯಾಗಿ, ಜಾನಕೀಸಮೇತನಾಗಿ ಅಯೋಧ್ಯಾಪಟ್ಟಣಕ್ಕೆ ಹೋಗಿ, ಸಂತೋಷಭರಿತಮಾನಸನಾಗಿ ಅಷ್ಟಭೋಗಗಳನ್ನೂ ಅನುಭವಿಸುತಲಿದ್ದನು. ಆ ಬಳಿಕ ಕೈಕೇಯಿಯ ಪ್ರೇರಣೆಯಿಂದ ದಶರಥನು ಅರಣ್ಯಕ್ಕೆ ಕಳುಹಿಸಲು, ಪಿತೃವಾಕ್ಯವನ್ನು ಪರಿಪಾಲನ ಮಾಡಬೇಕೆಂದೆಣಿಸಿ, ಪ್ರತ್ಯಕ್ಷ ಲಕ್ಷ್ಮಿಯಾದ ಸೀತೆಯೂ ಪ್ರಿಯಸಹೋದರನಾದ ಲಕ್ಷ್ಮಣನೂ ಸಂಗಡಬರಲು, ಸಕಲ ಭೂತಹಿತನಾಗಿ ಸಕಲ ಧರ್ಮಜ್ಞನಾದ ರಘುನಂದನನು ಸಕಲ ದುಷ್ಟಮೃಗ ಶರಣ್ಯವಾದ ದಂಡಕಾರಣ್ಯಕ್ಕೆ ಹೋಗಿ, ಹದಿನಾಲ್ಕುವರ್ಷಗಳು ವನದಲ್ಲಿರುವಲ್ಲಿ ಜನಸ್ಥಾನದಲ್ಲಿ ದೇವ ಕಾರ್ಯಾರ್ಥವಾಗಿ ಇದ್ದು, ರಾವಣನಿಗೆ ತಂಗಿಯಾದ ಶೂರ್ಪನಖಿ ಎಂಬ ರಾಕ್ಷಸಸ್ತ್ರೀಯ ಮೂಗನ್ನು ಕುಯಿದು, ಅವಳಿಂದ ಪ್ರೇರಿತರಾಗಿ ಯುದ್ಧಕ್ಕೆ ಬಂದ ಭುವನ ಭಯಂಕರರಾದ ಖರದೂಷಣ ತ್ರಿಶಿರಸ್ಸುಗಳು ಮೊದಲಾದ ಹದಿನಾಲ್ಕು ಸಾವಿರ ರಾಕ್ಷಸರನ್ನು ಪರಾಕ್ರಮದಿಂದ ಒಂದು ಕ್ಷಣದಲ್ಲಿ ಕೊಂದು, ರೋಷಾವೇಶದಿಂದ ಅತಿ ನೀಚನಾದ ಮಾರೀಚನನ್ನು ಕೊಂದು, ರಾವಣ ಮಾಯಾಮೋಹಿತನಾಗಿ ಸೀತಾವಿಯುಕ್ತನಾಗಿ, ಆ ಸೀತೆಯನ್ನು ಹುಡುಕುವದಕ್ಕೋಸ್ಕರ ವನದಲ್ಲಿ ಸಂಚರಿಸುವಾಗ ಶಾಪಗ್ರಸ್ತರಾದ ವಿರಾಧಕಬಂಧರನ್ನು ಜಯಿಸಿ, ಆ ಗಂಧರ್ವರಿಗೆ ಶಾಪವಿಮೋಚನವನ್ನು ಮಾಡಿ, ಋಶ್ಯಮೂಕಪರ್ವತಕ್ಕೆ ಹೋಗಿ, ನಿಖಿಲ ಗುಣವಂತನಾದ ಹನುಮಂತನ ವಚನ ಪ್ರಕಾರದಿಂದ ಸುಗ್ರೀವನೊಡನೆ ಸ್ನೇಹವನ್ನು ಮಾಡಿ, ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ದೇವೇಂದ್ರನ ಮಗನಾದ ವಾಲಿಯನ್ನು ಕೊಂದು, ಬಲಪರಾಕ್ರಮಶಾಲಿಯಾದ ಸುಗ್ರೀವನಿಗೆ ಪಟ್ಟವನ್ನು ಕಟ್ಟಿ, ಹನುಮಂತನಿಂದ ಸೀತಾ ವೃತ್ತಾಂತವನ್ನು ತಿಳಿದು, ವಾನರ ಸೇನಾಸಮೇತನಾಗಿ ನಡೆದು, ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ, ಶತ್ರುಭಯಂಕರವಾದ ಲಂಕಾಪುರದ ಸಮೀಪದಲ್ಲಿ ಪಾಳ್ಯವನ್ನಿಳಿಸಿ ದೇವ ಗಂಧರ್ವ ಪನ್ನಗರಿಗೂ ಯಕ್ಷ ರಾಕ್ಷಸ ಪಕ್ಷಿಗಳಿಗೂ ಅವಧ್ಯನಾಗಿ ದುರ್ಜಯನಾಗಿ ದುರ್ನಿರೀಕ್ಷ್ಯನಾಗಿ ತ್ರಿಲೋಕಕಂಠಕನಾಗಿ ವರದಾನಗರ್ವಿತನಾಗಿ ಭಯಂಕರಾಕಾರನಾಗಿ ಕಲ್ಲಿ ಬೆಟ್ಟದೋಪಾದಿಯಲ್ಲಿ ಕಪ್ಪಾದ ಶರೀರವುಳ್ಳವನಾದ ರಾವಣನನ್ನು ಪುತ್ರಮಿತ್ರಾಮಾತ್ಯ ಸಹಿತವಾಗಿ ಯುದ್ಧದಲ್ಲಿ ಕೊಂದು, ವಿನಯ ಭೂಷಣನಾದ ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಪಟ್ಟವನ್ನು ಕಟ್ಟಿ, ಸೀತಾಸಮೇತನಾಗಿ ಪುಷ್ಪಕವನ್ನು ಏರಿ, ಸಮಸ್ತ ಸೇನೆಯೊಡನೆ ಕೂಡಿ ಅಯೋಧ್ಯಾಪಟ್ಟಣಕ್ಕೆ ಬಂದು, ನೀತಿಮಾರ್ಗದಿಂದ ಪ್ರಜಾಪರಿಪಾಲನವನ್ನು ಮಾಡುತ, ಮಧುಪುತ್ರನಾಗಿ ಮಹಾ ಬಲಶಾಲಿಯಾದ ಲವಣಾಸುರನನ್ನು ಶತ್ರುಘ್ನನಿಂದ ಕೊಲ್ಲಿಸಿ, ಮತ್ತೂ ಲೋಕರಕ್ಷಣಾರ್ಥವಾಗಿ ದುಷ್ಟನಿಗ್ರಹವನ್ನು ಮಾಡುತ ಶಾಸ್ತ್ರೋಕ್ತ ಪ್ರಕಾರದಿಂದ ಶತಾಶ್ವಮೇಧಗಳನ್ನು ಮಾಡಿ, ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಆತನ ರಾಷ್ಟ್ರದಲ್ಲಿ ಅಶುಭವಾಕ್ಯಗಳನ್ನು ಕೇಳುವದು, ಆಪತ್ತುಗಳನ್ನೈದುವದು, ಅಪಮೃತ್ಯುಭಯವು, ಅಗ್ನಿಭಯವು, ಚಾತುರ್ವರ್ಣ್ಯ ಸಂಕರವು, ಬಲಿಮೇಮಾಡಿ ಪರಸ್ವವನ್ನು ತಕ್ಕೊಳ್ಳುವದು, ಜಾರತ್ವವು, ಚೋರತ್ವವೂ, ಇಲ್ಲದೆ ಚಾತುರ್ವರ್ಣ್ಯವು ತಮ್ಮ ತಮ್ಮ ಸ್ವವೃತ್ತಿಯಿಂದ ಪ್ರವರ್ತಿಸಿ ಇತ್ತು. ಮತ್ತೂ ಸಕಲ ಜನಗಳೂ ಆಯುರ್ವೃದ್ಧಿ ಸೌ

ಚಕಗಳಾದ ಉಚ್ಛ್ವಾಸನಿಶ್ವಾಸಗಳು ಸಮವಾಗಿ ನಡೆಯಲು, ಆರೋಗ್ಯದೃಢಗಾತ್ರರಾಗಿ ಪುತ್ರವಂತರಾಗಿ ಸಹಸ್ರವರ್ಷ ಜೀವಿಗಳಾಗಿ ಸಂತುಷ್ಟಹೃದಯರಾಗಿದ್ದರು. ದೇವಋಷಿಗಣಗಳಿಗೆ ಆ ಪ್ರದೇಶದಲ್ಲಿ ಮನೋಹರಗಳಾದ ನಿವಾಸಸ್ಥಾನಗಳಿದ್ದವು. ಬ್ರಾಹ್ಮಣರು ಚತುರ್ವೇದಸಂಪನ್ನರಾಗಿಯೂ ಸಮಸ್ತವಾದ ಭೂಪ್ರಜೆಗಳು ಬಹುನಿಷ್ಠರಾಗಿಯೂ ತಮ್ಮ ತಮ್ಮ ಧರ್ಮಗಳನ್ನು ಮಾಡಿಕೊಂಡಿದ್ದರು. ಮತ್ತೂ ನೀಲಮೇಘಶ್ಯಾಮನಾಗಿ ಯೌವನಾಭಿರಾಮನಾಗಿ ಅರುಣ ಕಮಲ ಪತ್ರಾಕ್ಷನಾಗಿ ಭದ್ರಗಜದೋಪಾದಿಯಲ್ಲಿ ಮಹೋನ್ನತನಾಗಿ ಅಜಾನುದೀರ್ಘಬಾಹುವಾಗಿ ಪ್ರಸನ್ನವದನನಾಗಿ ಸಿಂಹಸ್ಕಂಧನಾಗಿ ಮಹಾಬಲಶಾಲಿಯಾಗಿ ದಯಾಸಮುದ್ರನಾಗಿ ಇರುವ ಶ್ರೀರಾಮನು ರಾಜ್ಯವನ್ನು ಪರಿಪಾಲಿಸುವ ಸಮಯದಲ್ಲಿ ಸಕಲ ಜನಗಳೂ ಸಕಲ ವ್ಯಾಪಾರಗಳಲ್ಲಿ ಬಾರಿಬಾರಿಗೂ ರಾಮನಾಮೋಚ್ಚಾರಣವೇ ಹೊರತಾಗಿ ಮತ್ತೊಂದಿಲ್ಲದೆ ಸಮಸ್ತ ಪ್ರಪಂಚ ಚಕ್ರವನ್ನೂ ರಾಮಾತ್ಮಕವಾಗಿ ಎಣಿಸುತ್ತಿದ್ದರು. ಈಪ್ರಕಾರದಿಂದ ಶ್ರೀರಾಮಸ್ವಾಮಿಯು ಇಕ್ಷ್ವಾಕುವಂಶದಲ್ಲಿ ಅವತರಿಸಿ, ಸಕಲ ದೇವತಾ ದ್ರೋಹಿಯಾಗಿ ಪರಾಕ್ರಮ ಧುರಂಧರನಾದ ರಾವಣನನ್ನು ಬಂಧುಜನ ಸಮೇತವಾಗಿ ಕೊಂದು ಸಮಸ್ತ ಲೋಕಗಳಿಗೂ ಸಂತೋಷವನ್ನು ಮಾಡಿ, ಹನ್ನೊಂದು ಸಾವಿರ ವರ್ಷಗಳು ಭೂರಕ್ಷಣವನ್ನು ಮಾಡಿದನು. ಇದು ಕೋದಂಡದೀಕ್ಷಾಗುರುವಾಗಿ ಅನಂತಕಲ್ಯಾಣ ಗುಣಾಭಿರಾಮನಾಗಿ ಮಹಾಬಲ ಶೌರ್ಯಧೈರ್ಯನಾಗಿ ದಿವ್ಯ ತೇಜೋವಿರಾಜಮಾನನಾದ ಶ್ರೀರಾಮಸ್ವಾಮಿಯ ದಿವ್ಯಾವತಾರ ಮಹಿಮೆಯು.

"ಕೇಳು ಧರ್ಮನಂದನನೆ, ಮಹಾನುಭಾವನಾದ ನಾರಾಯಣನು ಇಪ್ಪತ್ತೆಂಟನೆ ಯುಗದಲ್ಲಿ ದ್ವಾಪರದಲ್ಲಿ ಆಪನ್ನಶರಣ್ಯನಾಗಿ ಶತ್ರುಭಯಂಕರನಾಗಿ ಶ್ರೀವತ್ಸಲಕ್ಷಣಲಕ್ಷಿತನಾಗಿ ಜಗತ್ಪೂಜ್ಯನಾಗಿ ಮನೋಹರಾಕಾರನಾಗಿ ಶಂಖಚಕ್ರ ಗದಾದಿಧರನಾಗಿ ಭೂಭಾರವನ್ನು ಪರಿಹರಿಸುವದಕ್ಕೆಣಿಸಿ ವೃಷ್ಣಿ ವಂಶದಲ್ಲಿ ಉದ್ಭವಿಸಿ, ಲೋಕ ಪ್ರಸಿದ್ಧವಾದ ಶ್ರೀಕೃಷ್ಣನಾಮಧೇಯವನ್ನು ಅಂಗೀಕರಿಸಿ, ಮಹೇಂದ್ರಾರ್ಜುನ ಬಲರಾಮರಿಗೆ ವಿರೋಧಿಗಳಾದವರನ್ನು ಕೊಂದು, ಭೂಮಂಡಲದಲ್ಲಿ ಅರಸುಗಳಾಗಿ ಹುಟ್ಟಿದ ಕಂಸನು ಮೊದಲಾದ ದುಷ್ಟ ರಾಕ್ಷಸರನ್ನು ಕೊಂದನು. ಇದು ಲೋಕರಕ್ಷಣಾರ್ಥವಾಗಿ ವಾಸುದೇವನು ಅಂಗೀಕರಿಸಿದ ಅವತಾರವು. ಇನ್ನುಮೇಲೆ ಧರ್ಮವು ಶಿಥಿಲವಾಗಿರುವ ಕಲಿಯುಗಾಂತರದಲ್ಲಿ ಅನೇಕ ಪಾಷಂಡ ನಿಗ್ರಹವನ್ನೂ ಧರ್ಮಸಂಸ್ಥಾಪನವನ್ನೂ ಬ್ರಾಹ್ಮಣ ಪೋಷಣವನ್ನೂ ಮಾಡುವದಕ್ಕೋಸ್ಕರ ಕೈಟಭಾಂತಕನು ಕಲ್ಕ್ಯವತಾರವನ್ನು ಮಾಡುತಲಿಧಾನೆ. ಈಗ ನಾನು ಹೇಳಿದ್ದಲ್ಲದೆ ದೇವತೆಗಳ ಸಹಿತವಾಗಿ ಭೂಲೋಕದಲ್ಲಿ ಅವತರಿಸಿದ ಆತನ ಅವತಾರಗಳು ಅಪರಿಮಿತಗಳು ಎಂದು ಪುರಾಣಗಳು ಹೇಳುತಲಿವೆ" ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

---

## ೫೫ನೇ ಅಧ್ಯಾಯ.—ಅರ್ಘ್ಯಾಹರಣಪರ್ವ ಶೇಷ. (ಶ್ರೀ ಕೃಷ್ಣವರ್ಣನೆ).

ಅನಂತರದಲ್ಲಿ: ಧರ್ಮರಾಯನು ಭೀಷ್ಮನನ್ನು ನೋಡಿ "ಎಲೈ ಮಹಾತ್ಮನೆ, ಶ್ರೀಮಹಾವಿಷ್ಣುವೇ ಕೃಷ್ಣನಾಗಿ ವೃಷ್ಣಿವಂಶದಲ್ಲಿ ಹುಟ್ಟಿದ ತೆರವನ್ನೂ ಆತನು ಬಾಲ್ಯವು ಮೊದಲಾಗಿ ಆಚರಿಸಿದ ಅದ್ಭುತಕಾರ್ಯಗಳನ್ನೂ ಕೇಳುವದಕ್ಕೆ ಇಚ್ಛೆಯಾಗುತಲಿದೆ; ವಿಸ್ತಾರವಾಗಿ ವಿವರಿಸಬೇಕು" ಎನಲು ಭೀಷ್ಮನು ಧರ್ಮರಾಯನನ್ನು ಕುರಿತು "ಕೇಳು ಧರ್ಮರಾಯನೆ, ಬಂದು ಕೃತಯುಗದಲ್ಲಿ ಸಕಲ ಲೋಕಭಯಂಕರವಾದ ತಾರಕಾಮಯವೆಂಬ ಯುದ್ಧದಲ್ಲಿ ವಿರೋಚನನು, ಮಯನು, ತಾರನು, ವರಾಹನು, ಶ್ವೇತನು, ಲಂಬನು, ಕಿಶೋರನು, ಸ್ವರ್ಭಾನುವು, ಅರಿಷ್ಟನು, ಕ್ಷರನು, ವಿಪ್ರಚಿತ್ತಿಯು, ಪ್ರಲಂಬನು, ವೃತ್ರನು, ಜಂಭನು, ವಲನು, ನಮುಚಿಯು, ಕಾಲನೇಮಿಯು, ಪ್ರಹ್ಲಾದನು, ಮೊದಲಾದ ಅನೇಕ ದೈತ್ಯದಾನವರು ಬಹುಪ್ರಕಾರಗಳಾದ ಆಯುಧಗಳನ್ನು ಧರಿಸಿ ಅನೇಕ ವಾಹನಗಳನ್ನು ಏರಿ ಯುದ್ಧಸನ್ನದ್ಧರಾಗಿ ದೇವತಾ ಸೈನ್ಯಕ್ಕೆ ಅಭಿಮುಖವಾಗಿ ನಡೆದರು. ಆಗ ಆದಿತ್ಯರು, ವಸುಗಳು, ರುದ್ರರು, ಸಿದ್ಧರು, ಸಾಧ್ಯರು, ವಿಶ್ವೇದೇವತೆಗಳು, ಮರುತ್ತುಗಳು, ಇಂದ್ರನು, ಚಂದ್ರನು, ಯಮ ವರುಣ ಕುಬೇರರು, ಅಶ್ವಿನೀದೇವತೆಗಳೂ ಮತ್ತೂ ಮಿಕ್ಕಾದ ದೇವತೆಗಳೂ ದೈತ್ಯವರ್ಗವನ್ನು ಎದಿರಿಸಿ, ಅನೇಕ ಶಸ್ತ್ರ

ಸ್ತ್ರಗಳನ್ನು ಪ್ರಯೋಗಿಸುತ ಘೋರವಾದ ಯುದ್ಧವನ್ನು ಮಾಡಿದರು. ಆ ದೇವಾಸುರರ ಯುದ್ಧವು ಸಕಲ ಭುವನ ಭಯಂಕರವಾಗಿ ನಡೆಯಿತು. ಆ ಸಮಯದಲ್ಲಿ ದೈತ್ಯಶ್ರೇಷ್ಠರು ಪರಾಕ್ರಮ ಸಮೇತರಾಗಿ ಅಷ್ಟುಮಂದಿಯೂ ಒಗ್ಗಟ್ಟಾಗಿನಿಂತು ಬಾಣಪರಂಪರೆಗಳನ್ನು ಪ್ರಯೋಗಿಸಲು ದೇವಗಂಧರ್ವ ಸಿದ್ಧ ಸಾಧ್ಯ ಚಾರಣೋರಗರು ಮೊದಲಾದ ದೇವತೆಗಳ ಚೈತನ್ಯವು ದೈನ್ಯವನ್ನೈದಿ ಭಯಪಟ್ಟು ಆಯುಧಗಳನ್ನು ಬಿಟ್ಟು ನಾಲ್ಕು ದಿಕ್ಕುಗಳಲ್ಲಿ ಓಡುತ ಆರ್ತಜನ ಸಂರಕ್ಷಕನಾಗಿ ಸರ್ವವ್ಯಾಪಕನಾಗಿರುವ ಜನಾರ್ದನನನ್ನು ಮನಸ್ಸಿನಲ್ಲಿ ಸ್ಮರಿಸಿದರು. ಆಗ ಶಂಖಚಕ್ರಾದಿ ದಿವ್ಯಾಯುಧಗಳನ್ನು ಧರಿಸಿ ಜಗದೀಶ್ವರನಾದ ವಾಸುದೇವನು ಗರುಡಾರೂಢನಾಗಿ ಪ್ರತ್ಯಕ್ಷವಾಗಲು, ಭಕ್ತಪಾಲ ಪರಾಯಣನಾಗಿರುವ ನಾರಾಯಣನನ್ನು ನೋಡಿ ಸಂತೋಷಪಟ್ಟು ಅಮರ ಶ್ರೇಷ್ಠರಷ್ಟುಮಂದಿಯೂ ಭಯವನ್ನು ಬಿಟ್ಟು ಮಗುಚಿ ಬಂದು ದೈತ್ಯಬಲದೊಡನೆ ಹೋರಿ ಅತ್ಯಾಶ್ಚರ್ಯಕಾರಣವಾಗಿ ಭಯಂಕರವಾದ ಯುದ್ಧವನ್ನು ಮಾಡಿದರು. ಆ ಮಹೇಂದ್ರನು ಮೊದಲಾದ ದೇವತೆಗಳ ಪೆಟ್ಟನ್ನು ಸೈರಿಸಲಾರದೆ ನಡುಗುತಲೂ ಭಯದಿಂದ ಕೂಗುತ್ತಲೂ ನಾಲ್ಕು ದಿಕ್ಕುಗಳಲ್ಲಿ ಓಡುತಲೂ ಇರುವ ತನ್ನ ಸೈನ್ಯವು ದೈನ್ಯವನ್ನೈದಿದ್ದನ್ನು ನೋಡಿ, ನೂರು ಕಂಠಗಳುಳ್ಳಂಥಾವನಾಗಿ ನೂರು ಬಾಹುಗಳುಳ್ಳಂಥಾವನಾಗಿ ನೂರು ಮುಖಗಳುಳ್ಳಂಥಾವನಾಗಿ ಧೂಮ್ರವರ್ಣವುಳ್ಳ ಕೂದಲುಗಳುಳ್ಳಂಥಾವನಾಗಿ ಹೊಂಬಣ್ಣವಾದ ಗಡ್ಡಮೀಸೆಗಳುಳ್ಳಂಥಾವನಾಗಿ ಕಾಲನೇಮಿ ಎಂಬ ದನುಜಶ್ರೇಷ್ಠನು ನೂರು ಶಿರಸ್ಸುಗಳುಳ್ಳ ಕುಲಪರ್ವತದೋಪಾದಿಯಲ್ಲಿ ನಿಂತು, ಭೂಷಣಗಳು ಬಂದಕ್ಕೊಂದು ಮರಸಿಕೊಂಡು ಧ್ವನಿಮಾಡುತ್ತಿರಲೂ ಸೂರ್ಯಮಂಡಲದೋಪಾದಿಯಲ್ಲಿ ಕಿರೀಟವು ಬೆಳಗುತ್ತಿರಲೂ ನೂರು ಭುಜಗಳಿಂದ ಆಯುಧಗಳನ್ನು ತಿರಿಗಿಸುತ ತನ್ನ ಶರೀರವು ಮೂರು ಲೋಕಗಳನ್ನೂ ಅತಿಕ್ರಮಿಸುತಲಿರುವ ಹಾಗೆ ಬೆಳದು ಹಲ್ಲುಗಳನ್ನು ಕಡಿಯುತ ರೋಷಾವೇಶದಿಂದ ದೇವತೆಗಳನ್ನು 'ನಿಲ್ಲು' 'ನಿಲ್ಲು' ಎಂದು ಹುಂಕಾರದಿಂದ ಅಟ್ಟಿಕೊಳ್ಳುತ ಪ್ರಳಯಕಾಲದಲ್ಲಿ ಭೂತಗಳನ್ನು ನುಂಗುವದಕ್ಕೆ ಬಾಯಿಬಿಟ್ಟುಕೊಂಡು ಬರುವ ಯಮನೋಪಾದಿಯಲ್ಲಿ ತೋರುತ ದೇವತಾಸಮೂಹವನ್ನು ಎದಿರಿಸಿದನು. ಅಷ್ಟರೊಳಗೆ ಮುರಿದು ಹೋದ ದನುಜಸಮೂಹವಷ್ಟೂ ಆತನ ಸಂಗಡ ಬಂದು ದೇವತೆಗಳೊಡನೆ ಯುದ್ಧಮಾಡಿದವು. ಆ ಸಮಯದಲ್ಲಿ ಇಂದ್ರ ಯಮ ವರುಣ ವಾಯು ಅಗ್ನಿ ಕುಬೇರ ಸೂರ್ಯ ಮೊದಲಾದ ದೇವಸಮೂಹವನ್ನು ಅಮಿತಪರಾಕ್ರಮದಿಂದ ಜಯಿಸಿ ಅವರ ಸ್ಥಾನಗಳನ್ನು ಆಕ್ರಮಿಸಿ ಪ್ರಕಾಶಿಸುತ್ತಲಿರುವ ಕಾಲನೇಮಿಯು ಆಕಾಶಮಾರ್ಗದಲ್ಲಿ ಕೋಟಿಸೂರ್ಯ ಪ್ರಕಾಶಮಾನನಾಗಿ ಗರುಡನ ಮೇಲೆ ಪ್ರಕಾಶಿಸುತ್ತಲಿರುವ ದಾನವಾಂತಕನನ್ನು ನೋಡಿ ಕೋಪಿಸಿಕೊಂಡು, ಕಣ್ಣುಗಳನ್ನು ಕೆಂಪಾಗಿಮಾಡಿಕೊಂಡು, ತನ್ನ ನೂರು ಭುಜಗಳಲ್ಲಿರುವ ನಾನಾವಿಧವಾದ ಆಯುಧಗಳನ್ನು ಒಮ್ಮಡಿಯಾಗಿ ಕೈಟಭಾರಿಯ ವಕ್ಷಸ್ಥಳದಲ್ಲಿ ಪ್ರಯೋಗಿಸಿದನು: ಮತ್ತು ಮಯನು ಮೊದಲಾದ ದಾನವೇಂದ್ರರು ಆ ಉಪೇಂದ್ರನಮೇಲೆ ಅನೇಕ ಶಸ್ತ್ರಾಸ್ತ್ರಗಳನ್ನು ಸುರಿದರು. ಈಪ್ರಕಾರವಾಗಿ ತನ್ನಮೇಲೆ ಬೀಳುವಂಥಾ ದೈತ್ಯಬಾಣಗಳಿಗೆ ಮುರಾಂತಕನು ಸ್ವಲ್ಪವಾದರೂ ಚಲಿಸದೆ ವರ್ಷಧಾರೆಗಳಿಗೆ ಕುಲಾಚಲದೋಪಾದಿಯಲ್ಲಿ ನಿಶ್ಚಲವಾಗಿ ಇರುವದನ್ನು ನೋಡಿ ಕೋಪದಿಂದ ಕಾಲನೇಮಿಯು ಕಾಲದಂಡಕ್ಕೆ ಸಮಾನವಾದ ಗದಾದಂಡವನ್ನು ಬಿರಬಿರನೆ ತಿರುಗಿಸಿ, ಲಕ್ಷ್ಮೀಕಾಂತನನ್ನೂ ಗರುತ್ಮಂತನನ್ನೂ ಪ್ರಹರಿಸಲು ಆ ಪೆಟ್ಟನ್ನು ಸಹಿಸಲಾರದೆ ಕಷ್ಟಪಡುತಲಿರುವ ಪಕ್ಷೀಂದ್ರನನ್ನು ನೋಡಿ ಪದ್ಮಾಕ್ಷನು ಕೋಪೋದ್ದೀಪಿತನಾಗಿ ಚಕ್ರಾಯುಧದಿಂದ ಆತನ ನೂರು ಭುಜಗಳನ್ನೂ ನೂರು ತಲೆಗಳನ್ನೂ ಹೊಯಿದು ಓಡಿಹೋಗುತಲಿರುವ ಮಯನನ್ನೂ ವಿರೋಚನನನ್ನೂ ಸ್ವರ್ಭಾನುವನ್ನೂ ಇನ್ನೂ ಮಿಕ್ಕ ದೈತ್ಯದಾನವ ಸಂಘವನ್ನೂ ಕೊಂದುಹಾಕಿ, ದೇವಋಷಿ ಸಮೂಹಗಳು ಸಂತೋಷಪಡಲು ಅವರವರ ಸ್ಥಾನಗಳಿಗೆ ಕಳುಹಿಸಿ, ಹಿರಣ್ಯಗರ್ಭ ಸಮೇತನಾಗಿ ಸತ್ಯಲೋಕಕ್ಕೆ ಹೋಗಿ, ಅನಂತರದಲ್ಲಿ ನಿಖಿಲಮುನಿಜನ ಸೇವ್ಯಮಾನನಾಗಿ ಕ್ಷೀರಾಬ್ಧಿಮಧ್ಯದಲ್ಲಿರುವ ಶ್ವೇತದ್ವೀಪಕ್ಕೆ ಹೋಗಿ, ಸಹಸ್ರಶೀರ್ಷನಾದ ಶೇಷತಲ್ಪದಲ್ಲಿ ಮಲಗಿದ್ದನು.

"ಕೇಳು ಧರ್ಮನಂದನನೆ, ಈ ಪ್ರಕಾರವಾಗಿ ತನ್ನ ಮಾಯಾಬಲದಿಂದ ಸಮಸ್ತವಾದ ಲೋಕಗಳನ್ನೂ ಮೋಹಿಸುತ ಮನುಷ್ಯಮಾನದಿಂದ ಮೂವತ್ತಾರುಸಾವಿರ ವರ್ಷಗಳು ಯೋಗನಿದ್ರೆಯನ್ನು ಮಾಡಿ, ದ್ವಾಪರಯು

ಗಾಂತರದಲ್ಲಿ ಸಂಚರಿಸಿಕೊಂಡು ಬ್ರಹ್ಮಾದಿ ದೇವತೆಗಳು ಸ್ತುತಿಸಲು ದೇವಕಾರ್ಯಾರ್ಥವಾಗಿ ಮೇರುಶಿಖರವನ್ನೊಪ್ಪುತಲಿರುವ ದೇವ ಸಭಾಭವನಕ್ಕೆ ಹೋದನು. ಅಲ್ಲಿ ಸಕಲ ದೇವತೆಗಳೂ ಆತನನ್ನು ಸುತ್ತಿಕೊಂಡು ಓಲಗಿಸುತ್ತ ಆ ಸಭೆಯೆಲ್ಲವೂ ನಿಶ್ಶಬ್ದವಾಗಿರುವ ಸಮಯದಲ್ಲಿ ಭೂದೇವಿಯು ಬಂದು ಬ್ರಹ್ಮಾದಿದೇವತೆಗಳನ್ನು ಕುರಿತು ದುಃಖಸೂತಕವಾದ ದೀನವಚನಗಳಿಂದ 'ಎಲೈ ಮಹಾತ್ಮರುಗಳಿರಾ, ಬಲವಂತರಾದ ಅರಸುಗಳ ಸೈನ್ಯಸಮೂಹದಿಂದ ಬಂದ ಮಹಾಭಾರದಿಂದ ಶ್ರಮವನ್ನು ಪಡದು ಅತಿಪ್ರಯತ್ನದಿಂದ ಪ್ರಾಣಗಳನ್ನು ಧರಿಸಿ ಇದೇನೆ, ಅದು ಹ್ಯಾಗಂದರೆ: ಒಂದೊಂದು ಪಟ್ಟಣದಲ್ಲಿ ಒಬ್ಬೊಬ್ಬ ಅರಸು ಕೋಟಿ ಕೋಟಿ ಸಂಖ್ಯಾಸಮೇತವಾದ ಸೈನ್ಯಗಳೊಡನೆ ಬಲಿತು ಇದಾನೆ; ಒಂದೊಂದು ಗ್ರಾಮದಲ್ಲಿ ಅನೇಕ ಸಂಖ್ಯಾಸಮೇತವಾದ ಜನಗಳಿದ್ದಾರೆ; ಅಂಥಾ ಗ್ರಾಮಗಳಿಂದ ನಿಬಿಡವಾದ ರಾಷ್ಟ್ರಗಳಿಂದ ನನ್ನಲ್ಲಿ ಸೂಜೀ ನೂರುವದಕ್ಕೂ ಅವಕಾಶವಿಲ್ಲದೇ ಇದೆ; ಆದ್ದರಿಂದ ಇಂಥಾ ಬಹುಜನ ಭಾರದಿಂದ ನಾನು ನಿರ್ವಹಿಸಲಾರೆನು, ಅದಲ್ಲದೇ ದೈತ್ಯಬಾಧೆಗಳಿಂದ ಕ್ಲೇಶಪಡುತಲಿರುವ ಪ್ರಜೆಗಳ ದುಃಖವನ್ನು ನೋಡಲಾರೆನು!' ಅಂದಳು. ನಾರಾಯಣನು ಭೂದೇವಿಯ ವಚನವನ್ನು ಕೇಳಿ ದೇವತೆಗಳನ್ನು ನೋಡಿ 'ನೀವು ನಿಮ್ಮ ಅಂಶಗಳಿಂದ ಭೂಲೋಕದಲ್ಲಿ ಅವತರಿಸೀ' ಎಂದು ನುಡಿದು ತಾನು ಅವತರಿಸುವದಕ್ಕೆ ಚಿತ್ತದಲ್ಲಿ ಯೋಚಿಸಿದನು."

---

೩೮ ನೇ ಅಧ್ಯಾಯ.—ಅರ್ಘ್ಯಾಹರಣಪರ್ವಶೇಷ. (ಶ್ರೀಕೃಷ್ಣವರ್ಣನೆ.)

"ಕೇಳು ಧರ್ಮರಾಯನೆ, ಮಹಾನುಭಾವನಾದ ನಾರಾಯಣನು ವಸುದೇವನ ಕುಲದಲ್ಲಿ ಅವತರಿಸಿ ಮಾಡಿದಂಥಾ ವಿಚಿತ್ರಚರಿತ್ರಗಳು ಲೋಕಹಿತಗಳಾಗಿರುವವು; ಅವನ್ನು ನಿನಗೆ ತಿಳುಹಿಸುತಲಿದೇನೆ ಕೇಳು; ಭೂದೇವಿಯ ಭಾಷಣಗಳನ್ನು ಕೇಳಿ, ವಾಸುದೇವನು ಸ್ವರ್ಗಸೌಖ್ಯದಲ್ಲಿ ಅನಾದರಣೆಯನ್ನು ಮಾಡಿ, ಭೂಲೋಕದಲ್ಲಿರುವ ಜನಗಳಿಗೆ ಸೌಖ್ಯವನ್ನು ಕಲ್ಪಿಸುವದಕ್ಕೆಣಿಸಿ, ಮರುತ್ತುಗಳು ವಸುಗಳು ಚಂದ್ರಸೂರ್ಯರು ಗಂಧರ್ವರು ಅಪ್ಸರಸ್ಸುಗಳು ರುದ್ರರು ಆದಿತ್ಯರು ಅಶ್ವಿನೀದೇವತೆಗಳು ಮೊದಲಾದ ದೇವತೆಗಳನ್ನು ದಾನವರನ್ನು ನಿಗ್ರಹಿಸುವದಕ್ಕೋಸ್ಕರ ಭೂಲೋಕದಲ್ಲಿ ಅವತರಿಸಲು ಕಟ್ಟುಮಾಡಿ, ಮತ್ತೂ ನಿಜಾಂಶದಿಂದ ಕೆಲವರನ್ನು ಹುಟ್ಟಿಸಿ, ಕೆಲವರನ್ನು ತಿರ್ಯಗ್ಜಾತಿಗಳನ್ನು ಹುಟ್ಟಲು ಕಟ್ಟುಮಾಡಿ ಕಳುಹಿಸಿದನು. ಅವರಷ್ಟುಮಂದಿಯೂ ದೈತ್ಯದಾನವ ಸಂಹಾರಾರ್ಥವಾಗಿ ಪ್ರಕಾಶಿಸುತ ಭೂಲೋಕದಲ್ಲಿ ಅರಸುಗಳಾಗಿ ಹುಟ್ಟಿದರು. ಅನಂತರದಲ್ಲಿ ಸಕಲ ಪ್ರಾಣಿಸಂರಕ್ಷಣಾರ್ಥವಾಗಿ ಯಯಾತಿ ವಂಶದಲ್ಲಿ ಹುಟ್ಟಿದ ವಸುದೇವನಿಗೆ ಕುಮಾರನಾಗಿ ಅವತರಿಸಿ ಪ್ರೇಮಾತಿಶಯದಿಂದ ಗೋಸಮೂಹವನ್ನು ಪರಿಪಾಲಿಸುತಲಿದ್ದ ಶ್ರೀಕೃಷ್ಣಸ್ವಾಮಿಯ ಮಹಿಮೆಯನ್ನು ವಿವರಿಸುತಲಿದೇನೆ ಕೇಳು" ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

---

೩೯ ನೇ ಅಧ್ಯಾಯ.—ಅರ್ಘ್ಯಾಹರಣಪರ್ವಶೇಷ. (ಶ್ರೀಕೃಷ್ಣವರ್ಣನೆ.)

ಅನಂತರದಲ್ಲಿ ಭೀಷ್ಮನು ಧರ್ಮರಾಯನನ್ನು ನೋಡಿ "ಎಲೈ ಯುಧಿಷ್ಠಿರನೆ, ನಾರಾಯಣನು ದೇವಕಿಯ ಗರ್ಭದಲ್ಲಿದ್ದುಕೊಂಡು ಅವತರಿಸುವ ಸಮಯದಲ್ಲಿ ಸಂತೋಷದಿಂದ ಸಮುದ್ರಗಳು ಉಬ್ಬಿದವು; ಪರ್ವತಗಳು ನರ್ತನವನ್ನು ಮಾಡಿದವು; ಮೂರು ಅಗ್ನಿಗಳೂ ಪ್ರದಕ್ಷಿಣವಾದ ಜ್ವಾಲೆಗಳುಳ್ಳಂಥಾವುಗಳಾಗಿ ಪ್ರಕಾಶಿಸಿದವು; ವಾಯುಗಳು ಶುಭಕರಗಳಾಗಿ ಬೀಸಿದವು; ಭೂಮಿಯಲ್ಲಿ ಧೂಳಿಗಳು ಅಡಗಿದವು; ಗ್ರಹನಕ್ಷತ್ರಗಳು ಪ್ರಕಾಶಿಸಿದವು; ಆಕಾಶದಲ್ಲಿ ದೇವದುಂದುಭಿಗಳು ಅಧಿಕವಾಗಿ ಮೊಳಗಿದವು; ಪುಷ್ಪವೃಷ್ಟಿಗಳು ಸುರಿದವು; ಗಂಧರ್ವರು ಗಾನವನ್ನು ಮಾಡಿದರು; ಅಪ್ಸರಸ್ತ್ರೀಯರು ನರ್ತನವನ್ನು ಮಾಡಿದರು; ಅಲ್ಲಿಗೆ ನಾರದರು ಮೊದಲಾದ ದೇವಋಷಿಗಳು ಬಂದು ಶುಭವಾಕ್ಯಗಳಿಂದ ಆ ಮುರಾಂತಕನನ್ನು ಬಹುಪ್ರಕಾರವಾಗಿ ಸ್ತುತಿಸಿದರು; ದೇವಗಣಪರಿವೃತನಾದ ಮಹೇಂದ್ರನು ಗರುಡಧ್ವಜನನ್ನು ನೋಡಿ ಬಹುಪ್ರಕಾರದಿಂದ ಸ್ತುತಿಸಿ 'ಲೋಕಹಿತಾರ್ಥವಾಗಿ ದೇವತಾಕಾರ್ಯಗಳಷ್ಟನ್ನೂ ನೆರವೇರಿಸಿ ಆ ಬಳಿಕ ನಿಮ್ಮ ಸ್ಥಾನಕ್ಕೆ ತಿರಿಗೂ ಬನ್ನೀ' ಎಂದು ನುಡಿದು ಋಷಿಗಣಸಮೇತನಾಗಿ ಅಮರಾವತಿಗೆ ಹೋದನು. ಆ ಬಳಿಕ ಮುರಾಂತಕನು ಮಹೇಂದ್ರ ಪ್ರಮುಖರನ್ನು ಕಳುಹಿ

ಸಿ ತನ್ನ ದಿವ್ಯಸ್ವರೂಪವನ್ನು ಮರೆಮಾಡಿಕೊಂಡು ನಂದಗೋಪನ ಮನೆಯಲ್ಲಿ ಕೆಲವು ವರ್ಷಗಳಿದ್ದನು. ಬಂದು ದಿವಸವಲ್ಲಿ ಯಶೋದಾದೇವಿಯು ತನ್ನ ಕುಮಾರಕನು ಬಂಡೀಕೆಳಗೆ ನಿದ್ದೆಹೋಗುತ್ತಿರಲು ಅತನನ್ನು ಬಿಟ್ಟು ಯಮುನಾನದಿಗೆ ಹೋದಳು ; ಆ ಬಾಲಕನು ನಿದ್ದೆಯಿಂದೆದ್ದು ತನ್ನ ಕೈಕಾಲುಗಳನ್ನು ಕೊಡವಿಕೊಂಡು ಮಧುರಧ್ವನಿಯಿಂದ ಬಾಲಲೀಲೆಗಳಿಗೆ ಅನುಗುಣವಾಗಿ ಕಾಲುಗಳನ್ನು ಉನ್ನತವಾಗಿ ಚಾಚಿ ಆ ಬಂಡಿಯನ್ನು ತನ್ನ ಕಾಲಿನ ಹೆಬ್ಬೆಟ್ಟಿನಿಂದ ಒದ್ದು ಎರಡನೇ ಕಾಲನ್ನು ಭೂಮಿಯಲ್ಲಿ ಕೆಡವಿ ಸ್ತನ್ಯವನ್ನು ಬಯಸುವ ಚಂದದಿಂದ ಅಳುತ್ತಿದ್ದನು. ಆ ಮುಕುಂದನ ಪಾದಘಾತದಿಂದ ಭೂಮಿಯಲ್ಲಿ ಬಿದ್ದು ಗಡಿಗೆಗಳು ಮೊದಲಾದ್ದನ್ನು ಒಡಮುಹಾಕಿದ ಶಕಟವನ್ನೂ ಅದರಿಂದ ಸ್ವಲ್ಪವಾದರೂ ವಿಕಾರವಿಲ್ಲದೇ ಯಥಾಪ್ರಕಾರವಾಗಿರುವ ಬಾಲಕನನ್ನೂ ನೋಡಿ ಸಕಲ ಜನಗಳೂ ವಿಸ್ಮಯವನ್ನೈದಿದರು. ಮತ್ತೂ ಆತನು ಅತಿಘೋರಾಕಾರಿಯಾಗಿ ಮಹಾಸ್ತನಿಯಾದ ಪೂತನಿ ಎಂಬ ಭೂತವನಿತೆಯನ್ನೂ ಶಿಶುವಾಗಿ ಮಲಗಿದ್ದ ಪಕ್ಷಿಯನ್ನೂ ಕೊಂದನು.

" ಕೆಲವು ದಿವಸಗಳಾದ ಮೇಲೆ ರಾಮಕೃಷ್ಣರೀರ್ವರೂ ಜೊತೆಗೂಡಿ ಆಕಾಶದಲ್ಲಿ ಅನ್ಯೋನ್ಯ ಕಿರಣಗಳಿಂದ ಅನಾವೃತರಾದ ಚಂದ್ರಸೂರ್ಯರೋಪಾದಿಯಲ್ಲಿ ತೋರುವ ಅಲ್ಲಲ್ಲಿ ಅಂಗೆಕಾಲುಗಳಸ್ಲಿಕ್ಕುತ ಮತ್ತೂ ಕೆಲವು ದಿವಸಗಳಿಗೆ ಸರ್ಪದಶರೀರದೋಪಾದಿಯಲ್ಲಿ ಭುಜಗಳು ಮೆರೆಯುತ್ತಿರಲು ಧೂಳಿಕೇಳಿಪರರಾಗಿ ವಿಹರಿಸುತಲಿದ್ದರು. ಬಂದು ದಿವಸದಲ್ಲಿ ಮೊಸರನ್ನು ಕಡೆಯುವ ಗೊಲ್ಲತಿಯರ ಸಮೀಪಕ್ಕೆ ಹೋಗಿ ಮೊಸರನ್ನು ಕುಡಿದು ಮತ್ತೊಂದು ದಿವಸವಲ್ಲಿ ಗೊಲ್ಲತಿಯರ ಮನೆಗಳಲ್ಲಿ ಬೆಣ್ಣೆಯನ್ನು ತಕ್ಕೊಂಡು ಬೇಕಾದಷ್ಟು ಭಕ್ಷಿಸಲು ಅದನ್ನು ನೋಡಿ ಗೋಪಸ್ತ್ರೀಯರು ಮೊದಲಾದವರು ಶಿಶುವಾದ ಕೃಷ್ಣಸ್ವಾಮಿಯನ್ನು ಹಿಡಿದು ವರಳಲ್ಲಿ ಕಟ್ಟಿಹಾಕಿದರು ; ಕೃಷ್ಣನು ಆ ವರಳನ್ನು ಎಳಕೊಂಡು ಎರಡು ಮತ್ತೀಮರಗಳ ಮಧ್ಯದಲ್ಲಿ ಹೋಗಿ ಅವುಗಳನ್ನು ಸಮೂಲವಾಗಿ ಕಿತ್ತು ಭೂಮಿಯಲ್ಲಿ ಕೆಡವಿದನು.

" ಈ ಪ್ರಕಾರವಾಗಿ ಅನೇಕ ಆಶ್ಚರ್ಯಗಳನ್ನು ಮಾಡಿ, ರಾಮಕೃಷ್ಣರು ಬಾಲ್ಯವನ್ನು ಅತಿಕ್ರಮಿಸಿ, ಹನ್ನೆರಡು ವರ್ಷದ ಪ್ರಾಯದವರಾಗಿ, ದಿವ್ಯ ಪೀತಾಂಬರಗಳನ್ನು ಧರಿಸಿ, ಅರುಣ ಧವಳ ವರ್ಣಗಳುಳ್ಳ ದಿವ್ಯಗಂಧಗಳನ್ನು ಧರಿಸಿ, ಬುತ್ತಿಯಚಿಕ್ಕವನ್ನೂ ಸೋರೆಬುರುಡೆಯನ್ನೂ ತಕ್ಕೊಂಡು ಅಡವಿಯಲ್ಲಿ ಹಸುಗಳನ್ನು ಕಾಯುತಲಿದ್ದರು. ಕೆಲವು ಸಮಯದಲ್ಲಿ ನವಿಲುಪಿಂಛಗಳನ್ನು ಕರ್ಣಭೂಷಣವಾಗಿ ಧರಿಸಿ, ಎಳೇವಳಿರನ್ನೂ ಕಮಲಮಾಲಿಕೆಗಳನ್ನೂ ಮಂಡೆಯಲ್ಲಿ ಧರಿಸಿ, ವನಮಾಲಿಕೆಗಳನ್ನು ಧರಿಸಿ, ತಾವರೆಧಾರೆಗಳನ್ನು ಯಜ್ಞೋಪವೀತವಾಗಿ ಧರಿಸಿ, ಎಲೆಗಳಿಂದ ವಾದ್ಯಗಳನ್ನು ಮಾಡುತ ಕೊಳಲನ್ನೂದುತ ಬಂದು ಕಡೆಯಲ್ಲಿ ನಗುತ ಆಡುತ, ಬಂದುಕಡೆಯಲ್ಲಿ ತಳಿರುಗಳನ್ನು ಹಾಸಿಕೊಂಡು ಮಲಗುತ, ಮತ್ತೊಂದು ತಾವಿನಲ್ಲಿ ನಿದ್ದೆಹೋಗುತ ಫಲಗಳನ್ನು ಭಕ್ಷಿಸುತ ಪುಷ್ಪರಸಗಳನ್ನು ಆಸ್ವಾದಿಸುತ, ಎಲ್ಲಿ ನೋಡಿದರೂ ತಿರುಗುತ ಎರಡು ಮಹಾಸರ್ಪಗಳೋಪಾದಿಯಲ್ಲಿ ಬೃಂದಾವನಕ್ಕೆ ಹೋಗಿ ಗೋಸಮೂಹವನ್ನು ಕಾಯುತ, ತಮ್ಮ ಶರೀರಕಾಂತಿಯಿಂದ ವನವನ್ನು ಬೆಳಗಿಸುತ ವಿಹರಿಸುತಲಿದ್ದರು. "

---

೫೮ ನೇ ಅಧ್ಯಾಯ.—ಅರ್ಘ್ಯಾಹರಣ ಪರ್ವ ಶೇಷ. (ಶ್ರೀಕೃಷ್ಣವರ್ಣನೆ.)

" ಎಲೈ ಧರ್ಮರಾಯನೆ, ಬಂದು ದಿವಸದಲ್ಲಿ ಮನೋಹರಾಕಾರನಾಗಿ ಮಂದಸ್ಮಿತ ವದನಾರವಿಂದನಾಗಿ ಕಾಕಪಕ್ಷಧರನಾಗಿ ಇಂದೀವರದಳಶ್ಯಾಮನಾಗಿ ಪದ್ಮದಳಾಯತಾಕ್ಷನಾಗಿ ಪೀತಾಂಬರಧರನಾಗಿ ಶ್ರೀಗಂಧವನ್ನು ಧರಿಸಿರುವ ಘನನಾಗಿ ಲತಾಯಜ್ಞೋಪವೀತನಾದ ಶ್ರೀಕೃಷ್ಣಸ್ವಾಮಿಯು ತನ್ನ ವಕ್ಷಸ್ಥಳದಲ್ಲಿ ಶ್ರೀವತ್ಸವು ಮೆರೆಯುತ್ತಿರಲು ಕಳಂಕ ರಹಿತನಾಗಿರುವ ಪೂರ್ಣ ಚಂದ್ರನೋಪಾದಿಯಲ್ಲಿ ಧರಿಸಿದ ನವಿಲುಪಿಂಛವು ಮೆಲ್ಲಮೆಲ್ಲನೆ ಅಲ್ಲಾಡುತ್ತಿರಲು ಗೋಪಾಲಕರ ಸಹಿತನಾಗಿ ಬೃಂದಾವನಕ್ಕೆ ಹೋಗಿ, ಬಂದುಕಡೆಯಲ್ಲಿ ಗಾನವನ್ನು ಮಾಡುತ, ಮತ್ತೊಂದುಕಡೆಯಲ್ಲಿ ನೃತ್ಯವನ್ನು ಮಾಡುತ, ಮತ್ತೊಂದು ಪ್ರದೇಶದಲ್ಲಿ ನಗುತ, ಮತ್ತೊಂದುತಾವಿನಲ್ಲಿ ಗೊಲ್ಲರ ವೇಷಕ್ಕೆ ಅ

ಸುಕೋಮಲವಾದ ಮಧುರ ಧ್ವನಿಯಿಂದ ವೇಣುನಾದವನ್ನು ಮಾಡುತ, ಬಹುಪ್ರಕಾರವಾದ ಬಾಲಕ್ರೀಡೆಗಳಿಂದ ಪ್ರವರ್ತಿಸುತ್ತಿದ್ದನು. ಆ ಯದುನಂದನನು ಹಸುಗಳ ಹಿಂಡುಗಳ ಸಂಗಡಲೇ ಹೋಗಿ, ರಮಣೀಯವಾಗಿರುವ ವನಪ್ರದೇಶಗಳಲ್ಲಿ ಗೋಪಾಲರೊಡನೆ ಕೂಡಿ ಕ್ರೀಡಿಸುತ ಭಾಂಡೀರವೆಂಬ ಆಲದಮರದ ಸನ್ನಿರಳಲ್ಲಿ (ಪೂರ್ವಕಾಲದಲ್ಲಿ ಸ್ವರ್ಗದಲ್ಲಿ ದೇವಗಣ ಪರಿವೃತನಾಗಿದ್ದ ದೇವೇಂದ್ರನೋಪಾದಿಯಲ್ಲಿ) ಗೊಲ್ಲರ ಹುಡುಗರು ತನ್ನ ನಾಲ್ಕು ಕಡೆಯಲ್ಲಿಯೂ ಸುತ್ತಿಕೊಂಡು ನಿಂತಿರಲು ಅವರ ಮಧ್ಯದಲ್ಲಿ ಪ್ರಕಾಶಿಸುತ್ತಿದ್ದನು; ಆ ಸಮಯದಲ್ಲಿ ಕೆಲವರು ಗಾನಮಾಡುವಂಥಾವರು ಕೆಲವರು ಕಿನ್ನರಿಗಳನ್ನು ಬಾರಿಸುವಂಥಾವರು ಕೆಲವರು ಎಲೆಗಳನ್ನು ಸುತ್ತಿಕೊಂಡು ಹೆಗ್ಗಾಳ ತುತ್ತೂರಿ ಮೊದಲಾದ ವಾದ್ಯಗಳನ್ನು ಮಾಡುತಲಿರುವಂಥಾವರು ಹೀಗೆ ಬಹುಪ್ರಕಾರವಾಗಿ ತುಂಬೀವೀಣೆಯನ್ನು ನುಡಿಸುತ ಬಹುಪ್ರಕಾರವಾಗಿ ಕ್ರೀಡಿಸುವಂಥಾವರಾಗಿದ್ದರು; ಅಲ್ಲಿ ಕೆಲವರು ಮುಕುಂದನ ಚರಿತ್ರವನ್ನು ಗಾನಮಾಡುತ್ತಿದ್ದರು; ಮುಕುಂದನು ತದನುಗುಣವಾಗಿ ಪರ್ಣವಾದ್ಯವನ್ನೂ ವೇಣುವಾದ್ಯವನ್ನೂ ಮಾಡುತ ಕಿನ್ನರಿಗಳನ್ನು ಮೀಟುತ ಅವರೊಡನೆ ಕೂಡಿ ಬಹು ಪ್ರಕಾರವಾಗಿ ತುಂಬೀವೀಣೆಯನ್ನು ನುಡಿಯಿಸುತ ಕ್ರೀಡಿಸುವಂಥಾವನಾಗಿದ್ದನು; ಮತ್ತು ಮುಕುಂದನ ಚರಿತ್ರವನ್ನು ಸಕಲಜನರೂ ನೋಡುತ್ತಿರಲು ಲೋಕ ಹಿತಾರ್ಥವಾಗಿ ಕ್ರೀಡಿಸುತ್ತಿದ್ದನು.

"ಒಂದು ದಿವಸದಲ್ಲಿ ಕೃಷ್ಣನು ಯಮುನಾನದೀತೀರಕ್ಕೆ ಹೋಗಿ, ಅಲ್ಲಿರುವ ಕದಂಬವೃಕ್ಷವನ್ನೇರಿ ಮಡುವಿನ ಮಧ್ಯದಲ್ಲಿ ಧುಮುಕಿ, ಕಾಳೀಯವೆಂಬ ದುಷ್ಟ ಸರ್ಪವನ್ನು ಸಮಸ್ತರಾದವರೂ ನೋಡುತ್ತಿರಲು ಮರ್ದಿಸಿದನು; ಮತ್ತೊಂದು ದಿವಸದಲ್ಲಿ ಬಲರಾಮ ಸಹಿತನಾಗಿ ತಾಳೀವನವನ್ನು ಪ್ರವೇಶಿಸುವ ಸಮಯದಲ್ಲಿ ಕತ್ತೆಯರೂಪವನ್ನು ಧರಿಸಿದ ಧೇನುಕಾಸುರನು ಕಾಣಿಸಿಕೊಳ್ಳಲು ಬಲರಾಮನು ಅವನನ್ನು ಸಂಹರಿಸಿದನು. ರಾಮಕೃಷ್ಣರಿಬ್ಬರೂ ದೇವ ಶ್ರೇಷ್ಠರಾದರೂ ಮನುಷ್ಯಲೀಲೆಗಳಿಂದ ನಟಿಸುವವರಾದ್ದರಿಂದ ತದನುಗುಣವಾಗಿ ಕ್ರೀಡಿಸುತ, ಗೋಪಾಲಕರೊಡನೆ ಕೂಡಿ ವನಕ್ಕೆ ಹೋಗಿ ಗೋವುಗಳನ್ನು ಕಾಯುತ, ಅವುಗಳ ಹೆಸರುಗಳನ್ನು ಹಿಡಿದು ಕೂಗಿ ಕರೆಯುತ, ಅಲ್ಲಿನ ಪೊದೆಗಳಲ್ಲಿ ನಿಂತು ಮರಗಳನ್ನು ಹುಡುಕುತ, ಅಟ್ಟಹಾಸಗಳನ್ನು ಮಾಡುತ, ಗಾನಗಳನ್ನು ಉಯ್ಯಾಲಪದಗಳನ್ನು ಹಾಡುತ, ಪಶು ಪಕ್ಷಿ ಮೃಗಗಳ ತೆರದಿಂದ ಕೂಗುತ ವಿಹರಿಸುತ್ತಿದ್ದರು.

"ಒಂದು ಕಾಲದಲ್ಲಿ ಗೊಲ್ಲರೆಲ್ಲರೂ ಕೂಡಿ ಪರ್ವತಕ್ಕೆ ಪೂಜೆಯನ್ನು ಮಾಡಲು ಸರ್ವಾತ್ಮಕನಾಗಿ ಸರ್ವೇಶ್ವರನಾದ ಶ್ರೀಕೃಷ್ಣನು ತಾನೊಬ್ಬ ದಿವ್ಯ ಪುರುಷರೂಪವನ್ನು ತಾಳಿ ನೈವೇದ್ಯಕ್ಕೆ ಯೋಗ್ಯವಾದ ಪಾಯಸಾನ್ನಗಳನ್ನು ಭಕ್ಷಿಸಲು, ಗೊಲ್ಲರು ಆ ವಾಸುದೇವನನ್ನು ನೋಡಿ ಆತನಿಗೆ ಪೂಜೆಯನ್ನು ಮಾಡಿದರು; ಆತನು ಅವರ ದೆಸೆಯಿಂದ ಪೂಜಿತನಾಗಿ ಬಾಲಕನಾದರೂ ಗೋವರ್ಧನಪರ್ವತವನ್ನು ಏಳುರಾತ್ರಿಗಳು ಹಸ್ತದ ತುದಿಯಿಂದ ಧರಿಸಿ ಗೋರಕ್ಷಣವನ್ನು ಮಾಡಿದನು; ಆ ಅದ್ಭುತಕೃತ್ಯವನ್ನು ನೋಡಿ ಸಕಲಜನರೂ ಆಶ್ಚರ್ಯಪಡುತ್ತಿರಲು ದೇವೇಂದ್ರನು ಅಲ್ಲಿಗೆ ಬಂದು ನಂದನಂದನನಿಗೆ ಗೋವಿಂದನೆಂಬ ಹೆಸರಿಕ್ಕಿ ಪಟ್ಟಾಭಿಷೇಕವನ್ನು ಮಾಡಿಸಿ ಆತನನ್ನು ಆಲಿಂಗಿಸಿಕೊಂಡು ಸ್ವರ್ಗಕ್ಕೆ ತಿರಿಗಿ ಹೋದನು. ಅನಂತರದಲ್ಲಿ ಶ್ರೀಕೃಷ್ಣನು ವೃಷಭಾಕಾರದಿಂದ ಬಂದ ಅರಿಷ್ಟನೆಂಬ ದೈತ್ಯನನ್ನು ಮೃತ್ಯುವಿನ ಪಾಲುಮಾಡಿ ಸಕಲ ಧೇನುಗಣಕ್ಕೆ ಹಿತವನ್ನು ಮಾಡಿದನು. ಮತ್ತೊಂದು ದಿವಸದಲ್ಲಿ ಕಂಸನಿಂದ ಕಳುಹಿಸಲ್ಪಟ್ಟು ಕುದುರೇರೂಪವನ್ನು ಧರಿಸಿ ಬಂದ ಹತ್ತುಸಾವಿರ ಆನೆಗಳ ಬಲವುಳ್ಳ ಕೇಶಿಯೆಂಬ ದೈತ್ಯ ವಲ್ಲಭನನ್ನು ಮರ್ದಿಸಿ, ಬಲರಾಮ ಸಹಿತನಾಗಿ ಮಧುರಾಪಟ್ಟಣಕ್ಕೆ ಹೋಗಿ, ಚಾಣೂರಮುಷ್ಟಿಕರನ್ನು ಮುಷ್ಟಿಯುದ್ಧದಿಂದ ಕೊಂದು, ಗಜಶ್ರೇಷ್ಠವಾದ ಐರಾವತಕ್ಕೆ ಸಮಾನವಾದ ಕುವಲಯಾಪೀಡವೆಂಬ ಆನೆಯನ್ನು ಕಂಸನು ನೋಡುತ್ತಿರುವಾಗಲೆ ಕೊಂದುಹಾಕಿ, ಕಂಸನಿಗೆ ತಮ್ಮನಾದ ಸುನಾಮನನ್ನು ಕೊಂದು, ಸಕಲಜನಗಳೂ ನೋಡುತ್ತಿರಲು ಕಂಸನನ್ನೂ ಕೊಂದು, ಉಗ್ರಸೇನನಿಗೆ ಪಟ್ಟವನ್ನು ಕಟ್ಟಿ, ತನ್ನ ತಾಯಿತಂದೆಗಳಾದ ದೇವಕೀ ವಸುದೇವರಿಗೆ ನಮಸ್ಕಾರವನ್ನು ಮಾಡಿದನು. ಇವು ಮೊದಲಾದ ಅನೇಕ ಅದ್ಭುತಕಾರ್ಯಗಳನ್ನು ಮಾಡಿ ಬಲರಾಮ ಸಹಿತನಾಗಿ ಮಧುರಾಪಟ್ಟಣದಲ್ಲಿ ಸುಖವಾಗಿದ್ದನು" ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

೫೯ನೇ ಅಧ್ಯಾಯ.—ಅರ್ಘ್ಯಾಪಹರಣ ಪರ್ವ ಶೇಷ. (ಶ್ರೀಕೃಷ್ಣವರ್ಣನೆ.)

ಅನಂತರದಲ್ಲಿ ಭೀಷ್ಮನು ಧರ್ಮರಾಯನನ್ನು ನೋಡಿ "ಎಲೈ ಧರ್ಮರಾಯನೆ, ಆ ಬಳಿಕ ರಾಮಕೃಷ್ಣರು ಅವಂತಿದೇಶಕ್ಕೆ ಹೋಗಿ, ಸಾಂದೀಪನೀಯೆಂಬ ಮುನೀಶ್ವರನಿಗೆ ಶಿಷ್ಯಭಾವವನ್ನು ವಹಿಸಿ, ಗುರು ಶುಶ್ರೂಷೆಯನ್ನು ಮಾಡುತ ಉಗ್ರವಾದ ವಿದ್ಯಾವ್ರತದಿಂದ ಅರವತ್ತು ನಾಲ್ಕು ದಿವಸಗಳಲ್ಲಿ ಷಡಂಗಸಹಿತವಾದ ಸಮಸ್ತವಾದ ವೇದಗಳನ್ನು ಕಲಿತು, ಸಾಂಖ್ಯ ಶಾಸ್ತ್ರವನ್ನು ಗಾಂಧರ್ವವೇದವನ್ನು ಗಜತುರಗ ಶಿಕ್ಷಾಶಾಸ್ತ್ರವನ್ನು ಹನ್ನೆರಡು ದಿವಸಗಳಲ್ಲಿ ಅಭ್ಯಾಸಮಾಡಿ, ಚಾಪವಿದ್ಯಾ ವಿಶಾರದನಾದ ಆತನ ಸಮೀಪದಲ್ಲಿ ಧನುರ್ವೇದಾಭ್ಯಾಸವನ್ನು ಮಾಡಬೇಕೆಂಬ ಇಚ್ಛೆಯಿಂದ ಐವತ್ತು ದಿವಸಗಳು ಅಹೋರಾತ್ರಗಳೂ ಬಿಡದೆ ದಶಾಂಗಗಳಿಂದ ಕೂಡಿರುವ ರಹಸ್ಯಸಹಿತವಾದ ಧನುರ್ವೇದವಷ್ಟನ್ನೂ ಚನ್ನಾಗಿ ಕಲಿತರು. ಆಗ ಆ ಬ್ರಾಹ್ಮಣ ಶ್ರೇಷ್ಠನು ಕೃಷ್ಣನನ್ನು ಕುರಿತು ಮತ್ಸ್ಯವು ಹಿಡಿದು ನುಂಗಿದ ತನ್ನ ಕುಮಾರಕನನ್ನು ಬದುಕಿಸಿ ಗುರು ದಕ್ಷಿಣೆಯಾಗಿ ಕೊಡಬೇಕೆಂದು ದುಃಖಾರ್ತನಾಗಿ ಪ್ರಾರ್ಥಿಸಲು, ಲೋಕತ್ರಯದಲ್ಲಿ ಯಾರಿಗೂ ಅಶಕ್ಯವಾದ ಆ ಕಾರ್ಯವನ್ನು 'ನಾನು ನಿರ್ವಹಿಸುತಲಿದ್ದೇನೆ' ಎಂದು ಗುರ್ವರ್ಥವಾಗಿ ಪ್ರತಿಜ್ಞೆಯನ್ನು ಮಾಡಿದನು. ಆ ಬಳಿಕ ರಾಮಕೃಷ್ಣರು ಆಚಾರ್ಯ ಕುಮಾರಕನನ್ನು ಕರತಂದು ಗುರುವಿಗೆ ಕೊಡಬೇಕೆಂದು ಹುಡುಕುತ, ಅವನನ್ನು ಕೊಂದ ನಿಶಾಚರನನ್ನು ಪಾತಾಳಲೋಕದಲ್ಲಿ ಯುದ್ಧದಲ್ಲಿ ಕೆಡಹಿ, ಅಲ್ಲಿಂದ ಯಮಪಟ್ಟಣಕ್ಕೆ ಹೋಗಿ ಯಮನನ್ನು ಜಯಿಸಿದರು; ಆ ಮಹಾನುಭಾವರ ಅನುಗ್ರಹದಿಂದ ಬಹುಕಾಲವು ಯಮಲೋಕದಲ್ಲಿದ್ದ ಗುರುಪುತ್ರನು ಯಥಾ ಪ್ರಕಾರವಾಗಿ ಶರೀರವಂತನಾಗಲು ಆ ಕುಮಾರಕನನ್ನು ಕರತಂದು ಗುರುವಿಗೆ ಕೊಟ್ಟರು; ಆಶ್ಚರ್ಯಕರವಾಗಿ ಅಚಿಂತ್ಯವಾಗಿರುವ ಈ ಅದ್ಭುತವನ್ನು ನೋಡಿ ಸಕಲ ಜನಗಳೂ ಆಶ್ಚರ್ಯಪಟ್ಟರು! ಮತ್ತೂ ಆ ಮಹಾತ್ಮರು ಗೋಧನಗಳನ್ನೂ ಅಶ್ವಗಳನ್ನೂ ಗುರುದಕ್ಷಿಣೆಯಾಗಿ ಕೊಟ್ಟರು. ಶ್ರೀಕೃಷ್ಣನು ಮತ್ತು ಗದಾ ಪರಿಘ ಆಯುಧಗಳ ದಿವ್ಯಾಸುರಗಳಾದ ಶಸ್ತ್ರಾಸ್ತ್ರಗಳ ಪ್ರಯೋಗಗಳನ್ನು ಕಲಿತು ಸಕಲಲೋಕಗಳಲ್ಲಿ ಮುಖ್ಯನೆನಿಸಿಕೊಂಡನು. ದಿವ್ಯರತ್ನ ಖಚಿತವಾಗಿ ಸೂರ್ಯಪ್ರಕಾಶಮಾನವಾಗಿರುವ ಮಹೇಂದ್ರನ ರಥವನ್ನೇರಿ ದೇವೇಂದ್ರನಿಗೆ ಪರಮಮಿತ್ರನಾಗಿ ಸಾರಥ್ಯದಲ್ಲಿ ಕುಶಲನಾಗಿರುವಂಥಾ ಮಾತಲಿಯು ಕುದುರೆಗಳನ್ನು ನಡಿಸಲು, ಸಪರಿವಾರವಾಗಿ ಸಹೋದರ ಸಹಿತನಾದ ಆ ಕಂಸನನ್ನು ಕೊಲ್ಲುವದಕ್ಕೆ ಈ ಪುರುಷೋತ್ತಮನಿಗೆ ಅಲ್ಲದೆ ಮತ್ತೊಬ್ಬನಿಗೆ ಸಾಮರ್ಥ್ಯವುಂಟೆ!" ಅಂದನು.

ಆ ಬಳಿಕ ಧರ್ಮರಾಯನು ಭೀಷ್ಮನನ್ನು ನೋಡಿ "ಬಹು ಶಸ್ತ್ರಾಸ್ತ್ರ ಸಂಪನ್ನನಾಗಿ ಶೌರ್ಯಧುರ್ಯನಾಗಿ ಅಂಧಕವೃಷ್ಣಿ ಮೊದಲಾದ ಸೇನಾಸಮೇತನಾಗಿ ಕಾರ್ತವೀರ್ಯ ಸಮಾನನಾಗಿ ಕಾಂಭೋಜ ದೇಶಾಧಿಪತಿಯೊಡನೆ ಹೋರಿದ ಕಂಸನನ್ನು ಬಾಲನಾಗಿ ಶಿಕ್ಷಾರಹಿತನಾಗಿರುವ ಈ ಕೃಷ್ಣನು ಜಯಿಸಿದ ವೃತ್ತಾಂತವಷ್ಟನ್ನೂ ಸವಿಸ್ತಾರವಾಗಿ ಹೇಳಬೇಕು" ಎಂದು ಪ್ರಾರ್ಥಿಸಲು ಭೀಷ್ಮನಿಂತೆಂದನು "ಕೇಳು ಧರ್ಮರಾಯನೆ, ಹಾಗೆ ಕುವಲಯಾಪೀಡವೆಂಬ ಆನೆಯನ್ನು ಕೊಂದ ಮೇಲೆ ಇಂದ್ರನು ಸಕಲ ಶಸ್ತ್ರಾಸ್ತ್ರ ಸಂಪನ್ನವಾಗಿರುವ ತನ್ನ ರಥವನ್ನು ಕಳುಹಿಸಲು ಕೃಷ್ಣನು ಸಂತೋಷಪಟ್ಟು ರಥಾ ರೂಢನಾಗಿ ಮಾತಲಿಯು ಸಾರಥ್ಯವನ್ನು ಮಾಡಲು ಯುದ್ಧಸನ್ನದ್ಧನಾಗಿದ್ದನು. ಯಾವನನ್ನು ನೋಡಿ ಸಕಲವಾದ ಅರಸುಗಳೂ ಗರುತ್ಮಂತನನ್ನು ನೋಡಿದ ಸರ್ಪಗಳೋಪಾದಿಯಲ್ಲಿ ಭಯಪಡುವರೋ—ಅಂಥಾ ಉಗ್ರಸೇನನ ಮಗನಾದ ಕಂಸನು, ಖಡ್ಗ ಕಾರ್ಮುಕ ಪ್ರಾಸನಿಸ್ತ್ರಿಂಶ ಮೊದಲಾದ ಅನೇಕಾಯುಧಗಳನ್ನು ಧರಿಸಿದ ಕಾಲುಮಂದಿಯು ಒಂದು ಕೋಟಿಯು, ಶೂರಾಗ್ರೇಸರರಾಗಿ ಯುದ್ಧದಲ್ಲಿ ಹಿಮ್ಮೆಟ್ಟದೆ ಇರುವ ಸೇನಾಧಿಪತಿಗಳು ಎಂಟು ಲಕ್ಷಗಳು, ರತ್ನ ಕಾಂಚನಧ್ವಜ ಕಕ್ಷ್ಯಾಲಂಕೃತಗಳಾಗಿರುವ ಮದ್ದಾನೆಗಳು ಎಂಟು ಲಕ್ಷಗಳು, ನಾನಾ ಭೂಷಣ ಭೂಷಿತವಾಗಿ ಅತಿವೇಗಶಾಲಿಗಳಾಗಿ ಚೌದೋಲುಗಳು ಹಾಕಿರುವ ಆನೆಗಳು ಹದಿನಾರು ಲಕ್ಷಗಳು, ಪರ್ವತಗಳೋಪಾದಿಯಲ್ಲಿ ಉನ್ನತಗಳಾಗಿ ಧ್ವಜಪತಾಕಾ ಶೋಭಿತಗಳಾಗಿರುವ ಚಿನ್ನದ ರಥಗಳು ಎಂಟುಲಕ್ಷಗಳು, ಮುತ್ತುಗದ ಹುವ್ವಿನ ಕಾಂತಿಯನ್ನು ತಿರಸ್ಕರಿಸುವ ಕೆಂಪಿನಕಾಂತಿಯುಳ್ಳ ಕುದುರೆಗಳು

ಪ್ರಕಾಶಿಸುತ್ತಲಿರುವದು ; ಅದನ್ನೂ ನೀನು ನೋಡಿದ್ದುಂಟಲ್ಲಾ ; ಆ ಸಭಾಮಧ್ಯದಲ್ಲಿ ಅಂಧಕ ವೃಷ್ಣಿಶ್ರೇಷ್ಠರು ಓಲಗಿಸಲು ಬಲರಾಮ ಸಮೇತನಾಗಿರುವ ವಾಸುದೇವನು ಒಂದು ದಿವಸದಲ್ಲಿ ಇಷ್ಟಕಥಾ ಗೋಷ್ಠಿಯಿಂದ ಪ್ರವರ್ತಿಸುತ್ತಿರುವ ಸಮಯದಲ್ಲಿ ಮೊದಲು ದಿವ್ಯಗಂಧ ಸಮೇತವಾದ ಮಲಯಮಾರುತಗಳು ಬೀಸಿದವು; ಆ ಬಳಿಕ ಪುಷ್ಪವೃಷ್ಟಿಯು ಸುರಿಯಿತು; ಆ ಬಳಿಕ ಆಕಾಶದಲ್ಲಿ ಸಹಸ್ರಸೂರ್ಯ ಪ್ರಕಾಶಮಾನವಾದ ಒಂದು ದಿವ್ಯ ತೇಜಸ್ಸು ತೋರಿತು ; ಅದರ ಸಂಗಡ ಸೂರ್ಯಕಾಂತಿ ಸಮೂಹವು ಮುಹೂರ್ತ ಮಾತ್ರಕ್ಕೆ ಭೂಮಿಯಲ್ಲಿ ಇಳಿಯಿತು : ಅಂಥಾ ತೇಜೋರಾಶಿಮಧ್ಯದಲ್ಲಿ ಸಕಲ ದೇವತಾಗಣಗಳು ಓಲಗಿಸಲು ಐರಾವತವನ್ನೇರಿ ದೇವೇಂದ್ರನು ತೋರಲು ರಾಮಕೃಷ್ಣರು ಸಕಲ ಯಾದವಪರಿವೃತರಾಗಿ ಉಗ್ರಸೇನಪುರಸ್ಸರವಾಗಿ ಆತನಿಗೆ ನಮಸ್ಕರಿಸಿದರು. ಆತನು ಐರಾವತದ್ವಿಶೆಯಿಂದ ಇಳಿದು ವಾಸುದೇವನನ್ನೂ ಬಲರಾಮನನ್ನೂ ಉಗ್ರಸೇನನನ್ನೂ ಆಲಿಂಗಿಸಿಕೊಂಡು, ವಸುದೇವನು ಆಹುಕನು ವಿತವ್ರುವು ಪ್ರದ್ಯುಮ್ನನು ಸಾಂಬನು ನಿಶಠನು ಅನಿರುದ್ಧನು ಸಾತ್ಯಕಿಯು ಗದನು ಸಾರಣನು ಅಕ್ರೂರನು ಭಾನುವು ಝಲ್ಲಿಯು ವಿದುರನು ಕೃತವರ್ಮನು ಚಾರುದೇಷ್ಣನು ಮೊದಲಾದವರನ್ನೂ ಕ್ರಮವಾಗಿ ಆಲಿಂಗಿಸಿಕೊಂಡು, ಅವರು ಮಾಡಿದ ಪೂಜೆಗಳನ್ನು ಅಂಗೀಕರಿಸಿ, ಸುಖದಿಂದ ಕುಳಿತುಕೊಂಡು, ಕೃಷ್ಣನನ್ನು ನೋಡಿ 'ಎಲೈ ಮಹಾತ್ಮನೆ, ನಮ್ಮ ತಾಯಿಯಾದ ಅದಿತಿಯು ನಿನ್ನ ಸಮೀಪಕ್ಕೆ ಕಳುಹಿಸಲು ನಾನು ಬಂದೆನು; ಆ ದೇವಿಯ ಕುಂಡಲಗಳನ್ನು ನರಕಾಸುರನು ಅಪಹರಿಸಿಕೊಂಡು ಹೋಗಿದ್ದಾನೆ; ಈ ಲೋಕವಲ್ಲಿ ಇವನೇ ಅಧಿಪತಿಯಾಗಿರುವದರಿಂದ ಭೂಪುತ್ರನಾದ ನರಕಾಸುರನನ್ನು ಸಂಹರಿಸು' ಎಂದು ಇಂದ್ರನು ಕೃಷ್ಣಸ್ವಾಮಿಗೆ ಹೇಳಿದನು."

---

## ೬೧ ನೇ ಅಧ್ಯಾಯ.—ಅರ್ಘ್ಯಾಪಹರಣ ಪರ್ವಶೇಷ. (ಶ್ರೀಕೃಷ್ಣವರ್ಣನೆ.)

"ಕೇಳು ಧರ್ಮರಾಜನೆ, ಆ ಪ್ರಕಾರದಿಂದ ನುಡಿದ ಇಂದ್ರನ ವಾಕ್ಯವನ್ನು ಕೇಳಿ ಸಂತೋಷಪಟ್ಟು ಮಹಾಭುಜಬಲಶಾಲಿಯಾಗಿ ತೇಜೋಧುರಂಧರನಾಗಿ ಅಜೇಯನಾಗಿ ಯದುವಂಶ ದೀಪಕನಾಗಿ ವೈರಿಭಯಂಕರನಾಗಿ ದೇವಕೀಪುತ್ರನಾಗಿ ಚಕ್ರಧರನಾದ ಕೃಷ್ಣನು 'ಹಾಗೆಯೇ ಆಗಲೀ ! ಭೂಮಿಗೆ ಮಗನಾದ ನರಕಾಸುರನನ್ನು ಕೊಂದು ಕುಂಡಲಗಳನ್ನು ತಂದು ಕೊಡುತಲಿದ್ದೇನೆ !' ಎಂದು ದೇವೇಂದ್ರನ ಕೂಡೆ ವಿನಯಪೂರ್ವಕವಾಗಿ ನುಡಿದು, ಬಲಭದ್ರನು ಪ್ರದ್ಯುಮ್ನನು ಅನಿರುದ್ಧನು ಮೊದಲಾದವರಿಗೆ ಈ ಅರ್ಥವನ್ನು ಹೇಳಿ, ಶಂಖ ಚಕ್ರ ಮೊದಲಾದ ದಿವ್ಯಾಯುಧಗಳನ್ನು ಧರಿಸಿ, ಗರುಡವಾಹನವನ್ನೇರಿ, ದೇವೇಂದ್ರನು ಮೊದಲಾದ ದೇವತೆಗಳು ಸಂತೋಷಭರಿತರಾಗಿ ಸ್ತುತಿಸುತ್ತ ಸಂಗಡಬರಲು ದೇವಕಾರ್ಯಾರ್ಥವಾಗಿ ಹೋಗಿ, ಅತ್ಯುಗ್ರನಾಗಿ ನರಕಾಸುರನ ಸೇನೆಯನ್ನು ಅಲ್ಲಿರುವ ವೀರಭಟರನ್ನೂ ಕೊಂದು, ಆಚೆಗೆ ನಡದು ಹದವಾದ ಅಂಚುಗಳುಳ್ಳಂಥಾದ್ದಾಗಿ ಆರುಸಾವಿರ ಸಂಖ್ಯೆಯುಳ್ಳ ಮುರಪಾಶಗಳೆಂಬ ದಿವ್ಯಾಸ್ತ್ರಗಳೊಡನೆ ಪರಿವಾರಸಹಿತವಾಗಿ ಬಂದ ಮುರಾಸುರನ ಶಿರಸ್ಸನ್ನು ಹುಯಿದು, ಶಿಲಾಸಮೂಹಗಳನ್ನು ದಾಟಿ, ನಿಕುಂಭನೆಂಬ ರಾಕ್ಷಸನನ್ನು ಕೊಂದು, ಪಟುಭುಜಬಲಪರಾಕ್ರಮಶಾಲಿಯಾಗಿ ಸಾವಿರ ಅಸುರರಿಗೆ ಸಮಾನವಾದ ಬಲವುಳ್ಳವನಾಗಿ ದೇವತೆಗಳಿಗೂ ಭಯಂಕರನಾಗಿರುವ ಹಯಗ್ರೀವನೆಂಬ ದಾನವನನ್ನು ಕೊಂದು, ಲೋಹಿತಗಂಗಾನದೀ ಮಧ್ಯದಲ್ಲಿರುವ ಯೌತಕವೆಂಬ ಪಟ್ಟಣದಲ್ಲಿರುವ ವಿರೂಪಾಕ್ಷನನ್ನು ಕೊಂದು, ಘೋರಾಕಾರಿಗಳಾದ ಪಂಚಜನರೆಂಬ ಹೆಸರುಳ್ಳ ಐದುಮಂದಿ ಮಹಾಸುರರನ್ನು ಸಂಹರಿಸಿ, ಅಲ್ಲಿಂದ ಹೊರಟು ಮಹತ್ತಾದ ಕಾಂತಿಯಿಂದ ಪ್ರಕಾಶಿಸುತ್ತಲಿರುವ ಪ್ರಾಗ್ಜ್ಯೋತಿಷ ಪಟ್ಟಣದ ಸಮೀಪಕ್ಕೆ ಹೋಗಿ 'ಮೊದಲು ಯಾವಾಗಲೂ ದೇವಾಸುರರಿಗೆ ಇಂಥಾ ಯುದ್ಧವಿಲ್ಲಾ !' ಎಂಬುವ ರೀತಿಗೆ ಅತ್ಯಾಶ್ಚರ್ಯಕರವಾಗಿ ದಾರುಣವಾದ ಯುದ್ಧದಲ್ಲಿ ಚಕ್ರಗಳಿಂದಲೂ ನೇಗಿಲುಗಳಿಂದಲೂ ಶಕ್ತಿಗಳಿಂದಲೂ ಖಡ್ಗ ಮೊದಲಾದ ಆಯುಧಗಳಿಂದಲೂ ಹೋರಿದ ಎಂಟುಲಕ್ಷ ದಾನವರನ್ನು ಸಂಹರಿಸಿ, ಪಾತಾಳಬಿಲವನ್ನು ಹೊಕ್ಕು, ದೇವತೆಗಳಿಗೆ ಭಯಂಕರನಾದ ನರಕಾಸುರನ ಮೇಲೆ ಕಾಣಿಸಿಕೊಂಡು, ಪೂರ್ವದಲ್ಲಿ ಮಧುವೆಂಬ ದೈತ್ಯನೊಡನೆ ಯುದ್ಧ ಮಾಡಿದರೀತಿಗೆ ಭಯಂಕರವಾದ ಯುದ್ಧವನ್ನು ಮಾಡಿ, ಆತನ ಸೈನ್ಯವನ್ನು ನಿಶ್ಶೇಷವಾಗಿ ಕೊಂದು,

ಸಾವಿರ ಅಂಚುಗಳಿಂದ ಪ್ರಕಾಶಮಾನವಾದ ಚಕ್ರದಿಂದ ಆ ನರಕಾಸುರನ ಶಿರಸ್ಸನ್ನು ಕತ್ತರಿಸಿದನು ; ಆ ತಲೆಯು ವಜ್ರಾಯುಧದ ಪೆಟ್ಟಿನಿಂದ ಬಿದ್ದ ವೃತ್ರಾಸುರನ ಶಿರಸ್ಸಿನೋಪಾದಿಯಲ್ಲಿ ಭೂಮಿಯಲ್ಲಿ ಬಿತ್ತು. ಹಾಗೆ ಬಿದ್ದ ಕುಮಾರಕನನ್ನು ನೋಡಿ ಭೂಮಿದೇವಿಯು ಕುಂಡಲಗಳನ್ನು ತಂದು ಶ್ರೀಕೃಷ್ಣಸ್ವಾಮಿಗೆ ಕೊಟ್ಟು 'ಎಲೈ ದನುಜಭಂಜನನೆ, ಈ ನರಕಾಸುರನನ್ನು ಮೊದಲು ನೀನೇ ಸೃಜಿಸಿ ಆ ಬಳಿಕ ನೀನೇ ಸಂಹರಿಸಿದೆ ; ನಿನ್ನ ಮನಸ್ಸು ಬಂದ ರೀತಿಗೆ ಮಾಡು ; ಈತನ ಮಕ್ಕಳನ್ನು ಪರಿಪಾಲಿಸು ' ಅಂದಳು. ವಾಸುದೇವನು ಆ ಭೂದೇವಿಯನ್ನು ನೋಡಿ 'ದೇವಋಷಿ ಪಿತೃಭಯಂಕರನಾಗಿ ಬ್ರಾಹ್ಮಣ ದ್ರೋಹಿಯಾಗಿ ಮನುಷ್ಯಭಕ್ಷಕನಾಗಿ ಸಕಲ ಲೋಕಕಂಟಕನಾದ ನಿನ್ನ ಕುಮಾರಕನು ಸಕಲ ಜಗತ್ಪೂಜ್ಯಳಾದ ಅದಿತಿಗೆ ಉಪದ್ರವನ್ನು ಮಾಡಿ ಆ ದೇವಿಯು ಧರಿಸಿದ್ದ ಕುಂಡಲಗಳನ್ನು ತಂದವನಾದ್ದರಿಂದ ಈ ಮದಾಂಧನನ್ನು ಸಂಹರಿಸಿದೆನು ; ಹೀಗೆ ಮಾಡಿದೆನೆಂದು ಕೋಪಮಾಡಬೇಡ ; ನಿನ್ನ ಮಗನಿಗೆ ಉತ್ತಮವಾದ ಗತಿಯನ್ನು ಕೊಡುತಲಿದ್ದೇನೆ ; ನಿನ್ನ ಭಾರವನ್ನು ತೀರಿಸಿದೆನು ; ನೀನು ಸುಖವಾಗಿರು' ಎಂದು ಶ್ರೀಕೃಷ್ಣಸ್ವಾಮಿಯು ಭೂಮಿದೇವಿಗೆ ಹೇಳಿದನು."

---

೬೦ ನೇ ಅಧ್ಯಾಯ.—ಅರ್ಘ್ಯಾಪಹರಣ ಪರ್ವ ಶೇಷ. (ಶ್ರೀಕೃಷ್ಣವರ್ಣನೆ.)

"ಕೇಳು ಧರ್ಮರಾಯನೆ, ಈ ಪ್ರಕಾರವಾಗಿ ಸತ್ಯಭಾಮಾಸಹಾಯನಾದ ಶ್ರೀಕೃಷ್ಣಸ್ವಾಮಿಯು ಭೂಮಿಗೆ ಮಗನಾದ ನರಕಾಸುರನನ್ನು ಸಂಹರಿಸಿ, ಇಂದ್ರಾದಿ ಲೋಕಪಾಲಕರು ಓಲಗಿಸಲು, ಪ್ರಾಗ್ಜ್ಯೋತಿಷಪಟ್ಟಣಕ್ಕೆ ಹೋಗಿ ನರಕಾಸುರನ ಮನೆಯನ್ನು ಹೊಕ್ಕು, ಅಲ್ಲಿ ಅಪರಿಮಿತವಾದ ಧನಗಳನ್ನೂ ಅನರ್ಘ್ಯವಾದ ಪದ್ಮರಾಗ ಪ್ರವಾಳ ವೈಡೂರ್ಯ ಮೊದಲಾದ ರತ್ನಗಳನ್ನೂ ಚಂದ್ರ ಪ್ರಭೆಯುಳ್ಳ ಚಂದ್ರಕಾಂತ ಮಣಿಗಳನ್ನೂ ಅಗ್ನಿಜ್ವಾಲೆಗೆ ಸಮಾನವಾದ ಚಿನ್ನದರಾಶಿಗಳನ್ನೂ ನೋಡಿ, ಸುವರ್ಣ ಖಚಿತವಾಗಿ ಮುಕ್ತಾಮಣಿಗಳಿಂದ ರಚಿಸಲ್ಪಟ್ಟ ಆತನ ಒಳಮನೆಯನ್ನು ಹೊಕ್ಕು, ಕುಬೇರನ ಮನೆಯಲ್ಲಾದರೂ ಇಂದ್ರನ ಅರಮನೆಯಲ್ಲಾದರೂ ಕಾಣಲ್ಪಡದೆಯಿರುವ ಅನೇಕ ರತ್ನಕಾಂಚನ ಸಮೂಹವನ್ನು ಚಂದ್ರ ಪ್ರಭೆಯುಳ್ಳ ಆ ಮನೆಯಲ್ಲಿ ನೋಡಿದನು ; ಹೀಗೆ ನರಕಾಸುರನನ್ನು ಸಂಹರಿಸಿ ಕುಂಡಲಗಳನ್ನು ತಕ್ಕೊಂಡು ಬಂದ ಪುಂಡರೀಕಾಕ್ಷನನ್ನು ನೋಡಿ ದೇವೇಂದ್ರನು ನಾನಾಪ್ರಕಾರವಾದ ಮಣಿ ರತ್ನ ಸುವರ್ಣಗಳನ್ನೂ ಮತ್ತೂ ಹೇಮಸೂತ್ರಗಳಿಂದ ಕೂಡಿ ತೋಮರ ಸಹಿತಗಳಾಗಿ ಕಾರ್ಯವಂತಗಳಾಗಿ ಗಂಭೀರಾಕಾರಗಳಾಗಿ ಹವಳ ಮುತ್ತು ಮೊದಲಾದ ಮಣಿಗಳಿಂದ ಮಾಡಲ್ಪಟ್ಟ ಜೋಡೋಲುಗಳಿಂದ ವಿರಾಜಿತವಾಗಿ ವಿಚಿತ್ರವಾದ ವಸ್ತ್ರಗಳಿಂದ ಪ್ರಕಾಶಮಾನಗಳಾಗಿ ವಿಮಲ ಪತಾಕಾಭೂಷಿತಗಳಾದ ಇಪ್ಪತ್ತುಸಾವಿರ ಭದ್ರಗಜಗಳನ್ನೂ ನಲವತ್ತುಸಾವಿರ ಹೆಣ್ಣಾನೆಗಳನ್ನೂ ಮನೋವೇಗವುಳ್ಳ ಎಂಟುಲಕ್ಷ ಕುದುರೆಗಳನ್ನೂ ಕೊಲ್ಲಾರ ಬಂಡಿಗಳನ್ನೂ ಮೃದುವಾದ ರತ್ನ ಕಂಬಳಿಗಳನ್ನೂ ರತ್ನ ಕಾಂಚನಗಳನ್ನೂ ಸುವರ್ಣನಿರ್ಮಿತವಾದ ಹಾಸಿಗೆಗಳನ್ನೂ ಮಣಿಗಳನ್ನೂ ಮನಸ್ಸುಬಂದರೀತಿಗೆ ನುಡಿಯುತ ನೋಡುವದಕ್ಕೆ ಯೋಗ್ಯವಾಗಿರುವ ಗಿಣಿ ಗೊರವ ಮೊದಲಾದ ಪಕ್ಷಿ ಗಣಗಳನ್ನೂ ಚಂದನಾಗರು ಮಿಶ್ರಿತಗಳಾದ ಬಹುವಿಧ ಯಾನಗಳನ್ನೂ ತೋರಿಸಿ 'ಇವಷ್ಟೂ ರಾಜಧರ್ಮ ಪ್ರಕಾರದಿಂದ ನೀನು ಸಂಪಾದಿಸಿದವನಾದ್ದರಿಂದ ವೃಷ್ಣಿಶ್ರೇಷ್ಠರಿಗೆ ನಿವಾಸಸ್ಥಾನವಾದ ದ್ವಾರಕಾಪಟ್ಟಣಕ್ಕೆ ಕಳುಹಿಸುತಲಿದೇನೆ' ಎಂದು ನುಡಿದು, ದೇವ ಗಂಧರ್ವ ದೈತ್ಯೇಯಾದಿ ಲೋಕಗಳನ್ನು ಜಯಿಸಿ ತಂದ ನರಕಾಸುರನ ಮನೆಯಲ್ಲಿರುವಂಥಾ ಅಮೂಲ್ಯವಾದ ರತ್ನಗಳನ್ನು ಗರುತ್ಮಂತನಿಗೆ ಒಪ್ಪಿಸಿದನು.

"ಕೇಳು ಯುಧಿಷ್ಠಿರನೆ, ಗರುತ್ಮಂತನು ಅದಷ್ಟನ್ನೂ ತಕ್ಕೊಂಡು ದ್ವಾರಕಾಪಟ್ಟಣಕ್ಕೆ ಸಾಗಿಸಿಕೊಂಡು ಬರಲು, ದೇವೇಂದ್ರನು ಶ್ರೀಕೃಷ್ಣ ಸಮೇತನಾಗಿ ಹೊರಟು ಮಣಿಪರ್ವತಕ್ಕೆ ಬಂದು, ಪರಿಮಳಿಸುತಲಿರುವ ಮಂದಮಾರುತಗಳೂ ಬಹು ರತ್ನ ಪ್ರಭಾವಿಶೇಷಗಳೂ ಉಂಟಾಗಿ ಚಂದ್ರಾದಿತ್ಯ ದೇವ ಋಷಿಗಣಗಳ ಪ್ರಭೆಗಳನ್ನು ಮುಚ್ಚುತಲಿರುವ ತೇಜಸ್ಸಿನಿಂದ ಒಪ್ಪಿ ವಿಚಿತ್ರವಾದ ಮೇಘ ಸಮೂಹಗಳಿಂದ ಕೂಡಿ ಸುವರ್ಣಮಯವಾದ ಪದಾರ್ಥಗಳಿಂದ ಪ್ರಕಾಶಮಾನವಾದ ಸೆಜ್ಜೆಗಳಿಂದೊಪ್ಪುತಲಿರುವ ಆ ಪರ್ವತವನ್ನು ಅಷ್ಟುಮಂದಿಯೂ ಆಶ್ಚರ್ಯಪಟ್ಟು

ನೋಡುತ್ತಿದ್ದರು. ಬಲರಾಮ ಮಹೇಂದ್ರರ ಅಪ್ಪಣೆಯನ್ನು ತಕ್ಕೊಂಡು, ಸಂತೋಷದಿಂದ ಭುಜ ಬಲಶಾಲಿಯಾದ ಯದುವಲ್ಲಭನು ಮಣಿ ಪರ್ವತಕ್ಕೆ ಹೋಗಿ, ವೈಡೂರ್ಯ ನಿರ್ಮಿತವಾಗಿ ತೋರಣ ಪತಾಕಾಲಂಕೃತಗಳಾದ ಬಾಗಲುಗಳುಳ್ಳ ಮನೆಗಳನ್ನೂ ಅತಿ ವಿಶಾಲವಾಗಿ ರತ್ನ ಸೋಪಾನ ಖಚಿತಗಳಾದ ಸೆಜ್ಜೆಗಳನ್ನು ನೋಡುತ್ತಿದ್ದನು. ಆಗ ಜಡೆಯನ್ನು ಧರಿಸಿ ಚಂದ್ರಗಾವಿ ಸೀರೆಗಳನ್ನುಟ್ಟು ವ್ರತ ನಿರತರಾಗಿ ಸುವರ್ಣಛಾಯೆವುಳ್ಳ ಶರೀರಗಳುಳ್ಳಂಥಾ ದೇವ ಗಂಧರ್ವ ಸುರ ಮನುಷ್ಯ ಕನ್ಯಕೆಯರು ಆತನನ್ನು ನೋಡಿದ ಮಾತ್ರದಿಂದಲೇ ವ್ರತ ಶೋಕ ದೈನ್ಯಗಳನ್ನು ಬಿಟ್ಟು, ಸಕಲಾಲಂಕೃತ ಶೋಭಿತರಾಗಿ ಸ್ವರ್ಗ ಸಮಾನವಾದ ಆ ಮಣಿಪರ್ವತದಲ್ಲಿರುವ ಆ ಯದುವಲ್ಲಭನ ಸಮೀಪಕ್ಕೆ ಹೋಗಿ, ಆತನನ್ನು ಸುತ್ತಿಕೊಂಡು ಕೈಮುಗಿದು, ಶ್ರೀಮಾಧವನನ್ನು ಕುರಿತು 'ಎಲೈ ಮಹಾತ್ಮನೆ, ಮೊದಲು ನಾರದ ಮುನೀಂದ್ರನು '—ನಾರಾಯಣನಾದ ಯದುವಲ್ಲಭನು ಶಂಖ ಚಕ್ರಾದ್ಯಾಯುಧಗಳನ್ನು ಧರಿಸಿ ದೇವ ಕಾರ್ಯಾರ್ಥವಾಗಿ ಈ ಪ್ರದೇಶಕ್ಕೆ ಬಂದು ಮುರಾಸುರಪ್ರಮುಖರೊಡನೆ ಕೂಡಿದ ನರಕಾಸುರನನ್ನು ಸಂಹರಿಸಿ, ಆತನ ಐಶ್ವರ್ಯವನ್ನಪಹರಿಸಿ, ನಿಮ್ಮಷ್ಟುಮಂದಿಯನ್ನೂ ಮದುವೆಯಾಗುತಲಿದಾನೆ—' ಎಂದು ತಿಳುಹಿಸಿ ಹೋದನು; ನಾವು ಶ್ರೀಕೃಷ್ಣನು ಯಾವಾಗ ಬರುತಲಿದಾನೆಯೊ ಎಂದು ಮನಸ್ಸಿನಲ್ಲಿ ಯಾವಾಗಲೂ ನಿನ್ನನ್ನೇ ಸ್ಮರಿಸುತ ದಾನವ ಸಂರಕ್ಷಿತರಾಗಿ ಘೋರವಾದ ತಪಸ್ಸನ್ನು ಮಾಡುತಲಿದೇವೆ; ಅದಲ್ಲದೆ ನಾರದನು ಹೇಳಿದ ತೆರದಿಂದ ವಾಯುದೇವನೂ ನಮಗೆ ಹೇಳಿದ್ದಾನೆ; ನಮ್ಮ ಮನೋರಥಗಳನ್ನು ನೆರವೇರಿಸುವದಕ್ಕೆಣಿಸಿ ನೀವಿಲ್ಲಿಗೆ ಬಂದಿರೀ; ತ್ರಿಕಾಲಜ್ಞಾನ ಸಂಪನ್ನನಾದ ನಾರದ ಮಹರ್ಷಿಯ ವಾಕ್ಯವು ಅಮೋಘವಾದ್ದರಿಂದ ಗಾಂಧರ್ವ ವಿವಾಹದಿಂದ ನಮ್ಮೆಲ್ಲರನ್ನೂ ಪರಿಗ್ರಹಿಸಬೇಕು; ಪೂರ್ಣ ಚಂದ್ರನಿಗೆ ಸಮಾನವಾದ ನಿನ್ನ ವದನಾರವಿಂದವನ್ನು ನೋಡಿದ್ದರಿಂದ ನಮ್ಮ ತಪಸ್ಸುಗಳು ಸಫಲಗಳಾದವು' ಎಂದು ನುಡಿದರು. ಗೋಗಣಪರಿವೃತವಾದ ಮಹಾವೃಷಭದೋಪಾದಿಯಲ್ಲಿ ಆ ಸ್ತ್ರೀಜನರ ಮಧ್ಯದಲ್ಲಿ ಒಪ್ಪುತಲಿರುವ ಗೋವಿಂದನನ್ನು ಅಮರಸಮೂಹಗಳು ಆನಂದದಿಂದ ನೋಡುತ್ತಿದ್ದರು. ಆ ಬಳಿಕ ಶ್ರೀಕೃಷ್ಣಸ್ವಾಮಿಯು ಅನುರಾಗದಿಂದ ಹಾಗೆ ನುಡಿಯುತಲಿದ್ದ ಸ್ತ್ರೀಯರನ್ನು ನೋಡಿ 'ನೀವು ಎಣಿಸಿದರೀತಿಗೆ ಮಾಡುತಲಿದೇನೆ' ಎಂದು ಸಮಾಧಾನವನ್ನು ಮಾಡಿ ಬಹುವಿಧಗಳಾದ ರತ್ನಗಳನ್ನೂ ಆ ವನಿತಾರತ್ನಗಳನ್ನೂ ಪರಿಜನ ಸಮೇತವಾಗಿ ದ್ವಾರಕಾಪಟ್ಟಣಕ್ಕೆ ಕಳುಹಿಸಿ, ನಾನಾವಿಧ ಪಕ್ಷಿಗಣಗಳು ಮದ್ದಾನೆಗಳು ಸಿಂಹಶರಭ ವರಾಹಗಳು ಸರ್ಪಗಳು ಕಪಿಗಳು ಕೃಷ್ಣಮೃಗಗಳು ವಿಚಿತ್ರಗಳಾದ ನವಿಲುಗಳು ರತ್ನ ಶಿಖರಗಳು ವಿಸ್ತಾರವಾದ ಶಿಲಾತಲಗಳು ಮನೋಹರಗಳಾದ ತಟಪ್ರದೇಶಗಳು ಇನ್ನೂ ಅನೇಕ ವಿಚಿತ್ರವಸ್ತುಗಳಿಂದ ಕೂಡಿರುವ ಆ ಮಣಿ ಪರ್ವತವನ್ನು ಸಕಲಜನಗಳೂ ನೋಡುತ್ತಿರಲು ಸಮೂಲವಾಗಿ ಕಿತ್ತು ಗರುಡನ ಮೇಲಿರಿಸಿ ಅಮೃತದೋಪಾದಿಯಲ್ಲಿ ಬಿಳುಪಾಗಿ ಪೂರ್ಣ ಚಂದ್ರನಿಗೆ ಸಮಾನವಾಗಿರುವ ವರುಣ ಛತ್ರವನ್ನೂ ಮತ್ತೂ ಅನೇಕ ದಿವ್ಯ ರತ್ನಗಳನ್ನೂ, ಆತನ ಮೇಲಿರಿಸಿ ಇಂದ್ರ, ಬಲರಾಮ ಸಹಿತವಾಗಿ ಗರುಡನ ಮೇಲೇರಿಕೊಂಡನು. ಮೇರು ಶಿಖರಸಮಾನವಾಗಿ ಮಹಾಬಲಶಾಲಿಯಾದ ಗರುತ್ಮಂತನು ಅಷ್ಟುಭಾರವನ್ನೂ ಸಹಿಸುತ ತನ್ನ ರೆಕ್ಕೆಗಳನ್ನು ಬೀಸುತ ಹತ್ತು ದಿಕ್ಕುಗಳಲ್ಲಿ ಧ್ವನಿಯನ್ನು ಹುಟ್ಟಿಸುತ ತನ್ನ ಮನೋವೇಗದಿಂದ ಪರ್ವತ ಶಿಖರಗಳನ್ನು ನಡುಗಿಸುತ ವೃಕ್ಷಗಳನ್ನು ಕೀಳುತ ಮೇಘಸಮೂಹಗಳನ್ನು ಹಾರಿಸುತ ಆಕಾಶಮಾರ್ಗಕ್ಕೆ ಹಾರಿ, ವೈಶ್ವಾನರ ಮಾರ್ಗವನ್ನು ತಿಳಿದು, ಗ್ರಹನಕ್ಷತ್ರಗಳನ್ನೂ ಸಪ್ತಋಷಿಗಳನ್ನೂ ತನ್ನ ಪ್ರಭಾವಿಶೇಷದಿಂದ ಅತಿಕ್ರಮಿಸಿ, ಚಂದ್ರಸೂರ್ಯರು ಸಂಚರಿಸುವ ಮಾರ್ಗವನ್ನೇರಿ ಮೇರುಮಧ್ಯಶಿಖರದಲ್ಲಿ ನಿಂತನು. ಆ ಮಧುಸೂದನನು ಮರುತ್ತುಗಳು ವಿಶ್ವೇದೇವತೆಗಳು ಸಿದ್ಧರು ಸಾಧ್ಯರು ಅಶ್ವಿನೀದೇವತೆಗಳು ಮೊದಲಾದ ದೇವತೆಗಳ ನಿವಾಸಸ್ಥಾನಗಳನ್ನು ನೋಡುತ ಸುಕೃತಿಗಳಿಗೆ ಪ್ರಾಪ್ಯಸ್ಥಾನವಾದ ಸ್ವರ್ಗಕ್ಕೆ ಹೋಗಿ, ವೈಜಯಂತ ಸಮೀಪಕ್ಕೆ ಹೋಗಿ ಗರುಡನ ದೆಸೆಯಿಂದ ಇಳಿದು, ಬಲರಾಮನೂ ತಾನೂ ಅದಿತಿಯ ಪಾದಗಳಿಗೆ ನಮಸ್ಕರಿಸಿ, ದಕ್ಷ ಬ್ರಹ್ಮನು ಮೊದಲಾದ ಸಕಲ ದೇವಗಣ ಪೂಜ್ಯಮಾನವಾಗಿ, ಅನೇಕ ದಿವ್ಯ ರತ್ನಗಳನ್ನೂ ದಿವ್ಯ ಕುಂಡಲಗಳನ್ನೂ ಅದಿತಿಗೆ ಕೊಟ್ಟನು. ಅದಿತಿಯು ಕುಂಡಲಗಳನ್ನು ತಕ್ಕೊಂಡು ಸಂತೋಷದ

ಟ್ಟು ಬಲರಾಮಸಹಿತನಾದ ಶ್ರೀಕೃಷ್ಣಸ್ವಾಮಿಯನ್ನು ಪೂಜಿಸಿದಳು. ಆ ಬಳಿಕ ಶಚೀದೇವಿಯು ಸತ್ಯಭಾಮೆಯನ್ನು ಕರೆದುಕೊಂಡು ಹೋಗಿ, ಆ ಸ್ತ್ರೀರತ್ನವು ಕೃಷ್ಣನ ಪ್ರಾಣಕಾಂತೆಯೆಂದು ಅದಿತಿದೇವಿಗೆ ತಿಳುಹಿಸಲು ಆಕೆಯು ಆಕೆಯನ್ನು ನೋಡಿ 'ಯದುವಲ್ಲಭನು ಮನುಷ್ಯಾವತಾರದಿಂದ ಭೂಮಿಯಲ್ಲಿರುವ ಪರ್ಯಂತವೂ ಯೌವನವುಂಟಾಗಿ ಸಕಲ ದಿವ್ಯ ಗಂಧ ಸಮೇತವಾಗಿರುವ ಶರೀರವುಳ್ಳಂಥಾವಳಾಗಿರು!' ಎಂದು ಶ್ರೀಕೃಷ್ಣನಿಗೆ ಪ್ರಿಯವಾಗಿ ಹರಸಿದಳು. ಶಚೀದೇವಿಯು ಸತ್ಯಭಾಮೆಯನ್ನು ಕರೆಕೊಂಡು ಹೋಗಿ ಕೆಲವುಹೊತ್ತು ಇಷ್ಟಾಲಾಪಗಳನ್ನಾಡುತ್ತಿದ್ದು ಆ ಬಳಿಕ ಶ್ರೀಕೃಷ್ಣನಿದ್ದ ತಾವಿಗೆ ಕಳುಹಿಸಿದಳು. ಈ ಪ್ರಕಾರದಿಂದ ದೇವಗಣ ಪೂಜಿತನಾಗಿ ಆ ಸತ್ಯಭಾಮಾ ಮನೋಹರನು ಋಷಿಗಣಗಳು ಓಲಗಿಸಲು, ಸ್ವರ್ಗಲೋಕದ್ದೆಸೆಯಿಂದ ಹೊರಟು, ಅನೇಕ ದೂರವನ್ನು ದಾಟಿ, ವರ್ಧಮಾನಪುರಕ್ಕೆ ಬಾಗಿಲಾಗಿರುವ ದ್ವಾರಕಾ ಪಟ್ಟಣವನ್ನು ಸೇರಿದನು" ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

## ೬೩ನೇ ಅಧ್ಯಾಯ.—ಅರ್ಘ್ಯಾಪಹರಣಪರ್ವಶೇಷ. (ಶ್ರೀಕೃಷ್ಣವರ್ಣನೆ.)

ಆ ಬಳಿಕ ಭೀಷ್ಮನು ಧರ್ಮರಾಯನನ್ನು ನೋಡಿ "ಕೇಳು ಧರ್ಮರಾಯನೆ, ಆ ಪಟ್ಟಣವು ನಾಲ್ಕು ದಿಕ್ಕುಗಳಲ್ಲಿಯೂ ಪುಷ್ಪ ಫಲಸಮೇತಗಳಾದ ಉದ್ಯಾನವನಗಳಿಂದಲೂ ಸೂರ್ಯ ಚಂದ್ರರೋಪಾದಿಯಲ್ಲಿ ಪ್ರಕಾಶಮಾನವಾಗಿ ಮೇರು ಶಿಖರಾಕಾರಗಳಾಗಿ ಮನೋಹರಗಳಾದ ಮನೆಗಳಿಂದಲೂ ಕಮಲ ಸಮೂಹಗಳಿಂದಲೂ ಹಂಸಕಾರಂಡವಾದಿ ಜಲಪಕ್ಷಿಗಳಿಂದಲೂ ಗಂಗೆಗೂ ಸಮುದ್ರಕ್ಕೂ ಸಮಾನವಾಗಿರುವ ಅಗಳುಗಳಿಂದಲೂ ಒಪ್ಪುತ, ಬಿಳೀ ಮೇಘದೋಪಾದಿಯಲ್ಲಿ ಪ್ರಕಾಶಿಸುತ್ತಲಿರುವ ಪ್ರಾಕಾರದಿಂದ ಸುತ್ತಲ್ಪಟ್ಟಂಥಾದ್ದಾಗಿ, ಮೇಘಪಙ್ಕ್ತಿಯಿಂದ ಸುತ್ತಲ್ಪಟ್ಟ ಅಮರಾವತೀ ಪಟ್ಟಣದ ತೆರದಿಂದ ಕಾಣಲ್ಪಡುತ, ನಂದನವನೋಪಮಾನವಾಗಿ ಮಿಶ್ರಕೋದ್ಯಾನ ನಿಭವಾಗಿ ಚೈತ್ರರಥಾರಾಮಸದೃಶವಾಗಿ ಪಿತಾಮಹನ ಪ್ರತೀಕಾಶವಾಗಿ ವೈಭ್ರಾಜೋಪವನ ಸಮಾನವಾಗಿ ನಿರಂತರ ಕುಸುಮಸಮೇತಗಳಾದ ಉದ್ಯಾನವನಗಳಿಂದ ನಕ್ಷತ್ರಗಣಾಸಿಚಿತವಾದ ಆಕಾಶದ ಚಂದದಿಂದ ಪ್ರಕಾಶಿಸಿತು. ಅದಕ್ಕೆ ಪೂರ್ವದಿಕ್ಕಿನಲ್ಲಿ ಅತಿರಮ್ಯವಾಗಿ ಕೊಪ್ಪಲುಗಳಿಂದಲೂ ಗುಹೆಗಳಿಂದಲೂ ಕೂಡಿರುವ ರೈವತಕ ಪರ್ವತವು, ದಕ್ಷಿಣ ದಿಕ್ಕಿನಲ್ಲಿ ಐದು ಪ್ರಕಾರಗಳಾದ ವರ್ಣಗಳುಳ್ಳ ಲತಾವೇಷ್ಟನವೆಂಬ ಪರ್ವತವು, ಪಶ್ಚಿಮ ದಿಗ್ಭಾಗದಲ್ಲಿ ಇಂದ್ರ ಧ್ವಜಸಮಾನವಾಗಿ ರಜತಮಯವಾಗಿ ಪುಷ್ಪಿತವಾಗಿ ಮನೋಜ್ವಲವಾಗಿರುವ ಸುಕಕ್ಷ್ಯವೆಂಬ ಪರ್ವತವು, ಉತ್ತರ ದಿಗ್ಭಾಗದಲ್ಲಿ ಮಂದರ ಪರ್ವತಕ್ಕೆ ಸಮಾನವಾಗಿ ಅತಿಬಿಳುಪಾಗಿರುವ ವೇಣುಮಂತವೆಂಬ ಪರ್ವತವೂ, ಭೂಷಣಗಳಾಗಿರುವವು; ಮತ್ತೂ ರತ್ನಕಂಬಳ ವರ್ಣವಾಗಿ ಯಾವಾಗಲೂ ಪುಷ್ಪಸಮೃದ್ಧವಾಗಿರುವ ಪಾಂಚಜನ್ಯವನವು ರೈವತಕ ಪರ್ವತದ ಸಮೀಪದಲ್ಲಿರುವದು; ಮೇರುಪ್ರಭವನವು ತಾಳವನವು ಪುಷ್ಪವನವು ಪುಂಡರೀಕವನವು ಎಂಬ ವನಗಳು ಲತಾವೇಷ್ಟಿತವಾದ ರೈವತಕ ಪರ್ವತವನ್ನು ಸುತ್ತಿಕೊಂಡಿರುವವು; ಚಿತ್ರಪುಷ್ಪವನವು ಶತಪತ್ರವನವು ಕರವೀರವನವು ಕುಸುಂಭವನವು ಎಂಬ ವನಗಳು ಕಕ್ಷ್ಯಾದ್ರಿ, ಸಮೀಪದಲ್ಲಿರುವವು; ಚೈತ್ರರಥವನವು ನಂದನವನವು ರಮಣವನವು ಭಾವನವನವು ಎಂಬ ವನಗಳು ವೇಣುಮಂತ ಪರ್ವತದ ಸಮೀಪದಲ್ಲಿರುವವು; ಪೂರ್ವದಿಕ್ಕಿನಲ್ಲಿ ನೂರು ಧನುಸ್ಸುಗಳ ಪ್ರಮಾಣವುಳ್ಳ ವಿಸ್ತಾರವಾಗಿ ರಮಣೀಯವಾಗಿರುವ ಒಂದು ಸರೋವರವು ಮೆರೆಯುತ್ತಿರುವದು; ಆ ದ್ವಾರಕಾಪಟ್ಟಣವು ಐವತ್ತು ಬಾಗಿಲುಗಳಿಂದ ಕೂಡಿ ಮನೋಜ್ಞವಾಗಿ ಅನಿರ್ವಚನೀಯವಾಗಿ ಅತ್ಯುನ್ನತವಾಗಿ ಸುವರ್ಣಪ್ರಾಕಾರಯುಕ್ತವಾಗಿ ಅಗಾಧವಾದ ಅಗಳುಗಳುಳ್ಳಂಥಾದ್ದಾಗಿ ಬಿಳುಪಾದ ಸಜ್ಜೆಗಳಿಂದ ಶೋಭಿತವಾಗಿ ತೀಕ್ಷ್ಣವಾದ ಯಂತ್ರಗಳಿಂದಲೂ ಮಕರ ಬಿಬ್ಬಿರೇಕವಿಸರ ಗೋಪಿ ತುಪಾಕಿ ಮೊದಲಾದ ಆಯುಸಯಂತ್ರ ಜಾಲಗಳಿಂದಲೂ ಅತಿ ಭಯಂಕರವಾಗಿ ಕಾಣಲ್ಪಡುತ, ಎಂಟು ಯೋಜನ ವಿಸ್ತಾರವೂ ಹನ್ನೆರಡುಯೋಜನ ನೀಟವೂ ಇಪ್ಪತ್ತುನಾಲ್ಕು ಯೋಜನ ವೃದ್ಧವೂ ಉಳ್ಳ ಗಡಿಗಳಿಂದ ವಿರಾಜಮಾನವಾಗಿ, ಎಂಟು ಮಾರ್ಗಗಳುಳ್ಳಂಥಾದ್ದಾಗಿ, ಏಳು ರಾಜಮಾರ್ಗಗಳು ಮತ್ತೂ ಅನೇಕವಾದ ಉಪಬೀದಿಗಳೂ ಉಂಟಾಗಿ ರತ್ನಕಾಂಚನ ಖಚಿ

ತಗಳಾದ ಸೋಪಾನಗಳು ಗೀತವಾದ್ಯಧ್ವನಿಗಳುಳ್ಳ ಅರಮನೆಗಳಿಂದ ಮನಸ್ಸಿಗೆ ಸಂತೋಷಕರವಾಗಿ, ಸ್ವರ್ಣ ಕಿಂಕಿಣೀಜಾಲ ಭೂಷಿತಗಳಾಗಿ ಮಹೋನ್ನತಪತಾಕಗಳುಳ್ಳ ಎಂಟುಲಕ್ಷ ಸಂಖ್ಯೆಯುಳ್ಳ ಉಪ್ಪರಿಗೆಗಳುಳ್ಳಂಥಾದ್ದಾಗಿ, ವಿಶ್ವಕರ್ಮ ನಿರ್ಮಿತವಾಗಿ ಜಗನ್ಮೋಹಕರವಾಗಿರುವದು. ಆ ಪಟ್ಟಣದ ರಾಜಬೀದಿಗಳು ಅತ್ಯುನ್ನತಗಳಾದ ಪತಾಕಗಳೂ ಅತಿ ಶುಭ್ರವಾದ ಶಿಖರಗಳೂ ಸುವರ್ಣಮಯವಾದ ಉಪಕರಣಗಳೂ ಉಂಟಾಗಿ, ಮೇರುಪರ್ವತದ ಶಿಖರದೋಪಾದಿಯಲ್ಲಿ ಸರ್ವರತ್ನವಿಭೂಷಿತವಾಗಿ ಗಿಣಿ ಗೊರಗ ಮೊದಲಾದ ಪಕ್ಷಿಗಳು ಇರುವದಕ್ಕೆ ಯೋಗ್ಯವಾದ ಪಂಜರಗಳಿಗೆ ಅಣಕವಾದ ಕುಣಿಕೆಗಳಿಂದಲೂ ಚಂದ್ರಶಾಲೆಗಳಿಂದಲೂ ನಿಬಿಡವಾದ ಕಾರಂಜೀಮನೆಗಳಿಂದಲೂ ಶೋಭಿತವಾಗಿ, ಗೈರಿಕಾದಿಧಾತುಗಳಿಂದೊಪ್ಪುತಲಿರುವ ಪರ್ವತದೋಪಾದಿಯಲ್ಲಿ ತೋರುತ, ರತ್ನ ಕಾಂಚನ ಖಚಿತಗಳಾದ ಮೇಲುಮಚ್ಚುಗಳು ಹಾಲುಗಾರೇ ಹಾಕಿರುವ ಸ್ಥಳಗಳು ಸುವರ್ಣಮಯವಾದ ಬಾಗಲುಗಳು ವೈಡೂರ್ಯ ಮಯಗಳಾದ ಅಗಳುಗಳು ನಾನಾಪ್ರಕಾರವಾಗಿ ಸಮಾನವಾದ ಪಂಚವಿಧವರ್ಣಗಳು ಮೇಘಧ್ವನಿಗೆ ಸಮಾನವಾದ ವಾದ್ಯಘೋಷಗಳೂ ಉಂಟಾಗಿರುವವು; ಮತ್ತೂ ವಿಚಿತ್ರವರ್ಣಗಳುಳ್ಳ ಮೇಘಗಳೋಪಾದಿಯಲ್ಲಿ ಕಾಣಲ್ಪಡುತ, ಮಹಾ ಮೇರುವಿನ ಗುಹಾಪ್ರದೇಶಗಳೋಪಾದಿಯಲ್ಲಿ ಒಪ್ಪುತ, ಮಹೇಂದ್ರ ಶಿಖರ ಸಮಾನಗಳಾಗಿ ವಿಶ್ವಕರ್ಮ ನಿರ್ಮಿತಗಳಾಗಿ ಅತ್ಯುನ್ನತವಾಗಿ ಚಂದ್ರ ಸೂರ್ಯರನ್ನು ಅತಿಕ್ರಮಿಸಿ ಪ್ರಕಾಶಿಸುತ, ಸರ್ಪ ಶ್ರೇಷ್ಠಗಳಿಂದ ಒಪ್ಪುತಲಿರುವ ಭೋಗವತೀಪಟ್ಟಣದ ಮಡುವುಗಳೋಪಾದಿಯಲ್ಲಿ ಯದುಕುಮಾರಕರಿಂದ ಒಪ್ಪುತಲಿರುವ ಮನೆಗಳಲ್ಲಿರುವ ಸರೋವರಗಳಿಂದೊಪ್ಪುತ, ನೀಲಧ್ವಜಗಳೆಂಬ ಆನೆಗಳು ಯದುಶ್ರೇಷ್ಠರ ಆಯುಧಗಳೆಂಬ ಇಂದ್ರಚಾಪಗಳು ವೃಷ್ಣಿಶ್ರೇಷ್ಠರೆಂಬ ಮತ್ತಮಯೂರಗಳು ಸ್ತ್ರೀಜನಗಳೆಂಬ ಮಿಂಚುಬಳ್ಳಿಗಳು ಬಲದೇವ ವಾಸುದೇವರೆಂಬ ಇಂದ್ರ ಪರ್ಜನ್ಯರೂ ವುಂಟಾಗಿ ಕಾಣಲ್ಪಡುತಲಿರುವ ರಾಜ ಭವನಗಳೆಂಬ ಮೇಘ ಸಮೂಹಗಳಿಂದ ಒಪ್ಪುತಲಿರುವ ಅಂತರಿಕ್ಷದೋಪಾದಿಯಲ್ಲಿ ಒಪ್ಪುತಲಿರುವವು. ಸರ್ವರ್ತುಗಳಿಂದ ಸುಖಪ್ರದವಾಗಿರುವ ಆ ಪಟ್ಟಣದ ಮಧ್ಯದಲ್ಲಿ ನಾಲ್ಕುಯೋಜನ ವಿಸ್ತಾರ ವುಳ್ಳಂಥಾದ್ದಾಗಿ ಇಂದ್ರಪ್ರೇರಣೆಯಿಂದ ವಿಶ್ವಕರ್ಮನಿರ್ಮಿತವಾಗಿ ದಿವ್ಯ ಪ್ರಾಸಾದಸಮೇತವಾಗಿ ಕ್ರೀಡಾಪರ್ವತಗಳಿಂದೊಪ್ಪಿ ಮಹಾಧನ ಪರಿಪೂರ್ಣವಾಗಿ ದೇವದೇವನಾದ ಪುರುಷೋತ್ತಮನಿಗೆ ವಿಹಾರಸ್ಥಾನವಾದ ಮನೆಯು, ಯೋಜನ ಪ್ರಮಾಣವಾದ ನಾಲ್ಕು ಚೌಕಿಗಳುಳ್ಳಂಥಾದ್ದಾಗಿ ರತ್ನ ಕಾಂಚನಮಯವಾಗಿ ಮಹಾ ಮೇರುಶಿಖರದೋಪಾದಿಯಲ್ಲಿರುವ ರುಕ್ಮಿಣಿಗೆ ವಿಹಾರಸ್ಥಾನವಾದ ಸೆಜ್ಜೆಯು, ನವರತ್ನನಿರ್ಮಿತ ಸೋಪಾನಗಳುಳ್ಳಂಥಾದ್ದಾಗಿ ಅತಿಧವಳವಾಗಿ ಸೂರ್ಯಪ್ರಕಾಶಮಾನವಾದ ಪತಾಕೆಗಳಿಂದ ಅಲಂಕೃತವಾಗಿ ನಾಲ್ಕು ದಿಕ್ಕುಗಳಲ್ಲಿಯೂ ಅಲಂಕಾರಗಳಾಗಿರುವ ಉಪವನಗಳಿಂದ ಶೋಭಿತವಾಗಿ ರತ್ನಧ್ವಜಗಳಿಂದ ಪ್ರಕಾಶಮಾನವಾಗಿ ಶೀತವಂತವೆಂಬ ಹೆಸರುಳ್ಳ ಸತ್ಯಭಾಮೆಯ ಉಪ್ಪರಿಗೆಯು, ನಾನಾ ವಿಚಿತ್ರವಾದ ಭೂಷಣಗಳ ಪ್ರಭೆಗಳಿಂದ ಮೂರು ಲೋಕಗಳನ್ನು ಬೆಳಗಿಸುವದಕ್ಕೆ ಸಮರ್ಥವಾಗಿ ಅತಿಶುಭ್ರವಾಗಿರುವ ರುಕ್ಮಿಣೀ ಸತ್ಯಭಾಮೆಯರುಗಳ ಮನೆಗಳ ಮಧ್ಯದಲ್ಲಿ ಒಪ್ಪುತಲಿರುವ ಜಾಂಬವತಿ ಇರುವದಕ್ಕೆ ಯೋಗ್ಯವಾದ ಉಪ್ಪರಿಗೆಯು, ಕೈಲಾಸ ಶಿಖರಾಕಾರವಾಗಿ ಕಾಂಚನಮಯವಾದ ಕೊನೆವುಳ್ಳಂಥಾದ್ದಾಗಿ ದೀಪ್ತಾಗ್ನಿ ಸಮಾನವಾಗಿ ಸಮುದ್ರಸಮಾನವಾಗಿ ಮೇರುನಾಮಧೇಯವುಳ್ಳಂಥಾದ್ದಾಗಿ ಕುಲರೂಪುವಿಖ್ಯಾತವಾದ ಗಾಂಧಾರರಾಯನಮಗಳಾದ ಸುಕೇಶೀಯೆಂಬ ವಧೂರತ್ನಕ್ಕೆ ಆವಾಸಸ್ಥಾನವಾದ ಸೆಜ್ಜೆಯು, ಪದ್ಮವರ್ಣವಾಗಿ ಪ್ರಭಾಭಾಸಿತವಾಗಿ ಪದ್ಮಕೂಲವೆಂಬ ಹೆಸರುಳ್ಳ ಪ್ರಭೆಯೆಂಬ ಸ್ತ್ರೀಯಿರುವ ಸೆಜ್ಜೆಯು, ಸೂರ್ಯಪ್ರಭೆಯೆಂಬ ಹೆಸರುಳ್ಳ ಲಕ್ಷಣೆಯೆಂಬ ಸ್ತ್ರೀಯಿರುವ ಉಪ್ಪರಿಗೆಯು, ವೈಡೂರ್ಯ ಮಣಿ ಕಾಂತಿ ಪ್ರಕಾಶಮಾನವಾಗಿ ಹಸುರು ಬಣ್ಣದಿಂದ ನೋಡುವದಕ್ಕೆ ಯೋಗ್ಯವಾಗಿ ದೇವ ಋಷಿಗಣಪೂಜಿತವಾಗಿ ಹರಿಯೆಂಬ ನಾಮಧೇಯವುಳ್ಳ ಮಿತ್ರವಿಂದೆಯಿರುವ ಉಪ್ಪರಿಗೆಯು, ನಿಖಿಲಶಿಲ್ಪಿಜನ ಪರಿಕಲ್ಪಿತವಾಗಿ ಸಕಲ ಗೃಹಾಲಂಕಾರವಾಗಿ ಮಣಿಕಾಂತಿ ವಿರಾಜಮಾನವಾಗಿ ಪದ್ಮಿನಿ ಯೆಂಬ ಹೆಸರುಳ್ಳ ಸುದಂತೆಯೆಂಬ ಸ್ತ್ರೀಯಿರುವ ಉಪ್ಪರಿಗೆಯು, ಯೋಜನ ಪ್ರಮಾಣ ನೀಟವೂ ವಿಸ್ತಾರವೂ ಉಳ್ಳಂಥಾದ್ದಾಗಿ ವಿಶ್ವಕರ್ಮ ನಿರ್ಮಿತವಾಗಿ ಕೇತುಮಾನನೆಂಬ ಪರ್ವತಕ್ಕೆ ಸಮಾನವಾಗಿ ಪ್ರಭಾಭಾಸುರವಾಗಿ ವಿರಜವೆಂಬ ಹೆಸರುಳ್ಳಂಥಾದ್ದಾಗಿ ಸಕಲ ಸ್ತ್ರೀಜನ

ಸಮೇತವಾಗಿ ಪುಂಡರೀಕಾಕ್ಷನು ವಿಹರಿಸುವ ಉಪ್ಪರಿಗೆಯೂ, ಇರುವವು. ಅಲ್ಲಲ್ಲಿರುವ ಉಪ್ಪರಿಗೆಗಳಿಗೆ ಗುರುತಾಗಿ ಸುವರ್ಣದಂಡ ಮಂಡಿತಗಳಾಗಿ ಘಂಟೆಗಳಿಂದ ವಿರಾಜಮಾನಗಳಾಗಿರುವ ಪತಾಕೆಗಳಿಂದ ಒಪ್ಪುತಲಿರುವ ಧ್ವಜಗಳೂ ಮತ್ತು ಯಮುನಾವಲ್ಲಭನಿಂದ ತರಿಸಲ್ಪಟ್ಟ ಕ್ರೀಡಾಪರ್ವತಗಳಾದ ವೈಜಯಂತಪರ್ವತವು ಹಂಸಕೂಟ ಪರ್ವತಶಿಖರವೂ ಪ್ರಕಾಶಿಸುತ್ತಿರುವವು; ಅರವತ್ತು ತಾಳ ಪ್ರಮಾಣ ಆಳವುಳ್ಳಂಥಾದ್ದಾಗಿ ಅರ್ಧಯೋಜನ ವಿಸ್ತಾರವುಳ್ಳಂಥಾದ್ದಾಗಿ ಕಿನ್ನರರಗಾನದಿಂದ ಮನೋಹರವಾಗಿರುವ ಇಂದ್ರದ್ಯುಮ್ನ ಸರೋವರವು ನೇತ್ರಾನಂದವಾಗಿರುವದು; ತ್ರೈಲೋಕ್ಯ ವಿಖ್ಯಾತವಾಗಿ ಯದೃಚ್ಛಾಸಂಚಾರವುಳ್ಳಂಥಾದ್ದಾಗಿ ಸುವರ್ಣಮಯವಾಗಿ ಸರ್ವೌಷಧಿ ಸಮೇತವಾಗಿ ಸೂರ್ಯಮಂಡಲ ವನ್ನು ತಾಕುವಂಥಾದ್ದಾಗಿ ಶ್ರೀಕೃಷ್ಣಸ್ವಾಮಿಯಿಂದ ತರಲ್ಪಟ್ಟ ಮಹಾಮೇರುಶಿಖರವೂ ಅದರ ಸಮೀಪದಲ್ಲಿ ಇಂದ್ರನ ಅರಮನೇ ದೆಸೆಯಿಂದ ತಂದು ನೆಡಲ್ಪಟ್ಟ ಪಾರಿಜಾತವೂ ಸುವರ್ಣಮಯವಾದ ವಿಮಾನಗಳೂ ಬ್ರಹ್ಮಲೋಕ ದ್ದೆಸೆಯಿಂದ ತಂದ ಮಹಾವೃಕ್ಷಗಳೂ ಅಲಂಕಾರವಾಗಿರುವವು; ಮತ್ತು ಸಾಲತಾಲಾಶ್ವಕರ್ಣ ಶತಶಾಖರೋಹಿಣ ಭಲ್ಲಾತಕೀ ಕಪಿತ್ಥ ಚಂದ್ರವೃಕ್ಷ ಚಾಪಕ ಖರ್ಜೂರ ಕೇತಕ ಮೊದಲಾದ ವೃಕ್ಷಗಳು, ಪದ್ಮಿನೀ ನಿಬಿಡಗಳಾಗಿ ಮೆಲ್ಲ ಮೆಲ್ಲನೆ ಕದಲುತ್ತಿರುವ ಉದಕಗಳು, ರಕ್ತೋತ್ಪಲ ಸೌಗಂಧಿಕಗಳು, ಮುಕ್ತಾಮಣಿ ಮಯಗಳಾದ ಮರಳುಗಳೂ ಉಂಟಾಗಿ ಮನೋಜ್ಞಗಳಾದ ಸರೋವರಗಳು ಮೆರೆಯುವವು; ಅವುಗಳ ಉಭಯತೀರಗಳಲ್ಲಿಯೂ ಹಿಮವತ್ಪರ್ವತದ್ದೆಸೆಯಿಂದಲೂ ನಂದನೋದ್ಯಾನವನದ್ದೆಸೆಯಿಂದಲೂ ತಂದು ನೆಡಲ್ಪಟ್ಟ ರಕ್ತಪೀತಾರುಣವರ್ಣಗಳುಂಟಾಗಿ ಸರ್ವರ್ತುಫಲ ಪುಷ್ಪ ಪರಿಪೂರ್ಣಗಳಾದ ವೃಕ್ಷಗಳು, ಅವುಗಳ ಮಧ್ಯದಲ್ಲಿ ಸಹಸ್ರಪತ್ರ ಕಮಲಗಳು ಮಂದಾರಗಳೂ ಪಾರಿಜಾತಗಳು, ಮತ್ತು ಅಂಕೋಲ ಸಾಲ ತಾಲಾತಮಾಲಾಶೋಕತಿಲಕ ಕರ್ಣಿಕಾರ ನಾಗಮಲ್ಲಿಗೆ ಕುರವಕ ಚಂಪಕ ನಾಗಪುಷ್ಪ ತೃಣಗುಲ್ಮಕ ಸಪ್ತಪರ್ಣ ಕದಂಬ ನೀಪ ಮರುವಕ ಕೇತಕ ಕೇಸರ ಹಿಂತಾಳ ಕರತಾಳ ತಾಳಿ ಪ್ರಿಯಂಗು ವಕುಳ ಪಿಂಡೀಕ ಬೀಜ ಪೂರಕ ದ್ರಾಕ್ಷಾಮಲಕ ಖರ್ಜೂರ ಮೃದ್ವಿಕಾ ಜಂಭಕ ಆಮ್ರ ಪನಸ ಅಂಕೋಲ ಬಿಲ್ವ ತಿಂದುಕ ಲಿಕುಚ ಅಮೃತಕ ಕ್ಷೀರಿಕ ಕಂಟಕಿ ನಾಳಿಕೇರ ಪಿಣ್ಯಾಕ ಶಮ್ಯಾಕ ಮೊದಲಾದ ವೃಕ್ಷಗಳು, ಕದಳೀಜಾತಿ ಮಲ್ಲಿಕಾ ಪಾಟಲಗಳು ಭಲ್ಲಾತಕ ಕಪಿತ್ಥ ಬಂಧುಜೀವಕ ಅಶೋಕ ಅಶ್ವತ್ಥ ಪ್ರಾಚೀನ ಬದರಿ ಧವಳ ಸ್ಯಂದನ ಚಂದನ ಸರ್ಜ ಶಮೀಪಲಾಶ ಭಲ್ಲವಟ ಪಿಪ್ಪಲ ಉದುಂಬರ ಕೀಚಕ ಪಾರಿಭದ್ರ, ಇಂದ್ರವೃಕ್ಷ ಅರ್ಜುನ ಚಿರಿಬಿಲ್ವ ತಿಂದುಕ ಶೋಭಾಂಜನಕ ಕ್ಷೀರಿತ ಕಂಟಕಿ ಭಲ್ಲಟಾಶ್ವ ಸಾಹ್ವಯ ತಾಂಬೂಲವಲ್ಲೀ ಕ್ರಮುಕ ಲವಂಗ ಮೊದಲಾದ ವೃಕ್ಷಗಳು, ಮತ್ತು ನಂದನವನದ್ದೆಸೆಯಿಂದಲೂ ಚೈತ್ರರಥವನದ್ದೆಸೆಯಿಂದಲೂ ಶ್ರೀಕೃಷ್ಣಸ್ವಾಮಿಯಿಂದ ತರಲ್ಪಟ್ಟು ನೆಟ್ಟಿರುವ ವೃಕ್ಷಗಳೂ ಪರಮಾನಂದವನ್ನುಂಟುಮಾಡುವವು; ಮತ್ತು ಹಸುರಾಗಿ ಕೆಂಪಾಗಿ ಇರುವ ಮಳಲುಗಳಿಂದ ಶೋಭಿತಗಳಾದ ನಡಭಾವಿಗಳು ನಿರ್ಮಲವಾದ ಉದಕಗಳುಳ್ಳ ಮಡುವುಗಳು ವಿಕಸಿತವಾದ ಕುಮುದ ಉತ್ಪಲಗಳಿಂದ ಕೂಡಿ ನಾನಾಲತಾಯುಕ್ತಗಳಾಗಿ ಮಣಿಮಯವಾದ ಸೈಕತಗಳುಳ್ಳಂಥಾದ್ದಾಗಿ ಪ್ರವಹಿಸುತ್ತಲಿರುವಂಥಾ ನದಿಗಳು ಅನೇಕವಾಗಿರುವವು; ಮತ್ತು ಮಯೂರಗಳು ಭೃಂಗಗಳು ಮತ್ತಕೋಕಿಲ ಸಮೂಹಗಳು ಗಜಯೂಥಗಳು ಗೋಮಹಿಷಗಳು ವರಾಹ ಮೊದಲಾದ ಮೃಗಗಳು ಪಕ್ಷಿಗಣಗಳೂ ಉಂಟಾಗಿ ಮನೋಹರಗಳಾದ ಕ್ರೀಡಾಪರ್ವತಗಳು ಮೆರೆಯುವವು; ಮತ್ತು ವಿಶ್ವಕರ್ಮನಿರ್ಮಿತವಾಗಿ ನೂರುಮೊಳ ವಿಸ್ತಾರವುಳ್ಳದ್ದಾಗಿ ಚಂದ್ರಸಮಾನವಾದ ಶಿಲಾಫಲಕವು ಪ್ರಕಾಶಿಸುತ್ತಿರುವದು. ಇದಷ್ಟನ್ನು ನೋಡಿ ಇಂದ್ರನು ಮೊದಲಾದ ಸಕಲ ದೇವತೆಗಳೂ ಆಶ್ಚರ್ಯಪಟ್ಟು, ದ್ವಾರಕಾ ಪಟ್ಟಣದ ಮಹಿಮೆಯನ್ನು ಸ್ತುತಿಸುತ ಕೃಷ್ಣನನ್ನು ಸುತ್ತಿಕೊಂಡು ಬರುವ ಸಮಯದಲ್ಲಿ ವಿಶ್ವಕರ್ಮನು ಬಂದು ನಮಸ್ಕಾರವನ್ನು ಮಾಡಿ ನಿಂತಿರಲು ಆತನನ್ನು ನೋಡಿ ಸಂತೋಷಪಟ್ಟನು" ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

೬೪ ನೇ ಅಧ್ಯಾಯ.—ಅರ್ಘ್ಯಾಭಿಹರಣಪರ್ವಶೇಷ. (ಶ್ರೀಕೃಷ್ಣವರ್ಣನೆ.)

ಅನಂತರವಲ್ಲಿ ಭೀಷ್ಮನು ಧರ್ಮರಾಯನನ್ನು ನೋಡಿ "ಎಲೈ ಧರ್ಮರಾಯನೆ, ಈ ಪ್ರಕಾರದಿಂದ ಪುರುಷಶ್ರೇಷ್ಠರಾದ ಇಂದ್ರೋಪೇಂದ್ರ, ಬಲರಾಮರು ಮೂರು ಮಂದಿಯೂ ದ್ವಾರಕಾ ಪಟ್ಟಣವನ್ನು ಪ್ರವೇಶಿಸುವ ಸಮಯದಲ್ಲಿ ಗರುಡವಾಹನನನ್ನೇರಿದ ಶ್ರೀಕೃಷ್ಣಸ್ವಾಮಿಯು ಅತಿಶುಭ್ರವಾದ ಶಂಖವನ್ನು ಪೂರಿಸಿದನು; ವೈರಿ ಹೃದಯ ಭೇದಕವಾದ ಆ ಧ್ವನಿಯಿಂದ ಸಮುದ್ರಗಳು ಕಲಕಿದವು! ಆಕಾಶವು 'ಭೋ!' ಎಂದು ಶಬ್ದಮಾಡಿತು! ಅಂಥಾ ಯದುವಲ್ಲಭನ ಶಂಖದ ಧ್ವನಿಯನ್ನು ಕೇಳಿ ಕುಕುರಾಂಧಕರು ಮೊದಲಾದವರು ಸಂತೋಷಭರಿತರಾಗಿ ಶಂಖಚಕ್ರಗದಾದ್ಯಾಯುಧಗಳನ್ನು ಧರಿಸಿದ ದೇವಕೀನಂದನನು ಉದಯಾಚಲ ಶಿಖರದಲ್ಲಿ ತೋರುವ ಸೂರ್ಯನೋಪಾದಿಯಲ್ಲಿ ಗರುತ್ಮಂತನ ಭುಜವನ್ನೇರಿ ಬಂದದ್ದಕ್ಕೆ ಸಂತೋಷಪಟ್ಟರು; ಭೇರೀಮೃದಂಗಾದಿ ವಾದ್ಯಧ್ವನಿಗಳೂ ಸಿಂಹನಾದಗಳೂ ವೇಣುಶಂಖಾರವಗಳೂ ಉಪ್ಪತ್ತಿರಲು ದಾಸಾರ್ಹರ ಉಗ್ರಸೇನ ವಸುದೇವರು ಪುರಸ್ಸರವಾಗಿ ಶ್ರೀಕೃಷ್ಣನ ಅರಮನೆಗೆ ಹೋದರು. ರೋಹಿಣಿಯು ದೇವಕಿಯು ಆಹುಕನ ಹೆಂಡತೀಯರೂ ಆ ಯದುವಲ್ಲಭನನ್ನು ನೋಡಿ 'ಬ್ರಾಹ್ಮಣದ್ರೋಹಿಗಳಾದ ನರಕಾಸುರ ಮೊದಲಾದ ನಿಶಾಚರರು ಸಮರದಲ್ಲಿ ನಿನ್ನಿಂದ ಹತರಾದ್ದರಿಂದ ಸಕಲ ಜನರಿಗೂ ಸಂತೋಷವಾಯಿತು' ಎಂದು ಸ್ತುತಿಸಿದರು. ಆ ಬಳಿಕ ಮಧುಸೂದನನು ಮಣಿಪರ್ವತವನ್ನು ಉಚಿತಪ್ರದೇಶದಲ್ಲಿರಿಸಿ ಗರುಡನ ಮೇಲೆ ತಂದ ಅನೇಕ ಧನರತ್ನ ಕಾಂಚನಗಳನ್ನು ಸಭಾಸ್ಥಳದಲ್ಲಿರಿಸಿ ತಂದೆಯನ್ನು ನೋಡಬೇಕೆಂಬ ಇಚ್ಛೆಯಿಂದ ಮೊದಲು ಸಾಂದೀಪನ ಮನೆಗೆ ಹೋಗಿ ಗುರುವಂದನೆಯನ್ನುಮಾಡಿ ಆ ಬಳಿಕ ಆನಂದಾಶ್ರುಪರಿಪೂರಿತ ನೇತ್ರನಾಗಿ ಸಂತುಷ್ಟಚಿತ್ತನಾಗಿರುವ ವಸುದೇವನಿಗೆ ಬಲರಾಮ ಸಮೇತನಾಗಿ ನಮಸ್ಕರಿಸಿ, ಮತ್ತೂ ಇರುವ ಪೂಜ್ಯರಾದವರಿಗೆ ಯತೋಚಿತವಾಗಿ ನಮಸ್ಕಾರವನ್ನು ಮಾಡಿದನು. ಅವರು ಬಹು ಸಂತೋಷಪಟ್ಟು ಗಾಢಾಲಿಂಗನಗಳನ್ನು ಮಾಡಿಕೊಂಡರು. ಮಹಾ ಭುಜಬಲಶಾಲಿಯಾದ ಶ್ರೀಕೃಷ್ಣನು ತಾನು ತಂದ ರತ್ನ ಕಾಂಚನಾದಿ ಧನಗಳನ್ನು ಅಂಧಕವೃಷ್ಣಿ ಮೊದಲಾದ ಬಂಧುಜನಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಹಂಚಿಕೊಟ್ಟನು." ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

---

೬೫ ನೇ ಅಧ್ಯಾಯ.—ಅರ್ಘ್ಯಾಭಿಹರಣಪರ್ವಶೇಷ. (ಶ್ರೀಕೃಷ್ಣವರ್ಣನೆ.)

ಅನಂತರದಲ್ಲಿ ಭೀಷ್ಮನು ಧರ್ಮರಾಯನನ್ನು ನೋಡಿ "ಕೇಳು ಧರ್ಮರಾಯನೆ, ಆ ಸಮಯದಲ್ಲಿ ಬಲರಾಮ ಕೇಶವರು ಮತ್ತು ಇರುವ ವೃಷ್ಣಿಕುಮಾರಕರು ಮೊದಲಾದವರಿಂದಲೂ ಮಹೇಂದ್ರನು ಮೊದಲಾದ ದೇವತಾ ಸಮೂಹದಿಂದಲೂ ಆ ಸಭಾಸ್ಥಳವು ಸಿಂಹಾಸನಗಳಿಂದೊಪ್ಪುತಲಿರುವ ಪರ್ವತ ಗುಹೆಯಂತೆರವನ್ನು ಅನುಕರಿಸಿತು. ಅಮರೇಂದ್ರನಾದ ಪಾಕಶಾಸನನು ಉಚಿತಾಸನದಲ್ಲಿರುವ ಅಂಧಕ ವೃಷ್ಣಿಶ್ರೇಷ್ಠರನ್ನು ನೋಡಿ ಶುಭಕರವಾದ ವಚನಗಳಿಂದ ಮನಃಪ್ರಿಯವನ್ನು ಮಾಡುತ ಇಂತೆಂದನು: 'ಮಹಾನುಭಾವನಾದ ಶ್ರೀಕೃಷ್ಣನು ಮನುಷ್ಯಲೋಕದಲ್ಲಿ ಹುಟ್ಟಿದ್ದಕ್ಕೆ ಕಾರಣವನ್ನೂ ಇದಕ್ಕಿಂತಲು ಮೊದಲೆ ಮಾಡಿದ ದುಷ್ಕರವಾದ ಕಾರ್ಯಗಳನ್ನೂ ನಿಮಗೆ ಸಂಕ್ಷೇಪದಿಂದ ಹೇಳುತಲಿದೇನೆ ಕೇಳಿ: ಈ ಶ್ರೀಕೃಷ್ಣನು ಯಾವದನ್ನು ಎಣಿಸಿ ಭೂಲೋಕದಲ್ಲಿ ಅವತರಿಸಿದನೊ ಅಂಥಾ ಕಾರ್ಯಗಳನ್ನು ನೆರವೇರಿಸಿದನು; ಇದಷ್ಟನ್ನೂ ನಿಮಗೆ ವಿಶದವಾಗಿ ಹೇಳುತಲಿದೇನೆ; ಈ ಯದುವಲ್ಲಭನು ಅನೇಕ ಲಕ್ಷ ಸಂಖ್ಯೆಯುಳ್ಳ ದಾನವರನು ಕೊಂದು, ಪಾತಾಳಬಿಲವನ್ನು ಸೇರಿ, ಪ್ರಹ್ಲಾದ ಬಲಿ ಶಂಬರರು ಮೊದಲಾದವರಿಗೂ ದುರ್ಲಭವಾದ ಧನವನ್ನು ತಕ್ಕೊಂಡು, ಪಾಶಗಳೊಡನೆ ಕೂಡಿದ ಮುರಾಸುರನನ್ನು ಸಂಹರಿಸಿ, ಪಂಚ ಜನರನ್ನು ಕೊಂದು, ಶಿಲಾಸಂಘಗಳನ್ನು ಕಳದು, ಬಲಶಾಲಿಯಾದ ನರಕಾಸುರನನ್ನು ಯುದ್ಧದಲ್ಲಿ ಸಂಹರಿಸಿ, ಮಹಾಬಲಶಾಲಿಯಾದ ಹಯಗ್ರೀವನನ್ನು ನಿಗ್ರಹಿಸಿ, ದಿವ್ಯಕುಂಡಲಗಳನ್ನು ತಕ್ಕೊಂಡು ಸ್ವರ್ಗಕ್ಕೆ ಹೋಗಿ ಮಹತ್ತಾದ ಕೀರ್ತಿಯನ್ನು ಸಂಪಾದಿಸಿದನು; ಈ ಕಂಸಾಂತಕನ ಭುಜಬಲವನ್ನು ಆಶ್ರೈಸಿ ಭಯಶೋಕ ಭಾರರಹಿತರಾಗಿ ನೀವೆಷ್ಟುಮಂದಿಯೂ ದೇವತೆಗಳಿಗೆ ಪ್ರಿಯವಾಗಿ ಅನೇಕ ಯಾಗಗಳನ್ನು ಮಾಡುತ ಸುಖವಾ

ಗಿರುತ್ತಿದ್ದೀರಿ; ಶ್ರೀ ಕೃಷ್ಣನು ಬಾಣಾಸುರನನ್ನು ನಿಗ್ರಹಿಸುವ ಸಮಯದಲ್ಲಿ ಸಕಲ ದೇವತೆಗಳೊಡನೆ ಕೂಡಿ ನಾನು ಬರುತಲಿದ್ದೇನೆ' ಎಂದು ನುಡಿದು ಬಲರಾಮ ವಾಸುದೇವ ವಸುದೇವರನ್ನು ಆಲಿಂಗಿಸಿಕೊಂಡು, ಪ್ರದ್ಯುಮ್ನ ಸಾಂಬ ನಿಶಠ ಅನಿರುದ್ಧ ಸಾರಣ ಬಭ್ರು, ಝಲ್ಲಿ ಗದ ಭಾನು ಚಾರುದೇಷ್ಣ ಮೊದಲಾದವರ ಅಪ್ಪಣೆಯನ್ನು ತೆಗೆದುಕೊಂಡು ಕೈಲಾಸ ಪರ್ವತದೋಪಾದಿಯಲ್ಲಿ ಆಕಾರವುಳ್ಳಂಥಾದ್ದಾಗಿ ಹೇಮಸೂತ್ರ ಕಕ್ಷ್ಯಾಲಂಕೃತವಾಗಿ ಮಳೆಯನ್ನು ಸುರಿಯುತಲಿರುವ ಮಹಾಮೇಘದೋಪಾದಿಯಲ್ಲಿ ಮದಧಾರಾಸಮೇತವಾಗಿ ಮಹೋನ್ನತವಾಗಿ ಕಾಂಚನಮಾಲಿಕಾಲಂಕೃತವಾಗಿ ತನ್ನ ಬೃಂಹಿತ ಧ್ವನಿಯಿಂದ ಹತ್ತು ದಿಕ್ಕುಗಳಲ್ಲೂ ಪೂರಿಸುವಂಥಾದ್ದಾಗಿ ದಿಗ್ಗಜಶ್ರೇಷ್ಠವಾದ ಐರಾವತವನ್ನು ವೈಶ್ವಾನರ ಸಹಿತವಾಗಿ ಏರಿ, ಸಕಲ ಜನಗಳು ನೋಡುತ್ತಿರಲು, ಮಂದರ ಪರ್ವತಾಗ್ರದಲ್ಲಿ ತೋರುತಲಿರುವ ಮಾರ್ತಾಂಡನೋಪಾದಿಯಲ್ಲಿ ಕಾಣಲ್ಪಡುತ, ವಜ್ರಮಯವಾಗಿ ಅತಿಭಯಂಕರವಾಗಿರುವ ಅಂಕುಶವನ್ನು ಕೈಯಲ್ಲಿ ಹಿಡಿದು, ಕುಬೇರ ವರುಣಮೊದಲಾದ ದೇವತೆಗಳು ವಿಮಾನಗಜಕರೇಣು ಮೊದಲಾದ ವಾಹನಗಳನ್ನೇರಿ ಸುತ್ತಲು ಬರುತ್ತಿರಲು, ವಾಯುಮಾರ್ಗವನ್ನೂ ಅಗ್ನಿ ಮಾರ್ಗವನ್ನೂ ಸೂರ್ಯ ಮಾರ್ಗವನ್ನೂ ಅತಿಕ್ರಮಿಸಿ, ಅಂತರ್ಧಾನವನ್ನೈದಿದನು" ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

---

## ೬೬ನೇ ಅಧ್ಯಾಯ.—ಅರ್ಘ್ಯಾಹರಣಪರ್ವಶೇಷ. (ಶ್ರೀ ಕೃಷ್ಣವರ್ಣನೆ.)

ಅನಂತರದಲ್ಲಿ ಭೀಷ್ಮನು ಧರ್ಮರಾಯನನ್ನು ನೋಡಿ "ಎಲೈ ಧರ್ಮರಾಯನೆ, ಸೌಂದರ್ಯ ಶೀಲಾದಿ ಗುಣಸಂಪನ್ನೆಯಾಗಿ ಮಹಾ ಪತಿವ್ರತಾಶಿರೋಮಣಿಯಾದ ರುಕ್ಮಿಣಿಯು, ಸತ್ಯಭಾಮೆಯು, ಜಾಂಬವತಿಯು, ಸತ್ಯಾದೇವಿಯು, ವಿಶೋಕೆಯು, ಲಕ್ಷ್ಮಣೆಯು, ಸುಮಿತ್ರೆಯು, ಕೇತುಮತಿಯು, ಮತ್ತೂ ಮಿಕ್ಕಾದ ಶ್ರೀಕೃಷ್ಣಸ್ವಾಮಿಯ ಪ್ರಾಣಕಾಂತೆಯರೂ ಸಂಗಡಬರಲು ನಂದಗೋಪನ ಭಾರ್ಯೆಯಾಗಿ ಜಗದ್ವಿಖ್ಯಾತೆಯಾದ ಯಶೋದಾದೇವಿಯೂ ಉಗ್ರಸೇನನ ಹೆಂಡತಿಗಳು ಏಳು ಮಂದಿಯೂ ವಸುದೇವನ ಹೆಂಡತಿಯಾದ ದೇವಕೀದೇವಿಯೂ ರೋಹಿಣೀದೇವಿಯೂ ಬಲಭದ್ರಸಹಿತನಾಗಿರುವ ಕೃಷ್ಣನ ವೈಭವವನ್ನು ನೋಡಬೇಕೆಂದು ಸಂತೋಷದಿಂದ ಬಂದರು. ಆ ಯದುವಲ್ಲಭನು ಬಲರಾಮನೊಡನೆ ಕೂಡಿ ಪ್ರತ್ಯುತ್ಥಾನವನ್ನು ಮಾಡಿ ದೇವಕೀದೇವಿ ಮೊದಲಾದವರಿಗೆ ನಮಸ್ಕಾರವನ್ನು ಮಾಡಿದನು. ಅವರು ಬಹು ಪ್ರಕಾರವಾಗಿ ಹರಸಿ ಉಚಿತಾಸನಗಳಲ್ಲಿ ಕುಳಿತುಕೊಂಡ ಮೇಲೆ ದೇವಕೀದೇವಿಯು ವೃಷಭದೋಪಾದಿಯಲ್ಲಿ ನೇತ್ರಗಳುಳ್ಳ ಬಲರಾಮ ವಾಸುದೇವರನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಮಿತ್ರವರುಣರಿಂದ ಒಪ್ಪುತಲಿರುವ ಅದಿತಿಯೋಪಾದಿಯಲ್ಲಿ ಬಹಳ ಸಂತೋಷಪಡುತಿದ್ದಳು. ಆ ಸಮಯದಲ್ಲಿ ತನ್ನ ನಿಮಿತ್ತದಿಂದ ಕಂಸನು ಶ್ರೀ ಕೃಷ್ಣನಿಂದ ಪರಿವಾರ ಸಹಿತವಾಗಿ ಹತನಾದಂಥಾ ಪ್ರಕಾಶಮಾನಾಂಗಿಯಾಗಿ ಸೌದರ್ಯವತಿಯಾಗಿ ಮಾಯಾರೂಪಿಣಿಯಾಗಿ ಯಶೋದೆಯಮಗಳಾಗಿ ಏಕಾನಂಗೆಯೆಂಬ ಹೆಸರುಳ್ಳಂಥಾ ತಮ್ಮ ತಂಗಿಯು ಅಲ್ಲಿಗೆ ಬರಲು, ನೀಲಾಂಬರ ಪೀತಾಂಬರರಿಬ್ಬರೂ ಅವಳ ಎಡಕೈ ಬಲಕೈಗಳಿಗೆ ತಮ್ಮ ಕೈಗಳಿಂದ ಹಸ್ತಲಾಗವನ್ನು ಕೊಟ್ಟು ಶಿರಸ್ಸನ್ನು ಆಘ್ರಾಣಿಸಿ ಲಾಲಿಸುತ್ತಿದ್ದರು; ಆ ಬಾಲಿಕಾರತ್ನವು ಎರಡು ಆನೆಗಳ ಮಧ್ಯದಲ್ಲಿರುವ ಮಹಾಲಕ್ಷ್ಮಿಯೋಪಾದಿಯಲ್ಲಿ ಕಾಣಲ್ಪಡುತ್ತಿರಲು ಸಂತುಷ್ಟ ಹೃದಯರಾಗಿ ವೃಷ್ಣಿಜನಗಳು ಲಾಜಾಕ್ಷತ ಪುಷ್ಪಾಂಜಲಿವರ್ಷಗಳನ್ನು ಅವರ ಮೇಲೆ ಕರೆದರು. ಈ ಪ್ರಕಾರದಿಂದ ಬಾಲವೃದ್ಧ ಸಹಿತರಾದ ಬಾಂಧವರಿಗೆ ಸಂತೋಷವನ್ನು ಮಾಡುತ ಆವರಿಂದ ಪೂಜ್ಯನಾಗಿ ಕೆಲವುಹೊತ್ತು ಇದ್ದು ಶ್ರೀ ಕೃಷ್ಣಸ್ವಾಮಿಯು ರುಕ್ಮಿಣೀಸಹಿತನಾಗಿ ತನ್ನ ಮನೆಗೆ ಹೋಗಿ ಲೀಲಾವಿನೋದಗಳಿಂದ ಹೊತ್ತು ಕಳೆಯುತ್ತಿದ್ದನು. ಆ ಬಳಿಕ ಸತ್ಯಭಾಮೆ ಜಾಂಬವತಿ ಮೊದಲಾದ ತನ್ನ ಪ್ರಾಣಕಾಂತೆಯರು ಇರುವ ಅಂತಃಪುರಗಳಿಗೆ ಹೋಗಿ ಅವರ ಮನಸ್ಸಿಗೆ ಸಂತೋಷವನ್ನು ಮಾಡಿ ಮಗುಳಿ ರುಕ್ಮಿಣೀದೇವಿ ಇರುವ ಉಪ್ಪರಿಗೆಗೆ ಬಂದು ಸುಖವಾಗಿದ್ದನು; ಇದು ಶಾರ್ಙಧರನಾದ ಶ್ರೀಕೃಷ್ಣನ ವಿಜಯಕ್ಕೆ ಕಾರಣವು; ಇದಕ್ಕೋಸ್ಕರಲೇ ಈತನು ಭೂಲೋಕದಲ್ಲಿ ಅವತರಿಸಿದನು ಎಂದು ಮಹಾತ್ಮರು ಹೇಳುವರು."

೬೩ ನೇ ಅಧ್ಯಾಯ.—ಅಘ್ಯಾರ್ಘಪಹರಣಪರ್ವಶೇಷ. (ಶ್ರೀಕೃಷ್ಣವರ್ಣನೆ.)

"ಕೇಳು ಧರ್ಮರಾಯನೆ, ಈ ಪ್ರಕಾರದಲ್ಲಿ ಶ್ರೀ ಕೃಷ್ಣನು ಆ ಸ್ತ್ರೀಯರೊಡನೆ ದ್ವಾರಕಾಪಟ್ಟಣದಲ್ಲಿ ಇಷ್ಟೋಪಭೋಗಗಳಿಂದ ಅಹೋರಾತ್ರಿಯೂ ಸಂತುಷ್ಟನಾಗಿರುವ ಸಮಯದಲ್ಲಿ ತನ್ನ ಮೊಮ್ಮಗನಾದ ಅನಿರುದ್ಧನ ನಿಮಿತ್ತದಿಂದ ಇಂದ್ರಾದಿ ದೇವತೆಗಳಿಗೂ ಅಶಕ್ಯವಾಗಿ ದೇವ ಹಿತವಾದ ಒಂದು ಕಾರ್ಯವನ್ನು ನಿರ್ವಹಿಸಿದನು: ಅದನ್ನೂ ಹೇಳುತಲಿದೇನೆ ಕೇಳು; ಬಲಿಯೆಂಬ ದೈತ್ಯವಲ್ಲಭನಿಗೆ ಜ್ಯೇಷ್ಠಪುತ್ರನಾಗಿ ಶೌರ್ಯಧುರ್ಯನಾಗಿ ಸಹಸ್ರಬಾಹುಗಳುಳ್ಳ ಬಾಣಾಸುರನು ಸತ್ವಗುಣಸಂಪನ್ನನಾಗಿ ಬಹುವರುಷಗಳು ಅತ್ಯುಗ್ರವಾದ ತಪಸ್ಸನ್ನು ಮಾಡಿ, ಮಹಾದೇವನ ಮನಸ್ಸಿಗೆ ಪ್ರೀತಿಯನ್ನು ಮಾಡಿ, ಪರಮೇಶ್ವರನ ದೆಸೆಯಿಂದ ಅಸುರರಿಗೆ ದುರ್ಲಭಗಳಾದ ವರಗಳನ್ನು ಪಡೆದು ಅಸಮಾನಬಲಶಾಲಿಯಾಗಿ, ಶೋಣಿತಪುರದಲ್ಲಿ ರಾಜ್ಯವನ್ನು ಪರಿಪಾಲಿಸುತ ಇಂದ್ರನು ಮೊದಲಾದ ದೇವತೆಗಳನ್ನು ಯುದ್ಧರಂಗದಲ್ಲಿ ಜಯಿಸಿ ಎರಡನೇ ಕುಬೇರನ ತೆರದಿಂದೊಪ್ಪುತ, ತನಗೆ ಹಿತಗಳಾದ ಕಾರ್ಯಗಳನ್ನು ಶುಕ್ರನು ಮಾಡುತ್ತಿರಲು, ಮಹಾ ವಿಭವಸಂಪನ್ನನಾಗಿ ರಾಜ್ಯವನ್ನಾಳುತ್ತಿದ್ದನು. ರೂಪು ಲಾವಣ್ಯಗಳಿಂದ ಪಾರ್ವತೀದೇವಿಗೆ ಸಮಾನವಾಗಿ ಅಸಮಾನ ಸೌಂದರ್ಯಶಾಲಿಯಾಗಿ ಬಾಣಾಸುರನ ಮಗಳಾದ ಉಷಾಕನ್ಯಕೆಯೊಡನೆ ಪ್ರದ್ಯುಮ್ನನಮಗನಾದ ಅನಿರುದ್ಧನು ಪ್ರಚ್ಛನ್ನವೇಷದಿಂದ ವಿಹರಿಸುತ್ತಿದ್ದನು; ಈ ವೃತ್ತಾಂತವನ್ನು ತಿಳಿದು ಬಾಹುಬಲಗರ್ವಿತನಾದ ಬಾಣಾಸುರನು ಅನಿರುದ್ಧನನ್ನು ಹಿಡತರಿಸಿ ಶೆರೆಮನೆಯಲ್ಲಿ ಹಾಕಿದನು. ಸುಕುಮಾರಗಾತ್ರನಾಗಿ ಮಹಾಸುಖಾರ್ಹನಾಗಿರುವ ರಾಜ ಕುಮಾರಕನು ಅನುಭವಿಸುವಂಥಾ ಖೇದವನ್ನು ನೋಡಿ ನಾರದ ಮಹಾಮುನೀಶ್ವರನು ದ್ವಾರಕಾಪಟ್ಟಣಕ್ಕೆ ಹೋಗಿ ಶ್ರೀ ಕೃಷ್ಣನಸಂಗಡ 'ಎಲೈ ಯದುಪುಂಗವನೆ, ನಿನ್ನ ಮೊಮ್ಮಗನಾಗಿ ಯದುಶ್ರೇಷ್ಠನಾದ ಅನಿರುದ್ಧನು ದಾನವೇಶ್ವರನಿಂದ ಬಾಣಾಸುರನಿಂದ ಕನ್ಯಾಂತಃಪುರದಲ್ಲಿ ಕಾವಲು ಮಾಡಲ್ಪಟ್ಟಿದ್ಧಾನೆ' ಎಂದು ತಿಳುಹಿಸಿ ಶೋಣಿತಪುರಕ್ಕೆ ಹೋದನು. ಆ ಬಳಿಕ ಕೃಷ್ಣನು ಬಲರಾಮ ಪ್ರದ್ಯುಮ್ನರನ್ನು ಕರತರಿಸಿ, ನಾರದನು ಹೇಳಿದ ವೃತ್ತಾಂತವನ್ನು ಅವರಿಗೆ ತಿಳುಹಿಸಿ, ಅವರೂ ತಾನೂ ಅತಿ ಕುಪಿತರಾಗಿ ಗರುಡವಾಹನವನ್ನೇರಿ, ತಾಮ್ರಪ್ರಾಕಾರ ಸಮಾವೃತವಾಗಿ ಬೆಳ್ಳೀ ಬಾಗಲುಗಳಿಂದ ಶೋಭಿತವಾಗಿ ಚಿನ್ನದ ಉಪ್ಪರಿಗೆಗಳಿಂದ ಒಪ್ಪುತಲಿರುವಂಥಾದ್ದಾಗಿ ಮುಕ್ತಾಮಣಿ ವಿಚಿತ್ರವಾಗಿ ಉದ್ಯಾನವನ ಸಂಪನ್ನವಾಗಿ ನಾನಾ ಪಕ್ಷಿಸಮಾಕುಲವಾಗಿ ನೃತ್ಯಗೀತ ಮನೋಹರವಾಗಿ ಮಕರ ತೋರಣಾಲಂಕೃತವಾಗಿ ಅನೇಕ ಸರೋವರ ವಿರಾಜಮಾನವಾಗಿ ಹೃಷ್ಟಪುಷ್ಟಜನಾಕೀರ್ಣವಾಗಿ ಸ್ವರ್ಗಸಮಾನವಾದ ಬಾಣಾಸುರನ ಪಟ್ಟಣವನ್ನು ನೋಡಿ ಆಶ್ಚರ್ಯಭರಿತರಾಗಿ, ಪಟ್ಟಣದ ಬಾಗಲ ಸಮೀಪಕ್ಕೆ ಹೋಗಿ, ಬಾಗಲಲ್ಲಿ ಕಾವಲಾಗಿದ್ದ ಈಶ್ವರ ಷಣ್ಮುಖ ಭದ್ರಕಾಳಿ ಯಜ್ಞೇಶ್ವರ ಮೊದಲಾದವರನ್ನು ನೋಡಿ, ಅಚಲಪರಾಕ್ರಮ ಧುರಂಧರನಾಗಿ ಶಂಖ ಚಕ್ರಾದಿ ದಿವ್ಯಾಯುಧ ಧರನಾಗಿ ಕೋಪೋದ್ದೀಪಿತನಾಗಿರುವ ಜನಾರ್ದನನು ತನ್ನ ಭುಜಬಲದಿಂದ ಅವರನ್ನು ಜಯಿಸಿ, ಈಶ್ವರನಿಂದ ರಕ್ಷಿತವಾದ ಉತ್ತರಬಾಗಲಿಗೆ ಹೋದನು. ಆ ಸ್ಥಳದಲ್ಲಿ ತೇಜೋವಿರಾಜಮಾನನಾಗಿ ತ್ರಿಶೂಲಧರನಾಗಿರುವ ಈಶ್ವರನು ಬಾಣಾಸುರನಿಗೆ ಹಿತವನ್ನು ಆಚರಿಸುವದಕ್ಕೋಸ್ಕರ ಪಿನಾಕದಲ್ಲಿ ಬಾಣವನ್ನು ತೊಟ್ಟು ಯುದ್ಧೋನ್ಮುಖವಾಗಿ ಪ್ರಳಯಕಾಲಾಂತಕನೋಪಾದಿಯಲ್ಲಿ ಕಣ್ಣುಗಳನ್ನು ಕೆಂಪ್ರಮಾಡಿಕೊಂಡು ಬರುವಂಥಾ ಕೈಟಭಾಂತಕನನ್ನು ನೋಡಿ (ಅತಿಘೋರವಾಗಿ ಆಶ್ಚರ್ಯಕರವಾಗಿ ಅಚಿಂತ್ಯವಾಗಿರುವ ಆ ಮಹಾಯುದ್ಧದಲ್ಲಿ) ಅನ್ಯೋನ್ಯಜಯಕಾಂಕ್ಷಿಗಳಾಗಿ ಅಸ್ತ್ರಪ್ರಯೋಗಗಳನ್ನು ಪ್ರತ್ಯಸ್ತ್ರಸಂಧಾನಗಳನ್ನು ಮಾಡುತ ಒಂದು ಮುಹೂರ್ತಕಾಲವು ಹೋರಿದನು. ವಾಸುದೇವನು ಆ ಮಹಾದೇವನನ್ನೂ ಮಿಕ್ಕಾದ ದ್ವಾರಪಾಲಕರನ್ನೂ ಜಯಿಸಿ ಪಟ್ಟಣವನ್ನು ಪ್ರವೇಶಿಸಿದನು; ಆಗ ಬಾಣಾಸುರನು ಬಂದು ತೀಕ್ಷ್ಣಗಳಾದ ಶಸ್ತ್ರಾಸ್ತ್ರಗಳನ್ನು ಒಮ್ಮಡಿಯಾಗಿ ಪ್ರಯೋಗಿಸುತ ಮತ್ತೂ ಸಾವಿರ ಭುಜಗಳಿಂದ ಆಯುಧಗಳನ್ನು ಧರಿಸಿ ಪ್ರಯೋಗಿಸುವ ಸಮಯದಲ್ಲಿ ಕೃಷ್ಣನು ಪ್ರತ್ಯಸ್ತ್ರಗಳಿಂದ ಅವನ ಶಸ್ತ್ರಾಸ್ತ್ರಗಳನ್ನು ಪುಡಿಯಾಗಿ ಖಂಡಿಸಿ, ತಿರಿಗೂ ಎರಡುಘಳಿಗೆ ದಾರುಣವಾದ ಯುದ್ಧವನ್ನು ಮಾಡಿ, ನಿಖಿಲಶಸ್ತ್ರಮುಖ್ಯವಾಗಿ ದೇದೀಪ್ಯಮಾನವಾಗಿರುವ ಚಕ್ರಾಯುಧವನ್ನು ಪ್ರಯೋಗಿಸಿ, ಆತನ ಬಾಹುಸಹಸ್ರಗಳನ್ನೂ ಖಂಡಿಸಿದನು; ಆಗ ಬಾಹುರಹಿತ

ನಾದ ಬಾಣಾಸುರನು ಕೊಂಬುಗಳಿಲ್ಲದೇಯಿರುವ ವೃಕ್ಷದೋಪಾದಿಯಲ್ಲಿ ಭೂಮಿಯಲ್ಲಿ ಬಿದ್ದನು. ಆ ಬಳಿಕ ಯದುವಲ್ಲಭನು ಅಂತಃಪುರಕ್ಕೆ ಹೋಗಿ ಭಾರ್ಯಾಸಮೇತನಾದ ಅನಿರುದ್ಧನನ್ನು ಬಿಡಿಸಿ, ಆ ಬಾಣಾಸುರನ ಮನೆಯ ಲ್ಲಿದ್ದ ಸಂಖ್ಯೆಯಿಲ್ಲದ ದಿವ್ಯ ರತ್ನಗಳನ್ನೂ ಗೋಧನಗಳನ್ನೂ ಅನೇಕವಾದ ಧನಕಾಂಚನ ರಾಶಿಗಳನ್ನೂ ಗರುಡನ ಮೇಲೆ ಹೇರಿಸಿಕೊಂಡು, ಬಲರಾಮನು ಪ್ರದ್ಯುಮ್ನನು ಅನಿರುದ್ಧನು ಅನೇಕ ದಾಸದಾಸೀಜನ ಪರಿವೃತೆಯಾಗಿ ಸೌಂದರ್ಯಶಾಲಿಯಾಗಿರುವ ಉಷಾಕನ್ಯಕೆಯೊಡನೆ ಕೂಡಿ, ಸಂತೋಷಭರಿತನಾಗಿ ಪೀತಾಂಬರಧಾರಿಯಾಗಿ ಮಹಾಬಲ ಧುರಂಧರನಾಗಿ ದಿವ್ಯ ಭೂಷಣ ಭೂಷಿತನಾಗಿ ಶಂಖಚಕ್ರಾದ್ಯಾಯುಧಧಾರಿಯಾಗಿ, ವೃಷ್ಣಿ ಕುಲಶ್ರೇಷ್ಠನಾದ ಶ್ರೀ ಕೃಷ್ಣನು ಉದಯಪರ್ವತದ ಶಿಖರದಲ್ಲಿ ಮೆರೆಯುತಲಿರುವ ಸೂರ್ಯನೋಪಾದಿಯಲ್ಲಿ ಕಾಣಲ್ಪಡುತ ದ್ವಾರಕಾಪಟ್ಟಣಕ್ಕೆ ಹೋಗಿ, ಸಕಲ ಯಾದವರೊಡನೆ ಕೂಡಿ ದೇವ ಋಷಿಗಣ ಸಮೇತನಾದ ದೇವೇಂದ್ರನೋಪಾದಿಯಲ್ಲಿ ಪ್ರಕಾಶಿಸಿದನು" ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

---

### ೬೮ನೇ ಅಧ್ಯಾಯ.—ಅರ್ಘ್ಯಾಪಹರಣ ಪರ್ವಶೇಷ (ಶ್ರೀಕೃಷ್ಣವರ್ಣನೆ.)

ಅನಂತರದಲ್ಲಿ ಭೀಷ್ಮನು ಧರ್ಮರಾಯನನ್ನು ಕುರಿತು "ಕೇಳು ಧರ್ಮರಾಯನೆ, ಮುರಾಸುರನ ಪಾಶಗಳನ್ನು ಕುಯಿದು, ನಿಶುಂಭ ನರಕಾಸುರರನ್ನು ಸಂಹರಿಸಿ, ಧನುಸ್ಸಿನ ಹೆದೆಯ ಧ್ವನಿಯೂ ಪಾಂಚಜನ್ಯಧ್ವನಿಯೂ ಕೇಳಿಸಲು ಅಧಿಕವಾದ ಸೇನೆಯೊಡನೆ ಕೂಡಿ ನಡದು, ದಕ್ಷಿಣದೇಶಾಧೀಶ್ವರರಾದ ಅರಸುಗಳೊಡನೆ ಯುದ್ಧಕ್ಕೆ ಬಂದ ರುಕ್ಮಿಯನ್ನು ಭಂಗಪಡಿಸಿ, ಮೇಘಗಂಭೀರಧ್ವನಿಗಳುಳ್ಳಂಥಾದ್ದಾಗಿ ಸೂರ್ಯನೋಪಾದಿಯಲ್ಲಿ ಪ್ರಕಾಶಮಾನವಾದ ರಥದಲ್ಲಿ ರುಕ್ಮಿಣೀದೇವಿಯನ್ನಿರಿಸಿಕೊಂಡು ಬಂದು, ಮತ್ತೂ ಜರೂಧಿ ಪುರಾಧೀಶ್ವರನಾದ ಆಹೃತಿಯನ್ನೂ ಕ್ರಾಥನನ್ನೂ ಶಿಶುಪಾಲನನ್ನೂ ಜಯಿಸಿ, ವಕ್ರನು ಶೈಬ್ಯನು ಶತಧನ್ವನು ಇಂದ್ರದ್ಯುಮ್ನನು ಕಶೇರುದೇಶಾಧೀಶ್ವರನಾದ ಕಾಲಯವನನು ಸೌಭನಗರಾಧಿಪತಿಯಾದ ಸಾಲ್ವನು ಕೃತಧನ್ವನು ಮೊದಲಾದ ಅರಸುಗಳನ್ನು ಜಯಿಸಿ, ಆ ಪಟ್ಟಣಕ್ಕೆ ಆವರಣವಾಗಿರುವ ಸಾವಿರಪರ್ವತಗಳನ್ನೂ ಚಕ್ರದಿಂದ ತುಮುರು ತುಮುರಾಗಿ ಖಂಡಿಸಿ, ದ್ಯುಮತ್ಸೇನನನು ಮರ್ದಿಸಿ, ಮಹೇಂದ್ರ ಪರ್ವತದಲ್ಲಿ ನಿಮಿಷಮಾತ್ರದಿಂದ ಬರುತ ಹೋಗುತಲಿದ್ದ ಮನೋವೇಗವುಳ್ಳ ರಾವಣಾನುಚರರನ್ನು ಹಿಡಿದುಕೊಂಡು, ಇರಾವತೀ ಪಟ್ಟಣದಲ್ಲಿ ಸೂರ್ಯಾಗ್ನಿ ಬಲ ಸಮಾನಧುರಂಧರರಾದ ಗೋಪತೀ ಕಾಲಕೇತುಗಳೆಂಬ ಅರಸುಗಳನ್ನು ಜಯಿಸಿ, ಅಕ್ಷಪ್ರಪತನ ದೇಶದಲ್ಲಿ ನೇಮಿಯೆಂಬವನನ್ನೂ ಸುರಾಷ್ಟ್ರ ದೇಶದಲ್ಲಿ ಹಂಸವಂತನೆಂಬವನನ್ನೂ ಸಂಹರಿಸಿ, ವಾರಣಾವತೀ ಪಟ್ಟಣವನ್ನು ದಹಿಸಿ, ಬಲದಿಂದಲೂ ಪರಿವಾರದಿಂದಲೂ ಕೂಡಿರುವ ಕಾಶೀದೇಶಾಧ್ಯಕ್ಷನನ್ನು ಕೊಂದು, ಲೋಹಿತಕೂಟಕ್ಕೆ ಹೋಗಿ ಅಜೇಯನಾಗಿ ಲೋಕಪಾವನನಾದ ವರುಣನನ್ನು ಜಯಿಸಿ, ಇಂದ್ರಲೋಕಕ್ಕೆ ಹೋಗಿ ಮಹೇಂದ್ರರಕ್ಷಿತವಾದ ಪಾರಿಜಾತ ವೃಕ್ಷವನ್ನು ಕಿತ್ತುಕೊಂಡು, ಮತ್ತು ಪಾಂಡ್ಯನು ಪೌಂಡ್ರನು ಮತ್ಸ್ಯನು ಕಳಿಂಗನು ಅಂಗರಾಷ್ಟ್ರಾಧಿಪತಿ ಇವರಷ್ಟು ಮಂದಿಯೂ ಒಗ್ಗಟ್ಟಾಗಿ ಬಂದು ಯುದ್ಧಮಾಡಲು ಇನ್ನೂರೊಂದು ಮಂದಿ ಕ್ಷತ್ರಿಯರನ್ನು ಯುದ್ಧದಲ್ಲಿ ಜಯಿಸಿ, ಗಾಂಧಾರಿಯೆಂಬ ಕನ್ಯೆಯನ್ನು ಮದುವೆಯಾಗಿ, ಮತ್ತೂ ಕುಂತೀದೇವಿಯು ನೋಡುತ್ತಿರಲು ಗಾಂಡೀವಧನುರ್ಧರನಾದ ಅರ್ಜುನನನ್ನು ವಿನೋದ ಯುದ್ಧದಲ್ಲಿ ಭಂಗಪಡಿಸಿ, ಮತ್ತೂ ದ್ರೋಣನು, ಕೃಪನು, ಅಶ್ವತ್ಥಾಮನು, ಕರ್ಣನು, ಭೀಮಸೇನನು, ಸುಯೋಧನನು ಮೊದಲಾದವರು ಚಕ್ರವನ್ನು ಗ್ರಹಿಸುವದಕ್ಕೋಸ್ಕರ ಬಂದ ಸಮಯದಲ್ಲಿ ಅವರನ್ನೂ ಜಯಿಸಿ, ಬಭ್ರುಭಾರ್ಯೆಯನ್ನು ತಕ್ಕೊಂಡು ಹೋದ ವೇಣುದಾರಿಯನ್ನು ಸಂಹರಿಸಿ, ಆತನಿಗಿದ್ದ ಸಕಲೈಶ್ವರ್ಯದೊಡನೆ ರಾಜ್ಯವನ್ನು ಅಪಹರಿಸಿ, ತಪೋಬಲಗರ್ವಿತನಾಗಿ ಬಲಪರಾಕ್ರಮಸಂಪನ್ನನಾಗಿ ಇಂದ್ರಾದಿ ದಿಕ್ಪಾಲಕರನ್ನು ಬಾರಿಬಾರಿಗೂ ಜಯಿಸಿ ಅವರ ದಿವ್ಯಾಸ್ತ್ರಗಳಿಗೂ ಭಯಪಡದೇ ನಿಂತ ಬಾಣಾಸುರನ ಗರ್ವಭಂಗವನ್ನು ಮಾಡಿ ಸಾವಿರ ಕೈಗಳನ್ನೂ ಬಿಡಿಸಿ, ಪೀಠನು ಕಂಸನು ಮೈಠನನು ಅತಿಲೋಮನು ಜಂಭನು ಶಂ

ಬರನು ಐರಾವತನು ವಿರೂಪನು ಮೊದಲಾದವರನ್ನು ಸಂಹರಿಸಿ, ಮತ್ತೂ ಭೋಗವತೀ ಪಟ್ಟಣವನ್ನು ಪ್ರವೇಶಿಸಿ ವಾಸುಕಿಗೆ ಪರಾಭವವನ್ನು ಮಾಡಿ ರೋಹಿಣಿಯ ಮಗನನ್ನು ಬಿಡಿಸಿದನು. ಹೀಗೆ ಬಾಲ್ಯದಲ್ಲಿ ಬಲರಾಮ ಸಮೇತನಾದ ಶ್ರೀಕೃಷ್ಣನು ಮಾಡಿದ ಅದ್ಭುತಕೃತ್ಯಗಳು ಎಷ್ಟೋ ಉಂಟು; ಈ ಪುಂಡರೀಕಾಕ್ಷನು ಸುರರಿಗೆ ಅಭಯನ್ನು ಕೊಡುವಂಥಾವನು; ಸರ್ವಲೋಕೇಶ್ವರನಾಗಿ ಜಗದ್ವ್ಯಾಪಕನಾಗಿ ಮಹಾಭುಜಬಲಶಾಲಿಯಾಗಿ ದುರ್ಜನ ಶಿಕ್ಷಕನಾಗಿರುವ ಈ ಶ್ರೀಕೃಷ್ಣಸ್ವಾಮಿಯು ದೇವಹಿತಕಾರ್ಯಗಳನ್ನು ನಿರ್ವಹಿಸಿ ಸಂಗಡಲೇ ತನ್ನ ಸ್ಥಾನಕ್ಕೆ ಹೋಗುತಲಿದಾನೆ; ಶೈಲಕಾನನ ಸಹಿತವಾಗಿ ಮನೋಹರವಾಗಿ ಸೂರ್ಯಮಂಡಲ ಪ್ರಭಾಭಾಸುರವಾಗಿರುವ ಈ ದ್ವಾರಕಾ ಪಟ್ಟಣವು ಯಾದವರು ನಾಶವಾಗುವ ಪರಿಯಂತವೂ ಇಲ್ಲಿದ್ದು ಅಮೇಲೆ ವರುಣನಿಗೆ ಆವಾಸಸ್ಥಾನವಾದ ಸಮುದ್ರದಲ್ಲಿ ಮುಳುಗಿ ಹೋಗುತಲಿದೆ; ಈ ಮಾಧವನು ಒಬ್ಬನು ಹೊರತಾಗಿ ದೇವದಾನವ ಮನುಷ್ಯರೊಳಗೆ ಯಾರಾದರೂ ಅಂಧಕವೃಷ್ಣಿ ಮೊದಲಾದ ಜನಗಳು ಬಾಲವೃದ್ಧಸಹಿತವಾಗಿ ದ್ವಾರಕಾ ಪಟ್ಟಣದಲ್ಲಿ ಸುಖವಾಗಿರಲಾರರು; ಶ್ರೀ ಮಹಾವಿಷ್ಣುವು ನಾರಾಯಣನು ಸೋಮನು ಸೂರ್ಯನು ಅಪ್ರಮೇಯನು ಸ್ವತಂತ್ರನು ಇಚ್ಛಾವಿಹಾರಿಯೂ ತಾನೇ ಆದ ಈ ಗೋವಿಂದನು ಬಾಲಕರು ಕ್ರೀಡಿಸುವ ಚಂದದಿಂದ ಈ ಜನರೊಡನೆ ಕೂಡಿ ಈ ಪ್ರಕಾರದಲ್ಲಿ ವಿಹರಿಸುತಲಿದಾನೆ; ಈತನು ಒಂದು ಗರ್ಭದಲ್ಲಿ ಇರುವದೂ ಹುಟ್ಟುವದೂ ಇಲ್ಲಾ; ತನ್ನ ತೇಜೋ ವಿಶೇಷದಿಂದ ಈತನು ಎಲ್ಲರಿಗೂ ಸದ್ಗತಿಯನ್ನು ಕಲ್ಪಿಸುವದಕ್ಕೆ ಸಮರ್ಥನು; ಈ ಚರಾಚರಾತ್ಮಕವಾದ ಪ್ರಪಂಚವಷ್ಟೂ ನೀರುಗುಳ್ಳೆಗಳು ಜಲದಲ್ಲಿ ಹುಟ್ಟಿ ಅಡಗುವರೀತಿಗೆ ಈ ವಾಸುದೇವನಲ್ಲಿ ಹುಟ್ಟಿ ಅಲ್ಲಿಯೇ ಅಡಗುವದು; ಸರ್ವೇಶ್ವರನಾಗಿ ವಿಶ್ವಾತ್ಮಕನಾದ ಈತನ ಮಹಿಮೆಯು ಇಷ್ಟು ಅಷ್ಟು ಎಂದು ವಿವರಿಸುವದಕ್ಕೆ ಯಾರಿಗೂ ಶಕ್ಯವಲ್ಲಾ; ಈತನಿಗಿಂತಲು ಅಧಿಕನಾದವನು ಎಲ್ಲಿಯೂ ಇಲ್ಲಾ'' ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು.

---

## ೬೯ ನೇ ಅಧ್ಯಾಯ.—ಅರ್ಘ್ಯಾಹರಣ ಪರ್ವಶೇಷ.

ಅನಂತರದಲ್ಲಿ: ವೈಶಂಪಾಯನ ಮುನೀಂದ್ರನು ಜನಮೇಜಯರಾಯನನ್ನು ಕುರಿತು ಇಂತೆಂದನು:

"ಕೇಳು ಜನಮೇಜಯನೆ, ಆ ಬಳಿಕ ಈ ಪ್ರಕಾರದಲ್ಲಿ ಭೀಷ್ಮನು ಪುರಾಣ ಪುರುಷನಾದ ನಾರಾಯಣನ ದಿವ್ಯಾವತಾರವನ್ನು ವರ್ಣಿಸಲು ಸಹದೇವನು ಸಭೆಯವರನ್ನು ನೋಡಿ ಇಂತೆಂದನು: 'ಈ ಶ್ರೀ ಕೃಷ್ಣನು ಅಪ್ರಮೇಯನಾಗಿ ಶತ್ರು ಸಂಹಾರಕನಾಗಿ ಸಕಲಲೋಕೇಶ್ವರನಾದ್ದರಿಂದ ಆಚಾರ್ಯನಾಗಿ ಗುರುವಾಗಿ ತಂದೆಯಾಗಿ ಪುರುಷೋತ್ತಮನಾದ ಆತನಿಗೆ ಅಗ್ರಪೂಜೆಯನ್ನು ಮಾಡಿದೆವು; ಈ ಪ್ರಕಾರವನ್ನು ನೀವೆಲ್ಲರು ಸಮ್ಮತಿಸಬೇಕು; ಇದು ಯಾರಿಗೆ ಸಮ್ಮತವಲ್ಲವೊ ಆತನು ಈಗಲೇ ಚತುರಂಗ ಬಲಸಮೇತನಾಗಿ ಯುದ್ಧಕ್ಕೆ ಬರಲೀ; ಆತನ ಶಿರಸ್ಸಿನಲ್ಲಿ ನನ್ನ ಯಡದ ಪಾದವನ್ನು ಇಕ್ಕುತಲಿದೇನೆ' ಎಂದು ಸಕಲರಾದ ಅರಸುಗಳೂ ನೋಡುತ್ತಿರಲು ಸಭಾಮಧ್ಯದಲ್ಲಿ ತನ್ನ ಪಾದವನ್ನು ಚಾಚಿ 'ಇದಕ್ಕೆ ಅಭಿಮಾನಶಾಲಿಯಾದವನು ಉತ್ತರವನ್ನು ಕೊಡಲೀ' ಎಂದು ಕೋಪಾಟೋಪದಿಂದ ನುಡಿದನು; ಭುಜಬಲಧುರಂಧರರಾದ ರಾಜಶ್ರೇಷ್ಠರೊಳಗೆ ಒಬ್ಬನಾದರೂ ಪ್ರತ್ಯುತ್ತರವನ್ನು ಕೊಡದೆ ಬುದ್ಧಿವಂತರಾದ್ದರಿಂದ ಸುಮ್ಮನೆ ಇದ್ದರು; ಆ ಸಮಯದಲ್ಲಿ ಸಹದೇವನ ಮೇಲೆ ಸಭೆಯಲ್ಲಿರುವಂಥಾವರು ನೋಡುತ್ತಿರಲು ಪುಷ್ಪ ವೃಷ್ಟಿಗಳು ಕರೆದವು! 'ಮೊದಲು' 'ಮೇಲು' ಎಂದು ಆಕಾಶವಾಣಿಯ ವಾಕ್ಯಗಳು ಕೇಳಲ್ಪಟ್ಟವು! ಕಾಲಜ್ಞಾನ ಸಂಪನ್ನನಾಗಿ ಸಕಲ ಧರ್ಮ ತತ್ವಜ್ಞನಾದ ನಾರದಮುನೀಶ್ವರನು ಬಹು ಸಂತೋಷಪಟ್ಟು ಕೃಷ್ಣಾಜಿನವನ್ನು ಬಿರಬಿರನೆ ತಿರುಗಿಸಿ ಭೂಮಿಯಲ್ಲಿ ಹಾಕಿ ಕುಣಿದನು! ಆ ಸಮಯದಲ್ಲಿ ಚೈದ್ಯನು ಮೊದಲಾದ ಕೆಲವು ಅರಸುಗಳು ಧರ್ಮರಾಯನ ಸಾಮ್ರಾಜ್ಯಾಭಿಷೇಕವನ್ನೂ ಶ್ರೀ ಕೃಷ್ಣಸ್ವಾಮಿಯ ಅಗ್ರಪೂಜೆಯನ್ನೂ ನೋಡಿ ಸಹಿಸಲಾರದೆ ಕೋಪಾವೇಶ ಭಯಂಕರರಾಗಿ ಯಾದವ ಪಾಂಡವರ ಮೇಲೆ ಬಿದ್ದರು; ಬಂಧು ಜನಗಳು ಬಂದು ಅಡ್ಡಲಾಗಿ ಅವರನ್ನು ತಡೆಯಲು, ನರಿಗಳು ಮಾಂಸವನ್ನು ತಕ್ಕೊಂಡು ಹೋದರೆ ಅಹಂಕಾರವನ್ನು

ಮಾಡುತ ಗರ್ಜಿಸುತ್ತಿರುವ ಸಿಂಹಗಳೋಪಾದಿಯಲ್ಲಿ ಯುದ್ಧಸನ್ನದ್ಧರಾಗಿ ಬಹು ಸೇನೆಗಳೊಡನೆ ಕೂಡಿ ಒಬ್ಬರಿಗೊಬ್ಬರು ಸಂಕೇತವನ್ನು ಮಾಡಿದರು; ಆ ಅರಸುಗಳ ಬಲಸಮುದ್ರವನ್ನು ನೋಡಿ ಬಲಭದ್ರಾನುಜನಾದ ಶ್ರೀಕೃಷ್ಣಸ್ವಾಮಿಯು ರೌದ್ರಾಕಾರನಾಗಿ ಅವರ ಕೂಡೆ ಭಯಂಕರವಾದ ಯುದ್ಧವನ್ನು ಮಾಡಬೇಕೆಂದೆಣಿಸಿ ಸಮರಸನ್ನದ್ಧನಾಗಿ ನಿಂತನು; ವಿಶೇಷಜ್ಞನಾದ ಸಹದೇವನು ಮಿಕ್ಕಾದ ಬ್ರಾಹ್ಮಣ ಕ್ಷತ್ರಿಯರನ್ನೂ ಪೂಜಿಸಿ ಸಭಾಪೂಜೆಯನ್ನು ನೆರವೇರಿಸಿದನು.

“ಕೇಳು ಜನಮೇಜಯನೆ, ಈ ಪ್ರಕಾರವಾಗಿ ವಾಸುದೇವನಿಗೆ ಮಾಡಿದ ಬಹುಮಾನವನ್ನು ಸಹಿಸಲಾರದೆ ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ಶಿಶುಪಾಲನು ಭೂಪಾಲ ಸಮೂಹವನ್ನು ನೋಡಿ ‘ಕೇಳಿರೈ ಅರಸುಗಳಿರಾ, ಈ ಅನುಚಿತ ಕಾರ್ಯವನ್ನು ನೋಡಿ ಸುಮ್ಮನೆ ಇರುವದು ನಿಮ್ಮಂಥಾವರಿಗೆ ಉಚಿತವೆ? ನಿಮ್ಮಷ್ಟುಮಂದಿಗೂ ಸೇನಾಪತಿಯಾಗಿ ನಾನು ಯುದ್ಧವನ್ನು ಮಾಡುತಲಿದ್ದೇನೆ; ಕೃಷ್ಣಪಾಂಡವರೊಡನೆ ಈಗಲೇ ಯುದ್ಧಕ್ಕೆ ಏಳೀ’ ಎಂದು ಅಷ್ಟುಮಂದಿಯನ್ನೂ ಹುರಿಗೊಳಿಸುತ ಯಜ್ಞಘಾತವನ್ನು ಮಾಡಬೇಕೆಂದು ಯೋಚಿಸಿದನು.”

## ೩೦ನೇ ಅಧ್ಯಾಯ.—ಅರ್ಘ್ಯಾಪಹರಣಪರ್ವಶೇಷ.

“ಕೇಳು ಜನಮೇಜಯನೆ, ಆ ಸಮಯದಲ್ಲಿ ಧರ್ಮರಾಯನು ಕೋಪಾಟೋಪದಿಂದ ಉಬ್ಬುತಲಿರುವ ರಾಜಸಮುದ್ರವನ್ನು ನೋಡಿ ಕುರುಪಿತಾಮಹನಾಗಿ ವೃದ್ಧನಾಗಿ ಮೇಧಾಗರಿಷ್ಠನಾದ ಭೀಷ್ಮನನ್ನು ಕುರಿತು ಬ್ರಹ್ಮದೇವನನ್ನು ಕುರಿತು ಹೇಳುವ ಇಂದ್ರನ ಛಂದದಿಂದ ಇಂತೆಂದನು: ‘ಈ ನರೇಂದ್ರಸಮುದ್ರವಿಷ್ಟು ರೋಷಾವೇಶದಿಂದ ಕಲಿಕಿದೆ; ಈ ಸಮಯದಲ್ಲಿ ಸಮಸ್ತ ಜನಗಳಿಗೂ ಹಿತವಾಗುವ ರೀತಿಗೂ ಯಜ್ಞಕ್ಕೆ ವಿಘ್ನವಾಗದೇ ಇರುವ ರೀತಿಗೂ ನಾವು ಮಾಡತಕ್ಕಂಥಾ ಕಾರ್ಯವನ್ನು ತಿಳುಹಿಸಬೇಕು’ ಎಂದು ಕೇಳಿದನು. ಭೀಷ್ಮನು ಧರ್ಮರಾಯನನ್ನು ನೋಡಿ ‘ನಿನಗೆ ಭಯವ್ಯಾತಕ್ಕೆ? ನಾನು ಇವರನ್ನು ಕೊಲ್ಲುವದಕ್ಕೆ ಸಮರ್ಥವಾಗಿ ಶುಭಕರವಾದ ಮಾರ್ಗವನ್ನು ಮೊದಲೇ ನಿಶ್ಚೈಸಿದೇನೆ; ಸಿಂಹವು ನಿದ್ದೆಹೋಗುವ ಸಮಯದಲ್ಲಿ ನಾಯಿಗಳು ಬಗಳುವ ತೆರದಿಂದ ನಾಯಿಗಳಿಗೆ ಸಮಾನರಾದ ಈ ನೃಪಾಧಮರು ನಾನಾಪ್ರಕಾರವಾಗಿ ಬಗಳುತಲಿದ್ದಾರೆ; ಈ ಶ್ರೀಕೃಷ್ಣಸ್ವಾಮಿಯು ನಿದ್ದೆಹೋಗುವ ಸಿಂಹದೋಪಾದಿಯಲ್ಲಿ ಸುಮ್ಮನೇ ಇದ್ದಾನೆ; ಈ ಯದುಕಂಠೀರವನ ಪರಾಕ್ರಮವನ್ನು ನೀನರಿಯೆಯೊ? ಈ ದುಷ್ಟಾತ್ಮನಾದ ಶಿಶುಪಾಲನಿಗೂ ಮಿಕ್ಕಾದ ಅರಸುಗಳಿಗೂ ವಿನಾಶಕಾಲವು ಬಂದಿರುವದ್ದರಿಂದ ಇವರುಗಳಿಗೆ ಇಂಥಾ ದುರ್ಬುದ್ಧಿ ಹುಟ್ಟಿತು; ಜರಾಯುಜಗಳು ಅಂಡಜಗಳು ಸ್ವೇದಜಗಳು ಉದ್ಭಿಜಗಳು ಎಂಬ ನಾಲ್ಕು ಪ್ರಕಾರಗಳಾದ ಭೂತಗಳ ಉತ್ಪತ್ತಿ ಸ್ಥಿತಿಲಯಗಳಿಗೆ ಕಾರಣನಾಗಿರುವ ಈ ಶ್ರೀಕೃಷ್ಣಸ್ವಾಮಿಯು ಶಿಶುಪಾಲನಲ್ಲಿರುವ ತನ್ನ ದಿವ್ಯ ತೇಜಸ್ಸನ್ನು ಪುನಃ ತಗದುಕೊಳ್ಳುವದಕ್ಕೆ ಉದ್ಯುಕ್ತನಾಗಿದ್ದಾನೆ; ನಿಶ್ಚಯವು’ ಎಂದು ನುಡಿದನು.”

## ೩೧ನೇ ಅಧ್ಯಾಯ.—ಅರ್ಘ್ಯಾಪಹರಣಪರ್ವಶೇಷ.

“ಕೇಳು ಜನಮೇಜಯನೆ, ಆ ಬಳಿಕ ಶಿಶುಪಾಲನು ಭೀಷ್ಮನನ್ನು ನೋಡಿ ‘ಎಲೈ ಕುಲದೂಷಕನಾದ ಭೀಷ್ಮನೆ, ನೀನು ಕೌರವರೊಳಗೆ ದೊಡ್ಡವನಾದರೂ ಬಾಲಕನಾಗಿರುವದಕ್ಕೆ ಏನನ್ನ ಬೇಕು! ವಾಡೆಯಲ್ಲಿ ಕಟ್ಟಿದಂಥಾ ವಾಡೆಯೋಪಾದಿಯಲ್ಲಿಯೂ ಕುರುಡನು ಕುರುಡನನ್ನು ಹಿಡುಕೊಂಡು ಹೋಗುವ ರೀತಿಯಲ್ಲಿಯೂ ನಿನ್ನ ವಾಕ್ಯಗಳನ್ನು ಹಿತವಾಗೆಣಿಸಿ ಈ ಪಾಂಡವರು ಅನುಸರಿಸುವದು ಚನ್ನಾಯಿತು! ಅಜ್ಞಾನಿಯಾಗಿ ಮೂರ್ಖನಾದ ಈ ಗೊಲ್ಲನನ್ನು ಸ್ತುತಿಸುವದಕ್ಕೆ ನಿನ್ನ ನಾಲಿಗೆ ಹ್ಯಾಗೆ ಬಂತು! ಇವನನ್ನು ಸ್ತುತಿಸಿದ್ದಕ್ಕೆ ನಿನ್ನ ನಾಲಿಗೆ ಹ್ಯಾಗೆ ನೂರು ಹೋಳಾಗಿ ಸೀಳಿಹೋಗಲಿಲ್ಲ! ಈ ವಾಸುದೇವನ ಪೂತನಿ ಸಂಹಾರಾದಿ ಕೃತ್ಯಗಳನ್ನು ನೀನು ಹೇಳಿದ್ದರಿಂದ ನ

ನ್ನ ಹೃದಯವು ಹ್ಯಾಗೆ ಚಲಿಸದೇ ಇರುವದು! ಗೋಪಾಲನಾಗಿ ಬಾಲಕನಾಗಿ ಸಿಂದಾರ್ಪನಾದ ಈ ದಾಶಾರ್ಹ ನನ್ನು ಜ್ಞಾನವೃದ್ಧನಾದ ನೀನು ಹ್ಯಾಗೆ ಹೊಗಳುವದಕ್ಕೆ ಇಚ್ಛೈಸಿದೆ! ಈತನು ಬಾಲ್ಯದಲ್ಲಿ ಒಂದು ಬಕವನ್ನು ಕೊಂದದ್ದು, ಯುದ್ಧಮಾಡುವದಕ್ಕೆ ಸಾಮರ್ಥ್ಯವಿಲ್ಲದ ಕುದುರೆ ಎತ್ತುಗಳನ್ನು ಕೊಂದದ್ದು, ಅಚೇತನ ಕಾಷ್ಠವಾದ ಒಂದು ಭಂಡಿಯನ್ನು ಒಂದುಕಾಲಿನಿಂದ ಒದ್ದು ಕೆಡಹಿದ್ದು, ಒಂದು ಹಾವನ್ನು ಕೊಂದದ್ದು, ಯಕ್ಷದಗಿಡಗಳಿಗೆ ಸಮಾನವಾದ ಎರಡು ವೃಕ್ಷಗಳನ್ನು ಕಿತ್ತು ಕಡಹಿದ್ದು, ಸರ್ಪದ ಹೆಡೆಯಮೇಲೆ ಕುಣಿದಾಡಿದ್ದು, ಮುತ್ತಿನ ಪ್ರಮಾಣವುಳ್ಳ ಗೋವರ್ಧನ ಪರ್ವತವನ್ನು ಏಳು ದಿನಗಳು ಹೊತ್ತುಕೊಂಡಿದ್ದದ್ದು, ಅಪರಿಮಿತವಾದ ಅನ್ನವನ್ನು ಭಕ್ಷಿಸಿದ್ದು, ಪರ್ವತದ ತುದಿಯಲ್ಲಿ ತೋರಿದ್ದು, ಇದಷ್ಟು ಈತನ ಸಾಮರ್ಥ್ಯಗಳೆಂದು ಸಭಾಮಧ್ಯದಲ್ಲಿ ಹೇಳುತ್ತಿದ್ದಿ; ಇದು ಯಾರಿಗೆ ಅದ್ಭುತವಾಗಿ ತೋರಿದರೂ ನನ್ನ ಮನಸ್ಸಿನಲ್ಲಿ ಅದ್ಭುತವಾಗಿ ತೋರಲಿಲ್ಲಾ; ಲೋಕದಲ್ಲಿ ಬುದ್ಧಿಸಂಪನ್ನರಾಗಿ ಧರ್ಮಶೀಲರಾಗಿರುವಂಥಾವರು ಸ್ವಲ್ಪ ಕಾರ್ಯಗಳನ್ನು ಸ್ತುತಿಮಾಡಬಾರದು; ಹೆಚ್ಚಾಗಿ ತಿನ್ನುವಂಥಾವನು ಹೆಚ್ಚಾಗಿ ಅನ್ನವನ್ನು ಭಕ್ಷಿಸಿದನೆಂದು ಸ್ತುತಿಮಾಡುವ ಬುದ್ಧಿಸಂಪನ್ನನು ನಿನ್ನೊಬ್ಬನನ್ನು ಕಂಡೆನು! ಎಲೈ ಕುರುಕುಲಾಧಮನೆ, ನೀನು ಧರ್ಮರಹಸ್ಯವನ್ನು ತಿಳಿದಿದ್ದೂ ಈತನು ತನಗೆ ಅನ್ನವಿಟ್ಟ ಕಂಸನನ್ನು ಸಂಹರಿಸಿದ್ದನ್ನು ಅನೇಕ ಪ್ರಕಾರಗಳಾಗಿ ಸ್ತುತಿಸುತ್ತಿದ್ದಿ! ಇದಕ್ಕಿಂತಲೂ ಪಾಪವು ಏನಿದೆ? ಶರಣಾಗತನಾದವನನ್ನೂ ಬ್ರಾಹ್ಮಣನನ್ನೂ ಅನ್ನಾ ಕೊಟ್ಟಂಥಾವನನ್ನೂ ಸ್ತ್ರೀಜನಗಳನ್ನೂ ಕೊಲ್ಲುವದುಚಿತವಲ್ಲವೆಂದು ಧರ್ಮಶಾಸ್ತ್ರಜ್ಞರು ಹೇಳುವರು; ನಿಮಗೆ ಅಧೀಶ್ವರನಾದ ಈತನಲ್ಲಿ ಈ ಪಾಪಗಳಷ್ಟೂ ಉಂಟು; ಇಂಥಾವನನ್ನು ಜಗದೀಶ್ವರನೆಂದು ಎಷ್ಟೋ ವಿವೇಕಶಾಲಿಯಹಾಗೆ ಬಹುಪ್ರಕಾರವಾಗಿ ಹೇಳುತ್ತಿದ್ದಿ: ಈಗ ಇವನನ್ನು ಕೊಂದುಹಾಕುತಲಿಧೇನೆ; ನನ್ನ ಪೆಟ್ಟನ್ನು ತಪ್ಪಿಸಿಕೊಂಡು ತನ್ನನ್ನು ರಕ್ಷಿಸಿಕೊಂಡರೆ ಆಗ ನೀನು ಹೇಳಿದ ಮಹಿಮೆಯಷ್ಟೂ ಈತನಿಗೆ ಸಲ್ಲುವದು; ಸಾಹಸವನ್ನು ಮಾಡಬಾರದೆಂದು ಯಾವಾಗಲೂ ಹೇಳುವಂಥಾ ಕುಳಿಂಗಪಕ್ಷಿಯು ತಾನು ಅತಿಸಾಹಸದಿಂದ ಸಿಂಹವು ನಿದ್ರೆಹೋಗುವಾಗ ಅದರ ಕೋರದಾಡೆಯ ಮಧ್ಯದಲ್ಲಿರುವ ಮಾಂಸವನ್ನು ಭಕ್ಷಿಸುವ ಹಾಗೆ ಲೋಕದಲ್ಲಿರುವ ಜನರು ಪರರಿಗೆ ಧರ್ಮೋಪದೇಶಗಳನ್ನು ಮಾಡುವಂಥಾವರಾದರೂ ತಾವು ತಮಗೆ ಸ್ವಭಾವವಾದ ದುಷ್ಟವೃತ್ತಿಯಿಂದ ಪ್ರವರ್ತಿಸುತಲಿಧಾರೆ; ಪುರಾಣಗಳು ಎಷ್ಟು ಪಠಿಸಿದರೂ ಪಠಿಸುವಂಥಾವನನ್ನು ರಕ್ಷಿಸಲಾರದು; ವಕ್ರಗಮನವುಳ್ಳ ನದಿಯ ಪುತ್ರನಾದ್ದರಿಂದ ನಿನ್ನ ಮನಸ್ಸು ಕುಟಿಲವಾಗಿಯೇ ಇಧೆ; ಧರ್ಮಹೀನನಾದ ನಿನ್ನ ವಾಕ್ಯಗಳನ್ನು ಕೇಳಿ ಈ ಯಾದವನನ್ನು ಪೂಜಿಸಿದ ಪಾಂಡವರು ದುರ್ಬುದ್ಧಿಗಳು; ಪಾಂಡವರ ಬುದ್ಧಿಗೆ ಏನನ್ನಬೇಕು! ಧರ್ಮಮಾರ್ಗವನ್ನು ತಪ್ಪಿ '—ನಾನು ಧರ್ಮಜ್ಞನು—' ಎಂದು ನೀನು ಮಾಡಿದ ಕಾರ್ಯವನ್ನು ಜ್ಞಾನವಂತನಾದವನು ಮಾಡನು; ನೀನು ಪ್ರಾಜ್ಞನಾಗಿ ಸಕಲ ಧರ್ಮಗಳನ್ನು ತಿಳಿದಿದ್ದರೂ ಸಾಲ್ವನಲ್ಲಿ ಅನುರಾಗವುಳ್ಳ ಅಂಬೆಯೆಂಬ ಕನ್ಯೆಯನ್ನು ಹ್ಯಾಗೆ ಅಪಹರಿಸಿದೆ? ಹಾಗೆ ಅಪಹರಿಸಿ ತಂದರೂ ಒಡಹುಟ್ಟಿದ ವಿಚಿತ್ರವೀರ್ಯನು ಧರ್ಮಜ್ಞನಾದ್ದರಿಂದ ಅವಳನ್ನು ಮದುವೆಯಾಗುವದಕ್ಕೆ ಒಡಂಬಡದೇ ಹೋದನು; ದಾರಯೋಗ್ಯನಾದ ನೀನಿದ್ದೂ ಮತ್ತೊಬ್ಬನಾದ ವ್ಯಾಸನ ದೆಸೆಯಿಂದ ಮಕ್ಕಳನ್ನು ಪಡೆಯುವದು ಸಜ್ಜನಮಾರ್ಗವೆ? ಅದ್ದರಿಂದ ನೀನು ನಪುಂಸಕನು! ನಿನ್ನ ಷಂಡಭಾವವನ್ನು ಲೋಕದವರು ತಿಳಿಯದೇ ಇರುವ ರೀತಿಗೆ '—ಬ್ರಹ್ಮಚರ್ಯ ವ್ರತವನ್ನು ಮಾಡುತಲಿಧೇನೆ—' ಎಂದು ಕಾಲಕ್ಷೇಪವನ್ನುಮಾಡುತಿದ್ದೀ; ನಿನ್ನಲ್ಲಿ ಧರ್ಮಲೇಶವಾದರೂ ಇದೆ ಎಂದು ನನ್ನ ಮನಸ್ಸಿನಲ್ಲಿ ತೋರಲಿಲ್ಲ; ನೀನು ದೊಡ್ಡವರ ಸೇವೆಯನ್ನು ಮಾಡಿ ಧರ್ಮಾರ್ಥಗಳನ್ನು ತಿಳಿಯದೇ ಇರುವದರಿಂದ ಅಕೃತ್ಯಗಳನ್ನು ಮಾಡುತ ಪರರಿಗೂ ಬೋಧಿಸುತ್ತಲಿದ್ದೀ; ದಾನಪೂ ಬಹು ದಕ್ಷಣೆಗಳುಳ್ಳ ಯಜ್ಞಗಳು ವೇದಾಧ್ಯಯನವಿಲ್ಲದವರಿಗೆ ಕೆಟ್ಟು ಹೋಗುವದು; ಮಕ್ಕಳಿಲ್ಲದೆ ವೃದ್ಧನಾಗಿ ಮಿಥ್ಯಾಧರ್ಮಗಳನ್ನು ಬೋಧಿಸುತಲಿರುವಂಥಾ ನಿನಗೆ (ಮೊದಲು ಒಂದು ಹಂಸೆಯು ತನ್ನ ಬಾಂಧವರಿಂದ ಕೆಟ್ಟ ತೆರದಿಂದ) ನಿನ್ನ ಜ್ಞಾತಿವರ್ಗದಿಂದಲೇ ಹಾನಿಬರುತಲಿದೆ; ದೊಡ್ಡವರ ದೆಸೆಯಿಂದ ಕೇಳಿದಂಥಾ ಒಂದು ಇತಿಹಾಸವನ್ನು ಹೇಳುತಲಿಧೇನೆ, ಕೇಳು:

“ ‘ಪೂರ್ವದಲ್ಲಿ ಸಮುದ್ರತೀರದಲ್ಲಿ ಒಂದು ಬಹುಕಾಲದ ಹಂಸಪಕ್ಷಿಯು ಇತ್ತು; ಅದು ಧರ್ಮವನ್ನೇ ಮಾಡಬೇಕೆಂತಲೂ ಅಧರ್ಮವನ್ನು ಮಾಡಬಾರದೆನ್ನುತಲು ಯಾವಾಗಲೂ ಸಕಲ ಪಕ್ಷಿಗಳಿಗೂ ಉಪದೇಶವನ್ನು ಮಾಡುತ ತಾನು ಅಧರ್ಮವನ್ನೇ ಮಾಡುತ್ತಿರುವುದು; ಹೀಗೆ ಹೇಳುತ್ತಿದ್ದ ಹಂಸಪಕ್ಷಿಯು ವಚನಗಳನ್ನು ಕೇಳಿ ಸಂತೋಷಪಟ್ಟು ಸಕಲವಾದ ಹಂಸಗಳು ಆ ಮುಪ್ಪಿನ ಹಂಸೆಯು ಸಮೀಪಕ್ಕೆ ಹೋಗಿ ಧರ್ಮವನ್ನು ಸಂಕ್ಷೇಪವಾಗಿ ಹೇಳಬೇಕೆಂದು ಪ್ರಾರ್ಥಿಸಿದವು; ಆ ಹಂಸಪಕ್ಷಿಯು ಆ ಪಕ್ಷಿಗಳನ್ನು ನೋಡಿ ‘—ಎಲೈ ಪಕ್ಷಿಗಳಿರಾ, ಅಹಿಂಸೆಯು ಧರ್ಮವು, ಹಿಂಸೆಯು ಅಧರ್ಮವು; ಇಷ್ಟುಮಾತ್ರವು ತಿಳಿದು ನಡೆಕೊಳ್ಳಿ—’ ಎಂದು ಹೇಳಿತು. ಆ ರಾಜಹಂಸೆಯು ವಾಕ್ಯಗಳನ್ನು ಕೇಳಿ ಧರ್ಮದಲ್ಲಿ ಆಸಕ್ತಿಯುಳ್ಳ ಹಂಸೆಗಳು ಆಶ್ಚರ್ಯಪಟ್ಟು ಆ ವಂಶವೃದ್ಧವಾದ ಹಂಸವನ್ನು ನೋಡಿ ‘—ಲೋಕದಲ್ಲಿ ಸುಕೃತಮಾಡಿದ ಪುರುಷಶ್ರೇಷ್ಠನು ಯಾವ ಪುಣ್ಯಲೋಕಕ್ಕೆ ಹೋಗುವನು? ಅದನ್ನು ತಿಳುಹಿಸಬೇಕು—’ ಎಂದು ಕೇಳಿದವು. ಆ ಹಂಸವು ‘—ಧರ್ಮಶೀಲನಿಗೆ ಸಮಸ್ತಲೋಕಗಳೂ ಹಸ್ತಗತಗಳಾಗಿರುವವೆಂದು ತಿಳಿಯಿರಿ—’ ಎನಲು ಆ ಪಕ್ಷಿಗಳು ‘—ಇಷ್ಟು ಧರ್ಮಗಳನ್ನು ತಿಳಿದಂಥಾ ನಿನಗೆ ಸ್ವರ್ಗವು ಬಾರದೇಯಿರುವದಕ್ಕೆ ಕಾರಣವೇನು?—’ ಎಂದು ಕೇಳಿದವು. ಅದಕ್ಕಾಹಂಸವು ಇಂತೆಂದು ನುಡಿಯಿತು: ‘—ಕೇಳಿರೈ ಪಕ್ಷಿಗಳಿರಾ, ನೀವು ಬಾಲಕರಾದ್ದರಿಂದ ಧರ್ಮಸೂಕ್ಷ್ಮವನ್ನು ತಿಳಿಯಲಾರಿರಿ; ಲೋಕದಲ್ಲಿ ಧರ್ಮಮಾಡಿದಂಥಾವನು ಆಯುಷ್ಯಾಂತರದಲ್ಲಿ ಶರೀರವನ್ನು ಬಿಟ್ಟು ಸ್ವರ್ಗಕ್ಕೆ ಹೋಗುವದರಿಂದ ನಾನು ದೇಹಾಂತದಲ್ಲಿ ಸ್ವರ್ಗಸುಖವನ್ನು ಅನುಭವಿಸುತಲಿದ್ದೇನೆ; ಇದು ಧರ್ಮಸ್ವರೂಪವು—’ ಎಂದು ಸಕಲ ಪಕ್ಷಿಗಳಿಗೂ ಹಿತೋಪದೇಶವನ್ನು ಮಾಡಿತು. ಆ ಪಕ್ಷಿಗಳು ಆ ವಾಕ್ಯಗಳನ್ನು ಕೇಳಿ ‘—ಈತನು ಧರ್ಮಶಾಸ್ತ್ರಜ್ಞನು—’ ಎಂದು ಬಹುಪ್ರಕಾರವಾಗಿ ವಿಶ್ವಾಸಿಸಿ ಅದು ಮೊದಲು ಸಮುದ್ರಪ್ರಾಂತ್ಯದಲ್ಲಿ ಸಂಚರಿಸಿ ಆ ರಾಜಹಂಸೆಗೆ ಮನಸ್ಸಿಗೆ ಪ್ರೀತಿಯಾದ ಆಹಾರಗಳನ್ನು ತಂದುಕೊಡುತ ನೆರೆನಂಬಿ ಅದರ ಸಮೀಪದಲ್ಲಿಯೇ ಮೊಟ್ಟೆಗಳನ್ನಿಕ್ಕಿ ಸ್ವೇಚ್ಛಾವಿಹಾರದಿಂದ ಸಮುದ್ರೋದಕದಲ್ಲಿ ಸಂಚರಿಸುತ್ತಿದ್ದವು; ಆ ವೃದ್ಧಹಂಸವು ಅವುಗಳ ಮೊಟ್ಟೆಗಳನ್ನು ಭಕ್ಷಿಸುತ ಸ್ವಕಾರ್ಯದಲ್ಲಿ ಜಾಗ್ರತೆಯಿಂದ ಇತ್ತು; ಈಪ್ರಕಾರದಿಂದ ತಮ್ಮ ಸಂತಾನವು ದಿನಕ್ರಮದಿಂದ ನಾಶವನ್ನೈದುತ್ತಿರಲು ಅದನ್ನು ತಿಳಿದು ಅವುಗಳಲ್ಲಿ ಬುದ್ಧಿಶಾಲಿಯಾದ ಒಂದು ಹಂಸವು ಸಂತಾನನಾಶಕ್ಕೆ ಕಾರಣವು ವೃದ್ಧಹಂಸವೆಂದು ತಿಳಿದು ಸಕಲ ಪಕ್ಷಿಗಳೂ ಸಂಚಾರಕ್ಕೆ ಹೋದ ಸಮಯದಲ್ಲಿ ತಾನು ಒಂದು ಪ್ರದೇಶದಲ್ಲಿ ಮರೆಯಾಗಿದ್ದು ಅದು ಮಾಡುವ ಕಿಲ್ಬಿಷವನ್ನು ತಿಳಿದು ದುಃಖಪಟ್ಟು ಆ ವೃತ್ತಾಂತವನ್ನು ಸಕಲ ಪಕ್ಷಿಗಳಿಗೂ ಹೇಳಿತು; ಆ ಬಳಿಕ ಆ ಹಂಸಗಳು ಪ್ರತ್ಯಕ್ಷವಾಗಿ ನೋಡಿ ಕಪಟವೃತ್ತಿಯಿಂದಿರುವ ಆ ವೃದ್ಧ ಹಂಸವನ್ನು ಕೊಂದುಹಾಕಿದವು; ಆದ್ದರಿಂದ ಆ ಹಂಸದೋಪಾದಿಯಲ್ಲಿ ಮಿಥ್ಯಾಚಾರನಾಗಿರುವ ನಿನ್ನನ್ನು ಈ ಅರಸುಗಳೆಲ್ಲರು ಪಕ್ಷಿಗಳೋಪಾದಿಯಲ್ಲಿ ಈಗಲೇ ಸಂಹರಿಸುತಲಿದ್ದಾರೆ’ ಎಂದು ಶಿಶುಪಾಲನು ಭೀಷ್ಮನನ್ನು ನೋಡಿ ಹೇಳಿದನು.”

## ೭೧ನೇ ಅಧ್ಯಾಯ.—ಅರ್ಘ್ಯಾಪಹರಣಪರ್ವ ಸಮಾಪ್ತಿ.

“ಕೇಳು ಜನಮೇಜಯನೆ, ಆ ಬಳಿಕ ಶಿಶುಪಾಲನು ಮತ್ತೂ ಭೀಷ್ಮನನ್ನು ಕುರಿತು ‘ಕೇಳು ಭೀಷ್ಮನೆ, ಈ ಕೃಷ್ಣ ಭೀಮಾರ್ಜುನರು ಜರಾಸಂಧನನ್ನು ಕಪಟೋಪಾಯದಿಂದ ಕೊಂದ ತೆರವು ಯಾರಿಗಾದರೂ ಉಚಿತವಾಗಿ ತೋರುತಲಿದೆಯೆ? ಬ್ರಾಹ್ಮಣ ವೇಷವನ್ನು ಧರಿಸಿ ಕಳ್ಳರಾಗಿ ಬಾಗಿಲನ್ನು ಬಿಟ್ಟು ಕಳ್ಳಮಾರ್ಗದಿಂದ ಪ್ರವೇಶಿಸಿದಂಥಾವರನ್ನು ಧರ್ಮಶೀಲನಾದ ಜರಾಸಂಧನು ಬ್ರಾಹ್ಮಣರೆಂದೆಣಿಸಿ ಅರ್ಘ್ಯಪಾದ್ಯಗಳನ್ನೂ ಭೋಜನಾದಿಗಳನ್ನೂ ಮಾಡಬೇಕೆಂದು ಪ್ರಾರ್ಥಿಸಲು, ಆತನಿಗೆ ಅಪಕಾರವನ್ನು ಮಾಡಿದ ಈ ದುರಾತ್ಮಕನಾದ ಯಾದವನನ್ನು ಜಗದೀಶ್ವರನೆಂದು ನಿಶ್ಚಯಿಸಿದೆಯಲ್ಲಾ! ನಿನ್ನನ್ನು ನೀನೇ ಬ್ರಾಹ್ಮಣನೆಂದು ಎಣಿಸಿಕೊಳ್ಳಬಾರದೆ? ನೀನು ಬ್ರಾಹ್ಮಣ ಸ್ವರೂಪವನ್ನು ಲೇಶಮಾತ್ರವಾದರೂ ತಿಳಿಯುವದಕ್ಕೆ ಸಮರ್ಥನಲ್ಲ; ಈ ಯಾದವನನ್ನು ಗೊಲ್ಲನೆಂದು ಎ

ಣಿಸಿ ಈತನೊಡನೆ ಯುದ್ಧವನ್ನು ಮಾಡದೆ ಇದ್ದದ್ದರಿಂದ ಬೃಹದ್ರಥನ ಮಗನಾದ ಜರಾಸಂಧನು ರಾಜಶ್ರೇಷ್ಠನೆಂದು ನನ್ನ ಮನಸ್ಸಿನಲ್ಲಿ ತೋರುತಲಿದೆ; ಧರ್ಮಸ್ವಭಾವರಾದ ಪಾಂಡವರು ನಿನ್ನ ದುರ್ನೀತಿಗೆ ಬಳಗಾಗಿ ಈ ಅರ್ಥಕ್ಕೆ ಒಪ್ಪಿರುವದು ನನ್ನ ಮನಸ್ಸಿಗೆ ಆಶ್ಚರ್ಯವಾಗುತಲಿದೆ! ಇದು ಹಾಗಿರಲಿ: ವೃದ್ಧನಾಗಿ ನಪುಂಸಕನಾಗಿರುವಂಥಾ ನೀನು ಈ ಕೌಂತೇಯರಿಗೆ ಧರ್ಮೋಪದೇಶ ಮಾಡುವವನಾದ್ದರಿಂದ ಅವರೂ ಹೀಗೇಮಾಡುವದು ಆಶ್ಚರ್ಯವಲ್ಲಾ!' ಎಂದು ನುಡಿಯುತಲಿರುವ ಶಿಶುಪಾಲನ ಕಠಿನವಾಕ್ಯಗಳನ್ನು ಕೇಳಿ, ಕೇಳು ಜನಮೇಜಯನೆ, ಪ್ರತಾಪೋದ್ದೀಪಿತನಾಗಿ ಬಲಪರಾಕ್ರಮಸಂಪನ್ನನಾಗಿರುವ ಭೀಮಸೇನನು ಸ್ವಭಾವದಿಂದ ರಕ್ತಗಳಾದ ತನ್ನ ನೇತ್ರಗಳನ್ನು ಕೋಪದಿಂದ ಹೇರಳವಾಗಿ ಕೆಂಪುಮಾಡಿಕೊಂಡು, ತ್ರಿಕೂಟಪರ್ವತದ ಶಿಖರದ ತುದಿಯಲ್ಲಿ ತೋರುವ ಮೂರು ಗಂಗಾಪ್ರವಾಹಗಳ ಚಂದದಿಂದ ಲಲಾಟದಲ್ಲಿ ರೇಖಾತ್ರಯವು ಕಾಣಲ್ಪಡಲು ಹುಬ್ಬುಗಳನ್ನು ಗಂಟುಹಾಕುತ ಲೋಕಗಳನ್ನು ದಹಿಸುವದಕ್ಕೆ ಉದ್ಯೋಗಿಸಿರುವ ಪ್ರಳಯಕಾಲಾಂತಕನೋಪಾದಿಯಲ್ಲಿ ಕೋಪಾತಿಶಯದಿಂದ ಹಲ್ಲುಮುಡಿಯನ್ನು ಕಚ್ಚುತ ಶೀಘ್ರದಲ್ಲಿದ್ದನು. ಅದನ್ನು ನೋಡಿ ಭೀಷ್ಮನು ಷಣ್ಮುಖಸ್ವಾಮಿಯನ್ನು ತಡೆಯುವ ಈಶ್ವರನೋಪಾದಿಯಲ್ಲಿ ತಡೆಯುತ ಬಹುಪ್ರಕಾರವಾಗಿ ಸಮಾಧಾನ ವಚನಗಳಿಂದ ಆ ಭೀಮಸೇನನ ಕೋಪವನ್ನು ನಿಲ್ಲಿಸಲು ವೈರಿಜನ ಭಯಂಕರನಾದ ಭೀಮಸೇನನು ಚಂಡಮಾರುತದಿಂದ ಕವಲಿಏರುವ ಮಹಾ ಸಮುದ್ರವು ಮರ್ಯಾದೆಯನ್ನು ಅತಿಕ್ರಮಿಸದೇ ನಿಲ್ಲುವಹಾಗೆ ನಿಂತನು. ಆ ಸಮಯದಲ್ಲಿ ಪರಾಕ್ರಮಶಾಲಿಯಾದ ಶಿಶುಪಾಲನು ಕ್ಷುದ್ರಮೃಗಗಳನ್ನು ಲಕ್ಷ್ಯಮಾಡದ ಸಿಂಹದೋಪಾದಿಯಲ್ಲಿ ಅಚಂಚಲನಾಗಿ ಮಂದಹಾಸವನ್ನು ಮಾಡುತ ಭೀಷ್ಮನನ್ನು ಕುರಿತು 'ಆತನನ್ನು ನೀನು ಯಾತಕ್ಕೆ ತಡೆಯುತ್ತಿದ್ದೀ? ಸಕಲ ರಾಜ ಸಮೂಹಗಳೂ ನೋಡುತ್ತಿರಲು ಕಾಡುಕಿಚ್ಚಿನಲ್ಲಿ ಬಿದ್ದ ಪತಂಗಗ ಹುಳುವಿನೋಪಾದಿಯಲ್ಲಿ ನನ್ನ ಪ್ರತಾಪಾಗ್ನಿಯಲ್ಲಿ ದಹಿಸಲ್ಪಟ್ಟು ಹೋಗಲಿ ಬಿಡು' ಎಂದು ಅಟ್ಟಿಕೊಂಡನು. ಬುದ್ಧಿಸಂಪನ್ನನಾದ ಭೀಷ್ಮನು ಭೀಮನನ್ನು ನೋಡಿ 'ಈ ಶುಕ್ತಿಮತೀಪುರಾಧ್ಯಕ್ಷನಮೇಲೆ ಯಾತಕ್ಕೆ ಕಾಣಿಸಿಕೊಳ್ಳಬೇಕು? ದೇವದೇವನಾದ ಶ್ರೀಕೃಷ್ಣಸ್ವಾಮಿಯು ಈತನನ್ನು ಸಂಹರಿಸುತಲಿದಾನೆ; ಇದು ನಿಶ್ಚಯವು.'"

---

## ೪೩ ನೇ ಅಧ್ಯಾಯ.—ಶಿಶುಪಾಲವಧಪರ್ವ.

"ಕೇಳು ಜನಮೇಜಯನೆ, ಆ ಬಳಿಕ ಭೀಷ್ಮನು ಮತ್ತೂ ಭೀಮನನ್ನು ಕುರಿತು 'ಕೇಳು ಭೀಮಸೇನನೆ, ಈ ಶಿಶುಪಾಲನು ನೇತ್ರತ್ರಯವೂ ಚತುರ್ಭುಜಗಳೂ ಉಂಟಾಗಿ ಚೇದಿ ವಂಶದಲ್ಲಿ ಹುಟ್ಟಿದನು; ಹುಟ್ಟಿದಾಗಲೆ ಕತ್ತೆಯೋಪಾದಿಯಲ್ಲಿ ಕೂಗಲು, ಆ ಅವಲಕ್ಷಣಗಳನ್ನು ನೋಡಿ ತಾಯಿತಂದೆಗಳು ಇವನನ್ನು ಪರಿತ್ಯಜಿಸುವದಕ್ಕೆ ಯೋಚಿಸಿದ ಸಮಯದಲ್ಲಿ ದಮಘೋಷನನ್ನು ಕುರಿತು '—ಎಲೈ ನರೇಂದ್ರನೆ, ಮಹಾಬಲಪರಾಕ್ರಮಸಂಪನ್ನನಾಗಿ ಐಶ್ವರ್ಯಶಾಲಿಯಾಗತಕ್ಕ ಈ ಕುಮಾರಕನನ್ನು ಭಯದಿಂದ ನೀವು ಯಾತಕ್ಕೆ ಪರಿಹರಿಸುತ್ತಲಿದ್ದೀರಿ; ಇವನಿಗೆ ಮೃತ್ಯುವಾಗಿ ಮತ್ತೊಬ್ಬನು ಅವತರಿಸಿಧಾನೆ; ಆತನು ಶಸ್ತ್ರಾಸ್ತ್ರದಿಂದ ಮುಂದೆ ಇವನನ್ನು ಕೊಂದುಹಾಕುತಲಿಧಾನೆ; ಇವನಿಗೆ ಈಗ ಮೃತ್ಯುವು ಬರುವದಿಲ್ಲಾ; ಈತನನ್ನು ನೀವು ಪರಿಪಾಲಿಸೀ—' ಎಂದು ಆಕಾಶವಾಣಿಯು ನುಡಿಯಿತು. ಆ ವಾಕ್ಯವನ್ನು ಕೇಳಿ ಇವನ ತಾಯಿ ಪುತ್ರಸ್ನೇಹದಿಂದ ಕೈಮುಗಿದು '—ಈಗ ನನ್ನ ಮಗನ ವೃತ್ತಾಂತವನ್ನು ಹೇಳಿದ ಅಶರೀರಿಯಾದ ಮಹಾಭೂತಕ್ಕೆ ನಮಸ್ಕರಿಸುತಲಿದ್ದೇನೆ! ಈತನನ್ನು ಸಂಹರಿಸುವಂಥಾವನ್ಯಾರು? ಆತನನ್ನು ತಿಳುಹಿಸಬೇಕು—' ಎಂದು ಪ್ರಾರ್ಥಿಸಲು ಆಕಾಶವಾಣಿಯು '—ಯಾರ ತೊಡೆಯಮೇಲಿರಿಸಿಕೊಂಡಲ್ಲಿ ಅಧಿಕವಾದ ಎರಡು ಭುಜಗಳು ಮುರಿದು ಬಿದ್ದು ಹಣೆಯಲ್ಲಿರುವ ಕಣ್ಣು ಕಾಣಲ್ಪಡದೇ ಹೋಗುತಲಿದೆಯೊ ಆತನೇ ಇವನಿಗೆ ಮೃತ್ಯುವು—' ಎಂದು ನುಡಿಯಿತು. ಆ ಬಳಿಕ ಈ ಅದ್ಭುತವನ್ನು ಸಕಲ ರಾಜ ಅರಸುಗಳೂ ಕೇಳಿ ನೋಡಬೇಕೆಂಬ ಕುತೂಹಲದಿಂದ ಬರಲು, ಅವರಷ್ಟುಮಂದಿಯನ್ನೂ ಯಥೋಚಿತ

ವಾಗಿ ಪೂಜಿಸಿ ಆ ಕುಮಾರಕನನ್ನು ಒಬ್ಬೊಬ್ಬರ ತೊಡೆಯಮೇಲೆ ಇರಿಸಲು, ಆ ಬಾಲಕನು ಆ ಅರಸುಗಳ ತೊಡೆಯಲ್ಲಿ ಯಥಾಪ್ರಕಾರವಾಗಿದ್ದನು. ಆ ಬಳಿಕ ಈ ವೃತ್ತಾಂತವನ್ನು ಕೇಳಿ ದ್ವಾರಕಾನಗರದ್ದೆಸೆಯಿಂದ ಮಹಾಬಲಶಾಲಿಗಳಾದ ಬಲರಾಮ ಶ್ರೀಕೃಷ್ಣರು ತಮ್ಮ ಸೋದರತ್ತೆಯನ್ನು ನೋಡಬೇಕೆಂದು ಬಂದು ಭಾರ್ಯಾಸಮೇತನಾದ ದಮಘೋಷರಾಯನಿಗೂ ಮಿಕ್ಕಾದ ಅರಸುಗಳಿಗೂ ಯಥಾಕ್ರಮವಾಗಿ ನಮಸ್ಕಾರವನ್ನು ಮಾಡಿ ಅವರುಗಳ ಕುಶಲ ಪ್ರಶ್ನೆಯನ್ನು ಮಾಡಿ ಸುಖವಾಗಿ ಕುಳಿತುಕೊಂಡಿರುವ ಸಮಯದಲ್ಲಿ ಆ ಬಾಲಕನನ್ನು ತಂಗು ವಾಸುದೇವನ ತೊಡೆಯಲ್ಲಿರಿಸಿದರು ; ಹಾಗಿರಿಸಿದ ಕೂಡ್ಲೆ ಅಧಿಕವಾದ ಭುಜದ್ವಯಗಳು ಮುರಿದು ಬಿದ್ದು ಹಣೆಯಲ್ಲಿದ್ದ ಕಣ್ಣು ಅದೃಶ್ಯವಾಯಿತು. ಇವನ್ನು ನೋಡಿ ಇವನ ತಾಯಿಯಾದ ಸಾತ್ವತೀದೇವಿಯು ತನ್ನ ಮನಸ್ಸಿನಲ್ಲಿ ಕ್ಲೇಶಪಟ್ಟು ಕೃಷ್ಣಸ್ವಾಮಿಯನ್ನು ನೋಡಿ ‘— ಎಲೈ ಮಹಾತ್ಮನೆ, ನೀನು ಆರ್ತಜನ ಸಂರಕ್ಷಕನಾಗಿ ಭೀತರಾದವರಿಗೆ ಅಭಯವನ್ನು ಕೊಡುವಂಥಾವನಾದ್ದರಿಂದ ಭಯಪಟ್ಟಿರುವ ನನಗೆ ಒಂದು ವರವನ್ನು ಕೊಡಬೇಕು—’ ಎನಲು ಆತನು ತನ್ನ ಸೋದರತ್ತೆಯಾದ ಸಾತ್ವತಿಯನ್ನು ನೋಡಿ ‘—ನಿನಗೆ ವಿಚಾರವು ಯಾತಕ್ಕೆ ? ಎಂಥಾ ವರವನ್ನಾದರೂ ಕೊಡುತಲಿದೇನೆ—’ ಅಂದನು. ಆ ದೇವಿಯು ‘— ಬಾಲಕನಾದ ಈ ಶಿಶುಪಾಲನು ನಿನ್ನಲ್ಲಿ ಎಷ್ಟು ಅಪರಾಧಗಳನ್ನು ಮಾಡಿದರೂ ನೀನು ಕ್ಷಮಿಸಬೇಕು —’ ಎನಲು ಮಾಧವನು ‘— ಈ ಬಾಲಕನು ವಧಾರ್ಹಗಳಾದ ಶತಾಪರಾಧಗಳನ್ನು ನನ್ನಲ್ಲಿ ಮಾಡಿದರೂ ನಾನು ಕ್ಷಮಿಸುತಲಿದ್ದೇನೆ; ನೀನು ಕ್ಲೇಶಪಡಬ್ಯಾಡ —’ ಅಂದನು. ಈಪ್ರಕಾರದಲ್ಲಿ ಕೃಷ್ಣನು ಮೊದಲು ಈತನಿಗೆ ವರವನ್ನು ಕೊಟ್ಟಿರುವ ಗರ್ವದಿಂದ ಆತನು ತನಗೆ ಮೃತ್ಯುವೆಂದು ತಿಳಿಯದೆ ನಿನ್ನನ್ನು ಯುದ್ಧಕ್ಕೆ ಕರೆಯುತಲಿದಾನೆ. ’ ”

---

## ೪೪ನೇ ಅಧ್ಯಾಯ.—ಶಿಶುಪಾಲವಧಪರ್ವಶೇಷ.

“ ‘ ಕೇಳು ಭೀಮನೆ, ಈ ಚೈದ್ಯನಮನು ಈಗ ದೈವಪ್ರೇರಣೆಯಿಂದ ಯುದ್ಧಕ್ಕೆ ಕಾಲನ್ನು ಕರೆಯುತಲಿಧಾನೆ ; ಇವನನ್ನು ಈಗ ಈ ಯದುವಲ್ಲಭನು ಕೊಂದುಹಾಕುತಲಿಧಾನೆ ; ಈ ಕುಲನಾಶಕನಾದ ಶಿಶುಪಾಲನು ಹೊರತಾಗಿ ಒದುಕುವದಕ್ಕೆ ಇಚ್ಛಿಸಿದ ಮತ್ತೊಬ್ಬ ಅರಸುಮಗನು ನಿನ್ನನ್ನು ಈಪ್ರಕಾರದಿಂದ ದುರ್ಭಾಷೆಗಳನ್ನಾಡುವನೆ ? ಇವನು ಗೋವಿಂದನ ಅಂಶದಿಂದ ಹುಟ್ಟಿದವನಾದ್ದರಿಂದ ಶ್ರೀಕೃಷ್ಣಸ್ವಾಮಿಯು ತನ್ನ ತೇಜಸ್ಸನ್ನು ತಾನೇ ತಕ್ಕೊಳ್ಳುವದಕ್ಕೆ ಎಣಿಸಿಧಾನೆ ; ಅದ್ದರಿಂದ ಇವನು ನಮ್ಮನ್ನು ಗಣನೆಮಾಡದೆ ಹೆಬ್ಬುಲಿಯೋಪಾದಿಯಲ್ಲಿ ಗರ್ಜಿಸುತಲಿದಾನೆ’ ಎಂದು ನುಡಿದನು. ಈಪ್ರಕಾರವಾದ ಭೀಷ್ಮನ ವಾಕ್ಯವನ್ನು ಕೇಳಿ ರೋಷಭೀಷಣಾಕಾರನಾಗಿ ಶಿಶುಪಾಲನು ಭೀಷ್ಮನನ್ನು ನೋಡಿ ‘ ಇಷ್ಟುಹೊತ್ತು ಭಾಟನೋಪಾದಿಯಲ್ಲಿ ಶತ್ರುಗಳಾದ ನಮ್ಮ ಮುಂದೆ ಈ ಯಾದವನನ್ನು ಹೊಗಳದೆ ; ಈ ಸಮಸ್ತರಾದ ಅರಸುಗಳೂ ಹಾಗೆ ಹೊಗಳದರೆ ನಿನ್ನ ಸ್ತೋತ್ರವು ಸಫಲವಾಗುವದು ; ಹೊಗಳುವದಕ್ಕೆ ನಿನಗೆ ಪ್ರೀತಿಯಾದರೆ ಔದಾರ್ಯಶಾಲಿಯಾಗಿ ರಾಜಶ್ರೇಷ್ಠನಾದ ಈ ಬಾಹ್ಲೀಕನನ್ನು ಹೊಗಳು ; ಬಾಲಸೂರ್ಯ ಪ್ರಕಾಶಮಾನನಾಗಿ ಸಹಜ ಕವಚವನ್ನೂ ದಿವ್ಯ ಕುಂಡಲಗಳನ್ನೂ ಧರಿಸಿ ಧನುರ್ವಿದ್ಯಾವಿಶಾರದನಾಗಿ ಮಹೇಂದ್ರಸಮಾನನಾಗಿ ಅಂಗರಾಜ್ಯಾಧಿಪತಿಯಾದ ಈ ಕರ್ಣನನ್ನು ಸ್ತುತಿಸು ; ಬ್ರಾಹ್ಮಣಶ್ರೇಷ್ಠನಾಗಿ ಧನುರ್ಧರಾಗ್ರೇಸರನಾಗಿ ಸ್ತೋತ್ರಾರ್ಹರಾಗ ಮಹಾರಥಿಕರಾಗಿರುವ ಈ ದ್ರೋಣಾಶ್ವತ್ಥಾಮರೊಳಗೆ ಒಬ್ಬನು ಕೋಪಿಸಿಕೊಂಡರೆ ಚರಾಚರಾತ್ಮಕವಾದ ಈ ಪ್ರಪಂಚವನ್ನು ಭಸ್ಮಮಾಡುವನಾದ್ದರಿಂದ ಇವರಿಬ್ಬರೊಳಗೆ ಒಬ್ಬರನ್ನಾದರೂ ಸ್ತುತಿಸಬಾರದೆ ? ಚತುಃಸಮುದ್ರ ಪರಿವೇಷ್ಠಿತವಾದ ಮಹೀಮಂಡಲಕ್ಕೆ ಅಧ್ಯಕ್ಷನಾಗಿರುವ ದುರ್ಯೋಧನನು, ಅಸ್ತ್ರಶಸ್ತ್ರವಿಶಾರದನಾದ ಜಯದ್ರಥನು, ಕಿಂಪುರುಷಾಚಾರ್ಯನಾದ ದ್ರುಮನು, ಭರತಕುಲ ಶಿಕ್ಷಕನಾದ ಕೃಪಾಚಾರ್ಯನು, ಮಹಾಶೌರ್ಯಸಂಪನ್ನನಾದ ಭೀಷ್ಮಕನು, ಪ್ರತಾಪದಲ್ಲಿ ಪ್ರಸಿದ್ಧನಾದ ದಂತವಕ್ರನು, ವೈರಿಭಯಂಕರನಾದ ಭೂರಿಶ್ರವನು, ಜಯಶೀಲನಾದ ಜಯತ್ಸೇನನು, ಧೈರ್ಯಧುರ್ಯನಾದ ಮಾಗಧನು, ಮದ್ರದೇಶಾಧೀಶ್ವರನಾದ ಶಲ್ಯನು, ಇನ್ನೂ ಮಹಾಭುಜಬಲಶಾಲಿಗಳಾದ ಅರಸುಗಳನ್ನೂ ಬಿಟ್ಟು ಈ ಗೊಲ್ಲನನ್ನು

ಯಾತಕ್ಕೆ ಸ್ತುತಿಸುತ್ತಿದ್ದೀ? ಯಾವಾಗಲೂ ನಿನಗೆ ಬಬ್ಬನನ್ನು ಸ್ತುತಿಸಬೇಕೆಂದು ಇಚ್ಛೆಯಿದ್ದರೆ ನಿನ್ನ ಮನಸ್ಸು ಬಂದ ರೀತಿಗೆ ಸ್ತುತಿಸು; ನಾವು ಬ್ಯಾಡವೆಂನರೆ ತೀರುವದೆ; ಆತ್ಮನಿಂದೆಯೂ ಆತ್ಮಪ್ರಶಂಸೆಯೂ ಪರದೂಷಣವೂ ಪರಸ್ತೋತ್ರವೂ ಸತ್ಪುರುಷರಿಗೆ ಆಗಬಾರದು ಎಂಬುವದನ್ನು ಧರ್ಮಶಾಸ್ತ್ರಜ್ಞರ ದೆಸೆಯಿಂದ ಕೇಳಿದ್ದುಂಟು; ಯಾವಾಗಲೂ ಕರುಗಳನ್ನು ಕಾಯುವಂಥಾ ಈ ಗೊಲ್ಲನನ್ನು ಸ್ತುತಿಸುತ್ತಿದ್ದಿ; ಭೋಜರಾಯನಿಗೆ ಭೃತ್ಯನಾಗಿ ಕರುಗಳನ್ನು ಕಾಯುತ್ತಿರುವ ಈ ದುರಾತ್ಮಕನನ್ನು ಜಗದೀಶ್ವರನೆಂದು ಸ್ತುತಿಸುತ್ತಿದ್ದೀಯೇ ಹೊರತಾಗಿ ನಿಜವಾಗಿ ನೋಡದೇ ಹೋದೆ; ನಿನಗೆ ಭಕ್ತಿಯೂ ಇಲ್ಲಾ; ಸ್ತುತಿಪಾಠಕನೋಪಾದಿಯಲ್ಲಿ ಸುಮ್ಮನೇ ಬಬ್ಬನನ್ನು ಹೊಗಳುವದು ನಿನ್ನ ಸ್ವಭಾವವು; ಇದು ಯಾರಿಗೂ ಸಮ್ಮತವಲ್ಲಾ' ಎಂದು ಈಪ್ರಕಾರದಲ್ಲಿ ನಿಂದಿಸುತಲಿರುವ ಶಿಶುಪಾಲನ ಕಠಿನ ಭಾಷೆಗಳನ್ನು ಕೇಳಿ ಭೀಷ್ಮನು ಕಠಿನವಾಕ್ಯಗಳಿಂದ ಇಂತೆಂದನು: 'ಎಲೈ ಚೈದ್ಯಾಧಮನೆ, ಈಗ ಇಲ್ಲಿರುವ ರಾಜಸಮೂಹವೂ ನೀನೂ ನನ್ನ ದೃಷ್ಟಿಗೆ ತೃಣವಾಗಿ ತೋರುತಲಿದ್ದೀರಿ; ಯಾಗಕ್ಕೆ ವಿಘ್ನವು ಬಂದೀತು ಎಂದು ಭಯಪಡುತಲಿರುವ ಧರ್ಮರಾಯನಿಗೋಸ್ಕರ ನಾನು ಸುಮ್ಮನೇ ಸಹಿಸಿಯಿದ್ಧೇನೆ' ಎಂದು ನುಡಿದನು. ಆ ವಾಕ್ಯವನ್ನು ಕೇಳಿದ ಅರಸುಗಳಲ್ಲಿ ಕೆಲವರು ಕೋಪಿಸಿಕೊಂಡರು; ಕೆಲವರು ಭೀಷ್ಮನನ್ನು ದೂಷಿಸಿದರು; ಕೆಲವರು ಸಂತೋಷಪಟ್ಟರು; ಮತ್ತೂ ಕೆಲವರು ಪಾಪಾತ್ಮಕನಾಗಿ ಕುತ್ಸಿತನಾಗಿ ಮುದುಕನಾಗಿರುವ ಭೀಷ್ಮನನ್ನು ಯಾವ ಪ್ರಕಾರದಿಂದಲಾದರೂ ಕುರಿಯೋಪಾದಿಯಲ್ಲಿ ಹಿಡಿತಂದು ಕೊಲ್ಲಬೇಕೆಂದರು; ಕೆಲವರು ಚಾಪೆವಳಗೆ ಸುತ್ತಿ ಬೆಂಕಿಯೊಳಗೆ ಹಾಕಿಬಿಡಬೇಕೆಂದರು. ಹೀಗೆ ನುಡಿಯುವಂಥಾವರ ವಾಕ್ಯಗಳನ್ನು ಕೇಳಿ ರೋಷದಿಂದ ಭಯಂಕರನಾಗಿರುವ ಭೀಷ್ಮನು 'ಎಲೈ ಅರಸುಗಳಿರಾ, ಹೀಗೆ ವ್ಯರ್ಥವಾದ ಮಾತುಗಳಿಂದ ಪ್ರಯೋಜನವೇನು? ನೀವಷ್ಟುಮಂದಿಯೂ ಕೇಳುವ ಹಾಗೆ ಹೇಳುತಲಿದೇನೆ ಕೇಳಿ: ನನ್ನನ್ನು ಪಶುವಿನೋಪಾದಿಯಲ್ಲಿ ಕೊಲ್ಲಬೇಕೆನ್ನುತಲೂ ಚಾಪೆಯಲ್ಲಿ ಸುತ್ತಿ ದಹಿಸಬೇಕೆಂತಲೂ ಹೇಳಿದಿರಲ್ಲಾ; ನಿಮ್ಮ ಮನಸ್ಸು ಬಂದರೀತಿಗೆ ಮಾಡುವಿರಂತೆ! ನಿಮ್ಮ ತಲೆಯ ನನ್ನ ಮೇಲೆ ಯಡದಕಾಲನ್ನು ಇರಿಸಿ ಇಧೇನೆ! ಈತನು ಜಗದೀಶ್ವರನಾದ್ದರಿಂದ ಆತನಿಗೆ ಅಗ್ರಪೂಜೆಯನ್ನು ಮಾಡಿದೇವು; ಶಂಖಚಕ್ರಗದಾದ್ಯಾಯುಧಧರನಾಗಿರುವಂಥಾ ಮಹಾವಿಷ್ಣುವು ಈತನೇ ಸರಿ! ಯಾರಿಗೆ ಯಮನ ಪಟ್ಟಣವನ್ನು ನೋಡಬೇಕೆಂಬ ಇಚ್ಛೆಯಿದೆಯೊ ಆತನು ಶ್ರೀಕೃಷ್ಣನನ್ನು ಯುದ್ಧಕ್ಕೆ ಕರಿಯಲಿ; ಆತನ ತೇಜಸ್ಸು ಶ್ರೀಕೃಷ್ಣನಲ್ಲಿ ಪ್ರವೇಶಿಸುತಲಿದೆ!' ಎಂದು ಭೀಷ್ಮನು ಶಿಶುಪಾಲನನ್ನು ಕುರಿತು ಹೇಳಿದನು."

## ೪೫ನೇ ಅಧ್ಯಾಯ.—ಶಿಶುಪಾಲವಧಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಶಿಶುಪಾಲನು ಮಹಾನುಭಾವರಾದ ಅರಸುಗಳನ್ನು ನಿರಾಕರಿಸಿ, ಕೃಷ್ಣನನ್ನು ನೋಡಿ 'ಗೋಪಾಲಕನಾಗಿ ಪೂಜೆಗೆ ಅಯೋಗ್ಯನಾಗಿ ರಾಜಭಾವರಹಿತನಾಗಿರುವ ನಿನಗೆ ಪೂಜೇಮಾಡಿದ ಪಾಂಡವರನ್ನೂ ನಿನಗೆ ಪೂಜೇಮಾಡಿಸಿದ ಭೀಷ್ಮನನ್ನೂ ಪೂಜೇಮಾಡಿಸಿಕೊಂಡ ನಿನ್ನನ್ನೂ ಯುದ್ಧದಲ್ಲಿ ಕೊಂದುಹಾಕುತಲಿಧೇನೆ; ಯುದ್ಧಸನ್ನದ್ಧನಾಗಿ ನಿಲ್ಲೂ' ಎಂದು ಸಿಂಹದೋಪಾದಿಯಲ್ಲಿ ಗರ್ಜಿಸುತ ಸಕಲರಾದ ಅರಸುಗಳೂ ನೋಡುತ್ತಿರಲು ಯಾಗಕ್ಕೆ ವಿಘ್ನವನ್ನು ಮಾಡಬೇಕೆಂದೆಣಿಸಿ ಅನೇಕ ರಾಜಪರಿವೃತನಾಗಿ ಮಹತ್ತಾದ ಧನುಸ್ಸನ್ನು ಹಸ್ತದಲ್ಲಿ ಹಿಡಿದುಕೊಂಡು ಯುದ್ಧಸನ್ನದ್ಧನಾದನು. ಚಕ್ರಾಯುಧಧರನಾಗಿರುವ ಶ್ರೀಕೃಷ್ಣಸ್ವಾಮಿಯು ಭೀಷ್ಮನ ಹಸ್ತಲಾಗದಿಂದ ಸುವರ್ಣಪತಾಕಾಲಂಕೃತವಾದ ರಥವನ್ನೇರಿ ಸಮೀಪದಲ್ಲಿ ಬರಲು, ಕಮಲಪತ್ರಾಕ್ಷನಾಗಿ ಗರುಡಧ್ವಜನಾಗಿ ಸೂರ್ಯಪ್ರಭಾಭಾಸಮಾನನಾಗಿರುವ ವಾಸುದೇವನನ್ನು ನೋಡಿ ಆತನ ದಿವ್ಯ ತೇಜಸ್ಸಿನಿಂದ ಪರವಶವಾಗಿ ಸಮಸ್ತರಾದ ಅರಸುಗಳೂ ಯಥಾಯೋಗ್ಯವಾಗಿ ನಮಸ್ಕಾರಾದಿಗಳನ್ನು ಮಾಡಲೂ, ಆ ಅರಸುಗಳನ್ನು ನೋಡಿ ಶ್ರೀಕೃಷ್ಣಸ್ವಾಮಿಯು ಸಾಂತ್ವಪೂರ್ವಕವಾಗಿ ಇಂತೆಂದನು: 'ಎಲೈ ಅರಸುಗಳಿರಾ, ನಿಷ್ಕಾರಣವಾಗಿ ನಿಮಗೆ ನನ್ನ ಕೂಡೆ ವೈರವು ಯಾತಕ್ಕೆ? ನಿಮ್ಮಂಥಾವರಿಗೂ ಹೀಗೆ ಕೋಪವು ಹುಟ್ಟುವಹಾಗೆ ಮಾ

ಡಿಪ ಈ ದುರಾತ್ಮಕನಾದ ಶಿಶುಪಾಲನು ನಮಗೆ ಶತ್ರುವಾದ್ದರಿಂದ ಯುದ್ಧಾ ಮಾಡಲಿ; ನೀವಷ್ಟುಮಂದಿಯೂ ನಿಮ್ಮ ಸೇನಾಸಮೇತವಾಗಿ ತಿರುಗಿ ಹೋಗಿರಿ; ಯಾವ ರೀತಿಯಿಂದಲಾದರೂ ಈ ದುರಾತ್ಮಕನನ್ನು ಕೊಲ್ಲದೇ ಬಿಡುವದಿಲ್ಲ; ಇವನು ಮೊದಲು ನಮ್ಮಲ್ಲಿ ಮಾಡಿದ ದ್ರೋಹಗಳನ್ನು ವಿವರಿಸುತಲಿದ್ದೇನೆ ಕೇಳಿ: ನಾನು ನರಕಾಸುರನನ್ನು ಕೊಲ್ಲುವದಕ್ಕೋಸ್ಕರ ಪ್ರಾಗ್ಜ್ಯೋತಿಷಪಟ್ಟಣಕ್ಕೆ ಹೋಗಿ ಯುದ್ಧಮಾಡುವ ಸಮಯದಲ್ಲಿ ದ್ವಾರಕಾಪಟ್ಟಣವನ್ನು ದಹಿಸಿ ಹೋದನು; ನಮ್ಮ ಬಂಧುಗಳಾದ ಭೋಜಭೂಪತಿಗಳು ರೈವತಕಪರ್ವತದಲ್ಲಿ ವಿಹರಿಸುವ ಸಮಯದಲ್ಲಿ ಇವನು ಅಲ್ಲಿಗೆ ಬಂದು ಕೆಲವರನ್ನು ಕೊಂದುಹಾಕಿ ಕೆಲವರನ್ನು ಹಿಡುಕೊಂಡು ತನ್ನ ಪಟ್ಟಣಕ್ಕೆ ಹೋದನು; ನಮ್ಮ ತಂದೆಯಾದ ವಸುದೇವನು ಅಶ್ವಮೇಧಯಾಗವನ್ನು ಮಾಡುವಾಗ ಸೈನ್ಯಾಧಿಪತಿಗಳಿಂದ ಸಂರಕ್ಷಿತವಾಗಿ ಪವಿತ್ರವಾಗಿ ಸಂಚರಿಸುವ ಕುದುರೆಯನ್ನು ಈ ಪಾಪಾತ್ಮನು ಯಜ್ಞವಿಘ್ನವನ್ನು ಮಾಡಬೇಕೆಂದು ಎಣಿಸಿ ಅಪಹರಿಸಿದನು; ನಾನು ಸೌವೀರದೇಶವನ್ನು ಜಯಿಸುವದಕ್ಕೆ ಹೋದ ಸಮಯದಲ್ಲಿ ಈ ಪಾಪಕರ್ಮನು ಮಹಾನುಭಾವನಾದ ಬಭ್ರುವಿನ ಭಾರ್ಯೆಯನ್ನು ಬಲಾತ್ಕಾರದಿಂದ ಹಿಡಿದುಕೊಂಡು ಹೋದನು; ಮತ್ತೂ ಈ ದುಷ್ಟಾತ್ಮನು ಪ್ರಚ್ಛನ್ನವೇಷದಿಂದ ಹೋಗಿ ತನಗೆ ಸೋದರಮಾವನಾಗಿ ನನಗೆ ತಂದೆಯಾಗಿರುವ ವಸುದೇವನು ವಿಶಾಲರಾಜಪುತ್ರಿಯಾಗಿ ವೈಶಾಲಿಯೆಂಬವಳನ್ನು ಮದುವೆಯಾಗುವ ಸಮಯದಲ್ಲಿ ದಂತವಕ್ರನ ಸಹಾಯದಿಂದ ಅವಳನ್ನು ಅಪಹರಿಸಿಕೊಂಡು ಹೋದನು; ಇದಲ್ಲದೆ ಕುಕುರಾಂಧಕ ವೃಷ್ಣಿ ಭೂಪತಿಗಳನ್ನು ಕೊಂದು ಸಂತೋಷವಾಗಿದ್ದನು; ಮತ್ತೂ ದುರಾತ್ಮಕನಾದ ಈ ಶಿಶುಪಾಲನು ಜರಾಸಂಧನನ್ನು ಆಶ್ರೈಸಿ ನಮ್ಮಲ್ಲಿ ಮಾಡಿದ ದ್ರೋಹಗಳನ್ನು ಎಷ್ಟೆಂದು ಹೇಳಬೇಕು! ಇವನಲ್ಲಿ ವಧಾರ್ಹಗಳಾದ ಶತಾಪರಾಧಗಳನ್ನು ಸೈರಿಸುತ್ತೇನೆಂದು ಇವನ ತಾಯಿಗೆ ವರವನ್ನು ಕೊಟ್ಟವನಾದ್ದರಿಂದ ಧರ್ಮಪಾಶಬದ್ಧನಾಗಿ ಇವನು ಎಷ್ಟಪರಾಧಗಳನ್ನು ಮಾಡಿದರೂ ಇವನ ತಾಯಿಯನ್ನು ನೋಡಿ ಸಹಿಸಬೇಕಾಯಿತು; ಆದರೂ ಯಜ್ಞವಿಘ್ನವನ್ನು ಮಾಡುವದೂ ಪಾಂಡವರನ್ನು ದೂಷಿಸುವದೂ ಈ ಎರಡು ಅಪರಾಧಗಳನ್ನು ಹ್ಯಾಗೆ ಸಹಿಸಬಹುದು! ಈಗ ನಿಮ್ಮಷ್ಟುಮಂದಿಯ ಸನ್ನಿಧಾನದಲ್ಲಿ ಇವನು ಹೀಗೆ ನಿರಾಕರಿಸಿ ನನ್ನನ್ನು ದೂಷಿಸುವದು ಸಮಸ್ತರಾದ ನಿಮಗೂ ತಿಳಿದೇ ಇದೆಯಷ್ಟೆ; ಮೊದಲು ಶೂದ್ರನು ವೇದವನ್ನು ಓದುವದಕ್ಕೆ ಇಚ್ಛೈಸಿದ ತೆರದಿಂದ ಈ ಮೂಢಾತ್ಮಕನು ರುಕ್ಮಿಣೀದೇವಿಯನ್ನು ಬಯಸಿದನು; ಇಂಥಾ ಮಹಾ ಅಪಕಾರವನ್ನು ಯಾವ ಪ್ರಕಾರದಿಂದ ಸಹಿಸುವೆನು! ಅಷ್ಟಕ್ಕೂ ಪ್ರಾಯಶ್ಚಿತ್ತವಾಗಿ ನೀವೆಲ್ಲರೂ ನೋಡುತ್ತಿರಲು ಇವನನ್ನು ಕೊಂದುಹಾಕುತಲಿದ್ದೇನೆ' ಎಂದು ಇನ್ನೂ ಅನೇಕವಾದ ಶಿಶುಪಾಲನ ಅಕೃತ್ಯಗಳನ್ನು ಶ್ರೀಕೃಷ್ಣಸ್ವಾಮಿಯು ಹೇಳಲು, ಅದನ್ನು ಕೇಳಿ ಯುದ್ಧಸನ್ನದ್ಧರಾದ ಅರಸುಗಳು ಭಯಭ್ರಾಂತರಾಗಿ ಚತುರಂಗ ಬಲಸಮೇತರಾಗಿ ಹೊರಟು ಹೋದರು. ಹಾಗೆ ಕೃಷ್ಣನ ಪರಾಕ್ರಮಕ್ಕೆ ಭಯಪಟ್ಟು ಹೋಗುವ ಅರಸುಗಳನ್ನು ನೋಡುತ ರಥಾರೂಢನಾಗಿ ಕೋಪಾವೇಶದಿಂದ ಕೆಂಪಾದ ಕಣ್ಣುಗಳುಳ್ಳಂಥಾವನಾದ ಶಿಶುಪಾಲನು ಬಬ್ಬನೇ ಕಾಡುಕಿಚ್ಚಿಗೆ ಎದುರಾಗಿ ಬರುವ ಪತಂಗದ ಹುಳುವಿನೋಪಾದಿಯಲ್ಲಿ ಶರಸಂಧಾನವನ್ನು ಮಾಡುತ ಶ್ರೀ ಕೃಷ್ಣನ ಎದುರಾಗಿ ರಥವನ್ನು ನಡಿಸಿದನು."

## ೭೬ನೇ ಅಧ್ಯಾಯ.—ಶಿಶುಪಾಲವಧಪರ್ವ ಶೇಷ.

"ಕೇಳು ಜನಮೇಜಯನೆ, ಈರೀತಿಯಲ್ಲಿ ಶಿಶುಪಾಲನು ಯುದ್ಧಸನ್ನದ್ಧನಾಗಿ ನಿಂತ ಸಮಯದಲ್ಲಿ ಪ್ರಜ್ಞಾಸಂಪನ್ನನಾದ ಧರ್ಮರಾಯನು ಲೋಕದಲ್ಲಿ ಜ್ಯೋತಿಶ್ಶಾಸ್ತ್ರಾಭಿಜ್ಞರು ಸೂರ್ಯಾದಿ ಗ್ರಹಗಳಲ್ಲಿರುವ ಉತ್ಪಾತಗಳನ್ನು ಹೇಳುವದನ್ನು ತಿಳಿದವನಾದ್ದರಿಂದ ನಾರದನನ್ನು ನೋಡಿ 'ಎಲೈ ಮುನೀಂದ್ರನೆ, ಮೂರು ಲೋಕಗಳಲ್ಲಿಯೂ ನೀವು ಅರಿಯದೆ ಇರುವ ಅರ್ಥವು ಇಲ್ಲಾ; ಅದಷ್ಟನ್ನೂ ನೀವು ಬಲ್ಲಿರಿ; ಆದ್ದರಿಂದ ಭೂವ್ಯೋಂತರಿಕ್ಷಗಳಲ್ಲಿ ರಾಜವಿನಾಶ ಸೂಚಕಗಳಾದ ಮಹೋತ್ಪಾತಗಳಾದ ದುರ್ನಿಮಿತ್ತಗಳು ತೋರುತಲಿವೆ; ಇದಷ್ಟನ್ನೂ ವಿಶದವಾಗಿ

ಹೇಳಬೇಕು ' ಎಂದು ಪ್ರಾರ್ಥಿಸಿದನು. ಸಕಲ ಲೋಕ ಪ್ರಸಿದ್ಧನಾಗಿ ಬುದ್ಧಿಸಂಪನ್ನನಾದ ನಾರದ ಮಹರ್ಷಿಯು ಧರ್ಮರಾಯನನ್ನು ನೋಡಿ ' ಎಲೈ ಯುಧಿಷ್ಠಿರನೆ, ಲೋಕದಲ್ಲಿ ಜ್ಯೋತಿಶ್ಶಾಸ್ತ್ರಾಭಿಜ್ಞರು ಸೂರ್ಯಾದಿಗ್ರಹಗಳಲ್ಲಿರುವ ತೇಜೋವಿಶೇಷಗಳು, ಗತಿವಿಶೇಷಗಳು, ಪರಸ್ಪರ ಯೋಗವು, ಉಚ್ಚ ನೀಚಭಾವಗಳು, ಸಮುಚ್ಛ್ರಯಗಳು, ಒಬ್ಬರಿಗೊಬ್ಬರು ಎದುರಾಗಿ ಬರುವದು, ಅನ್ಯೋನ್ಯ ಕಿರಣ ಸಂಸರ್ಗವು, ಮಾರ್ಗವು, ಯುದ್ಧವು ದರ್ಶನಾದರ್ಶನಗಳು, ಅದೃಶ್ಯಗಳು ಕಾಣಲ್ಪಡುವದು, ದೃಶ್ಯಗಳು ಕಾಣಲ್ಪಡದೇ ಹೋಗುವದು, ವೃದ್ಧಿಕ್ಷಯಂಗಳು, ಬಲಹೀನತೆಯು, ಕ್ರಮದಿಂದ ಕ್ಷಯವಾಗುವದು, ವರ್ಣಸ್ಥಾನಗಳು, ಬಲಾಬಲಗಳ ಇವುಗಳನ್ನು ತಿಳಿಯಬೇಕು ; ದೇವನಿರ್ಮಿತಗಳಾದ ಅನೇಕೋತ್ಪಾತಗಳು ಮೊದಲು ಭೂಮಿಯಲ್ಲಿಯೂ ಆಕಾಶದಲ್ಲಿಯೂ ಹುಟ್ಟುವವು ; ಲೋಕದಲ್ಲಿ ಯಾವ ಪುರುಷನ ನೆಳಲು ಸಾಯಂಕಾಲ ಸಮಯದಲ್ಲಿ ಪೂರ್ವ ದಿಕ್ಕಿನಲ್ಲಿ ವ್ಯಾಪಿಸದೇ ಇರುವದೊ ಆತನಿಗೆ ಹಾನಿಬರುವದೆಂದು ತಿಳಿಯಬೇಕು ; ಜನಗಳಿಗೆ ಆಶ್ರಯವಾಗಿರುವ ಜಗತಿಮರಗಳ ನೆರಳುಗಳು ಕಾಣಲ್ಪಡದೇ ಇರುವ ಪ್ರದೇಶಗಳಲ್ಲಿ ಸ್ಪಷ್ಟವಾಗಿ ಪ್ರತಿಛಾಯ ಚಂದದಿಂದ ತನ್ನ ನೆಳಲು ತೋರುವದೂ ಹಣ್ಣೆಲೆಗಳೂ ಚಿಗುರುಗಳೂ ಒಂದೇ ಸಾರಿ ಉದುರುವದೂ ನಿರ್ನಿಮಿತ್ತವಾಗಿ ಎಲೆಗಳೂ ಒಣಗುವದು ಅರಿಷ್ಟ ಸೂಚಕಗಳಾಗಿರುವದು ; ಮತ್ತೂ ವೃಕ್ಷಗಳು ತಳಿರುಗಳಿಂದ ಮನೋಹರಗಳಾಗಿ ಚೇತನ ಕೃತ್ಯಗಳನ್ನು ಮಾಡುವಹಾಗೆ ಕಾಣಿಸಿದರೆ ಅದು ಅಶುಭಕಾರ್ಯವಾಗಿ ಕಾಣಿಸುವದು ; ಪುಷ್ಪದಮೇಲೆ ಪುಷ್ಪ ಹುಟ್ಟಿದರೂ ಫಲದಲ್ಲಿ ಫಲವು ವೃಕ್ಷಗಳಲ್ಲಿ ಕಾಣಿಸಿದರೂ ಆ ದೇಶದ ಅರಸಿಗಾದರೂ ಆತನಿಗೆ ಸಮಾನನಾದವನಿಗಾದರೂ ಹಾನಿಬರುವದು ; ಒಂದು ಋತುವಿನಲ್ಲಿ ಆಗುವಂಥಾ ಫಲಪುಷ್ಪಗಳು ಮತ್ತೊಂದು ಋತುವಿನಲ್ಲಿ ಆದರೆ ರಾಜ್ಯಕ್ಷೋಭವಾಗುವದು ; ಪೂಜ್ಯಗಳಾದ ಅಶ್ವತ್ಥವೃಕ್ಷಗಳು ಮೊದಲಾದ ವೃಕ್ಷಗಳ ಬೇರುಗಳು ಘಾಳಿಯಿಲ್ಲದೆ ಸುಮ್ಮನೆ ಮುರಿದು ಬೀಳುವದಾದರೂ ಶೀಳುವದಾದರೂ ಅಲ್ಲಿ ಘಾಳೀ ಭಯವಾದರೂ ಅಗ್ನಿಭಯವಾದರೂ ಪ್ರಭುನಾಶವಾದರೂ ಉಂಟಾಗುವದು ; ಸಕಲವಾದ ದಿಕ್ಕುಗಳೂ ಉರಿಯುವದರೋಪಾದಿಯಲ್ಲಿ ಕಾಣಲ್ಪಟ್ಟರೆ ಆ ದೇಶಕ್ಕೆ ಉಪದ್ರವುಂಟಾಗುವದು ; ಮರವನ್ನು ಕಡಿಯುವ ಸಮಯದಲ್ಲಿ ಅತಿಘೋರವಾದ ಮಹಾಧ್ವನಿ ಹುಟ್ಟಿದರೆ ಅಲ್ಲಿರುವ ಜನಗಳಿಗೆ ಹಾಹಾಕಾರವು ಹುಟ್ಟುವದು ; ಆ ವೃಕ್ಷವನ್ನು ಕಡಿದವರಿಗೂ ಕಡಿಸಿದವರಿಗೂ ಶೀಘ್ರವಾಗಿ ಮರಣ ಒರುವದು ; ಅರ್ಧರಾತ್ರೆಯಲ್ಲಿ ಇಂದ್ರಾಯುಧವು ಕಾಣಲ್ಪಟ್ಟರೆ ಆ ರಾಜ್ಯಕ್ಕೆ ಹಾನಿಒರುವದು ; ಕಲ್ಲುಗಳ ದೆಸೆಯಿಂದ ನೀರುಗಳು ಸ್ರವಿಸಿದರೂ ನಿಷ್ಕಾರಣವಾಗಿ ಜಲಗಳಲ್ಲಿ ಎಣ್ಣೆ ಕಾಣಲ್ಪಟ್ಟರೂ ಇನ್ನೂ ವಿಕಾರಗಳು ಉಂಟಾದರೂ ಮಂತ್ರಿಯಾದರೂ ವಿನಾಶವನ್ನೈದುವನು ; ಇಲ್ಲದಿದ್ದರೆ ಆ ರಾಜ್ಯದಲ್ಲಿ ವ್ಯಾಧಿಭಯವಾದರೂ ಉಂಟಾಗುವದು ; ದೇವಾಲಯಗಳಲ್ಲಿಯೂ ರಾಜ ಭವನಗಳಲ್ಲಿಯೂ ಆಯುಧಶಾಲೆಗಳಲ್ಲಿಯೂ ಜೇನುಹುತ್ತಿಕ್ಕಿದರೆ ಬಲಶಾಲಿಯಾದವನಿಂದ ದೇಶಕ್ಕೆ ಭಯಬರುವದು ; ಮರಗಳಲ್ಲಿ ನೆತ್ತರು ಕಾಣಿಸಿದರೆ ಜನರಿಗೆ ಉಪದ್ರವತಟ್ಟುವದು ; ಆನೆಕೊಂಬುಗಳಲ್ಲಿ ರಕ್ತಕಾಣಿಸಿದರೆ ಅರಸಿಗೆ ಭಯವು ಪ್ರಾಪ್ತವಾಗುವದು ; ಎತ್ತುಗಳ ಕೊಂಬುಗಳಲ್ಲಿ ನೆತ್ತರು ಕಾಣಿಸಿದರೆ ಗೋಬ್ರಾಹ್ಮಣ ವಿನಾಶವುಂಟಾಗುವದು ; ಅರಸನ ಕೊಡೆಯು ಭೂಮಿಯಲ್ಲಿ ಬಿದ್ದರೆ ಪ್ರಜಾಸಮೇತವಾಗಿ ಆತನಿಗೆ ನಾಶಬರುವದು ; ನದಿಗಳಲ್ಲಿ ಅಕಾಲಪ್ರವಾಹ ಬಂದರೆ ರಾಜ್ಯಕ್ಕೆ ಭೀತಿಬರುವದು ; ದೇವಾಲಯಗಳಲ್ಲಿ ಅರಮನೆಯಲ್ಲಿ ಆನೆಸಾಲುಗಳಲ್ಲಿ ವಿಕಾರಗಳು ಹುಟ್ಟಿದರೆ ದೇಶಕ್ಕೂ ಅರಸಿಗೂ ಪೀಡೆಬರುವದು ; ದೇವತಾಪ್ರತಿಮೆಗಳ ಭುಜಗಳು ಮುರಿದು ಬಿದ್ದರೆ ಗ್ರಹಸ್ಥರಿಗೆ ಉಪದ್ರವುಂಟಾಗುವದು ; ದೇವತಾಮೂರ್ತಿಯ ಆಯುಧವು ಕೆಳಗೆ ಬಿದ್ದರೆ ಸೇನಾಧಿಪತಿಗೆ ಉಪದ್ರವಬರುವದು ; ದೇಶಾಂತರಗಳಿಂದ ಬಂದ ದೇವತಾ ಪ್ರತಿಮೆಗಳನ್ನು ಉಚಿತಸ್ಥಾನದಲ್ಲಿರಿಸಿ ಪೂಜೆಮಾಡದೆ ಇದ್ದರೆ ಅರಸಿಗೆ ಆರು ತಿಂಗಳೊಳಗೆ ರಾಜ್ಯ ಭ್ರಂಶವು ಬರುವದು ; ಭೂಮಿ ಎರಡು ಪಾಲಾಗಿ ಸೀಳಿದರೂ ಗುಡುಗಿದರೂ ಅಲ್ಲಿರುವ ಅರಸಿಗೂ ರಾಜ್ಯಕ್ಕೂ ಹಾನಿಬರುವದು ; ಹಾವು ಜಿಗಣೆ ಹಾವ್ರಾಣಿಯೆಂಬ ಜಂತುಗಳನ್ನು ಕೊಂದರೂ ಕಪ್ಪೆಗಳನ್ನುನುಂಗಿದರೂ ಆ ಭೂಮಿಯಲ್ಲಿರುವ ಅರಸಿಗೆ ವಿನಾಶವು ಬರುವದು ; ಅಕಾಲದಲ್ಲಿ ಭಾವಿಗಳು ನೀರಿನಿಂದ ತುಂಬಿದರೂ ಕಲ್ಲುಗಳಲ್ಲಿಯೂ ಮರಳುಗಳಲ್ಲಿಯೂ ನೀರುಸ್ರವಿಸಿದರೂ ಒಂದು ಕಾಲು ಮೂರುಕಾಲು ಎರಡು ತಲೆಗ

ಳು ಕಾಲುಗಳಲ್ಲದೆ ನಾಲ್ಕು ಭುಜಗಳುಂಟಾಗಿಯೂ ಬಾಲಕರು ಹುಟ್ಟಿದರೂ ನದೀಜಲಗಳು ಎದುರಾಗಿ ಪ್ರವಹಿಸಿದರೂ ದಿಕ್ಕುಗಳು ಮಲಿನವಾಗಿ ಕಾಣಿಸಿದರೂ ಅವಷ್ಟೂ ಅಪಜಯ ಸೂಚಕಗಳು ಎಂದು ತಿಳಕೊ; ಪಾಕವು ಇಲ್ಲದೆ ಸುಮ್ಮನೇ ಇರುವಂಥಾ ಅಕ್ಕಿಯು ಅನ್ನವಾಗಿ ಪಾತ್ರೆಯಲ್ಲಿ ತುಂಬಿದ್ದರೆ ಅದನ್ನು ಭಕ್ಷಿಸುವದಕ್ಕಿಂತಲು ಮೊದಲೆ ಆ ಮನೆಯ ಗೃಹಸ್ಥನಿಗೆ ಉಪದ್ರವ ಬರುವದು' ಎಂದು ನಾರದಮಹರ್ಷಿಯು ಧರ್ಮರಾಯನಿಗೆ ಹೇಳಿದನು"

## ೭೭ ನೇ ಅಧ್ಯಾಯ.—ಶಿಶುಪಾಲವಧಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ನಾರದನು ಮತ್ತೂ ಧರ್ಮರಾಯನನ್ನು ನೋಡಿ 'ಕೇಳು ಧರ್ಮರಾಯನೆ, ಚಂದ್ರ ಸೂರ್ಯ ಗ್ರಹ ನಕ್ಷತ್ರಗಳ ದೆಸೆಯಿಂದ ವಾಯ್ವಗ್ನಿ ಭೂಮಿ ಜಲಗಳಲ್ಲಿ ಈಗ ಹೇಳಿದ ದುರ್ನಿಮಿತ್ತಗಳನ್ನು ಈ ಮಾಧವನು ಯಾವ ದೇಶಕ್ಕೆ ಹಾನಿಯನ್ನು ಎಣಿಸುತ್ತಲಿದ್ಧಾನೋ ಆ ದೇಶದಲ್ಲಿ ಕಾಣಿಸುವ ಹಾಗೆ ಮಾಡಿಸುತಲಿದ್ಧಾನೆ; ಯಾವ ರಾಜ್ಯವನ್ನು ಸಂರಕ್ಷಿಸಬೇಕೆಂದು ಎಣಿಸುತಲಿದ್ಧಾನೊ ಅಲ್ಲಿ ಶುಭನಿಮಿತ್ತಗಳು ಆಗುವವು; ಆದ್ದರಿಂದ ಈ ಚೈದ್ಯನಿಗೆ ವಿನಾಶಕಾಲವಾದ್ದರಿಂದ ಈ ಕೃಷ್ಣಸ್ವಾಮಿಯು ಉತ್ಪಾತಗಳನ್ನು ಕಲ್ಪಿಸುತಲಿದ್ಧಾನೆ; ಅದರಿಂದ ಭೂಮಿಯು ಕಂಪಿಸುತ್ತಿದೆ; ಪರ್ವಕಾಲಗಳು ಇಲ್ಲದೆ ಇರುವಂಥಾ ಸಮಯದಲ್ಲಿ ರಾಹುವು ಚಂದ್ರನನ್ನು ನುಂಗುತಿದ್ಧಾನೆ; ಧ್ವನಿಯೊಡನೆ ಕೂಡಿ ಕೊಳ್ಳಿಗಳು ಬೀಳುತ್ತಿವೆ; ಪ್ರಚಂಡವಾಯುಗಳು ಬೀಸುತ್ತಿವೆ; ಅಕಾರಣದಿಂದ ಅಂಧಕಾರವು ನಾಲ್ಕು ದಿಕ್ಕುಗಳಲ್ಲಿಯೂ ಆವರಿಸುತಲಿದೆ' ಎಂದು ನಾರದನು ಧರ್ಮರಾಯನಿಗೆ ವಿವರಿಸಿದನು. ಆಗ ಉಂಟಾದಂಥಾ ಉತ್ಪಾತಗಳನ್ನು ಸಕಲರಾದ ಅರಸುಗಳೂ ನೋಡುತ್ತಿರಲು ಯುದ್ಧಸನ್ನದ್ಧನಾದ ಶಿಶುಪಾಲನು ಅತ್ಯಂತವಾಗಿ ಕೋಪಿಸಿಕೊಂಡು ಕೃಷ್ಣಸ್ವಾಮಿಯ ಮೇಲೆ ಕಾಣಿಸಿಕೊಂಡು ಬರುವ ಸಮಯದಲ್ಲಿ ನರಿಗಳು ಕೂಗಿದವು; ವನಪರ್ವತ ಸಮೇತವಾದ ಭೂಮಂಡಲವು ನಡುಗಿತು; ಆಕಾಶದಲ್ಲಿ ರಾಹುವು ಸೂರ್ಯನನ್ನು ನುಂಗಿದನು; ಚೈದ್ಯನ ರಥಧ್ವಜದ ಮೇಲೆ ಆಕಾಶದ್ದೆಸೆಯಿಂದ ಬಂದು ತೀಕ್ಷ್ಣವಾದ ಮುಖವುಳ್ಳ ಒಂದು ಹದ್ದು ಕೂತುಕೊಂಡಿತು; ಗ್ರಾಮದಲ್ಲಿರುವ ಮೃಗಪಕ್ಷಿಗಳು ಮಹಾಧ್ವನಿಯನ್ನು ಮಾಡಿದವು; ಇವು ಮೊದಲಾದ ಅನೇಕ ಮಹೋತ್ಪಾತಗಳು ಕಾಣಲ್ಪಟ್ಟವು."

## ೭೮ನೇ ಅಧ್ಯಾಯ.—ಶಿಶುಪಾಲವಧಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಶಿಶುಪಾಲನು ರೋಷಭೀಷಣಾಕಾರನಾಗಿ ನಿಂತ ಕೃಷ್ಣಸ್ವಾಮಿಯನ್ನು ನೋಡಿ ಯುದ್ಧಸನ್ನದ್ಧನಾಗಿ ಅತ್ಯುನ್ನತವಾದ ಧನುಸ್ಸನ್ನು ತಕ್ಕೊಂಡು ಹೆದೆಯನ್ನು ಧ್ವನಿಮಾಡುತ ಕೃಷ್ಣಸ್ವಾಮಿಗೆ ಅಭಿಮುಖನಾಗಿ ನಿಂತು 'ಈ ಲೋಕದಲ್ಲಿ ನೀನೊಬ್ಬನೇ ನನಗೆ ಶತ್ರುವು; ನೀನು ನನಗೆ ಶತ್ರುವಾದ್ದರಿಂದ ಬಹುಕಾಲದಿಂದ ನಿನ್ನ ಕೂಡೆ ದ್ವಂದ್ವಯುದ್ಧವನ್ನು ಮಾಡಬೇಕೆಂದು ಇಚ್ಛೈಸಿದ್ಧೇನೆ; ಈ ಹೊತ್ತು ದೈವಯೋಗದಿಂದ ನನ್ನ ಮುಂದೆ ಬಂದವನಾದ್ದರಿಂದ ಭೀಷ್ಮಪಾಂಡವ ಸಮೇತವಾಗಿ ನಿನ್ನನ್ನು ಈಗಲೇ ಕೊಂದು ಚತುಸ್ಸಮುದ್ರಪರಿಮಿತವಾದ ಭೂಮಂಡಲವನ್ನು ನಿಷ್ಕಂಟಕವಾಗಿ ಪರಿಪಾಲಿಸುತಲಿದ್ಧೇನೆ' ಎಂದು ವೀರಾಲಾಪಗಳನ್ನು ನುಡಿಯುತ ಆ ಕೃಷ್ಣಸ್ವಾಮಿಯ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು; ಆ ಬಾಣಗಳು ಪರ್ವತ ಗುಹೆಗಳನ್ನು ಪ್ರವೇಶಿಸುವ ಸರ್ಪಗಳೋಪಾದಿಯಲ್ಲಿ ಕೃಷ್ಣಸ್ವಾಮಿಯ ಶರೀರದಲ್ಲಿ ಪ್ರವೇಶಿಸಿದವು. ಶಿಶುಪಾಲನ ಕರಲಾಘವ ಶರಲಾಘವಗಳು ಆಕಾಶದಲ್ಲಿ ಸಂಚರಿಸುವ ವಾಯುವಿನ ಗತಿವಿಶೇಷದೋಪಾದಿಯಲ್ಲಿ ಕಣ್ಣಿಗೆ ಕಾಣಿಸದೇ ಇತ್ತು; ಶಿಶುಪಾಲನೆಂಬ ಮೇಘವು ಶರಸಮೂಹವೆಂಬ ವರ್ಷದಿಂದ ಯದುವೀರನೆಂಬ ಪರ್ವತವನ್ನು ಮುಚ್ಚಿತು. ಆಗ ದನುಜಾಂತಕನಾಗಿ ಸಕಲ ಶತ್ರುಭಯಂಕರನಾದ ಕೃಷ್ಣಸ್ವಾಮಿಯು ಮಹತ್ತಾಗಿ

ರುವ ಒಂದು ಬಾಣವನ್ನು ತೊಟ್ಟು ಆತನನ್ನು ಲಕ್ಷ್ಯವಾಡಿ ವಜ್ರಾಯುಧದಿಂದ ಪರ್ವತವನ್ನು ಭೇದಿಸುವ ತೆರದಿಂದ ಆವನ ಹೃದಯವನ್ನು ಭೇಧಿಸುವ ಹಾಗೆ ಪ್ರಯೋಗಿಸಿದನು. ಚೈದ್ಯಪತಿಯಾದ ಶಿಶುಪಾಲನು ತೀಕ್ಷ್ಣವಾದ ಬಾಣಪರಂಪರೆಗಳನ್ನು ಒಮ್ಮಡಿಯಾಗಿ ಪ್ರಯೋಗಿಸಲು ಆತನ ಬಾಣಗಳಿಂದ ಪೀಡಿತನಾಗಿ ಪರಾಕ್ರಮಧುರ್ಯನಾದ ಯದುವಲ್ಲಭನು ನೂರುಸಾವಿರ ಸಂಖ್ಯೆಯುಳ್ಳ ಬಾಣಗಳನ್ನು ಪ್ರಯೋಗಿಸಿದನು: ಆತನು ಆ ಬಾಣಗಳಷ್ಟನ್ನೂ ಮಧ್ಯದಲ್ಲಿಯೇ ಖಂಡಿಸಿ ತೀಕ್ಷ್ಣವಾದ ಆರು ಬಾಣಗಳನ್ನು ತೊಟ್ಟು ಆ ಕೃಷ್ಣಸ್ವಾಮಿಯ ವಕ್ಷಸ್ಥಳದಲ್ಲಿ ನೆಟ್ಟನು. ಕೃಷ್ಣಸ್ವಾಮಿಯು ಒಂದು ದಿವ್ಯಾಸ್ತ್ರವನ್ನು ಪ್ರಯೋಗಿಸಲು ಶಿಶುಪಾಲನು ಮತ್ತೊಂದು ಅಸ್ತ್ರದಿಂದ ಆ ಅಸ್ತ್ರವನ್ನು ಕೆಡಿಸಿ ಮತ್ತೂ ಅನೇಕ ಬಾಣಗಳನ್ನು ಆ ಕೃಷ್ಣಸ್ವಾಮಿಯ ಮೇಲೆ ಕೋಪಾಟೋಪೋದ್ದೀಪಿತನಾಗಿ ಸಿಂಹನಾದವನ್ನು ಮಾಡುತ 'ಎಲೈ ಕೃಷ್ಣನೆ, ಯಾವರೀತಿಯಿಂದಲಾದರೂ ಯುದ್ಧದಲ್ಲಿ ನನ್ನ ದಿವ್ಯ ಬಾಣಗಳಿಂದ ಪುತ್ರಾಮಾತ್ಯಸಹಿತವಾದ ನಿನ್ನನ್ನೂ ಪಾಂಡವರನ್ನೂ ಈಗಲೇ ಕೊಂದು ನನಗೆ ಪರಮಮಿತ್ರರಾದ ಕೇಶಿ ಜರಾಸಂಧ ಕಂಸ ನರಕಾಸುರರ ಋಣವನ್ನು ತೀರಿಸಿಕೊಳ್ಳುತಲಿದೇನೆ' ಎಂದು ನುಡಿದು, ಕೋಪದಿಂದ ಕೆಂಪಾದ ಕಣ್ಣುಗಳುಳ್ಳಂಥಾವನಾಗಿ ಅನೇಕ ಬಾಣಗಳನ್ನು ಪ್ರಯೋಗಿಸಿ ತಾನು ಮರೆಯಾದನು. ಆ ಬಳಿಕ ಕೃಷ್ಣಸ್ವಾಮಿಯು ನೂರುಸಾವಿರ ಸಂಖ್ಯೆಯುಳ್ಳ ಬಾಣಗಳನ್ನು ಶಿಶುಪಾಲನ ಮೇಲೆ ಪ್ರಯೋಗಿಸಿ 'ಎಲೈ ಚೈದ್ಯಾಧಮನೆ, ನಾಚಿಕೆಯಿಲ್ಲದೆ ಯಾತಕ್ಕೆ ಬಗಳುತ್ತಿದ್ದೀ ? ಕ್ಷಣಮಾತ್ರವು ನನ್ನ ಮುಂದೆ ನಿಂತರೆ ನಿನಗೆ ಪರಮಮಿತ್ರರಾದ ಜರಾಸಂಧ ಮೊದಲಾದವರನ್ನು ನೋಡುವದಕ್ಕೆ ಕಳುಹಿಸುಲಿದೇನೆ' ಎಂದು ತಾನೂ ಮರೆಯಾಗಿ ಅವನ ಬಾಣಪರಂಪರೆಗಳಷ್ಟನ್ನೂ ಒಂದು ದಿವ್ಯಾಸ್ತ್ರಪ್ರಯೋಗದಿಂದ ಖಂಡಿಸಿ, ಮತ್ತೂ ಅನೇಕ ಬಾಣಗಳನ್ನು ಮೇಲೆ ಪ್ರಯೋಗಿಸಿದನು. ಹೀಗೆ ಮರೆಯಾಗಿ ಹೋರುವ ಮಹಾವೀರರನ್ನು ಕುರಿತು 'ಮೊದಲು ಯಾವಾಗಲೂ ಇಂಥಾ ಯುದ್ಧವನ್ನು ಕಂಡು ಕೇಳಿ ಅರಿಯೆವು !' ಎಂದು ಆಶ್ಚರ್ಯ ಭರಿತಗಳಾದ ಭೂತಗಳು ಆಕಾಶದಲ್ಲಿ ಸ್ತುತಿಸಿದವು. ಆ ಬಳಿಕ ಶಿಶುಪಾಲನು ಮೂರು ಬಾಣಗಳಿಂದ ಮುರವೈರಿಯನ್ನು ನೋಯಿಸಲು ಆತನು ಐದುಬಾಣಗಳಿಂದ ಅವನ ಶರೀರದಲ್ಲಿ ಘಾಯವನ್ನು ಮಾಡಿ ಮತ್ತೂ ಇಪ್ಪತ್ತುಬಾಣಗಳಿಂದ ಆತನ ಶರೀರವನ್ನು ನೋಯಿಸಿದನು. ಶಿಶುಪಾಲನು ಕ್ರೋಧಮೂರ್ಛಿತನಾಗಿ ಕ್ರೂರವಾದ ಬಾಣಗಳನ್ನು ಪ್ರಯೋಗಿಸಿ ಮೂರು ಬಾಣಗಳಿಂದ ಕೃಷ್ಣನ ವಕ್ಷಸ್ಥಳವನ್ನು ಭೇದಿಸಿ ಸಿಂಹನಾದವನ್ನು ಮಾಡಿದನು. ಈ ಪ್ರಕಾರದಿಂದ ಉಗುರುಗಳಿಂದ ಹೋರುವ ಹೆಬ್ಬುಲಿಗಳೋಪಾದಿಯಲ್ಲಿಯೂ ದಂತಗಳ ಪೆಟ್ಟುಗಳಿಂದ ಗುದ್ದಾಡುವ ಮದ್ದಾನೆಗಳೋಪಾದಿಯಲ್ಲಿಯೂ ಭಯಂಕರವಾದ ಕೋರದಾಡೆಗಳಿಂದ ಕಚ್ಚಾಡುವ ಸಿಂಹಗಳೋಪಾದಿಯಲ್ಲಿಯೂ ಕಾಲುಗುರುಗಳಿಂದ ಹೋರುವ ಕೋಳಿಗಳೋಪಾದಿಯಲ್ಲಿಯೂ ಪರಸ್ಪರ ಬಾಣಪ್ರಯೋಗಗಳಿಂದ ಶೀಳಲ್ಪಟ್ಟ ಶರೀರಗಳುಳ್ಳಂಥಾವರಾಗಿ ಅತಿಘೋರವಾದ ದ್ವಂದ್ವಯುದ್ಧವನ್ನು ಮಾಡುವ ಸಮಯದಲ್ಲಿ ರೋಷದಿಂದ ಭಯಂಕರನಾಗಿರುವ ಶಿಶುಪಾಲನು ದಿವ್ಯಾಸ್ತ್ರಪ್ರಯೋಗವನ್ನು ಮಾಡುವದಕ್ಕೆ ಎಣಿಸಿ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಕೃಷ್ಣಸ್ವಾಮಿಯು ಅದಕ್ಕೆ ಬದುಲಾಗಿ ವಾರುಣಾಸ್ತ್ರವನ್ನು ಪ್ರಯೋಗಿಸಿ ಆಗ್ನೇಯಾಸ್ತ್ರವನ್ನು ಕೆಡಿಸಿದನು ; ಆ ಬಳಿಕ ಶಿಶುಪಾಲನು ಮತ್ತೊಂದು ದಿವ್ಯಾಸ್ತ್ರವನ್ನು ಪ್ರಯೋಗಿಸಲು ಕೃಷ್ಣಸ್ವಾಮಿಯು ಕುಬೇರಾಸ್ತ್ರವನ್ನು ಪ್ರಯೋಗಿಸಿ ಆ ಅಸ್ತ್ರವನ್ನೂ ಖಂಡಿಸಿದನು ; ಕಾರ್ಯಧುರಂಧರನಾದ ಶಿಶುಪಾಲನು ಯಾವ್ಯಾಸ್ತ್ರವನ್ನು ಪ್ರಯೋಗಿಸಲು ಕೃಷ್ಣಸ್ವಾಮಿಯೂ ಯಾಮ್ಯಾಸ್ತ್ರದಿಂದಲೆ ತಿರಸ್ಕರಿಸಿದನು ; ಮತ್ತು ಚೈದ್ಯನು ಗಾಂಧರ್ವಾಸ್ತ್ರವು ವಾಯವ್ಯಾಸ್ತ್ರವು ಮಾನವಾಸ್ತ್ರವು ಐಂದ್ರಾಸ್ತ್ರವು ರೌದ್ರಾಸ್ತ್ರವು ವೈಷ್ಣವಾಸ್ತ್ರವು ಇವು ಮೊದಲಾದ ದಿವ್ಯಾಸ್ತ್ರಗಳನ್ನು ಪ್ರಯೋಗಿಸಲು ಶ್ರೀ ಕೃಷ್ಣಸ್ವಾಮಿಯು ಆ ಆ ಅಸ್ತ್ರಗಳನ್ನೇ ಪ್ರಯೋಗಿಸಿ ಕೆಡಿಸಿದನು. ಈ ಪ್ರಕಾರದಲ್ಲಿ ಪರಸ್ಪರವು ಪ್ರಯೋಗಿಸಿದ ಶಸ್ತ್ರಾಸ್ತ್ರಗಳು ವಿಫಲವಾಗಲು ಶಿಶುಪಾಲನು ಮಾಯಾಬಲವನ್ನು ಆಶ್ರೈಸಿ ಶಕ್ತಿ ತೋಮರ ಗದಾ ಮುಸಲ ಪರಶ್ವಥ ಮುಸುಂಡಿಗಳು ಮೊದಲಾದ ಆಯುಧಗಳ ಮಳೆಯನ್ನು ಸುರಿಯಲು ಕೃಷ್ಣನು ಅಮೋಘವಾದ ಒಂದು ದಿವ್ಯಾಸ್ತ್ರವನ್ನು ಪ್ರಯೋಗಿಸಿ ಅದರಿಂದ ಅವಷ್ಟ

ನ್ನೂ ಖಂಡಿಸಿದನು. ತಿರಿಗೂ ಶಿಶುಪಾಲನು ಶಿಲಾವರ್ಷಗಳನ್ನು ಸುರಿಯಲು ವಾಸುದೇವನಾದ ಕೃಷ್ಣನು ವಜ್ರಾಸ್ತ್ರದಿಂದ ಅವನ್ನು ಚೂರ್ಣವಾಗಿ ಮಾಡಿದನು. ಮತ್ತು ಶಿಶುಪಾಲನು ಜಲವನ್ನು ವರ್ಷಿಸಲು ಕೃಷ್ಣನು ವಾಯುವ್ಯಾಸ್ತ್ರದಿಂದ ಅದನ್ನು ಪರಿಹರಿಸಿದನು. ಈ ಪ್ರಕಾರದಿಂದ ಅತಿರಥೇಶ್ವರರಾದ ಶಿಶುಪಾಲ ಕೃಷ್ಣರೀರ್ವರೂ ಅತಿ ವಿಸ್ಮಯಕರವಾದ ಯುದ್ಧವನ್ನು ಮಾಡಿದರು. ಆ ಸಮಯದಲ್ಲಿ ಶಿಶುಪಾಲನು ಕೃಷ್ಣನನ್ನು ನೋಡಿ 'ಎಲೈ ಯದುನಂದನನೆ, ಈ ಹೊತ್ತು ಮೊದಲು ಈ ಲೋಕದಲ್ಲಿ ಕೃಷ್ಣನೆಂಬ ಹೆಸರು ಇಲ್ಲದರೀತಿಗೆ ಮಾಡುತಲಿಧೇನೆ, ನಿಲ್ಲು ನಿಲ್ಲು' ಎಂದು ಅಟ್ಟಿಕೊಳ್ಳುತ ಪ್ರಚಂಡವಾದ ಬಾಣಗಳನ್ನು ಪ್ರಯೋಗಿಸಿದನು. ಆ ಬಾಣಗಳಿಂದ ಶರೀರವಷ್ಟೂ ಗಾಯಗಳಾಗಿ ಯದುನಂದನನು ರಕ್ತವನ್ನು ಕಾರುತ ಸುಮ್ಮನೆ ಇರಲು ಮತ್ತೂ ಆ ಶಿಶುಪಾಲನು ಸಾರಥಿಯನ್ನೂ ಕುದುರೆಗಳನ್ನೂ ರಥವನ್ನೂ ಪತಾಕೆಗಳನ್ನೂ ಬಾಣಗಳಿಂದ ಮುಚ್ಚಿದನು. ಹೀಗೆ ಅತಿ ನಿಬಿಡವಾದ ಶಿಶುಪಾಲನ ಬಾಣಜಾಲಗಳಿಂದ ಲೋಕಗಳಷ್ಟೂ ಭಯವನ್ನೈದುತ್ತಿರಲು ಈ ಪ್ರಕಾರದಿಂದ ಆತನ ಬಾಣಪರಂಪರೆಗಳಿಂದ ಆವೃತನಾದ ಕೃಷ್ಣಸ್ವಾಮಿಯನ್ನು ನೋಡಿ ಸಕಲ ಭೂತಗಳೂ ತಲ್ಲಣಿಸುತ ಹಾಹಾಕಾರವನ್ನು ಮಾಡಿದವು. ಆ ಸಮಯದಲ್ಲಿ ಸಾರಥಿಯಾದ ದಾರುಕನು ಕೃಷ್ಣಸ್ವಾಮಿಯನ್ನು ನೋಡಿ 'ಎಲೈ ಮಹಾತ್ಮನೆ, ಇಂಥಾ ದಾರುಣವಾದ ಯುದ್ಧವನ್ನು ಮೊದಲು ಯಾವಾಗಲೂ ನೋಡಲಿಲ್ಲಾ; ಲೋಕೇಶ್ವರನಾದ ನಿನ್ನ ಶೌರ್ಯ ಪ್ರಾಬಲ್ಯವನ್ನು ನಾನು ತಿಳಿದವನಾದ್ದರಿಂದ ಸುಮ್ಮನೇ ಇಧೇನೆ; ಇನ್ನುಮೇಲೆ ಕ್ಷಣಮಾತ್ರವಾದರೂ ಪ್ರಾಣಗಳು ನಿಲ್ಲಲಾರವು; ಈ ದುಷ್ಟಾತ್ಮಕನನ್ನು ಶೀಘ್ರವಾಗಿ ಸಂಹರಿಸು' ಅಂದನು. ಶ್ರೀಕೃಷ್ಣಸ್ವಾಮಿಯು ದಾರುಕನನ್ನು ನೋಡಿ ಇಂತೆಂದನು: 'ಮೊದಲು ಈತನು ವರದಾನಗರ್ವಿತನಾಗಿ ತ್ರೈಲೋಕ್ಯಕಂಟಕನಾಗಿ ಹಿರಣ್ಯಕಶಿಪು ನಾಮಧೇಯದಿಂದ ಪ್ರವರ್ತಿಸುತ್ತಿದ್ದನು; ಆ ಬಳಿಕ ಭುವನ ಭಯಂಕರನಾದ ರಾವಣನಾಗಿ ಹುಟ್ಟಿದನು; ಈ ಪ್ರಕಾರದಿಂದ ಹುಟ್ಟಿ ಬಲ ಶೌರ್ಯಧುರಂಧರನಾಗಿ ನನ್ನ ಪರಾಕ್ರಮವನ್ನು ಗಣನೇ ಮಾಡದೇ ಇದ್ದದ್ದರಿಂದ ಆಯಾ ಯುಗಗಳಲ್ಲಿ ನಾನೇ ಮೃತ್ಯುವಾಗಿ ಸಂಹರಿಸಿದೆನು; ಈಗ ನಾನಿರುವಾಗ ನಿನಗೆ ಭಯವ್ಯಾತಕ್ಕೆ? ಕ್ಷಣಮಾತ್ರವು ಸಹಿಸು' ಎಂದು ನುಡಿದು ಸಿಂಹನಾದವನ್ನು ಮಾಡುತ ದಿಕ್ಕುಗಳು 'ಬೊ!' ಅನ್ನಲು ಪಾಂಚಜನ್ಯವನ್ನು ಪೂರಿಸಿ, ಆ ಶಿಶುಪಾಲನನ್ನು ಮೂರ್ಛಿತನಾಗುವಹಾಗೆ ಮಾಡಿ, ಶತಕೋಟಿ ಸೂರ್ಯಪ್ರಭಾಭಾಸಮಾನವಾದ ಸಕಲದಾನವ ಭಯಂಕರವಾದ ಚಕ್ರವನ್ನು ಪ್ರಯೋಗಿಸಿದನು. ಆ ದಿವ್ಯಚಕ್ರವು ಪ್ರಳಯಕಾಲಾಗ್ನಿ ಜ್ವಾಲೆಯೋಪಾದಿಯಲ್ಲಿ ಕಿಡಿಗಳನ್ನು ನಾಲ್ಕುದಿಕ್ಕುಗಳಲ್ಲಿ ಕೆದರುತ ಅತಿವೇಗದಿಂದ ಆ ಶಿಶುಪಾಲನ ಶಿರಸ್ಸನ್ನು ಕತ್ತರಿಸಲು ಅವನು ವಜ್ರಪ್ರಹಾರದಿಂದ ಬಿದ್ದ ಕುಲಪರ್ವತದೋಪಾದಿಯಲ್ಲಿ ಭೂಮಿಯಲ್ಲಿ ಬಿದ್ದನು. ಆಗ ಅವನ ದೇಹದ್ದೆಸೆಯಿಂದ ಬಂದು ದಿವ್ಯತೇಜಸ್ಸು ಮೇಘಮಂಡಲದ್ದೆಸೆಯಿಂದ ಹೊರಟುಬರುವ ಸೂರ್ಯನೋಪಾದಿಯಲ್ಲಿ ತೋರುತ ಚತುರ್ದಶಭುವನಾಧೀಶ್ವರನಾಗಿ ಪುಂಡರೀಕಾಕ್ಷನಾಗಿ ಸಕಲ ದೇವ ಮುನಿಗಳಿಂದ ಸ್ತೂಯಮಾನನಾಗಿ ನಿತ್ಯನಾಗಿ ಅಜನಾಗಿರುವ ಆ ಕೃಷ್ಣಸ್ವಾಮಿಯ ದಿವ್ಯದೇಹದಲ್ಲಿ ಪ್ರವೇಶಿಸಿತು. ಸಕಲ ಜನರೂ ಆಶ್ಚರ್ಯಭರಿತರಾಗಿ ನೋಡುತ್ತಿರಲು ಆ ಸಮಯದಲ್ಲಿ ಮೇಘವಿಲ್ಲದೇಯಿದ್ದ ಆಕಾಶವು ವರ್ಷಿಸಿತು; ಭೂಚಕ್ರವು ಕಂಪಿಸಿತು; ಸಿಡಿಲುಗಳು ಬಿದ್ದವು. ಇದಷ್ಟನ್ನೂ ನೋಡಿ ಸಕಲರಾದ ಅರಸುಗಳೂ ಏನೂ ಅನ್ನಲಾರದೆ ಸುಮ್ಮನೇ ಇದ್ದರು. ಕೆಲವು ರಾಕ್ಷಸಾಂಶದಿಂದ ಹುಟ್ಟಿದ ಅರಸುಗಳು ಕಣ್ಣುಗಳನ್ನು ಕೆಂಪುಮಾಡಿಕೊಂಡು ಆ ಕೃಷ್ಣಸ್ವಾಮಿಯನ್ನ ಚುರಚುರನೆ ನೋಡುವಂಥಾವರು ಕೋಪದಿಂದ ಕೈಯನ್ನು ತೀಡುವಂಥಾವರು ಕೋಪದಿಂದ ಹಲ್ಲು ಮುಡಿಯನ್ನು ಕಚ್ಚುವಂಥಾವರೂ ಆಗಿದ್ದರು; ಮತ್ತೂ ಕೆಲವರು ಗಂಧರ್ವಾಂಶದಿಂದ ಹುಟ್ಟಿದಂಥಾವರು ಆ ಕೃಷ್ಣಸ್ವಾಮಿಯನ್ನು ಅಂತರಂಗದಲ್ಲಿ ಸ್ತುತಿಸುವಂಥಾವರಾಗಿದ್ದರು; ಮತ್ತೂ ಪ್ರಾಜಾಪತ್ಯ ಗಣಾಂಶಸಂಭವರಾದ ಅರಸುಗಳು ಮಧ್ಯಸ್ಥರಾಗಿ ಸುಮ್ಮನೇ ಇದ್ದರು; ಮತ್ತೂ ಬ್ರಹ್ಮರ್ಷಿಗಳು ದೇವರ್ಷಿಗಳು ಸಿದ್ಧರು ಸಾಧ್ಯರು ಗಂಧರ್ವರು ಉರಗರು ಚಾರಣರು ಬ್ರಾಹ್ಮಣ ಸಮೂಹಗಳೂ ಜಯಜಯಶಬ್ದಗಳಿಂದ ಸ್ತುತಿಸುತ ವಿವಿಧಗಾನಗಳಿಂದ ನರ್ತನಗಳನ್ನು ಮಾಡುತ ಆನಂದಭರಿತರಾಗಿ ದೈತ್ಯಾಂತಕನನ್ನು ಸುತ್ತಿಕೊಂಡಿದ್ದರು. ಆ ಬಳಿಕ ಧರ್ಮರಾ

ಯನು ತಮ್ಮಂದರನ್ನು ನೋಡಿ ಅತಿಪರಾಕ್ರಮಶಾಲಿಯಾದ ಶಿಶುಪಾಲನಿಗೆ ಸಂಸ್ಕಾರಾದಿ ಪರಲೋಕ ಕ್ರಿಯೆಗಳನ್ನು ಮಾಡಿಸುವಹಾಗೆ ಕಟ್ಟುಮಾಡಲು ಅವರು ಶಿಶುಪಾಲನ ಕುಮಾರಕನನ್ನು ಕರತರಿಸಿ ಅದೇಪ್ರಕಾರವಾಗಿ ಉತ್ತರಕ್ರಿಯೆಗಳನ್ನು ಮಾಡಿಸಿದರು. ಆ ಬಳಿಕ ಯುಧಿಷ್ಠಿರನು ಶಿಶುಪಾಲನ ಮಗನಿಗೆ ಮಂತ್ರಪುರಸ್ಸರವಾಗಿ ಚೇದಿರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿಸಿದನು" ಎಂದು ವೈಶಂಪಾಯನಮುನೀಶ್ವರನು ಜನಮೇಜಯರಾಯನಿಗೆ ಹೇಳಿದನು.

## ೪೯ನೇ ಅಧ್ಯಾಯ.—ಶಿಶುಪಾಲವಧಪರ್ವ ಸಮಾಪ್ತಿ.

ಅನಂತರದಲ್ಲಿ: ವೈಶಂಪಾಯನ ಮುನೀಂದ್ರನು ಜನಮೇಜಯರಾಯನನ್ನು ಕುರಿತು ಇಂತೆಂದನು:

"ಕೇಳು ಜನಮೇಜಯನೆ, ಆ ಬಳಿಕ ಈಪ್ರಕಾರದಿಂದ ವಾಸುದೇವನ ಪೂಜಾನಿಮಿತ್ತವಾಗಿ ನಡದ ವಿಘ್ನಗಳು ಉಪಶಾಂತಿಗಳಾಗಲು ಸಕಲ ಧರ್ಮಜ್ಞನಾದ ಧರ್ಮರಾಯನ ರಾಜಸೂಯಯಾಗವು ಮಹರ್ಷಿಜನ ಸಂಕುಲವಾಗಿ ಪ್ರವರ್ತಿಸುತ್ತಿತ್ತು. ಆ ಸಮಯದಲ್ಲಿ ವಾಚಾಲಕರಾದ ತಾರ್ಕಿಕರು ಒಬ್ಬರನ್ನೊಬ್ಬರು ಜಯಿಸಬೇಕೆಂದೆಣಿಸಿ ತರ್ಕವಾದಗಳನ್ನು ಮಾಡುತ್ತಿರಲು ಸುವರ್ಣಮಯಗಳಾದ ತೋರಣಗಳೂ ವಿಹಾರಯೋಗ್ಯಂಗಳಾದ ಶಯನಾಸನಗಳೂ ಸುವರ್ಣಮಯಗಳಾದ ಕೊಪ್ಪರಿಗೆ ಹಂಡೆ ಬಿಂದಿಗೆ ಚಂಬು ಮೊದಲಾದ ವಿಚಿತ್ರಪಾತ್ರೆಗಳೂ ಉಂಟಾಗಿ ಬಾಲಸೂರ್ಯಪ್ರಕಾಶಮಾನಗಳಾದ ರತ್ನಗ್ರಹಗಳಿಂದ ಒಪ್ಪುತಲಿರುವ ಆಕಾಶದೋಪಾದಿಯಲ್ಲಿ ಆ ಯಜ್ಞಶಾಲೆಯು ಪ್ರಕಾಶಿಸುತ್ತಿತ್ತು; ಮತ್ತು ಅಷ್ಟಭೋಗ ಇಷ್ಟಭೋಜನಗಳಿಂದ ಸಂತುಷ್ಟರಾಗಿ ಬಹುವಿಧಗಳಾದ ಇತಿಹಾಸಗಳನ್ನು ಒಬ್ಬರಿಗೊಬ್ಬರು ಹೇಳಿಕೊಳ್ಳುತ ನಟನರ್ತಕರನ್ನು ನೋಡುತ ಚತುರ್ವಿಧ ಭೋಜನ ಶಾಕಾದಿ ವಸ್ತು ವಿಶೇಷಗಳಲ್ಲಿರುವ ರುಚಿಗಳನ್ನು ಹೇಳಿಕೊಳ್ಳುತ ರಾಜಭಟರಿಂದ ಉಪಚರಿಸಲ್ಪಟ್ಟ ಬ್ರಾಹ್ಮಣರ ಸ್ತುತಿಶಬ್ದಗಳು ನಿಬಿಡಗಳಾಗಿ ಪ್ರವರ್ತಿಸುತ್ತಿದ್ದವು. ಕೋಟಿಬ್ರಾಹ್ಮಣ ಭೋಜನವಾದದ್ದಕ್ಕೆ ಸಂಕೇತವಾಗಿ ಒಂದು ಶಂಖವನ್ನು ಪೂರಿಸುವದು; ಅಂಥಾ ಶಂಖಗಳು ನಿರಂತರವೂ ಪೂರಿಸಲ್ಪಡುತಲಿದ್ದವು. ಹೀಗೆ ಕೃಷ್ಣ ಬಲದೇವರಿಂದ ಸಂರಕ್ಷಿತವಾಗಿ ಕ್ರತುಶ್ರೇಷ್ಠವಾದ ರಾಜಸೂಯಯಾಗವನ್ನು ನೋಡಿ ನಾನಾದೇಶಗಳ ದೆಸೆಯಿಂದ ಬಂದ ಅರಸುಗಳೂ ಜನಗಳೂ ಆಶ್ಚರ್ಯಪಟ್ಟರು. ಮತ್ತೂ ಆ ಯಜ್ಞಸಮಯದಲ್ಲಿ ಪರ್ವತೋಪಮಾನಗಳಾದ ಅನ್ನರಾಶಿಗಳೂ ತುಪ್ಪ ಮೊಸರು ಹಾಲುಗಳ ಪ್ರವಾಹಗಳೂ ಅತ್ಭುತಗಳಾಗಿ ಕಾಣಲ್ಪಟ್ಟವು. ಜಂಬೂದ್ವೀಪದ ನಾನಾದೇಶಗಳಲ್ಲಿರುವ ಸಮಸ್ತಜನಗಳೂ ಆ ಮಹಾಯಜ್ಞವನ್ನು ನೋಡಬೇಕೆಂಬ ಸಂತೋಷದಿಂದ ಬಂದು, ಒಂದೇಕಡೆಯಲ್ಲಿ ಶೇರಿ, ನಾನಾಪ್ರಕಾರವಾದ ಧನಕನಕವಸ್ತು ವಿಶೇಷಗಳನ್ನು ಧರ್ಮರಾಯನಿಗೆ ಕೊಟ್ಟರು; ಸಮಸ್ತರಾದ ಅರಸುಗಳೂ ದಿವ್ಯ ಭೂಷಣಮಾಲ್ಯಾಲಂಕೃತರಾಗಿ ಬಹುವಿಧಾನ್ನಗಳಿಂದಲೂ ಮಹಾರಾಜಯೋಗ್ಯಗಳಾದ ಭಕ್ಷ್ಯಭೋಜ್ಯ ಲೇಹ್ಯ ಚೋಷ್ಯಪಾನೀಯಗಳಿಂದಲೂ ಸ್ವಾದುಫಲಗಳಿಂದಲೂ ಶರ್ಕರೆಗಳಿಂದಲೂ ಜೇನುತುಪ್ಪಗಳಿಂದಲೂ ಬಹು ಸಂತೃಪ್ತಿಯುಳ್ಳ ಬ್ರಾಹ್ಮಣರಿಗೆ ಸಂತೋಷವನ್ನು ಮಾಡಿದರು. ಅನೇಕ ಧಾನ್ಯ ಗೋರತ್ನ ಕಾಂಚನ ಮೊದಲಾದ ವಸ್ತುವಿಶೇಷಗಳಿಂದ ಪರಿಪೂರ್ಣವಾಗಿರುವ ಆ ಯಜ್ಞಶಾಲೆಯನ್ನು ನೋಡಿ ಸಕಲ ಜನರೂ ಸಂತೋಷಭರಿತರಾಗಿದ್ದರು. ಆಗ ಕೃಷ್ಣದ್ವೈಪಾಯನ ಧೌಮ್ಯ ಸಮೇತರಾಗಿ ಸಕಲ ಶಾಸ್ತ್ರಜ್ಞರಾಗಿ ಯಾಗಕ್ರಿಯಾವಿಚಕ್ಷಣರಾದ ಋತ್ವಿಗ್ಜನಗಳು ತಮ್ಮ ತಮ್ಮ ಕೃತ್ಯಗಳನ್ನು ಶಾಸ್ತ್ರೋಕ್ತಪ್ರಕಾರವಾಗಿ ನೆರವೇರಿಸಿದರು. ಇಂಥಾ ರಾಜಸೂಯಾಧ್ವರಕ್ಕೆ ಸದಸ್ಯರೊಳಗೆ ಷಡಂಗರಹಿತನು ವೇದಶಾಸ್ತ್ರಗಳನ್ನು ಓದದೇ ಇರುವಂಥಾವನು ವಸ್ತ್ರಹೀನನು ವೇದಬಾಹ್ಯನು ಪಾಪಚಿತ್ತನು ಅಸಮರ್ಥನು ದೀನನು ಲೋಭಿಯು ಕ್ಷುದಿತನು ರೋಗಾರ್ತನು ಪ್ರಾಕೃತನಾದವನು—ಇಂಥಾವನು ಒಬ್ಬನಾದರೂ ಇರಲಿಲ್ಲ. ಅಂಥಾ ಸಮಯದಲ್ಲಿ ವೇದಶಾಸ್ತ್ರಸಂಪನ್ನರಾದ ವೇದಬ್ರಾಹ್ಮಣ ಮಹರ್ಷಿಗಳಿಂದ (ನಕ್ಷತ್ರಗಣಗಳಿಂದ ಪ್ರಕಾಶಿಸುತ್ತಿರುವ ಆಕಾಶದೋಪಾದಿಯಲ್ಲಿ) ಶೋಭನಾರ್ಥವಾದ ಕನಕ ರತ್ನಗಳಿಂದ ವಿಚಿತ್ರವಾಗಿ ಸಹಸ್ರಸೂರ್ಯ ಪ್ರಕಾಶಮಾನವಾದ ಆ ಯಜ್ಞಶಾಲೆಯು ದಿಗ್ಗಜಗಳ ದಂತಗಳೋಪಾದಿಯಲ್ಲಿ ತೋರುವ

ತೋರಣ ಸ್ತಂಭಗಳಿಂದಲೂ ದೇವ ದಾನವ ಯಕ್ಷೋರಗಗಣಗಳಿಂದಲೂ ವಿದ್ಯಾಧರ ಕಿನ್ನರ ಕಿಂಪುರುಷಾಪ್ಸರೋಗಣಗಳಿಂದಲೂ ಶೋಭಿತವಾಗಿತ್ತು. ಆ ಬಳಿಕ ಹೋಮಗಳನ್ನು ಮಾಡಿ ಮುಗಿಸಿದ ಸಮಯದಲ್ಲಿ ತುಂಬುರನಾರದ ವಿಶ್ವಾವಸು ಚಿತ್ರಸೇನ ಮೊದಲಾದವರು ಗಾನಗಳನ್ನು ಮಾಡಿದರು; ಅಪ್ಸರೋಜನಗಳು ನೃತ್ತಗೀತಗಳನ್ನು ಮಾಡಿದರು; ಸಕಲಶಾಸ್ತ್ರಜ್ಞರಾದ ಬ್ರಾಹ್ಮಣರು ಇತಿಹಾಸ ಪುರಾಣಾಖ್ಯಾನಗಳಿಂದ ಹೊತ್ತು ಕಳೆಯುತ್ತಿದ್ದರು; ಭೇರಿಮೃದಂಗ ಗೋಮುಖಾದಿ ವಾದ್ಯಧ್ವನಿಗಳಿಂದ ಆ ಯಾಗಶಾಲೆಯು ಒಪ್ಪಿತು. ಮತ್ತೂ ಭೀಷ್ಮದ್ರೋಣ ಮೊದಲಾದವರೂ ದುರ್ಯೋಧನನು ಮೊದಲಾದ ಕೌರವರೂ ವೃಷ್ಣಿವಂಶದ ಅರಸುಗಳೂ ಪಾಂಚಾಲದೇಶದ ಅರಸುಗಳೂ ಆ ಯಜ್ಞದಲ್ಲಿ ಭೃತ್ಯರೋಪಾದಿಯಲ್ಲಿ ಸಕಲ ಕೃತ್ಯಗಳನ್ನು ಮಾಡುತ್ತಿದ್ದರು; ಆಗ ಆ ಯಜ್ಞವು ಪೂರ್ವದಲ್ಲಿ ಚಂದ್ರನು ಮಾಡಿದ ಯಜ್ಞಕ್ಕೆ ಸಮಾನವಾಗಿತ್ತು; ಮತ್ತು ನಾನಾ ದೇಶಗಳ ದೆಸೆಯಿಂದ ಬಂದ ಅರಸುಗಳು ಕಾಣಿಕೆಗಳಾಗಿ ಕೊಟ್ಟ ವಸ್ತ್ರಗಳನ್ನೂ ರತ್ನ ಕಾಂಚನಗಳನ್ನೂ ಅಮೂಲ್ಯವಾದ ದಿವ್ಯಾಭರಣಗಳನ್ನೂ ಧರ್ಮರಾಯನು ಬ್ರಾಹ್ಮಣರಿಗೆ ಕೊಟ್ಟನು.”

---

## ೮೦ನೇ ಅಧ್ಯಾಯ.—ದ್ಯೂತಪರ್ವ.

“ಕೇಳು ಜನಮೇಜಯನೆ, ಈ ಪ್ರಕಾರದಿಂದ ಸಕಲ ಜನ ಮನೋಹರವಾಗಿ ವಿಘ್ನರಹಿತವಾಗಿ ಧನಧಾನ್ಯ ಸಮೇತವಾಗಿ ಮಹೋತ್ಸವವಾಗಿ ಚತುರ್ವಿಧ ಮೃಷ್ಟಾನ್ನ ಪರಿಪೂರ್ಣವಾದ ಯಜ್ಞವನ್ನು ಶಂಖಚಕ್ರಾದ್ಯಾಯುಧಧರನಾಗಿ ಜನಾರ್ದನನಾಗಿ ಷಡ್ಗುಣೈಶ್ವರ್ಯ ಸಂಪನ್ನನಾದ ಯದುವಲ್ಲಭನು ನಿರ್ವಿಘ್ನವಾಗಿ ಪರಿಪಾಲಿಸಿದನು. ಧರ್ಮರಾಯನು ಇಂಥಾ ದುಷ್ಕರವಾದ ಯಾಗವನ್ನು ನೆರವೇರಿಸಿ, ಸಹಸ್ರ ಕೋಟಿ ಸಂಖ್ಯೆಯುಳ್ಳ ಧನವನ್ನು ಋತ್ವಿಕ್ಕುಗಳಿಗೆ ಕೊಟ್ಟು, ಅವರಿಗೆ ಸಂತೋಷವನ್ನು ಮಾಡಿ, ಆ ಬಳಿಕ ಅವಭೃತಸ್ನಾನವನ್ನು ಮಾಡಿ, ವ್ಯಾಸ ಧೌಮ್ಯ ನಾರದ ಸುಮಂತು ಜೈಮಿನಿಗಳನ್ನೂ ಪೈಲ ವೈಶಂಪಾಯನ ಯಾಜ್ಞವಲ್ಕ್ಯ ಕಟಕಲಾಪಿ? ಮೊದಲಾದ ಮಹರ್ಷಿಗಳನ್ನೂ ಬ್ರಾಹ್ಮಣಶ್ರೇಷ್ಠರನ್ನೂ ಸತ್ಕರಿಸಿ ಪೂಜಿಸಿ, ಅವರನ್ನು ನೋಡಿ ‘ಎಲೈ ಮಹಾತ್ಮರುಗಳಿರಾ, ನಿಮ್ಮ ಕಟಾಕ್ಷದಿಂದಲೂ ಲೋಕೇಶ್ವರನಾದ ಕೃಷ್ಣನ ಪ್ರಭಾವದಿಂದಲೂ ಈ ರಾಜಸೂಯಾಧ್ವರವು ಒಂದು ವಿಘ್ನವೂ ಇಲ್ಲದೇ ನೆರವೇರಿದ್ದರಿಂದ ನನ್ನ ಮನೋರಥವು ನೆರವೇರಿತು’ ಎಂದು ನುಡಿದನು. ಯಜ್ಞವನ್ನು ಮುಗಿಸಿ ಕೃಷ್ಣ ಬಲದೇವರನ್ನೂ ಭೀಷ್ಮನು ಮೊದಲಾದ ಕೌರವವಂಶದ ಅರಸುಗಳನ್ನೂ ಉಚಿತ ಪ್ರಕಾರದಿಂದ ಪೂಜಿಸಿ ಕೃತಕೃತ್ಯನಾಗಿರುವ ಧರ್ಮರಾಯನ ಸಮೀಪಕ್ಕೆ ಸಕಲರಾದ ಅರಸುಗಳೂ ಬಂದು ‘ಎಲೈ ಧರ್ಮರಾಯನೆ, ದೇವತಾನುಗ್ರಹದಿಂದ ಈ ಯಾಗವು ನಿರ್ವಿಘ್ನವಾಗಿ ಮುಗಿಯಿತು; ನೀನು ಸಾಮ್ರಾಜ್ಯಾಭಿಷಿಕ್ತನಾದೆ; ಅಜಮೀಢವಂಶದಲ್ಲಿ ಹುಟ್ಟಿ ಕೀರ್ತಿಯನ್ನು ಸಂಪಾದಿಸಿದೆ; ಸಕಲವಾದ ಧರ್ಮಗಳೂ ನಿನ್ನ ಅಧೀನವಾದವು; ನಾವು ಸಕಲ ಸತ್ಕಾರಗಳಿಂದ ಸಂತೋಷಪಟ್ಟೆವು; ಇನ್ನು ಮೇಲೆ ನಮ್ಮ ದೇಶಗಳಿಗೆ ಹೋಗಬೇಕು; ಅನುಜ್ಞೆಯನ್ನು ಕೊಡಬೇಕು’ ಅಂದರು. ಧರ್ಮರಾಯನು ಆ ಅರಸುಗಳನ್ನು ಉಚಿತಪ್ರಕಾರದಿಂದ ಪೂಜಿಸಿ, ಭೀಮಾರ್ಜುನ ನಕುಲಸಹದೇವರನ್ನು ನೋಡಿ ‘ಈ ಅರಸರು ನಮ್ಮಲ್ಲಿ ಪ್ರೀತಿಯಿಂದ ಬಂದು ಅಧ್ವರವನ್ನು ನೆರವೇರಿಸಿ ತಮ್ಮ ತಮ್ಮ ಪಟ್ಟಣಗಳಿಗೆ ಹೋಗುವದರಿಂದ ನೀವು ನಮ್ಮ ರಾಜ್ಯದ ಎಲ್ಲೆಕಟ್ಟು ಪರ್ಯಂತವೂ ಹೋಗಿ ಬಿಟ್ಟು ಬನ್ನಿ’ ಎಂದು ಕಟ್ಟುಮಾಡಿದನು. ಆಗ ಅರ್ಜುನನು ಅಮಾತ್ಯ ಬಂಧುಜನ ಸಮೇತನಾದ ಜಯತ್ಸೇನನ ಸಂಗಡ ಹೋದನು; ಭೀಮಸೇನನು ಭೀಷ್ಮ ಧೃತರಾಷ್ಟ್ರ ವಿದುರ ಸಂಜಯರ ಸಂಗಡ ಹೋದನು; ಸಹದೇವನು ದ್ರೋಣಾಶ್ವತ್ಥಾಮ ಕೃಪಾಚಾರ್ಯರನ್ನು ಅನುಸರಿಸಿ ನಡೆದನು; ನಕುಲನು ಭೃತ್ಯಾಮಾತ್ಯ ಸಹಿತನಾಗಿದ್ದ ಸುಬಲನ ಸಂಗಡ ಹೋದನು. ಪುತ್ರಸಮೇತನಾದ ಶಲ್ಯನಸಂಗಡ ಸಾತ್ಯಕಿಯು ೯ ಭಗದತ್ತ, ಬೃಹದ್ಬಲ, ವಿರಾಟ, ದ್ರುಪದ, ಧೃಷ್ಟದ್ಯುಮ್ನ, ಕುಂತೀಸಹೋದರರು, ಭೀಷ್ಮಕನು ಮತ್ತೂ ಇರುವ ದಕ್ಷಿಣದೇಶಾಧಿಪತಿಗಳ ಸಂಗಡ ಘಟೋತ್ಕಚನೂ ಪಾರ್ವತೀ ಮಹೀಪತಿಗಳ ಸಂಗಡ ಅಭಿಮನ್ಯು ಸಹಿತವಾದ ದ್ರೌಪದಿಯ ಮಕ್ಕಳೂ ಮತ್ತೂ ಇರುವ ಸಕಲವಾದ ಅರಸುಗಳ ಸಂಗಡ ಕೌರ

ವರೂ ಹೋದರು. ಈಪ್ರಕಾರದಿಂದ ಸಕಲ ಅರಸುಗಳನ್ನೂ ಬ್ರಾಹ್ಮಣೋತ್ತಮರನ್ನೂ ದೇವರ್ಷಿಗಳನ್ನೂ ತಮ್ಮತಮ್ಮ ಸ್ಥಾನಗಳಿಗೆ ಕಳುಹಿಸಿ ಧರ್ಮರಾಯನು ಮಂತ್ರಿಸಹಿತನಾಗಿ ಮಹೇಂದ್ರನೋಪಾದಿಯಲ್ಲಿ ಪ್ರಕಾಶಿಸುತ ಕೃತಕೃತ್ಯನಾಗಿದ್ದನು. ಆ ಬಳಿಕ ಬಲಪರಾಕ್ರಮಶಾಲಿಯಾದ ಕೃಷ್ಣನು ಧರ್ಮರಾಯನನ್ನು ನೋಡಿ 'ನಿನ್ನ ಭಾಗ್ಯದಿಂದ ರಾಜಸೂಯ ಯಾಗವು ನಿರ್ವಿಘ್ನವಾಗಿ ಮುಗಿಯಿತು ; ಇನ್ನುಮೇಲೆ ದ್ವಾರಕಾ ಪಟ್ಟಣಕ್ಕೆ ಹೋಗಿ ಬರುತಲಿದೇನೆ' ಅಂದನು. ಧರ್ಮರಾಯನು ಕೃಷ್ಣನನ್ನು ನೋಡಿ 'ಎಲೈ ಕೃಷ್ಣನೆ, ಸಕಲರಾದ ಅರಸುಗಳನ್ನು ಜಯಿಸಿ, ಅಷ್ಟುಮಂದಿಯೂ ಕಪ್ಪಗಳನ್ನು ಕೊಟ್ಟು ನನ್ನ ವಶವಲ್ಲಿರುವಹಾಗೆ ಕಟ್ಟುಮಾಡಿದ್ದರಿಂದ ನಿನ್ನ ಅನುಗ್ರಹದಿಂದ ಈ ಮಹಾಯಾಗವನ್ನು ಮಾಡುವದಕ್ಕೆ ಯೋಗ್ಯನಾದೆನು ; ಇಂಥಾ ನಿನ್ನನ್ನು ಒಂದು ಕ್ಷಣಮಾತ್ರವಾದರೂ ಬಿಟ್ಟು ಸಹಿಸಲಾರೆನು ; ಆದರೂ ನೀನು ವಸುದೇವ ಸಂದರ್ಶನಾರ್ಥವಾಗಿ ಹೋಗತಕ್ಕಂಥಾದ್ದು' ಅಂದನು. ಈಪ್ರಕಾರವಾಗಿ ಧರ್ಮರಾಯನ ಕೈಯಿಂದ ಕಳುಹಿಸಿಕೊಂಡು ಕೃಷ್ಣನು ಕುಂತೀದೇವಿಯ ಮನೆಗೆ ಹೋಗಿ ಆ ದೇವಿಯನ್ನು ನೋಡಿ 'ಧರ್ಮಗುಣಗರಿಷ್ಟನಾದ ಯುಧಿಷ್ಠಿರನು ಸಾಮ್ರಾಜ್ಯವನ್ನು ಪಡೆದನು ; ಸಕಲರಾದ ಅರಸುಗಳೂ ತಾವು ಕಟ್ಟುಮಾಡಿಸಿದ ಕಾರ್ಯವನ್ನು ಮಾಡಲು ಸಂತೋಷಪಟ್ಟು ನಿನ್ನ ಕುಮಾರಕರು ಸಂತೋಷಪಡುತಲಿದ್ಧಾರೆ ; ನಾನು ದ್ವಾರಕಾ ಪಟ್ಟಣಕ್ಕೆ ಹೋಗಿ ಬರುತಲಿದೇನೆ' ಎಂದು ನುಡಿದು, ದ್ರೌಪದೀ ಸುಭದ್ರೆಯರ ದೆಸೆಯಿಂದಲೂ ಕಳುಹಿಸಿಕೊಂಡು, ಅಂತಃಪುರದ್ದೆಸೆಯಿಂದ ಹೊರಟು, ಧರ್ಮರಾಯನು ಸಂಗಡಬರಲು ಸ್ನಾನಾದಿಕೃತ್ಯಗಳನ್ನು ಮಾಡಿ, ಬ್ರಾಹ್ಮಣರು ಸ್ವಸ್ತಿವಾಚನವನ್ನು ಮಾಡಲು ಅವರಷ್ಟುಮಂದಿಗೂ ಪೂಜೆಯನ್ನು ಮಾಡಿ, ಮಹಾಮೇಘದೋಪಾದಿಯಲ್ಲಿ ಪ್ರಕಾಶಮಾನವಾಗಿ ಗರುಡಧ್ವಜ ಶೋಭಿತವಾಗಿ ಸಮಸ್ತ ಶಸ್ತ್ರಾಸ್ತ್ರಸನ್ನದ್ಧವಾಗಿರುವ ರಥವನ್ನು ದಾರುಕನು ಸಮೀಪಕ್ಕೆ ತರಲು ಆ ರಥಕೆ ಪ್ರದಕ್ಷಿಣವಾಗಿ ಬಂದು ಯುಧಿಷ್ಠಿರ ಅರ್ಜುನರ ಹಸ್ತಲಾಘವದಿಂದ ರಥವನ್ನೇರಿ ಸಾತ್ಯಕಿ ಕೃತವರ್ಮರೀರ್ವರೂ ಉಭಯ ಪಾರ್ಶ್ವಗಳಲ್ಲಿ ಚಾಮರಗಳನ್ನು ಬೀಸಲು ದ್ವಾರಕಾ ಪಟ್ಟಣಕ್ಕೆ ಅಭಿಮುಖವಾಗಿ ನಡೆದನು. ಆ ಸಮಯದಲ್ಲಿ ಬಲರಾಮನು ಮೊದಲಾದ ಯಾದವರು ಧರ್ಮರಾಯನಿಂದ ಸತ್ಕೃತರಾಗಿ ವಾಸುದೇವನ ಸಂಗಡಲೇ ಹೋದರು. ಧರ್ಮರಾಯನು ಸುವರ್ಣಮಯವಾದ ವಾಹನವನ್ನೇರದೆ ಸಹೋದರ ಸಮೇತನಾಗಿ ಪಾದಚಾರಿಯಾಗಿ ಕೃಷ್ಣನ ರಥದ ಸಂಗಡಲೇ ಹೋಗಲು ಆತನನ್ನು ನೋಡಿ ಮುಹೂರ್ತ ಮಾತ್ರವು ರಥವನ್ನು ನಿಲ್ಲಿಸಿ ಲೀಲಾಮಾನುಷರೂಪವನ್ನು ಧರಿಸಿ ಯದುವಂಶದಲ್ಲಿ ಹುಟ್ಟಿ ಜಗದ್ಗುರುವಾದ ಪುಂಡರೀಕಾಕ್ಷನು 'ಪಕ್ಷಿಜಾತಿಗಳು ವೃಕ್ಷವನ್ನೂ ಸಕಲ ಜೀವರಾಶಿಗಳು ಪರ್ಜನ್ಯನನ್ನೂ ದೇವತೆಗಳು ದೇವೇಂದ್ರನನ್ನೂ ಉಪಜೀವಿಸುವ ಹಾಗೆ ಸಮಸ್ತರಾದ ಬಂಧುಜನಗಳೂ ನಿನ್ನನ್ನು ಉಪಜೀವಿಸಲು ಪ್ರಜಾಪರಿಪಾಲನವನ್ನು ಮಾಡು' ಎಂದು ನುಡಿದು ಆತನನ್ನು ಪಟ್ಟಣಕ್ಕೆ ಕಳುಹಿಸಿ ಸಕಲ ಯಾದವರೂ ಸುತ್ತಿಕೊಂಡು ಬರುತ್ತಿರಲು ದ್ವಾರಕಾ ಪಟ್ಟಣಕ್ಕೆ ಹೋದನು. ಆ ಬಳಿಕ ಧರ್ಮರಾಯನು ತನ್ನ ಪಟ್ಟಣಕ್ಕೆ ಬಂದು ದುರ್ಯೋಧನ ದುಶ್ಶಾಸನ ಮೊದಲಾದ ತಮ್ಮಂದರು ವೈರಿಭಯಂಕರನಾದ ಕರ್ಣನು ಗಾಂಧಾರ ದೇಶಾಧಿಪತಿಯಾದ ಶಕುನಿಯು ಇವರು ಮೊದಲಾಗವರನ್ನು ಸಂತೋಷಪಡಿಸಲೂ, ಆತನ ದಿವ್ಯ ಸಭಾಭವನದಲ್ಲಿ ಪಾಂಡವರೊಡನೆ ಕೂಡಿ ದುರ್ಯೋಧನಾದಿಗಳು ಕೆಲವು ದಿವಸಗಳು ಸುಖವಾಗಿದ್ದರು."

## ೪೧ ನೇ ಅಧ್ಯಾಯ.—ದ್ಯೂತ ಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಸಕಲರಾದ ಅರಸುಗಳನ್ನು ಕಳುಹಿಸಿ ಸಹೋದರ ಮಿತ್ರಾಮಾತ್ಯ ಸಹಿತನಾದ ಧರ್ಮರಾಯನು ಸಭಾಮಧ್ಯದಲ್ಲಿ ಒಡ್ಡೋಲಗದಲ್ಲಿರುವ ಸಮಯದಲ್ಲಿ ಮುನಿಗಣ ಸಮೇತನಾದ ವ್ಯಾಸಮಹಾಮುನೀಶ್ವರನು ಬಂದನು ; ಧರ್ಮರಾಯನು ತಮ್ಮಂದರೊಡನೆ ಕೂಡಿ ಆತನಿಗೆ ಪ್ರತ್ಯುತ್ಥಾನವನ್ನೂ ಅರ್ಘ್ಯಪಾದ್ಯಾದಿ ಪೂಜಾವಿಧಾನವನ್ನೂ ಮಾಡಿ ಸುಖಾಸನದಲ್ಲಿ ಕುಳ್ಳಿರಿಸಿ ಆತನ ಅಪ್ಪಣೆಯಿಂದ ತಾನೂ ಸಿಂಹಾಸನದಲ್ಲಿ ಕುಳಿತನು. ಆ ಬಳಿಕ ವಾಕ್ಯವಿಶಾರದನಾಗಿ ತಪೋಧನ ಶ್ರೇಷ್ಠನಾದ ವ್ಯಾಸಮುನೀಶ್ವರನು ತಮ್ಮಂದರೊಡನೆ ಕೂಡಿರುವ ಧರ್ಮರಾಯನನ್ನು ನೋಡಿ 'ಎಲೈ ಧರ್ಮರಾಯನೆ, ಇತರ ಜನ ದುರ್ಲಭವಾದ ಸಾಮ್ರಾಜ್ಯವನ್ನು

ದಿವಸನಾದ್ದರಿಂದ ಕೌರವರ ವಂಶವನ್ನು ಪರಿಪಾಲಿಸುತ ಸುಖವಾಗಿರು; ನಾನು ಹೋಗಿ ಬರುತಲಿದೇನೆ’ ಎಂದು ನುಡಿದನು. ಆಗ ಧರ್ಮರಾಯನು ವ್ಯಾಸಮುನೀಂದ್ರನನ್ನು ನೋಡಿ ‘ಎಲೈ ಮಹಾತ್ಮನೆ, ಭೂಮ್ಯಂತರಿಕ್ಷಗಳಲ್ಲಿಯೂ ಸ್ವರ್ಗದಲ್ಲಿಯೂ ಮಹೋತ್ಪಾತಗಳು ತೋರಿದವು; ಅದರಿಂದ ಮಹಾಭಯವಾಗುವದು ಎಂದು ನಾರದನು ಮೊದಲೇ ಹೇಳಿದನು; ಆ ಭಯವು ಶಿಶುಪಾಲನ ಸಂಹಾರದಿಂದಲೆ ತೀರಿತೊ ಇಲ್ಲದೇ ಇನ್ನೇನಾದರೂ ಉಂಟೊ ಎಂದು ನನ್ನ ಮನಸ್ಸಿನಲ್ಲಿ ಸಂಶಯವಾಗಿಧೆ; ಇದನ್ನು ನೀವು ಹೊರತಾಗಿ ಮತ್ತೊಬ್ಬರು ಹೇಳುವಂಥಾವರಿಲ್ಲಾ’ ಎಂದು ಕೇಳಿದನು. ವ್ಯಾಸಮುನೀಶ್ವರನು ಧರ್ಮರಾಯನ ವಾಕ್ಯವನ್ನು ಕೇಳಿ ‘ಎಲೈ ಧರ್ಮರಾಯನೆ, ಈ ಮಹೋತ್ಪಾತಗಳ ದೆಸೆಯಿಂದ ಹದಿನಾಲ್ಕು ವರ್ಷಗಳೊಳಗೆ ದುರ್ಯೋಧನನ ದುರ್ನಯದಿಂದಲೂ ಭೀಮಾರ್ಜುನರ ಬಾಹುಬಲದಿಂದಲೂ ನಿನ್ನ ನಿಮಿತ್ತವಾಗಿ ಸಕಲ ಕ್ಷತ್ರಿಯ ಸಂಹಾರವಾಗತಕ್ಕಂಥಾದ್ದು; ಇಂಥಾ ಜನ ಕ್ಷಯಕಾಲವು ಬರುವಾಗ ಒಂದು ದಿವಸದಲ್ಲಿ ಉಷಃಕಾಲದಲ್ಲಿ ನೀಲಕಂಠನಾಗಿ ವೃಷಭಧ್ವಜನಾಗಿ ಭವನಾಗಿ ಸ್ಥಾಣುವಾಗಿ ತ್ರಿಪುರ ಸಂಹಾರಕನಾಗಿ ರುದ್ರನಾಗಿ ಪಶುಪತಿಯಾಗಿ ಮಹಾದೇವನಾಗಿ ಪಾರ್ವತೀವಲ್ಲಭನಾಗಿ ಶಿವನಾಗಿ ಶೂಲಪಾಣಿಯಾಗಿ ಅಜಗವ ಧನುರ್ಧರನಾದ ಶಂಕರನು ಕೈಲಾಸಶಿಖರಕ್ಕೆ ಸಮಾನವಾದ ವೃಷಭವನ್ನೇರಿ ದಕ್ಷಿಣಾಭಿಮುಖನಾಗಿರುವ ನಿನಗೆ ಸ್ವಪ್ನದಲ್ಲಿ ಕಾಣುತಲಿಧಾನೆ; ಕಾಲವು ಎಂಥಾವರಿಗೂ ದಾಟುವದಕ್ಕೆ ಅಶಕ್ಯವಾದ್ದರಿಂದ ಅದಕ್ಕೆ ನೀನು ಕ್ಲೇಶಪಡಬ್ಯಾಡ; ಅಪ್ರಮತ್ತನಾಗಿ ಜಿತೇಂದ್ರಿಯನಾಗಿ ರಾಜ್ಯವನ್ನು ಪರಿಪಾಲಿಸು; ನಿನಗೆ ಸಕಲ ಶುಭಗಳೂ ಆಗುತಲಿವೆ; ನಾನು ಕೈಲಾಸಪರ್ವತಕ್ಕೆ ಹೋಗುತಲಿಧೇನೆ’ ಎಂದು ನುಡಿದು, ವ್ಯಾಸಮುನೀಶ್ವರನು ಶಿಷ್ಯಗಣ ಸಮೇತನಾಗಿ ಯಥೇಚ್ಛವಾಗಿ ನಡದನು.”

## ೪೭ನೇ ಅಧ್ಯಾಯ.—ದ್ಯೂತಪರ್ವಶೇಷ.

“ಕೇಳು ಜನಮೇಜಯನೆ, ಆ ಬಳಿಕ ದುರ್ಯೋಧನನು ಹಸ್ತಿನಾಪಟ್ಟಣದಲ್ಲಿ ಮೊದಲು ಯಾವಾಗಲೂ ನೋಡಿಲ್ಲದಂಥಾ ಧರ್ಮರಾಯನ ಸಭಾಭವನದಲ್ಲಿರುವ ಮಹಿಮೆಯನ್ನು ಶಕುನಿ ಸಮೇತನಾಗಿ ನೋಡುತ್ತಿರುವ ಸಮಯದಲ್ಲಿ ಒಂದು ಪ್ರದೇಶದಲ್ಲಿ ಸ್ಫಟಿಕಮಯವಾದ ಬಾಗಲಿರುವದನ್ನು ತಿಳಿಯದೆ ಪ್ರವೇಶಿಸಿ ಹಣೆಯನ್ನು ತಾಕಿಸಿಕೊಂಡು ಭ್ರಮಿಸಿನಿಂತನು. ಮತ್ತೊಂದು ಸ್ಥಳದಲ್ಲಿ ಬಾಗಲಿಲ್ಲದಿದ್ದರೂ ಬಾಗಲನ್ನು ತೆಗೆಯುವದಕ್ಕಾಗಿ ಕೈಗಳನ್ನು ಚಾಚಲು ಕೆಳಗೆ ಬಿದ್ದನು; ಆಚೆಗೆ ಹೋಗುತ ಸ್ಫಟಿಕಮಯವಾದ ಒಂದು ಪ್ರದೇಶವನ್ನು ನೀರಿರುವಸ್ಥಳವೆಂದು ನಂಬಿ ವಸ್ತ್ರವನ್ನು ಮೇಲಕ್ಕೆ ಎತ್ತಿಕೊಂಡು ಇಳಿಯುವದಕ್ಕೆ ಹೋದನು; ಆ ಬಳಿಕ ನಾಚಿಕೆಪಟ್ಟು ಮುಂದೆ ಶುಭ್ರವಾದ ಜಲಗಳುಳ್ಳ ಸ್ಥಳವನ್ನು ನೋಡಿ ಸ್ಫಟಿಕೋಪಲಪ್ರದೇಶವೆಂಬ ಭ್ರಾಂತಿಯಿಂದ ಉದಕದಲ್ಲಿ ಬಿದ್ದನು; ಅದನ್ನು ನೋಡಿ ಕಿಂಕರರೂ ಭೀಮಾರ್ಜುನ ನಕುಲ ಸಹದೇವರೂ ದ್ರೌಪದಿಯೂ ಪರಿಹಾಸವನ್ನು ಮಾಡಿದರು. ಧರ್ಮರಾಯನು ಪರಿಜನಗಳಿಂದ ಬೇರೆ ವಸ್ತ್ರಗಳನ್ನು ತರಿಸಿಕೊಟ್ಟನು; ಅವುಗಳನ್ನು ಧರಿಸಿಕೊಂಡು ಅಲ್ಲಿ ಧರ್ಮಾಧರ್ಮಗಳೂ ಲೌಕಿಕ ವ್ಯವಹಾರಗಳು ನಡಿಯುವದು, ಗಜಾಶ್ವಖರೋಷ್ಟ್ರಾದ್ಯುಧಗಳನ್ನು ವಿಕ್ರಯಿಸುವಂಥಾ ವರ್ತಕರು ಇಂದ್ರಪ್ರಸ್ಥಪಟ್ಟಣಕ್ಕೆ ಬಂದು ಕ್ರಯವಿಕ್ರಯಾದಿ ವ್ಯವಹಾರಗಳನ್ನು ನಡಸುವದು, ರಥ ಗಜ ತುರಗಾದಿ ಯಾನಾರೋಹಣಗಳು ಪ್ರವರ್ತಿಸುತ್ತಿರುವದು, ಧರ್ಮರಾಯನಿಗೆ ಕೌರವನೆಂಬ ಹೆಸರು ಪ್ರಸಿದ್ಧವಾಗಿರುವದು, ಇನ್ನೂ ಅನೇಕವಾದ ವೈಭವಗಳನ್ನು ನೋಡಿ ದುರ್ಯೋಧನನು ಪಾಂಡವರು ತನ್ನನ್ನು ಮಾಡಿದ ಹಾಸ್ಯಕ್ಕೆ ಮನಸ್ಸಿನಲ್ಲಿ ಅಧಿಕವಾಗಿ ನಾಚಿಕೆಪಟ್ಟು ತನ್ನ ವೈವರ್ಣ್ಯವನ್ನು ಮತ್ತೊಬ್ಬರು ಅರಿಯದಿರುವ ರೀತಿಗೆ ಗಾಂಭೀರ್ಯವನ್ನು ವಹಿಸಿ, ತನ್ನನ್ನು ಹಾಸ್ಯಮಾಡುವಂಥಾವರನ್ನು ಕಾಣಿಸಿಕೊಳ್ಳದೆ, ಬಹುಪ್ರಕಾರವಾಗಿ ಮನಸ್ಸಿನಲ್ಲಿ ಕ್ಲೇಶಪಡುತ ಕೆಲವು ದಿವಸಗಳಿದ್ದು ಪಾಂಡವರ ಅಪ್ಪಣೆಯನ್ನು ತಕೊಂಡು ಹಸ್ತಿನಾಪಟ್ಟಣಕ್ಕೆ ಹೋಗಿ ಧರ್ಮರಾಯನ ಯಾಗದ ಮಹತ್ವವನ್ನೂ ಅವರ ಮಹಾ ವೈಭವವನ್ನೂ ಅರಸುಗಳು ಅವರಿಗೆ ವಶವರ್ತಿಗಳಾದದ್ದನ್ನೂ ದಿವ್ಯ ಸಭಾಭವನದಲ್ಲಿರುವ ವಿಚಿತ್ರಗಳನ್ನೂ ಬಾರಿಬಾರಿಗೂ ಮನಸ್ಸಿನಲ್ಲಿ ಸ್ಮರಿಸಿ ಕ್ಲೇಶಪಡುತ ಯಾರಕೂಡೆಯೂ ಮಾತನಾಡದೆ ಚಂಚಲಹೃದಯನಾಗಿದ್ದನು.

"ಕೇಳು ಜನಮೇಜಯನೆ, ಒಂದು ದಿವಸದಲ್ಲಿ ಸುಬಲನ ಮಗನಾದ ಶಕುನಿಯು ದುರ್ಯೋಧನನನ್ನು ನೋಡಿ 'ಏನಯ್ಯಾ ಕೌರವೇಶ್ವರನೆ, ಹೀಗೆ ನಿಟ್ಟುಸುರುಗಳನ್ನು ಬಿಡುತ ಸುಮ್ಮನೇಯಿದ್ದೀ ? ಇಂಥಾ ವಿಚಾರಕ್ಕೆ ಕಾರಣವೇನು ? ಎಂದು ಕೇಳಿದನು. ಆಗ ದುರ್ಯೋಧನನು ಶಕುನಿಯನ್ನು ನೋಡಿ 'ಸಕಲ ಭೂಮಂಡಲವೂ ಧರ್ಮರಾಯನ ಅಧೀನವಾದ್ದರಿಂದ ದೇವರ್ಷಿ ಯಕ್ಷ ಗಂಧರ್ವರು ಮೊದಲಾಗಿ ಸಕಲವಾದವರೂ ಆತನಲ್ಲಿಗೆ ಬರುತಲಿಧಾರೆ ; ದುಷ್ಟ ಸ್ವಭಾವನಾದ ಕೃಷ್ಣನು ಆ ಯುಧಿಷ್ಠಿರನ ಸಂಪತ್ತುಗಳನ್ನು ಅಭಿವೃದ್ಧಿಯನ್ನು ಮಾಡುವವರಿಂದ ದೇಶಗಳಲ್ಲಿರುವ ಅಭಿಜ್ಞರು ಕರೆಯಲ್ಪಟ್ಟಂಥಾವರಾಗಿ ಸಕಲರಾದ ಅರಸುಗಳನ್ನೂ ಜಯಿಸಿ ಕಪ್ಪಗಳನ್ನು ತರಿಸುತ ಅರ್ಜುನನ ಭುಜಬಲದಿಂದ ಇಂದ್ರನು ಮಾಡಿದ ಯಾಗಕ್ಕೆ ಸಮಾನವಾದ ರಾಜಸೂಯ ಯಾಗವನ್ನು ಮಾಡಿದ್ದರಿಂದ ಸಕಲ ಭೂಮಂಡಲವೂ ಅವರ ಅಧೀನವಾದ್ದನ್ನು ನೋಡಿ ಅಹೋರಾತ್ರಿಯಲ್ಲಿಯೂ ನನ್ನ ಹೃದಯವು ಗ್ರೀಷ್ಮಕಾಲದಲ್ಲಿ ಶೋಷಿಸಿ ಹೋಗುವ ಸ್ವಲ್ಪವಾದ ಮಡುವಿನೋಪಾದಿಯಲ್ಲಿ ಶೋಕದಿಂದ ಶೋಷಿಸುತಲಿದೆ ; ಅದಲ್ಲದೆ ಮಹಾರಥನಾದ ಶಿಶುಪಾಲನನ್ನು ಕೃಷ್ಣನು ನಿಷ್ಕಾರಣವಾಗಿ ಕೊಲ್ಲುವ ಸಮಯದಲ್ಲಿ ಸಮಸ್ತರಾದ ಅರಸುಗಳೂ ಧರ್ಮರಾಯನ ಪ್ರತಾಪಾಗ್ನಿಯಿಂದ ದಹಿಸಲ್ಪಟ್ಟಂಥಾವರಾಗಿ ಏನೂ ಅನ್ನಲಾರದೆ ಸುಮ್ಮನೇ ಇದ್ದರೇ ಹೊರತಾಗಿ ಒಬ್ಬನಾದರೂ ಶಿಶುಪಾಲನಿಗೆ ಸಹಾಯವಾಗದೇ ಹೋದನು : ಈಪ್ರಕಾರದಿಂದ ಯದುನಂದನನು ಮಾಡಿದ ಅನುಚಿತ ಕೃತ್ಯವನ್ನು ಯಾವನು ಸಹಿಸ್ಯಾನು ! ಭೂಮಿಯಲ್ಲಿರುವ ಅರಸುಗಳಷ್ಟುಮಂದಿಯೂ ಅವರ ಮಹಿಮೆಗೆ ಭಯಪಟ್ಟು ವೈಶ್ಯರೋಪಾದಿಯಲ್ಲಿ ರತ್ನಕಾಂಚನಗಳನ್ನು ಕಾಣಿಕೆಯಾಗಿ ಕೊಡುತ್ತಾರೆ ; ಹೀಗೆ ಸರ್ವಾತಿಶಯವಾದ ಪಾಂಡವರ ಐಶ್ವರ್ಯವನ್ನು ನೋಡಿದ್ದರಿಂದ ಹುಟ್ಟಿದ ರೋಷವು ನನ್ನ ಹೃದಯವನ್ನು ದಹಿಸುತಲಿದೆ ; ಇನ್ನು ನಾನು ವಿಷಭಕ್ಷಣವನ್ನಾದರೂ ಅಗ್ನಿ ಪ್ರವೇಶವನ್ನಾದರೂ ಜಲಪ್ರವೇಶವನ್ನಾದರೂ ಮಾಡಿ ಶರೀರವನ್ನು ಬಿಡಲುಳ್ಳವನು ! ಶತ್ರುವರ್ಗಗಳು ಅಧಿಕವಾದ ಸಂಪತ್ತುಗಳನ್ನು ಅನುಭವಿಸುತ್ತಿರಲು ಅದನ್ನು ಸಹಿಸುವಂಥಾವನು ಯಾರಾದರು ಉಂಟೇ ! ಅಂಥಾ ಐಶ್ವರ್ಯವನ್ನು ಅಪಹರಿಸುವದಕ್ಕೆ ಅಶಕ್ಯನಾಗಿ ಅಸಹಾಯನಾಗಿರುವದರಿಂದ ಸ್ತ್ರೀಯೂ ಅಲ್ಲದೆ ಪುರುಷನೂ ಅಲ್ಲದೆ ಇರುವ ವ್ಯರ್ಥ ಜೀವನವು ಯಾತಕ್ಕೆ ಎಂದು ಮರಣವನ್ನು ಇಚ್ಛೈಸುತಲಿಧೇನೆ ! ನ್ಯಾಯಾರ್ಜಿತವಾದ ಅವರ ವಿಭವವನ್ನು ನೋಡುವದ್ದರಿಂದ ನನ್ನ ಹೃದಯವು ತಪಿಸುತಲಿದೆ ; ಮೊದಲು ಪಾಂಡವರನ್ನು ಕೊಲ್ಲುವದಕ್ಕೆ ಅನೇಕ ಯತ್ನಗಳನ್ನು ಮಾಡಿದರೂ ಅವರಿಗೆ ಬಾಧಕವಿಲ್ಲದೆ ಜಲಮಧ್ಯದಲ್ಲಿರುವ ಕಮಲಗಳೋಪಾದಿಯಲ್ಲಿ ವೃದ್ಧಿಯನ್ನೈದಿದರು ; ಆದ್ದರಿಂದ ಪೌರುಷಕ್ಕಿಂತಲೂ ದೈವವೇ ಅಧಿಕವೆಂದು ಎಣಿಸುತಲಿಧೇನೆ ; ಧೃತರಾಷ್ಟ್ರನ ಮಕ್ಕಳು ಅಪ್ರಯೋಜಕರಾಗಿ ಪಾಂಡವರು ಅಭಿವೃದ್ಧಿಯನ್ನು ಪಡೆಯುವದು, ಅವರ ಪರಾಕ್ರಮವು, ಆ ಸಭಾಭವನವು, ಆ ಸಭಾಮಧ್ಯದಲ್ಲಿ ಅವರಿಂದ ನಾನು ಪರಿಹಾಸಮಾಡಲ್ಪಟ್ಟದ್ದು, ಇದಷ್ಟನ್ನೂ ಮನಸ್ಸಿನಲ್ಲಿ ಚಿಂತಿಸಿದರೆ ಶೋಕಾಗ್ನಿಯು ಪ್ರಜ್ವಲಿಸುತಲಿದೆ ; ಈ ವೃತ್ತಾಂತವಷ್ಟನ್ನೂ ಧೃತರಾಷ್ಟ್ರನಿಗೆ ತಿಳುಹಿಸು' ಎಂದು ದುರ್ಯೋಧನನು ಶಕುನಿಯನ್ನು ಕುರಿತು ಹೇಳಿದನು."

## ೮೩ ನೇ ಅಧ್ಯಾಯ.—ದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಶಕುನಿಯು ಸುಯೋಧನನನ್ನು ನೋಡಿ 'ಎಲೈ ಕೌರವೇಂದ್ರನೆ, ಪಾಂಡವರ ವಿಭವವನ್ನು ನೋಡಿ ನೀನು ಹೀಗೆ ಕ್ಲೇಶಪಡುವದು ಯಾತಕ್ಕೆ ? ಪಾಂಡವರು ಪೂರ್ವದಲ್ಲಿ ಸುಕೃತವನ್ನು ಮಾಡಿರುವದರಿಂದ ಆ ಫಲವನ್ನು ಈಗ ಅನುಭವಿಸುತಲಿಧಾರೆ ; ಅವರನ್ನು ಕೊಲ್ಲುವದಕ್ಕೆ ನೀನು ಮಾಡಿದ ಕಪಟೋಪಾಯಗಳಷ್ಟೂ ಫಲಿಸದೇ ಹೋದವು ; ಅವರ ಭಾಗ್ಯಾತಿಶಯಕ್ಕೆ ನೀನು ಕ್ಲೇಶಪಡಬ್ಯಾಡ ; ಪಾಂಡವರು ದ್ರೌಪದಿಯನ್ನು ವರಿಸಿದವರಾದ್ದರಿಂದ ಪುತ್ರಮಿತ್ರಾಮಾತ್ಯ ಸಮೇತನಾಗಿ ಪಾಂಚಾಲರಾಯನು ಅವರಿಗೆ ಸಹಾಯನಾಗಿಧಾನೆ ; ಮತ್ತೂ ಯದುವಂಶತಿಲಕನಾಗಿ ದೇವದಾನವರಿಗೂ ಅಜೇಯನಾಗಿ ಪುಂಡರೀಕಾಕ್ಷನಾದ ಕೃಷ್ಣನ ಸಹಾಯ

ದಿಂದ ಪರಾಕ್ರಮಶಾಲಿಗಳಾಗಿ ಪಿತೃಭಾಗವಾದ ರಾಜ್ಯವನ್ನು ಮೊದಲು ನೀವು ಕೊಟ್ಟದ್ದನ್ನೇ ತಕ್ಕೊಂಡು, ಪರಾಕ್ರಮದಿಂದ ಸಕಲವಾದ ಭೂಮಂಡಲವನ್ನೂ ಆಕ್ರಮಿಸಿದರು ; ಅರ್ಜುನನು ಯಜ್ಞೇಶ್ವರನನ್ನು ಆರಾಧಿಸಿ ಆತನ ಕೃಪಾತಿಶಯದಿಂದ ಕಾರ್ಮುಕ ಶ್ರೇಷ್ಠವಾದ ಗಾಂಡೀವವನ್ನೂ ಅಕ್ಷಯ ಬಾಣಗಳುಳ್ಳ ಬತ್ತಳಿಕೆಗಳನ್ನೂ ಪಡೆದು ಸಕಲರಾದ ಅರಸುಗಳನ್ನೂ ಜಯಿಸಿ ತನಗೆ ವಿಧೇಯರಾಗುವಹಾಗೆ ಮಾಡಿದನು ; ಆದರಿಂದ ನೀನು ಯಾತಕ್ಕೆ ದುಃಖಪಡಬೇಕು ? ದಾನವನಾದ ಮಯನನ್ನು ಅಗ್ನಿಬಾಧೆಯ ದೆಸೆಯಿಂದ ತೊಲಗಿಸಲು, ಆತನು ಅನೇಕ ಕಿಂಕರರಿಂದ ಧರಿಸಲ್ಪಟ್ಟ ಸಭಾಭವನವನ್ನು ನಿರ್ಮಿಸಿಕೊಟ್ಟನು ; ಅದಕ್ಕೆ ನೀನು ಯಾತಕ್ಕೆ ಕ್ಲೇಶಪಡಬೇಕು ? ಅದು ಹಾಗಿರಲಿ : ಈಗ ಸಹಾಯ ಹೀನನಾಗಿದ್ದಿಯೆಂದು ಹೇಳಿದೆಯಲ್ಲಾ—ಧನುರಾಚಾರ್ಯನಾದ ದ್ರೋಣನು, ಬಹುಬಲಸಂಪನ್ನನಾದ ಅಶ್ವತ್ಥಾಮನು, ಮಹಾರಥನಾದ ಕರ್ನನು, ಕುರುವಂಶ ಪ್ರದೀಪಕನಾದ ಭೀಷ್ಮನು, ಬಲಪರಾಕ್ರಮಸಂಪನ್ನನಾದ ದುಶ್ಯಾಸನನು ಮೊದಲಾದ ನಿನ್ನ ಸಹೋದರರು, ಅತಿರಥನಾದ ಕೃಪಾಚಾರ್ಯನು, ಬಾಹುಬಲಶಾಲಿಯಾದ ಜಯದ್ರಥನು, ಶಸ್ತ್ರಾಸ್ತ್ರಸಂಪನ್ನನಾದ ದೃಢಧನ್ವನು, ಸೋದರ ಸಹಿತನಾದ ನಾನು, ಬಾಹ್ಲೀಕ ಸೋಮದತ್ತರು, ಇನ್ನೂ ಮಿಕ್ಕಾದ ಮಹಾರಥಿಕರು ಇರುವಾಗ ನೀನು ಅಸಹಾಯನಾಗಿರುವದಾಗಿ ಹ್ಯಾಗೆ ನುಡಿದೆ ? ಕರ್ನನು ಒಬ್ಬನು ಕೋಪಿಸಿಕೊಂಡರೆ ಬಂಧು ಮಿತ್ರಸಮೇತರಾದ ಕುಂತೀದೇವಿಯ ಮಕ್ಕಳನ್ನು ನಿಮಿಷಮಾತ್ರದಲ್ಲಿ ಕೊಲ್ಲನೆ ! ನೀನು ಧರ್ಮರಾಯನು ಮೊದಲಾದವರನ್ನು ಜಯಿಸಿ, ಭೂಮಂಡಲವನ್ನು ಪಾಲಿಸಬೇಕೆಂದು ಯೋಚಿಸಿದರೆ ಈ ಮಹಾವೀರರಷ್ಟು ಮಂದಿಯನ್ನೂ ಕುಳ್ಳಿರಿಸಿ ಆ ಪಾಂಡವರನ್ನು ನಾನೊಬ್ಬನೇ ಜಯಿಸುತಲಿದ್ದೇನೆ ; ಆಗ ಭೂಮಂಡಲದಲ್ಲಿರುವ ಸಮಸ್ತರಾದ ಅರಸುಗಳೂ ನಿನಗೆ ವಶವರ್ತಿಗಳಾಗುತಲಿದ್ದಾರೆ ; ಆ ಸಭಾರತ್ನವೂ ನಿನ್ನವಶವಾಗುತಲಿದೆ ; ಇನ್ನೊಂದು ರಹಸ್ಯವನ್ನು ಹೇಳುತಲಿದ್ದೇನೆ ಕೇಳು : ಶಸ್ತ್ರಾಸ್ತ್ರಪ್ರವೀಣರಾಗಿ ಮಹಾಬಲ ಪರಾಕ್ರಮಶಾಲಿಗಳಾಗಿ ಸಮರಕರ್ಕಶರಾಗಿ ಮಹಾರಥಿಕರಾದ ಕೃಷ್ಣಪಾಂಡವ ಪಾಂಚಾಲ ಭೂಪತಿಗಳನ್ನು ಯುದ್ಧರಂಗದಲ್ಲಿ ಇಂದ್ರನಿಗಾದರೂ ಜಯಿಸುವದಕ್ಕೆ ಕೂಡದು ; ಹಾಗಾದರೂ ಯುಧಿಷ್ಠಿರನನ್ನು ಜಯಿಸುವದಕ್ಕೆ ಒಂದು ಉಪಾಯವನ್ನು ಬಲ್ಲೆನು ; ನಿನಗೆ ಪ್ರೀತಿಯಿದ್ದರೆ ಅದನ್ನು ವಿವರಿಸುತಲಿದ್ದೇನೆ ' ಅಂದನು.

" ಕೇಳು ಜನಮೇಜಯನೆ, ಆ ವಾಕ್ಯವನ್ನು ಕೇಳಿ ಸುಯೋಧನನು ಶಕುನಿಯನ್ನು ನೋಡಿ ' ಸಕಲ ರಾಜನ್ಯ ಪರಿವೃತರಾದ ಕೌಂತೇಯರನ್ನು ಯುದ್ಧವಿಲ್ಲದೆ ಜಯಿಸುವಂಥಾ ಉಪಾಯವನ್ನು ಹೇಳು ' ಎನಲು ಶಕುನಿಯು ಇಂತೆಂದನು : ' ಧರ್ಮರಾಯನಿಗೆ ಜೂಜಿನಲ್ಲಿ ಮಹಾಸಂತೋಷವುಂಟು ; ಆದರೂ ಜೂಜಿನಲ್ಲಿ ನಿಪುಣನಲ್ಲ ; ಯಾರು ಜೂಜಾಡುವದಕ್ಕೆ ಕರದರೂ ಬರುವನೇ ಹೊರತಾಗಿ ಬಾರದೇ ಇರನು ; ಜೂಜಿನಲ್ಲಿ ನನಗೆ ಸಮಾನನಾದವನು ಮೂರುಲೋಕದಲ್ಲಿಯೂ ಇಲ್ಲ ; ಅದ್ದರಿಂದ ನೀನು ಆತನನ್ನು ಜೂಜಿಗೆ ಕರದರೆ ಅಕ್ಷವಿದ್ಯಾ ಕೌಶಲದಿಂದ ಆತನ ರಾಜ್ಯವನ್ನೂ ಐಶ್ವರ್ಯವನ್ನೂ ಅಪಹರಿಸಿ ನಿನಗೆ ಕೊಡುತಲಿದ್ದೇನೆ ; ಇದಷ್ಟನ್ನೂ ಧೃತರಾಷ್ಟ್ರನಿಗೆ ಹೇಳಿ ಅಪ್ಪಣೆಯನ್ನು ತೆಗದುಕೊ ' ಅಂದನು. ದುರ್ಯೋಧನನು ಶಕುನಿಯನ್ನು ನೋಡಿ ' ಕುರು ಮುಖ್ಯನಾದ ಧೃತರಾಷ್ಟ್ರನಿಗೆ ಹೇಳುವದಕ್ಕೆ ನನಗೆ ಸಾಮರ್ಥ್ಯವು ಸಾಲದ್ದರಿಂದ ನೀನೇ ಆತನಿಗೆ ತಿಳಿಯುವಹಾಗೆ ವಿವರಿಸಬೇಕು ' ಎಂದು ಪ್ರಾರ್ಥಿಸಿದನು. "

## ೮೪ ನೇ ಅಧ್ಯಾಯ.—ದ್ಯೂತಪರ್ವ ಶೇಷ.

" ಕೇಳು ಜನಮೇಜಯನೆ, ಈಪ್ರಕಾರವಾಗಿ ದುರ್ಯೋಧನನು ಧರ್ಮರಾಯನ ರಾಜಸೂಯ ಯಾಗವನ್ನೂ ಆತನ ಐಶ್ವರ್ಯವನ್ನೂ ಸಹಿಸಲಾರದೆ ದುಃಖಪಡುತ್ತಿರಲು ಆತನ ವೈವರ್ಣ್ಯವನ್ನು ನೋಡಿ ಪಾಪಾತ್ಮಕನಾದ ಶಕುನಿಯು ದುರ್ಯೋಧನನಿಗೆ ಪ್ರಿಯವನ್ನು ಮಾಡಬೇಕೆಂದೆಣಿಸಿ, ಧೃತರಾಷ್ಟ್ರನ ಸಮೀಪಕ್ಕೆ ಹೋಗಿ, ಆತನನ್ನು ಕುರಿತು ಸಕಲ ಕ್ಷತ್ರವಿನಾಶಕಾರಣವಾಗಿ ಲೋಕವಿರುದ್ಧವಾದ ದುರ್ಯೋಧನನ ಮನಸ್ಸನ್ನು ಆಶ್ರೈಸಿ, ಇಂ

ತೆಂದನು : ‘ ಎಲೈ ಕೌರವೇಂದ್ರನೆ, ನಿನ್ನ ಜ್ಯೇಷ್ಠಪುತ್ರನಾದ ದುರ್ಯೋಧನನು ವಿವರ್ಣನಾಗಿ ಕೃಶಗಾತ್ರನಾಗಿ ಚಿಂತಾಕ್ರಾಂತನಾಗಿದ್ಧಾನೆ; ನೀನು ಆತನ ಕ್ಲೇಶವನ್ನು ಪರಾಂಬರಿಸದೆ ಇರುವದು ಉಚಿತವೆ? ’ ಅಂದನು. ಆ ವಾಕ್ಯವನ್ನು ಕೇಳಿ ಧೃತರಾಷ್ಟ್ರನು ದುರ್ಯೋಧನನನ್ನು ಕರತರಿಸಿ, ಅವನನ್ನು ಕುರಿತು ‘ ಎಲೈ ಕುಮಾರಕನೆ, ನೀನು ಕ್ಲೇಶಪಡುತ್ತಿದ್ಧಿಯೆಂದು ನಿನ್ನ ಸೋದರಮಾವನಾದ ಶಕುನಿಯು ಹೇಳಿದನು ; ಇದಕ್ಕೆ ನಿಮಿತ್ತವೇನು ? ಯಾವ ರೀತಿಯಿಂದ ವಿಚಾರಿಸಿದರೂ ನನ್ನ ಮನಸ್ಸಿಗೆ ತೋರಲಿಲ್ಲಾ ; ಇದಷ್ಟದನ್ನೂ ವಿಶದವಾಗಿ ಹೇಳು : ದುಶ್ಯಾಸನನು ಮೊದಲಾದ ನಿನ್ನ ತಮ್ಮಂದಿರು ನಿನ್ನನ್ನು ಆಶ್ರೈಸಿರಲೂ ಮಹಾವೈಭವವನ್ನು ಅನುಭವಿಸುತ ಸುಖದಿಂದ ಇದ್ದೀಯೆ ? ನೀನು ಕೊಟ್ಟ ಅನ್ನವನ್ನು ಊಟಮಾಡುತ ನಾನೂ ಗಾಂಧಾರಿಯೂ ಸುಖವಾಗಿಧ್ದೇವೆ ; ಮನೋಹರಗಳಾದ ವಸ್ತ್ರಗಳನ್ನು ಉಟ್ಟುಕೊಂಡು ಮಾಂಸಪ್ರಧಾನವಾದ ಭೋಜನವನ್ನುಮಾಡಿಕೊಂಡು ಉತ್ತಮಾಶ್ವಗಳನ್ನೂ ಮದ್ದಾನೆಗಳನ್ನೂ ಏರಿಕೊಳ್ಳುತ ರತ್ನ ಕಾಂಚನ ನಿರ್ಮಿತಗಳಾದ ಮನೆಗಳು ರಮ್ಯಗಳಾದ ವಿಹಾರಸ್ಥಾನಗಳು ಅನರ್ಘ್ಯವಾದ ಶಯನಾಸನಗಳು ಸೌಂದರ್ಯಶಾಲಿಗಳಾದ ಸ್ತ್ರೀಜನಗಳು ಉಂಟಾಗಿ ಸುಖದಿಂದ ಕ್ರೀಡಿಸುವಂಥಾ ನಿನಗೆ ಕ್ಲೇಶವು ಯಾತಕ್ಕೆ ಬರಬೇಕು ? ಸಕಲ ಜನರೂ ನಿನ್ನ ವಾಕ್ಯವನ್ನು ದೇವತಾ ವಾಕ್ಯವಾಗಿ ಎಣಿಸಿ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ನಡೆಯುವಾಗ ನೀನು ದೀನನೋಪಾದಿಯಲ್ಲಿ ಯಾಕೆ ಚಿಂತಿಸಬೇಕು ? ಲೋಕದಲ್ಲಿ ತಾಯಿತಂದೆಗಳು ಕುಮಾರಕರಲ್ಲಿ ಮಾಡತಕ್ಕಂಥಾ ಅರ್ಥವಷ್ಟನ್ನೂ ಮಾಡಿ ವಂಶಪಾರಂಪರ್ಯವಾಗಿ ಬಂದ ಷಡಂಗಗಳಿಂದೊಪ್ಪುತ್ತಲಿರುವ ವೇದಗಳನ್ನೂ ಅಷ್ಟವ್ಯಾಕರಣಗಳನ್ನೂ ಓದಿ ಮತ್ತೂ ಬಲರಾಮ ದ್ರೋಣಾಚಾರ್ಯರ ದೆಸೆಯಿಂದ ಅಸ್ತ್ರವಿದ್ಯಾ ಕೌಶಲ್ಯವನ್ನೂ ಕಲಿತು ಸರ್ವಜ್ಯೇಷ್ಠನಾಗಿ ಪಟ್ಟಾಭಿಷಿಕ್ತನಾದ ನಿನಗೆ ದುಃಖಕ್ಕೆ ಕಾರಣವೇನು ? ಇತರ ಜನ ದುರ್ಲಭಗಳಾದ ಸಕಲ ಭೋಗಗಳನ್ನೂ ಅನುಭವಿಸುತ ಸೂತಮಾಗಧರು ಬಹುಪ್ರಕಾರಗಳಾಗಿ ಸ್ತುತಿಸಲು ಸಂತೋಷಪಡುತಲಿರುವ ನಿನಗೆ ಇಂಥಾ ಕ್ಲೇಶಕ್ಕೆ ಕಾರಣವೇನು ? ಈ ಲೋಕದಲ್ಲಿ ನಿನಗಿಂತಲು ಅಧಿಕವಾದ ಪ್ರಭುತ್ವವು ಯಾರಿಗೆ ಇದೆ ? ಇದಷ್ಟನ್ನೂ ತಿಳುಹಿಸು ’ ಎಂದು ಕೇಳಿದನು.

“ ಅಸೂಯಾಗ್ರಸ್ತನಾದ ದುರ್ಯೋಧನನು ತಂದೆಯನ್ನು ಕುರಿತು ತನ್ನ ಅಭಿಪ್ರಾಯವು ವಿಶದವಾಗಿ ತಿಳಿಯುವ ರೀತಿಗೆ ಇಂತೆಂದನು : ಲೋಕದಲ್ಲಿ ಅಭಿಮಾನಶಾಲಿಯಾದ ಪುರುಷನು ಒಬ್ಬರಿಂದ ಅವಮಾನವು ತನಗೆ ಬಂದರೆ ಅದನ್ನು ತೀರಿಸಬೇಕೆಂದೆಣಿಸಿ ತನ್ನ ಅಭಿಪ್ರಾಯವನ್ನು ಗೋಪ್ಯಮಾಡಿಕೊಂಡಿದ್ದು ಸಮಯಬಂದಲ್ಲಿ ತನ್ನ ಮನಸ್ಸಿನಲ್ಲಿದ್ದಂಥಾ ದುಃಖವನ್ನು ತೀರಿಸಿಕೊಂಡು ಪುರುಷಶ್ರೇಷ್ಠನೆನ್ನಿಸಿಕೊಳ್ಳುವನು ; ಕಾಲವೈಪರೀತ್ಯದಿಂದ ಅತ್ಯುಗ್ರವಾದ ರೋಷವನ್ನು ಮುಚ್ಚಿಕೊಂಡು ಅಶನಾಚ್ಛಾದನಗಳನ್ನು ಉಪಯೋಗಿಸುತ ನನ್ನೋಪಾದಿಯಲ್ಲಿ ಕುತ್ಸಿತನು ಉಂಟೆ ? ದಯೆಯು ಸಂತೋಷವು ಅನುದ್ಯೋಗವು ಈ ಗುಣಗಳು ಯಾವ ಪುರುಷನಲ್ಲಿರುವವೊ ಆತನು ಐಶ್ವರ್ಯವನ್ನು ಪಡೆಯಲಾರನು ; ಅತಿಮಾನುಷವಾಗಿ ಜಗತ್ಪ್ರಸಿದ್ಧನಾಗಿರುವ ಯುಧಿಷ್ಠಿರನ ಐಶ್ವರ್ಯವು ಶೋಕವನ್ನುಂಟುಮಾಡಿಮನಸ್ಸನ್ನುದಹಿಸಲು ನಾನು ಏನೂ ತಿಳಿಯದೇ ಇಧ್ದೇನೆ ; ವಿರೋಧಿಗಳಾದ ಪಾಂಡವರು ಐಶ್ವರ್ಯವನ್ನುಪಡದಿರುವಾಗ ಅವರ ಮುಂದೆ ಅತಿದೀನನಾಗಿರುವ ನಾನು ಅಭಿವೃದ್ಧಿಯನ್ನೈದುವದಕ್ಕೆ ಕೂಡುವದಿಲ್ಲ; ಆದರಿಂದ ಇಂಥಾ ಶೋಕವು ಪ್ರಾಪ್ತವಾಯಿತು ; ಒಬ್ಬೊಬ್ಬನು ಮೂವತ್ತು ಮೂವತ್ತು ಮಂದಿ ಪರಿಜನವುಳ್ಳಂಥಾವನಾಗಿ ಸ್ನಾತಕವ್ರತಧಾರಿಗಳಾಗಿ ಗೃಹಸ್ಥರಾಗಿರುವ ಎಂಭತ್ತೆಂಟು ಸಾವರ ಬ್ರಾಹ್ಮಣರನ್ನು ಧರ್ಮರಾಯನು ಒಬ್ಬನೇ ಸಂರಕ್ಷಿಸುತಲಿಧ್ದಾನೆ ; ಹತ್ತು ಸಾವರ ಸಂಖ್ಯೆಯುಳ್ಳ ಜಿತೇಂದ್ರಿಯರಾದ ಯತೀಶ್ವರರು ಆತನ ಮನೆಯಲ್ಲಿ ಪ್ರತಿದಿವಸವೂ ಚಿನ್ನದ ಪಾತ್ರೆಗಳಲ್ಲಿ ಭೋಜನವನ್ನು ಮಾಡುತ್ತಿರುವರು ; ಇದಲ್ಲದೇ ಪಾಂಡವರ ಶೌರ್ಯಕ್ಕೆ ಭಯಪಟ್ಟು ಅನ್ನಪಾನಗಳನ್ನು ಬಿಟ್ಟು ಕಾಂಭೋಜದೇಶಾಧಿಪತಿಯು ಕೃಷ್ಣಶ್ಯಾಮಾರುಣವರ್ಣಗಳುಳ್ಳ ಕೃಷ್ಣಾಜಿನಗಳನ್ನೂ ರತ್ನಕಂಬಳಿಗಳನ್ನೂ ಹದಿನಾಲ್ಕು ಸಾವರ ರಥಾಶ್ವ ವೃಷಭಗಳನ್ನೂ ಹದಿನಾಲ್ಕು ಸಾವರ ಸ್ತ್ರೀಜನಗಳನ್ನೂಮೂರು ಲಕ್ಷ ಬಂಡೆಗಳ ಮೇಲೆಯೂ ಮೂರು ಲಕ್ಷ ಹೆಣ್ಣುಕುದುರೆಗಳ ಮೇಲೆಯೂ ಹೇರಿದ ಸಮಸ್ತ ವಸ್ತು ಸಂಭಾರಗಳನ್ನೂ ಯುಧಿಷ್ಠಿರನಿಗೆ ಕಳುಹಿಸಿದನು ; ಈಪ್ರಕಾರದಲ್ಲಿ ಭೂಮಂಡಲದಲ್ಲಿರುವ ಸಮಸ್ತರಾದ

ಅರಸುಗಳೂ ರತ್ನಕಾಂಚನಾದಿಗಳನ್ನು ಕಪ್ಪವಾಗಿ ಕೊಡುತಲಿದ್ದಾರೆ; ಇಂಥಾ ಧನಾಗಮವನ್ನು ಯಾವಾಗಲೂ ಕಂಡು ಕೇಳಿದ್ದಿಲ್ಲಾ; ನನ್ನ ವಾಕ್ಯವನ್ನು ಯಥಾರ್ಥವಾಗಿ ಎಣಿಸದೆ ಹೋದರೆ ಸಂಜಯನನ್ನು ಕೇಳಿ ತಿಳಿಕೊ; ಹೇರಳವಾದ ಧನಸಮೂಹವನ್ನೂ ಗೋಸಮೂಹವನ್ನೂ ನೋಡಿ ಅಹೋರಾತ್ರಿಗಳಲ್ಲಿಯೂ ಚಿಂತೆಪಡುತಲಿದೇನೆ; ತ್ರಿಸರ್ವದೇಶಾಧಿಪತಿಗಳು ಚಿನ್ನ ಬೆಳ್ಳಿಯ ಪಾತ್ರೆಗಳು ಮೊದಲಾದವುಗಳನ್ನು ತಂದು ಬಾಗಲವರಿಂದ ತಡೆಯಲ್ಪಟ್ಟು ಆತನ ಬಾಗಲನ್ನು ಕಾಯುತಿದ್ಧಾರೆ; ಅಪ್ಸರಸ್ತ್ರೀಯರು ದೇವೇಂದ್ರನಿಗಾದರೂ ಕೊಡದೇ ಇರುವ ಮಧ್ವರಸವನ್ನು ಕ್ಷೀರಸಮುದ್ರದಿಂದ ರತ್ನಖಚಿತವಾದ ಸಾವಿರ ಚಿನ್ನದ ಕಲಶಗಳಲ್ಲಿ ತಂದು ಧರ್ಮರಾಯನಿಗೆ ಒಪ್ಪಿಸಿದರು; ಅದನ್ನು ನೋಡಿದ್ದು ಮೊದಲು ನನ್ನ ಮನಸ್ಸು ತಪಿಸುತಲಿದೆ; ಮತ್ತೂ ಅನೇಕ ರಾಕ್ಷಸರು ಪಕ್ಷಿಕುಲವು ಸಂಚರಿಸುವದಕ್ಕೆ ಯೋಗ್ಯವಾಗಿರುವ ಉತ್ತರ ಸಮುದ್ರವು ಒಂದು ಬಿಟ್ಟು ಪೂರ್ವ ದಕ್ಷಿಣ ಪಶ್ಚಿಮ ಸಮುದ್ರಗಳಿಗೆ ಹೋಗಿ ಅವುಗಳ ಉದಕಗಳನ್ನೂ ದಶಭಾರ ಸುವರ್ಣ ನಿರ್ಮಿತಗಳಾದ ಕಲಶಗಳಲ್ಲಿ ತಂದರು; ಬಿಂದು ಸರೋವರದಲ್ಲಿರುವ ರತ್ನಗಳಿಂದ ಮಯನಿಂದ ನಿರ್ಮಿಸಲ್ಪಟ್ಟ ಸ್ಫಟಿಕ ಸರೋವರವನ್ನು ನೋಡಿ ಅದು ಉದಕದಿಂದ ತುಂಬಿದೆಯೆಂದೆಣಿಸಿ ನಾನು ವಸ್ತ್ರಗಳನ್ನು ಎತ್ತಿದ್ದನ್ನು ನೋಡಿ ಭೀಮನೂ ಆ ಸಭಾಪಾಲಕರಾದ ಕಿಂಕರರೂ ಪರಿಹಾಸವನ್ನು ಮಾಡಿದರು; ಆ ಭೀಮನನ್ನು ಸಂಹರಿಸುವದಕ್ಕೆ ಯತ್ನವಿಲ್ಲದೇ ಇರುವದರಿಂದ ನಿಮಗೆ ಭೇದವು ಬರಬಾರದೆಂದೆಣಿಸಿ ಪ್ರಾಣಸಹಿತವಾಗಿ ಇದ್ದೇನೆ; ಮತ್ತೊಂದು ಪ್ರದೇಶದಲ್ಲಿ ಸ್ಫಟಿಕದೋಪಾದಿಯಲ್ಲಿ ಶುಭ್ರವಾಗಿರುವಂಥಾ ಉದವುಳ್ಳ ಸ್ಫಟಿಕನಿರ್ಮಿತಗಳಾದ ಕಮಲಗಳುಳ್ಳ ತಟಾಕವನ್ನು ನೋಡಿ ಅದು ನಿಜವಾಗಿ ಸಭಾಪ್ರದೇಶವೆಂದು ಹೋಗಿ ಉದಕದಲ್ಲಿ ಬೀಳಲು ನನ್ನನ್ನು ನೋಡಿ ಭೀಮಾರ್ಜುನ ನಕುಲ ಸಹದೇವರೂ ಪಾಂಚಾಲಿ ಮೊದಲಾದ ಸ್ತ್ರೀಜನಗಳೂ ನಕ್ಕರು; ಆಮೇಲೆ ಧರ್ಮರಾಯನು ಊಳಿಗದವರಿಂದ ಕಳುಹಿಸಿದ ವಸ್ತ್ರಗಳನ್ನು ಧರಿಸಿದೆನು; ಬಹು ಸ್ತಂಭಗಳುಂಟಾಗಿದ್ದರೂ ತೋರದೆ ಇರುವ ಮತ್ತೊಂದು ಪ್ರದೇಶಕ್ಕೆ ಹೋಗಲು ನನ್ನ ಹಣೆಯು ಆ ಸ್ತಂಭಗಳನ್ನು ತಾಕಿ ಘಾಯವಾಯಿತು; ಬಾಗಲಿರುವಂಥಾ ಸ್ಥಾನವನ್ನು ತಿಳಿಯದೆ ಪ್ರವೇಶಿಸಲು ನನ್ನ ಹಣೆಯು ತಾಕಿ ಘಾಯವಾಯಿತು; ಈಪ್ರಕಾರದಿಂದ ತಿರುಗುತಲಿರುವ ನನ್ನನ್ನು ನೋಡಿ ಅಲ್ಲಿರುವ ಸ್ತ್ರೀಜನಗಳು ಹಾಸ್ಯವನ್ನು ಮಾಡಿದರು; ಭೀಮನು ನಗುತ ನನ್ನನ್ನು ಕುರಿತು '—ಇಲ್ಲಿ ಬಾಗಲಿಲ್ಲ; ಈ ಮಾರ್ಗದಿಂದ ಹೋಗು—' ಎಂದು ನುಡಿದನು; ಹೀಗೆ ಸಭೆಯಲ್ಲಿರುವಂಥಾವರಿಗೂ ಸ್ತ್ರೀಜನಗಳಿಗೂ ಹಾಸ್ಯಾಸ್ಪದವಾಯಿತು; ಈಪ್ರಕಾರದಿಂದ ವೈರಿಗಳು ನೋಡುತ್ತಿರಲು ಭಂಗವನ್ನೈದಿದ ನನ್ನ ಜೀವನವು ಯಾಕೆ? ನಾನು ಅಗ್ನಿಪ್ರವೇಶವನ್ನು ಮಾಡುತಲಿದ್ದೇನೆ; ಬಹುಮಾನಶಾಲಿಗೆ ಅಪಕೀರ್ತಿಗಿಂತಲು ಮರಣವು ಒಳ್ಳೇದೆಂದು ತೋರುತಲಿದೆ; ಇನ್ನೊಂದು ಅದ್ಭುತವನ್ನು ಹೇಳುತಲಿದೇನೆ ಕೇಳು: ಕೋಟಿ ಬ್ರಾಹ್ಮಣರು ಭೋಜನವನ್ನು ಮಾಡಿದರೆ ಒಂದುಸಾರಿ ಶಂಖವು ಪೂರಿಸಲ್ಪಡುವದು; ಅಂಥಾ ಶಂಖಗಳು ನಿರಂತರವೂ ಪೂರಿಸಲ್ಪಟ್ಟದ್ದರಿಂದ ನನಗೆ ರೋಮಾಂಚನವು ಹುಟ್ಟಿತು; ನಾನಾದೇಶಗಳ ದೆಸೆಯಿಂದ ಬಂದ ಅರಸುಗಳು ಧರ್ಮರಾಯನಿಗೆ ವರ್ತಕರೋಪಾದಿಯಲ್ಲಿ ಕಪ್ಪವಾಗಿ ಅನೇಕ ದಿವ್ಯರತ್ನಗಳನ್ನು ತಂದು ಆತನ ಅಪ್ಪಣೆಯಿಂದ ಬ್ರಾಹ್ಮಣರಿಗೆ ಕೊಡಿಸುತಲಿದ್ದರು; ಅವರಿಗಿರುವ ದಿವ್ಯರತ್ನಗಳು ಯಾವಾಗಲೂ ಕಂಡು ಕೇಳಿದ್ದಿಲ್ಲಾ; ಇಂದ್ರ ವರುಣ ಯಮ ಕುಬೇರ ವಿಷ್ಣು ರುದ್ರ ಮೊದಲಾದ ದೇವತೆಗಳಿಗಾದರೂ ರಾಕ್ಷಸೇಶ್ವರರಿಗಾದರೂ ಆ ಪಾಂಡವರಿಗಿರುವ ಐಶ್ವರ್ಯ ಸಮೃದ್ಧಿ ಇಲ್ಲನೆಂದು ತೋರುತಲಿದೆ; ಇಂಥಾ ಪಾಂಡವರ ಅಪರಿಮಿತ ಐಶ್ವರ್ಯವನ್ನು ನೋಡಿ ನನ್ನ ಮನಸ್ಸು ಕ್ಲೇಶದಿಂದ ಸಮಾಧಾನವಿಲ್ಲದೆ—ಯುದ್ಧರಂಗದಲ್ಲಿ ಜೈಸಿ ಅವರ ಸಕಲೈಶ್ವರ್ಯವನ್ನೂ ತೆಗೆದುಕೊಳ್ಳುವದು, ಅಲ್ಲದಿದ್ದರೆ ಅವರ ದಿವ್ಯಾಸ್ತ್ರಗಳಿಂದ ಪ್ರಾಣಗಳನ್ನು ಬಿಡುವದು ಎಂದು ಕೋರುತ್ತಲಿದೆ; ಇಷ್ಟೇಹೊರತಾಗಿ ಮತ್ತೊಂದಿಲ್ಲ; ಈಪ್ರಕಾರದಲ್ಲಿ ಸುಮ್ಮನೇಯಿರುವ ನನ್ನ ಜೀವನವು ಅಪ್ರಯೋಜಕವು; ಪಾಂಡವರು ದಿನದಿನಕ್ಕೂ ಅಭಿವೃದ್ಧಿಯನ್ನೈದುತಲಿದ್ಧಾರೆ; ನಾವು ಮೊದಲಿದ್ದ ಸ್ಥಿತಿಯಿಂದಲೇ ಇದ್ಧೇವೆ' ಅಂದನು."

## ೪೫ನೇ ಅಧ್ಯಾಯ.—ದ್ಯೂತಪರ್ವಶೇಷ.

“ಕೇಳು ಜನಮೇಜಯನೆ, ಆ ಬಳಿಕ ಶಕುನಿಯು ಈಪ್ರಕಾರದಿಂದ ನುಡಿದ ದುರ್ಯೋಧನನ ವಾಕ್ಯವನ್ನು ಕೇಳಿ ಅವನನ್ನು ಕುರಿತು ಇಂತೆಂದನು: ‘ಆ ಕೌಂತೇಯರ ಐಶ್ವರ್ಯಾತಿಶಯವನ್ನು ನೋಡಿ ನೀನು ಇಷ್ಟು ಕ್ಲೇಶ ಯಾಕೆ ಪಡಬೇಕು? ಅವರ ಐಶ್ವರ್ಯವು ನಿನ್ನನ್ನು ಬಂದು ಸೇರುವದಕ್ಕೆ ಒಂದು ಉಪಾಯವನ್ನು ಹೇಳುತಲಿಧೇನೆ ಕೇಳು: ನೆತ್ತಾ ಹಾಕುವ ಚಾತುರ್ಯವೂ ಪಗಡೇನಡಿಸುವ ವೈಖರ್ಯವೂ ಅದರಲ್ಲಿರುವ ವಿಶೇಷಗಳೂ ಜೂಜು ಹಾಕುವ ಪ್ರಾಢಿಮೆಯು ನನ್ನಲ್ಲಿ ವುಂಟು ಎಂದು ಪ್ರಸಿದ್ಧವಾಗಿರುವದು; ಧರ್ಮರಾಯನು ಜೂಜಿನಲ್ಲಿ ಅಧಿಕವಾದ ಪ್ರೀತಿವುಳ್ಳವನಾದರೂ ಅದರಲ್ಲಿ ಆತನಿಗೆ ಸಾಮರ್ಥ್ಯವಿಲ್ಲಾ; ಯಾರಾದರೂ ಜೂಜಿಗೆ ಕರದರೆ ಅಲ್ಲಿಗೆ ಪ್ರೀತಿಯಿಂದ ಬರುವನಾದ್ದರಿಂದ ಅವನನ್ನು ಜೂಜಿಗೆ ಕರಿ’ ಅಂದನು. ಕೇಳು ಜನಮೇಜಯನೆ, ಆ ದುರ್ಯೋಧನನು ಶಕುನಿಯ ವಾಕ್ಯವನ್ನು ಕೇಳಿ ಧೃತರಾಷ್ಟ್ರನನ್ನು ಕುರಿತು ‘ಕೇಳು ರಾಯನೆ, ಈ ಶಕುನಿಯು ಪಗಡೇಯಾಡುವದರಲ್ಲಿ ಚತುರನಾದ್ದರಿಂದ ಕುಂತಿಯ ಮಕ್ಕಳೊಡನೆ ಜೂಜನ್ನಾಡಿ ಅವರ ಐಶ್ವರ್ಯವನ್ನು ಅಪಹರಿಸಬಹುದೆಂದು ನುಡಿಯುತಲಿಧಾನೆ; ಇದಕ್ಕೆ ನೀನು ಸಮ್ಮತಿಸಬೇಕು’ ಅಂದನು. ಧೃತರಾಷ್ಟ್ರನು ದುರೋಧನನನ್ನು ನೋಡಿ ‘ಮಹಾ ಪ್ರಾಜ್ಞನಾಗಿ ಪರಮಾಪ್ತನಾಗಿ ಬುದ್ಧಿಸಂಪನ್ನನಾಗಿ ದೂರದೃಷ್ಟಿಯುಳ್ಳಂಥಾ ವಿದುರನೊಡನೆ ಆಲೋಚಿಸಿ ಆ ಬಳಿಕ ಈ ಕಾರ್ಯವನ್ನು ನಿಶ್ಚೈಸಿ ನುಡಿಯುತಲಿದೇನೆ; ಆತನು ಉಭಯಪಕ್ಷದವರಿಗೂ ಧರ್ಮವನ್ನೂ ಹಿತವನ್ನೂ ಹೇಳುವಂಥಾವನು’ ಅಂದನು. ಆ ವಾಕ್ಯವನ್ನು ಕೇಳಿ ದುರ್ಯೋಧನನು ತಂದೆಯನ್ನು ನೋಡಿ ‘ವಿದುರನು ಬಂದರೆ ಈ ಕಾರ್ಯವನ್ನು ಖಂಡಿತವಾಗಿ ತಡೆಯುತಲಿದಾನೆ; ಆಗ ಯಾವರೀತಿಯಿಂಗಲಾದರೂ ನಾನು ಶರೀರವನ್ನು ನಿಲ್ಲಿಸುವದಿಲ್ಲಾ; ಆ ಬಳಿಕ ನೀನೂ ವಿದುರನೂ ಕೂಡಿ ಅಪ್ರಯೋಜಕನಾದ ನನ್ನನ್ನು ಬಿಟ್ಟುಬಿಟ್ಟು ರಾಜ್ಯವನ್ನು ಪರಿಪಾಲಿಸಿಕೊಂಡು ಸುಖವಾಗಿರಿ’ ಅಂದನು. ಆ ಕುಮಾರನ ದೀನವಾಕ್ಯವನ್ನುಕೇಳಿ ಮಗನಿಗೆ ಮುಖಪ್ರಸಮನವನ್ನು ಮಾಡಬೇಕೆಂದೆಣಿಸಿ, ಶಿಲ್ಪಿಗಳನ್ನು ಕರತರಿಸಿ, ಸಹಸ್ರಸ್ತಂಭ ವಿರಾಜಮಾನವಾಗಿ ಅತಿವಿಸ್ತೀರ್ಣವಾಗಿ ನೂರುಬಾಗಲುಗಳಿಂದ ಕೂಡಿ ವಿಚಿತ್ರವಾದ ಗವಾಕ್ಷಗಳುಳ್ಳಂಥಾದ್ದಾಗಿ ಮನೋಹರವಾಗಿ ನವರತ್ನಖಚಿತವಾಗಿ ದಿಪ್ಯ ಪರಿಮಳಯುಕ್ತವಾದ ಒಂದು ದಿವ್ಯಸಭೆಯನ್ನು ದುರ್ಯೋಧನನ ಯಜ್ಞಾರ್ಥವಾಗಿ ನಿರ್ಮಿಸಲು ಕಟ್ಟುಮಾಡಿ, ಜೂಜಾಡುವದು ದೋಷವೆಂದು ತಿಳಿದವನಾದರೂ ಪುತ್ರಸ್ನೇಹದಿಂದ ನಿಲ್ಲಿಸಲಾರದೆ, ವಿದುರನನ್ನು ಬಿಟ್ಟು ಯಾವ ಕಾರ್ಯಾಲೋಚನೆಯನ್ನು ಮಾಡದವನಾದ್ದರಿಂದ ಆತನನ್ನು ಕರದುಕೊಂಡು ಬರುವದಕ್ಕೆ ತಕ್ಕಂಥಾವರನ್ನು ಕಳುಹಿಸಿದನು. ವಿದುರನು ಆ ವೃತ್ತಾಂತವನ್ನು ಕೇಳಿ ಅದರಿಂದ ಕಲಹಕ್ಕೆ ಕಾರಣವಾಗಿ ಕೌರವರಿಗೆ ವಿನಾಶವು ಪ್ರಾಪ್ತವಾಗುವದೆಂದು ನಿಶ್ಚೈಸಿ, ಅಣ್ಣನ ಸಮೀಪಕ್ಕೆ ಹೋಗಿ, ಆತನ ಚರಣಗಳು ತನ್ನ ಹಣೆಯನ್ನು ತಾಕಲು ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಆತನನ್ನು ಕುರಿತು ‘ಎಲೈ ಕೌರವೇಶ್ವರನೆ, ನೀನು ಎಣಿಸಿದ ಕಾರ್ಯವು ನನಗೆ ಅಸಮ್ಮತವಾಗಿದೆ; ಈ ಜೂಜಿನಿಂದ ನಿನ್ನ ಮಕ್ಕಳಿಗೆ ಅನ್ಯೋನ್ಯ ಮಿತ್ರಭೇದವು ಹುಟ್ಟುತಲಿದೆ’ ಅಂದನು. ಧೃತರಾಷ್ಟ್ರನು ವಿದುರನನ್ನು ಕುರಿತು ‘ಭೀಷ್ಮನೂ ನಾನೂ ಇರುವಾಗ ನನ್ನ ಮಕ್ಕಳಿಗೆ ಪರಸ್ಪರ ವಿರೋಧವು ಎಂದಿಗೂ ಬರಲಾರದು; ದೇವತಾನುಗ್ರಹವು ಹ್ಯಾಗೆ ಇರುವದೊ ಹಾಗೆ ಹೊರತಾಗಿ ಮತ್ತೊಂದಾಗಲಾರದು; ಅದರದೆಸೆಯಿಂದ ಶುಭವಾದರೂ ಅಶುಭವಾದರೂ ಹಿತವಾದರೂ ಅಹಿತವಾದರೂ ಉಂಟಾಗಲಿ; ಯಾವರೀತಿಯಿಂದಲಾದರೂ ಮಕ್ಕಳಿಗೆ ಪ್ರೀತಿಗೋಸ್ಕರ ಜೂಜನ್ನಾಡಿಸಬೇಕು; ನೀನು ವಾಯುವೇಗ ಸಂಪನ್ನಗಳಾದ ಕುದುರೆಗಳನ್ನು ಕಟ್ಟಿರುವ ರಥವನ್ನೇರಿ ಈಗಲೇ ಇಂದ್ರಪ್ರಸ್ಥ ಪಟ್ಟಣಕ್ಕೆ ಹೋಗಿ ಧರ್ಮರಾಯನನ್ನು ಇಲ್ಲಿಗೆ ಕರಕೊಂಡು ಬಾ; ಇದು ಅಕೃತ್ಯವೆಂದೂ ಮಾಡಬಾರದೆಂದೂ ನೀನು ತಡದರೆ ದೈವಪ್ರೇರಿತನಾದ್ದರಿಂದ ಇದನ್ನು ನಾನು ಮಾಡದೇ ಬಿಡುವದಿಲ್ಲಾ’ ಅಂದನು. ಪ್ರಜ್ಞಾಶಾಲಿಯಾದ ವಿದುರನು ಇನ್ನು ಕೌರವಕುಲವು ನಿಲ್ಲಲಾರದೆಂದು ತನ್ನಮನಸ್ಸಿನಲ್ಲಿ ಸ್ಮರಿಸುತ ಹೊರಟು ಮಹಾ ಪ್ರಾಜ್ಞನಾದ ಭೀಷ್ಮನಿಗೆ ಆ ವೃತ್ತಾಂತವನ್ನು ಹೇಳಿದನು” ಎಂದು ವೈಶಂಪಾಯನ ಮುನೀಂದ್ರನು ಜನಮೇಜಯರಾಯನಿಗೆ ಹೇಳಿದನು.

## ೪೬ನೇ ಅಧ್ಯಾಯ.—ದ್ಯೂತಪರ್ವಶೇಷ.

ಅನಂತರದಲ್ಲಿ: ಜನಮೇಜಯರಾಯನು ವೈಶಂಪಾಯನ ಮುನೀಶ್ವರನನ್ನು ನೋಡಿ “ ಎಲೈ ಮುನೀಶ್ವರನೆ, ನಮ್ಮ ವಂಶಕರ್ತರಾದ ಪಾಂಡವರಿಗೂ ಕೌರವರಿಗೂ ಅನರ್ಥ ಮೂಲಕವಾದ ದ್ಯೂತವು ಯಾವ ಪ್ರಕಾರದಿಂದ ನಡಿಯಿತು; ಆ ಸಮಯದಲ್ಲಿ ಯಾವ ಅರಸುಗಳು ಮಧ್ಯಸ್ಥರಾಗಿ ಸಭೆಯಲ್ಲಿದ್ದರು ? ಆ ಕಾರ್ಯಕ್ಕೆ ಯಾರು ಸಂತೋಷಪಟ್ಟರು ? ಆ ಕಾರ್ಯವನ್ನು ಯಾರು ತಡೆದರು ? ಇದಷ್ಟನ್ನೂ ವಿಶದವಾಗಿ ಹೇಳಬೇಕೆಂದು ಪ್ರಾರ್ಥಿಸುತಲಿಧೇನೆ; ಈ ಜೂಜಿನಿಂದಲ್ಲವೆ ಸಕಲ ಕ್ಷತ್ರಿಯ ವಿನಾಶವಾಯಿತು ? ” ಎಂದು ಕೇಳಿದನು.

ಕೇಳಿರೈ ನೈಮಿಶಾರಣ್ಯವಾಸಿಗಳಾದ ಮಹಾ ಋಷಿಗಳಿರಾ, ಆ ಬಳಿಕ ವ್ಯಾಸಶಿಷ್ಯನಾಗಿ ವೇದವೇದಾಂಗ ಪಾರಂಗತನಾದ ವೈಶಂಪಾಯನಮುನೀಶ್ವರನು ಜನಮೇಜಯನನ್ನು ಕುರಿತು ಇಂತೆಂದನು : “ ಕೇಳು ಜನಮೇಜಯನೆ, ಈ ಪ್ರಕಾರವಾಗಿ ವಿದುರನು ಹಿತೋಪದೇಶವನ್ನು ಮಾಡಿ ಹೊರಟು ಪೋದ ಸಮಯದಲ್ಲಿ ಧೃತರಾಷ್ಟ್ರನು ದುರ್ಯೋಧನನನ್ನು ಕರತರಿಸಿ ಏಕಾಂತದಲ್ಲಿ ಅವನನ್ನು ಕುರಿತು ‘ ಎಲೈ ದುರ್ಯೋಧನನೆ, ವಿದುರನು ಜೂಜಾಡಬಾರದೆಂದು ಹೇಳುತಲಿಧಾನೆ; ಮತಿವಂತನಾದ ಆತನು ನಮಗೆ ಹಿತವನ್ನು ಹೇಳುವನೇ ಹೊರತಾಗಿ ಅಹಿತವನ್ನು ಹೇಳುವಂಥಾವನಲ್ಲಾ; ಆತನ ವಾಕ್ಯವನ್ನು ಅಂಗೀಕರಿಸುವದೆ ನಿನಗೆ ಉಚಿತವೆಂನು ನನ್ನ ಮನಸ್ಸಿನಲ್ಲಿ ತೋರುತಲಿಧೆ; ಪೂರ್ವದಲ್ಲಿ ಋಷಿಯಾಗಿ ಅಮರಗುರುವಾಗಿ ಮಹಾ ಮೇಧಾವಿಯಾದ ಬೃಹಸ್ಪತಿಯು ದೇವೇಂದ್ರನಿಗೆ ಹೇಳಿದ ನೀತಿಶಾಸ್ತ್ರವು ರಹಸ್ಯಸಹಿತವಾಗಿ ಆತನಿಗೆ ತಿಳಿದಿರುವದರಿಂದ ನಾನು ಆತನ ಬುದ್ಧಿಯನ್ನೇ ಆಶ್ರೈಸಿರುವೆನು ; ವೃಷ್ಣಿವಂಶದ ಅರಸುಗಳಿಗೆ ಪ್ರಜ್ಞಾವಂತನಾದ ಉದ್ಧವನೋಪಾದಿಯಲ್ಲಿ ಕೌರವರಿಗೆ ವಿದುರನು ಪೂಜ್ಯನು ; ಈ ಜೂಜಿನ ದೆಸೆಯಿಂದ ಭೇದವು ಹುಟ್ಟುವದು ; ಅದರಿಂದ ವಿನಾಶವು ಅವಶ್ಯವಾಗಿ ಬರುವದರಿಂದ ಯಾವರೀತಿಯಿಂದಲಾದರೂ ಈ ಬುದ್ಧಿಯನ್ನು ಬಿಟ್ಟು ಬಿಡು ; ವಂಶಪರಂಪರೆಯಿಂದ ಲಬ್ಧವಾದ ರಾಜ್ಯವನ್ನು ಅನುಭವಿಸುತ ಸಕಲ ವಿದ್ಯೆಗಳನ್ನು ಕಲಿತು ಬಂಧು ಜನಗಳೂ ತಮ್ಮಂದಿರೂ ಆಜ್ಞೆಯನ್ನು ವಹಿಸುತ್ತಿರಲು ಮನಸ್ಸಿಗೆ ಪ್ರಿಯವಾದ ಅನ್ನ ವಸ್ತ್ರಗಳಿಂದ ಸಂತುಷ್ಟನಾಗಿ ಸಕಲ ಭೂಮಂಡಲವನ್ನೂ ಪರಿಪಾಲಿಸುವಂಥಾ ನಿನಗೆ ಕ್ಲೇಶಪಡುವದಕ್ಕೆ ಕಾರಣವೇನು ? ತಿಳುಹಿಸು ’ ಎಂದು ಕೇಳಿದನು.

“ ಕೇಳು ಜನಮೇಜಯನೆ, ಆ ವಾಕ್ಯಗಳನ್ನು ಕೇಳಿ ದುರ್ಯೋಧನನು ತನ್ನ ತಂದೆಯನ್ನು ನೋಡಿ ‘ ಎಲೈ ಪಿತನೆ, ತನಗೆ ಅನ್ನ ವಸ್ತ್ರಗಳುಂಟಾಗಿಧೆ—ಇಷ್ಟೇ ಸಾಕೆಂದು ಶತ್ರುಗಳಮೇಲೆ ಕೋಪಮಾಡದಿರುವಂಥಾವನು ಪುರುಷಾಧಮನೆನಿಸಿಕೊಳ್ಳುವನು ; ಲೋಕದಲ್ಲಿರುವ ಅರಸುಗಳೋಪಾದಿಯಲ್ಲಿ ನಾನೂ ಕೆಲವು ಭೂಮಿಯನ್ನು ಪರಿಪಾಲಿಸುತಲಿಧೇನೆ—ಇದೊಂದು ಅತಿಶಯವೆ ? ಅಖಂಡ ಭೂಮಂಡಲವನ್ನು ಪರಿಪಾಲಿಸುವಂಥಾ ಪಾಂಡವರ ವೈಭವವನ್ನು ನೋಡಿದ್ದು ಮೊದಲುಗೊಂಡು ಕ್ಲೇಶಪಡುತಲಿಧೇನೆ ; ಕಾರಸ್ಕರರು ಲೋಹಜಂಘರು ಎಂಬ ಸಮುದ್ರ ದ್ವೀಪವಾಸಿಗಳೂ ಹಿಮವತ್ಪರ್ವತ ಪ್ರಾಂತ್ಯವಾಸಿಗಳೂ ಅಮೂಲ್ಯವಾದ ರತ್ನಗಳನ್ನು ಕಪ್ಪಗಳಾಗಿ ಕೊಟ್ಟು ಕಿಂಕರರೋಪಾದಿಯಲ್ಲಿ ಧರ್ಮರಾಯನಿಗೆ ಅಧೀನರಾಗಿದ್ದರು ; ನಾನು ಜ್ಯೇಷ್ಠನಾಗಿ ಶ್ರೇಷ್ಠನಾಗಿದೇನೆಯೆಂದು ಸಮಸ್ತರಾದ ಅರಸುಗಳು ತಂದುಕೊಟ್ಟ ರತ್ನಗಳನ್ನು ತಕ್ಕೊಳ್ಳುವದಕ್ಕೆ ನನ್ನನ್ನು ನೇಮಿಸಿದನು ; ಅವರು ಕೊಟ್ಟ ಕಪ್ಪಗಳನ್ನು ತೆಗದುಕೊಳ್ಳುವದರಿಂದ ಬಹಳ ಶ್ರಮಪಟ್ಟೆನು ; ಅಲ್ಲಿಗೆ ಬಂದಂಥಾ ರತ್ನರಾಶಿಗಳು ಇಷ್ಟು ಅಷ್ಟು ಎಂದು ಹೇಳುವದಕ್ಕೆ ಸಾಧ್ಯವಲ್ಲಾ ; ಅದು ಹಾಗಿರಲಿ, ಆ ಸಭಾಮಧ್ಯದಲ್ಲಿ ಭಂಗಪಟ್ಟೆನು ; ಹೀಗೆ ಸಾರಿಸಾರಿಗೂ ಪರಿಹಾಸ್ಯಕ್ಕೆ ಆಸ್ಪದವಾದ ಜೀವವು ಯಾತಕ್ಕೆ ? ಅಂಥಾ ಮಹಾವೈಭವವುಳ್ಳ ಧರ್ಮರಾಯನ ಐಶ್ವರ್ಯವನ್ನು ನೋಡಿ ಸಹಿಸಲಾರದೆ ಇಧೇನೆ ; ಅಭಿಮಾನಶಾಲಿಯಾದವನಿಗೆ ಅಪಕೀರ್ತಿ ಬರುವದಕ್ಕಿಂತ ದುರ್ಮರಣವೆ ಶ್ರೇಷ್ಠವು ; ಆದ್ದರಿಂದಾ ನಾನು ಕೊಳದಲ್ಲಾದರೂ ಬಿದ್ದು ಸಾಯುತಲಿಧೇನೆ ; ಇದು ನಿಶ್ಚಯವಾಗಿ ತಿಳಿ.’ ”

## ೮೨ನೇ ಅಧ್ಯಾಯ.—ದ್ಯೂತಪರ್ವ ಶೇಷ.

"' ಎಲೈ ಮಹಾರಾಯನೆ, ಆ ಪಾಂಡವರಿಗೆ ಸಮಸ್ತರಾದ ಅರಸುಗಳೂ ತಂದು ಕೊಟ್ಟ ಕಪ್ಪಗಳ ಸಂಖ್ಯೆಯನ್ನು ಹೇಳುತಲಿದೇನೆ ಕೇಳು : ರತ್ನ ಕಾಂಚನಗಳನ್ನೂ ಅನರ್ಘ್ಯಂಗಳಾದ ಕೃಷ್ಣಾಜಿನಗಳು ಮೊದಲಾದ ವಸ್ತುವಿಶೇಷಗಳನ್ನೂ ಕಾಂಭೋಜರಾಯನು ಯಾಗಾರ್ಥವಾಗಿ ಧರ್ಮರಾಯನಿಗೆ ಕೊಟ್ಟನು ; ತಿತ್ತಿರಿಪಕ್ಷಿವರ್ಣವುಳ್ಳಂಥಾ—ಗಿಣೀ ಮೂಗಿನವರ್ಣವುಳ್ಳಂಥಾ ಮುನ್ನೂರು ಕುದುರೆಗಳನ್ನೂ ಅನೇಕವಾದ ಒಂಟೆಗಳನ್ನೂ ಹೆಣ್ಣು ಕುದುರೆಗಳನ್ನೂ ತಂದು ತ್ರಿಗರ್ತದೇಶಾಧಿಪತಿಗಳು ಗೋಪಕರು ದುದ್ರುವರು ಪಿಲೂಸ ಮಿಂಗುದರು ಮೊದಲಾದ ಅರಸುಗಳು ಧರ್ಮರಾಯನ ಮನೇ ಬಾಗಲಲ್ಲಿ ಕಾದಿದ್ದರು : ಮನೋಹರಗಳಾದ ಸುವರ್ಣಕಲಶಗಳನ್ನೂ ರತ್ನಕಾಂಚನಗಳನ್ನೂ ರಜತವನ್ನೂ ತಂದು ಮಹಾರಥನಾದ ತ್ರಿಕರ್ವಮಹೀಪಾಲನು ಪರಿಜನಸಹಿತವಾಗಿ ಹಜಾರದಲ್ಲಿ ಕಾದಿದ್ದನು ; ಸಮುದ್ರೋದ್ಭವವಾಗಿ ಸುವರ್ಣಚಿತ್ರಿತವಾಗಿ ವಿಶ್ವಕರ್ಮ ನಿರ್ಮಿತವಾಗಿ ಅತಿಶುಭ್ರವಾಗಿ ಮನೋಹರವಾಗಿ ತನಗೆ ತಾನೇ ಧ್ವನಿಮಾಡುವಂಥಾ ಶಂಖವು ಒಬ್ಬ ಬ್ರಾಹ್ಮಣನಿಂದ ಧರ್ಮರಾಯನಿಗೆ ಕಾಣಿಕೆಯಾಗಿ ಕಳುಹಿಸಲ್ಪಡಲು ಆತನು ಸಂತೋಷಪಟ್ಟು ಅದನ್ನ ಅರ್ಜುನನಿಗೆ ಕೊಟ್ಟನು ; ಅರ್ಜುನನು ಆ ದಿವ್ಯ ಶಂಖವನ್ನ ಸಂತೋಷದಿಂದ ಪೂರಿಸಿದನು ; ಅದರಿಂದುಂಟಾದ ಭಯಂಕರ ಧ್ವನಿಯಿಂದ ನಾನೂ ಮಿಕ್ಕ ಅರಸುಗಳೂ ಮೂರ್ಛಾಕ್ರಾಂತರಾಗಿ ಬಿದ್ದಗ್ದನ್ನು ನೋಡಿ ಕೃಷ್ಣನೂ ಸಾತ್ಯಕಿಯೂ ಧೃಷ್ಟದ್ಯುಮ್ನನೂ ಪಾಂಡವರೂ ಪರಿಹಾಸವನ್ನು ಮಾಡಿದರು. ಆ ಬಳಿಕ ಅರ್ಜುನನು ಸುವರ್ಣ ಶೃಂಗಗಳುಳ್ಳ ಐನೂರು ಎತ್ತುಗಳನ್ನು ಶಂಖವನ್ನು ತಂದ ಬ್ರಾಹ್ಮಣನಿಗೆ ಕೊಟ್ಟನು. ಮತ್ತು ಮುಟನೆಂಬ ಅರಸನು ಚಿತ್ರವಸ್ತ್ರಗಳನ್ನೂ ಮಣಿಸುವರ್ಣಗಳನ್ನೂ ಧರ್ಮರಾಯನಿಗೆ ಕೊಟ್ಟನು ; ಕಾಶ್ಮೀರದೇಶಾಧಿಪತಿಯು ಸ್ವಾದು ಶರ್ಕರಾವಂಡಗಳನ್ನೂ ದ್ರಾಕ್ಷಾಮದ್ಯಗಳನ್ನೂ ಮತ್ತು ಅನೇಕ ವಸ್ತುಗಳನ್ನೂ ಕಪ್ಪವಾಗಿ ಕೊಟ್ಟನು ; ಯವನದೇಶಾಧೀಶ್ವರನು ಮಹಾವೇಗಶಾಲಿಗಳಾಗಿ ಪರ್ವತದಲ್ಲಿ ಹುಟ್ಟದ ಕುದುರೆಗಳನ್ನೂ ಅತಿನೂತನವಾಗ ಅತಿಸೂಕ್ಷ್ಮವಾಗಿ ಮಹಾವಿಚಿತ್ರವಾಗಿ ನೋಡುವದಕ್ಕೆ ಯೋಗ್ಯವಾಗಿ ಅನರ್ಘ್ಯವಾದ ರತ್ನ ಕಂಬಳಗಳನ್ನೂ ಶಯನಾಸನಗಳನ್ನೂ ಮತ್ತೂ ಅನೇಕ ದಿವ್ಯ ರತ್ನ ಮಣಿಕಾಂಚನಗಳನ್ನೂ ತಂದು ಬಾಗಲಿನವರಿಂದ ತಡೆಯಲ್ಪಟ್ಟು ಆ ಧರ್ಮರಾಯನ ಬಾಗಲಲ್ಲಿ ಕಾದಿದ್ದನು ; ಕಳಿಂಗದೇಶಾಧಿಪತಿಯಾದ ಶ್ರುತಾಯುವು ಅನೇಕ ರತ್ನಗಳನ್ನು ತಂದುಕೊಟ್ಟನು ; ಅಂಗದೇಶಾಧಿಪತಿಯು ಮನೋಹರಾಂಗಿಗಳಾಗಿ ಸುವರ್ಣ ಭೂಷಣಾಲಂಕೃತರಾಗಿರುವ ವನಿತಾರತ್ನಗಳನ್ನು ತಂದುಕೊಟ್ಟನು ; ವಂಗದೇಶಾಧಿಪತಿಯು ಸುವರ್ಣಮಯವಾಗಿ ಶತಸಹಸ್ರ ಸಂಖ್ಯೆಯುಳ್ಳ ಮಂಚಗಳನ್ನೂ ಮತ್ತೂ ನಾನಾಪ್ರಕಾರಗಳಾದ ಪಟ್ಟವಸ್ತ್ರಗಳನ್ನೂ ದಕ್ಷಿಣ ಸಮುದ್ರದಲ್ಲಿ ಹುಟ್ಟದ ಅನೇಕ ರತ್ನಗಳನ್ನೂ ತಂದು ಬಾಗಲಲ್ಲಿ ಕಾದಿದ್ದನು ; ಪಾಂಡ್ಯಭೂಪತಿಯು ಮಲಯ ಪರ್ವತದಲ್ಲಿ ಹುಟ್ಟದ ಶ್ರೀಗಂಧದ ಕೊರಡುಗಳನ್ನೂ ತೊಂಭತ್ತಾರು ಭಾರಗಳ ಶಂಖಗಳನ್ನೂ ಕಳುಹಿಸಿದನು ; ಮುಕ್ತಾವೈಡೂರ್ಯ ಭೂಷಣಗಳನ್ನೂ ಚೆಂಗನ ತರು ಕಾಷ್ಠಗಳನ್ನೂ ಚೋಳ ಕೇರಳದೇಶಾಧಿಪತಿಗಳು ಕಳುಹಿಸಿದರು ; ಅಶ್ವಕಭೂಪಾಲನು ಸುವರ್ಣಶೃಂಗಗಳುಳ್ಳಂಥಾವಾಗಿ ರತ್ನಭೂಷಣಾಲಂಕೃತಗಳಾಗಿ ತುಂಬಾ ಹಾಲನ್ನು ಕರೆಯುವಂಥಾವಾಗಿ ಕರುಗಳು ಸಹಿತವಾಗಿರುವ ಹತ್ತುಸಾವರ ಹಸುಗಳನ್ನು ಕಳುಹಿಸಿದನು ; ಸೈಂಧವನು ಸಿಂಧುದೇಶದಲ್ಲಿ ಹುಟ್ಟದಂಥಾವಾಗಿ ಕಾಂಚನಮಾಲಿಕಾಲಂಕೃತಗಳಾದ ಇಪ್ಪತ್ತೈದು ಸಾವರ ಕುದುರೆಗಳನ್ನೂ ನಾನಾರತ್ನ ಪ್ರಭಾಭಾಸಮಾನಗಳಾಗಿ ಸುವರ್ಣಮಯಗಳಾಗಿ ಮಧ್ಯಾಹ್ನದ ಸೂರ್ಯನೋಪಾದಿಯಲ್ಲಿ ಪ್ರಕಾಶಮಾನಗಳಾಗಿರುವ ಆನೆಗಳನ್ನೂ ಮುನ್ನೂರು ರಥಗಳನ್ನೂ ಮತ್ತೂ ಅನೇಕ ವಸ್ತುವಾಹನಗಳನ್ನೂ ತಂದುಕೊಟ್ಟನು ; ಅವಂತಿದೇಶಾಧೀಶ್ವರನು ಅಧಿಕವಾದ ದಿವ್ಯ ಮಣಿಗಳನ್ನೂ ಹೇರಳವಾದ ಮುಕ್ತಾಹಾರಗಳನ್ನೂ ಭುಜಕೀರ್ತಿ ಮೊದಲಾದ ಭೂಷಣಗಳನ್ನೂ ಹತ್ತುಸಾವರ ದಾಸೀಜನಗಳನ್ನೂ ಕಾಣಿಕೆಯಾಗಿ ತಂದುಕೊಟ್ಟು ಧರ್ಮರಾಯನನ್ನು ನೋಡಬೇಕೆಂದು ಕಾದಿದ್ದನು ; ಮಹಾಬಲಶಾಲಿಯಾದ ಚೇದಿ ದೇಶಾಧಿಪತಿಯೂ ದಶಾರ್ಣ ದೇಶಾಧಿಪತಿಯೂ ಶೂರಸೇನ ದೇಶಾಧಿಪತಿಯೂ ಲೆಕ್ಕವಿಲ್ಲದ ಕಪ್ಪಗಳನ್ನು ತಂದುಕೊಟ್ಟರು ; ಸುವರ್ಣಭೂಷಣ ಭೂಷಿತಗಳಾ

ಗಿ ಸಿಂಧುದೇಶದಲ್ಲಿ ಹುಟ್ಟಿದ ಹತ್ತುಸಾವಿರ ಕುದುರೆಗಳನ್ನೂ ಎಂಭತ್ತುಸಾವಿರ ಪಶುಗಳನ್ನೂ ಎಂಟುನೂರು ಆನೆಗಳನ್ನೂ ಕಾಶೀದೇಶಾಧೀಶ್ವರನು ಕಳುಹಿಸಿದನು ; ವಿದೇಹ ದೇಶಾಧಿಪತಿಯಾದ ಕೃತಕ್ಷಣನೂ ಕೋಸಲೇಶ್ವರನಾದ ಬೃಹದ್ಭಲನೂ ಹದಿನಾಲ್ಕು ಸಾವಿರ ಕುದುರೆಗಳನ್ನು ಕಳುಹಿಸಿದನು ; ವತ್ಸಾಧಿಪತಿಯಾದ ಶೈಬ್ಯನೂ ತ್ರಿಗರ್ತನೂ ಬಬ್ಬೊಬ್ಬರು ಲೆಕ್ಕವಿಲ್ಲದ ರತ್ನ ಭೂಷಣಗಳನ್ನೂ ಕಾಣಿಕೆಯಾಗಿ ಕೊಟ್ಟರು ; ಭಾರುಕಚನೆಂಬ ಅರಸನು ರೂಪುಲಾವಣ್ಯ ಸಮೇತರಾಗಿ ಸರ್ವಾಭರಣಭೂಷಿತರಾಗಿ ಅತಿದೀರ್ಘಕೇಶಭಾರವುಳ್ಳಂಥಾವರಾಗಿ ಯೌವನವತಿಗಳಾಗಿ ರುಚಿರಾಂಗಿಗಳಾಗಿ ಕಾರ್ಪಸಿಕದೇಶ ನಿವಾಸಿಗಳಾದ ಒಂದುಲಕ್ಷ ಸ್ತ್ರೀಜನಗಳನ್ನೂ ಅಮೂಲ್ಯಗಳಾದ ಮುಕ್ತಾಹಾರಗಳನ್ನೂ ನಾನಾ ಪ್ರಕಾರಗಳಾದ ಭೂಷಣಗಳನ್ನೂ ಬ್ರಾಹ್ಮಣರಿಗೆ ಯೋಗ್ಯಗಳಾದ ಕಂಬಳಗಳನ್ನೂ ಕಾಣಿಕೆಯಾಗಿ ತಂದು ಕೊಟ್ಟನು ; ತಮಗೆತಾವೆ ಬೆಳೆಯುವಂಥಾ ಧಾನ್ಯಗಳನ್ನು ಆಹಾರ ಮಾಡಿಕೊಂಡಿರುವ ಸಮುದ್ರ ದ್ವೀಪವಾಸಿಗಳಾದ ನಾಂದೀಮುಖ ಪಾರದ ಶಕ ಕೈರಾತಕ ಸಾಮುದ್ರಕ ನಿಷ್ಕುಟ ಪ್ರಮುಖರಾದ ಪಶ್ಚಿಮ ಸಮುದ್ರತೀರವಾಸಿಗಳು ಆಡು ಕುರಿ ಹಸ ಸುವರ್ಣ ಮೊದಲಾದ ವಸ್ತುಗಳನ್ನೂ ಒಂಟೆಗಳನ್ನೂ ಕತ್ತೆಗಳನ್ನೂ ಹಣ್ಣುಗಳಿಂದ ಹುಟ್ಟಿದ ಜೇನುತುಪ್ಪಗಳನ್ನೂ ನಾನಾವಿಚಿತ್ರ ಕಂಬಳಗಳನ್ನೂ ಅನೇಕ ವಸ್ತು ವಿಶೇಷಗಳನ್ನೂ ಕಪ್ಪವಾಗಿ ತಂದು ಆತನ ಬಾಗಲಲ್ಲಿ ತಡೆಯಲ್ಪಟ್ಟವರಾಗಿ ಕಾದಿದ್ದರು ; ವಾಯುವೇಗ ಸಂಪನ್ನಗಳಾಗಿ ವಿಚಿತ್ರ ವರ್ಣ ವುಳ್ಳಂಥಾ ಉತ್ತಮಾಶ್ವಗಳನ್ನೂ ಕಬ್ಬಿಣದ ಗುಡಾಣಗಳನ್ನೂ ದಂತದ ಪರಜುಗಳಿಂದ ಒಪ್ಪುತಲಿರುವ ಕತ್ತಿಗಳನ್ನೂ ಕಪ್ಪವಾಗಿ ತಂದು ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನು ಸೇನಾಸಮೇತನಾಗಿ ಧರ್ಮರಾಯನ ಬಾಗಲಲ್ಲಿ ಕಾದಿದ್ದನು ; ಮತ್ತೆ ನಾನಾದೇಶಗಳ ದೆಶೆಯಿಂದ ಬಂದ ಒಂದು ಕಣ್ಣುಗಳುಳ್ಳಂಥಾವರು ಎರಡು ಕಣ್ಣುಗಳುಳ್ಳಂಥಾವರು ಮೂರು ಕಣ್ಣುಗಳುಳ್ಳಂಥಾವರು ಪಾಗು ಸುತ್ತಿಕೊಂಡಿರುವಂಥಾವರು ಪುರುಷಾಶನರು ಭಯರಹಿತರಾಗಿರುವಂಥಾವರು—ಇಂಥಾ ಸಮುದ್ರಮಧ್ಯದ್ವೀಪಗಳಲ್ಲಿರುವಂಥಾ ಜನರು ಅನೇಕ ರತ್ನಗಳನ್ನೂ ಚಿನ್ನ ಬೆಳ್ಳಿ ರಾಶಿಗಳನ್ನೂ ಮನೋವೇಗವುಳ್ಳಂಥಾವಾಗಿ ಇಂದ್ರಗೋಪದ ಹುಳು ಗಿಣಿ ಸಂಧ್ಯಾಕಾಲದ ಮೇಘವು ಇಂದ್ರ ಧನುಸ್ಸುಗಳಿಗೆ ಸಮಾನವಾದ ವರ್ಣವುಳ್ಳಂಥಾವಾಗಿ ಬಹುಪ್ರಕಾರವಾದ ಅಡವಿ ಕುದುರೆಗಳನ್ನೂ ತಂದು ಧರ್ಮರಾಯನಿಗೆ ಕೊಡಬೇಕೆಂದು ಬಾಗಲಲ್ಲಿ ಕಾದಿದ್ದರು ; ಸಿಂಹಳ ದೇಶಾಧೀಶ್ವರನು ಅನೇಕ ದ್ರವ್ಯಗಳನ್ನೂ ಗೋಶೀರ್ಷಕ ಪದ್ಮಕ ಹರಿಶ್ಯಾಮಳಗಳೆಂಬ ಹೆಸರುಗಳುಳ್ಳ ಶ್ರೀಗಂಧದ ಕೊರಡುಗಳು ನೂರುಭಾಗಗಳನ್ನೂ ತಂದು ಆತನ ಬಾಗಲಲ್ಲಿ ನಿಂತುಕೊಂಡಿದ್ದನು ; ಬರ್ಬರ ದೇಶಾಧಿಪತಿಗಳು ಲಕ್ಷ ದಾಸೀಜನಗಳನ್ನೂ ಅನೇಕವಾದ ರತ್ನ ಕಂಬಳಗಳನ್ನೂ ತಂದು ಹೊರಗಿರುವ ಹಜಾರದಲ್ಲಿ ಕಾದಿದ್ದರು ; ಕಸ್ತೂರಿ ಗೋರೋಜನ ಅಗರು ಕುಂಕುಮದ ಹುವ್ವ ತಕ್ಕೋಲ ಲವಂಗ ಕರ್ಪೂರಗಳನ್ನೂ ಅನೇಕಗಳಾದ ಸ್ಫಟಿಕ ದಂತಗಳನ್ನೂ ತಂದು ಪೌಂಡ್ರಕ ದಾಮಲಿ ಪ್ರಕಾಮ ಅನೃತ್ತ ದೇಶಾಧಿಪತಿಗಳು ಮೊದಲಾದವರು ಆತನ ಬಾಗಲಲ್ಲಿ ಸಮಯವನ್ನು ನೋಡುತ ಕಾದಿದ್ದರು ; ಪಟ್ಟೆ ವಸ್ತ್ರಗಳನ್ನು ಕಾಣಿಕೆಯಾಗಿ ತಂದ ಶೈಲೇಯನೆಂಬ ಅರಸು ಅತ್ಯುನ್ನತಗಳಾಗಿ ಬಾಹ್ಲಿಕ ದೇಶೋದ್ಭವಗಳಾದ ಹತ್ತುಸಾವಿರ ಸಂಖ್ಯೆಯುಳ್ಳ ಉತ್ತಮಾಶ್ವಗಳನ್ನೂ ವಿಚಿತ್ರವಾದ ಪಾಗುಗಳನ್ನೂ ಸೂರಿಯ ಪಟಗಳನ್ನೂ ದಮಾಸುಗಳನ್ನೂ ವಿಚಿತ್ರವರ್ಣಗಳಾಗಿಯೂ ಹಸುರಾಗಿಯೂ ಕೆಂಪಾಗಿಯೂ ಇರುವ ಬಾಹ್ಲಿಕ ಚೀನಾದೇಶೋದ್ಭವಗಳಾದ ವಸ್ತ್ರಗಳನ್ನೂ ರಸದ್ರವ್ಯಗಳನ್ನೂ ಗಂಧ ದ್ರವ್ಯಗಳನ್ನೂ ತಂದು ಬಾಗಲವರನ್ನು ಸ್ತುತಿಸಿ ಭಂಗಪಟ್ಟು ಅತಿಪ್ರಯತ್ನದಿಂದ ಧರ್ಮರಾಯನ ಸಮುಖವನ್ನು ಸೇರಿದನು ; ಪರ್ವತ ನಿವಾಸಿಗಳಾದ ಚೀನ ಹೂಣ ಕಷ ಕಾಚ ದೇಶಾಧಿಪತಿಗಳು ನಾನಾ ಪ್ರಕಾರಗಳಾದ ವಸ್ತ್ರಗಳನ್ನು ತಕ್ಕೊಂಡು ಬಂದರು ; ಖರ್ವಟರು ತೋಮರರು ವರ್ಧನಕರು ವನದಲ್ಲಿರುವ ಅನೇಕ ವಸ್ತುಗಳನ್ನು ತಕ್ಕೊಂಡು ಬಂದರು ; ನಾಟಕೀಯರು ನಾದೇಯರು ನಾಗರಕರು ನಾವಿಕರು ತೂಬರರು ಪಂಚಗೇಯರು ಪುರುಮಂತರು ಎಂಬ ಅಡವಿಯಲ್ಲಿರುವ ಪ್ರಭುಗಳು ಅನೇಕವಾದ ಕಪ್ಪಗಳನ್ನು ತಂದು ಧರ್ಮರಾಯನ ಹಜಾರದಲ್ಲಿ ಸಮಯವನ್ನು ನೋಡುತ್ತಿದ್ದರು ; ಬಲಶಾಲಿಗಳಾಗಿ ದೂರದ ಪಯಣ ನಡೆಯುವಂಥಾ ಅರ್ಬುದ ಕುದುರೆಗಳನ್ನೂ ಪದ್ಮಕಿಂಜಲ್ಕ ವರ್ಣವುಳ್ಳಂಥಾವಾಗಿ ಸುವರ್ಣಮಯವಾದ ಘಂಟೆಗಳು ಕಟ್ಟಿರುವಂಥಾವಾಗಿ ಅ

ತಿ ತೀಕ್ಷ್ಣಗಳಾಗಿ ಅತಿದೀರ್ಘಗಳಾಗಿರುವ ಕತ್ತಿ, ಸಾಣಾಕತ್ತಿ, ಫಿರಂಗಿಕತ್ತಿ, ಪಟ್ಟಾಕತ್ತಿ, ಸೂರುಕತ್ತಿ, ಸಿರಾಯು, ಬಾಕು, ಕಠಾರಿ, ತೆಹ ಮೊದಲಾದ ಆಯುಧಗಳನ್ನೂ ತಂದು ಶಕ ತುಷಾರ ಶೃಂಗಿ ಮೊದಲಾದ ನಾನಾ ದ್ವೀಪಗಳ ಪುರುಷರು ಆತನ ಸಮಯವನ್ನು ನೋಡುತ್ತಿದ್ದರು; ರತ್ನಕಾಂಚನ ಖಚಿತಗಳಾದ ಗಜದಂತ ನಿರ್ಮಿತಗಳಾದ ಶಯನಾಸನ ವಾಹನಗಳನ್ನೂ ಸುವರ್ಣಾಲಂಕೃತಗಳಾಗಿ ಮನೋಹರಾಕಾರಗಳಾಗಿ ವ್ಯಾಘ್ರಚರ್ಮಾವೃತಗಳಾಗಿ ಉತ್ತಮಾಶ್ವಯುಕ್ತಗಳಾಗಿ ವಿಚಿತ್ರವಾಗಿರುವ ರಥಗಳನ್ನೂ ಕಾಂಚನ ಚಿತ್ರಿತಗಳಾದ ಕಾರ್ಮುಕಗಳನ್ನೂ ಬಾಣಗಳನ್ನೂ ಅರ್ಧ ಚಂದ್ರಬಾಣಗಳನ್ನೂ ಮತ್ತೂ ಅನೇಕವಿಧಗಳಾದ ಶಸ್ತ್ರಾಸ್ತ್ರಗಳನ್ನೂ ಅರಗಿನಛಾಯೆವುಳ್ಳ ಎರಡುಸಾವಿರ ವಸ್ತ್ರಗಳನ್ನೂ ಹತ್ತುಸಾವಿರ ದುಕೂಲಗಳನ್ನೂ ಅನೇಕ ವಿಚಿತ್ರಗಳಾದ ಕಾಂಸ್ಯಪಾತ್ರೆಗಳನ್ನೂ ಮಹಾರ್ಘಗಳಾದ ರತ್ನ ಕಂಬಳಗಳನ್ನೂ ಮತ್ತೂ ಅನೇಕ ದಿವ್ಯ ರತ್ನಗಳನ್ನೂ ಪೂರ್ವದಿಕ್ಕನ್ನು ಪರಿಪಾಲಿಸುತಲಿರುವ ಅರಸುಗಳು ಯಜ್ಞಶಾಲೆಗೆ ತಂದು ಯುಧಿಷ್ಠಿರನಿಗೆ ಕಪ್ಪವಾಗಿ ಕೊಟ್ಟರು; ಸಮುದ್ರ ಮಧ್ಯದ್ವೀಪವಾಸಿಗಳಾದ ಕೆಲವರು ಅಮೂಲ್ಯವಾದ ಮಣಿಗಳನ್ನು ತಂದು ಧರ್ಮರಾಯನಿಗೆ ಕೊಟ್ಟರು; ಮಾಳವ ನೃಪಾಲಕನು ಬಹುವಿಧ ರತ್ನಗಳನ್ನೂ ಕೋಟಿ ದ್ರೋಣಪರಿಮಿತವಾದ ಗೋಧೂಮಗಳನ್ನೂ ಮತ್ತೂ ಅನೇಕ ವಸ್ತು ವಿಶೇಷಗಳನ್ನೂ ತಂದುಕೊಟ್ಟನು; ಸುರಾಷ್ಟ್ರದೇಶಾಧೀಶ್ವರನು ಅನೇಕ ಮಣಿಗಳನ್ನೂ ಹತ್ತುಸಾವಿರ ಕೊಳಗಳ ಎಣ್ಣೆಯನ್ನೂ ಸ್ವಾದು ಗುಡ ಶರ್ಕರಾ ಪರಿಪೂರ್ಣವಾಗಿರುವ ಸಾವಿರ ಕೊಲ್ಲಾರ ಭಂಡಿಗಳನ್ನೂ ತಂದು ಧರ್ಮರಾಯನಿಗೆ ಕೊಟ್ಟನು; ಮತ್ತೂ ಸಮಸ್ತ ದೇಶಾಧೀಶ್ವರರಾದ ಧೊರೆಗಳು ನವರತ್ನರಾಶಿಗಳನ್ನು ತಂದು ಧರ್ಮರಾಯನಿಗೆ ಕೊಟ್ಟರು; ಜಂಬೂದ್ವೀಪದಲ್ಲಿರುವ ಒಂಭತ್ತು ವರ್ಷಗಳೊಳಗೆ ಹಿರಣ್ಮಯ ಕುರುವರ್ಷಗಳು ಎರಡು ಹೊರತಾಗಿ ಮಿಕ್ಕ ಏಳುವರ್ಷಗಳ ಅರಸುಗಳೊಳಗೆ ಪಾಂಡವರಿಗೆ ಕಾಣಿಕೆಯನ್ನು ಕೊಡದಿದ್ದಂಥಾವನು ಒಬ್ಬನೂಯಿಲ್ಲಾ; ಹೀಗೆ ಸಕಲಜನ ಪರಿಪೂರ್ಣವಾಗಿ ಧರ್ಮರಾಯನು ಮಾಡಿದ ಯಾಗಶಾಲೆಯು ದೇವೇಂದ್ರನ ಸಭಾಭವನದೋಪಾದಿಯಲ್ಲಿ ಪ್ರಕಾಶಿಸುತಲಿತ್ತು.' "

## ೪೪ ನೇ ಅಧ್ಯಾಯ.—ದ್ಯೂತಪರ್ವಶೇಷ.

"'ಎಲೈ ಧೊರೆಯೇ, ಮತ್ತೂ ನಾನಾ ದೇಶಗಳ ದೆಸೆಯಿಂದ ಬಂದ ಅರಸುಗಳು ತಂದುಕೊಟ್ಟ ವಸ್ತುಗಳನ್ನೂ ವಿಶೇಷಗಳನ್ನೂ ವಿವರಿಸುತಲಿದೇನೆ ಕೇಳು: ಮೇರುಮಂದರ ಮಧ್ಯ ಪ್ರದೇಶದಲ್ಲಿರುವ ಶೈಲೋದವೆಂಬ ನದೀ ಪ್ರಾಂತ್ಯದಲ್ಲಿರುವ ವೇಣುವನದಲ್ಲಿರುವಂಥಾ ಕಷ ಕಶ ತಮ್ರೋತ ಪ್ರದರ ದೀರ್ಘವೇಣು ಪಶುಕಾಲ ಕಳಿಂದ ತಂಗಣ ಪರತಂಗಣ ಪೈಪಠಿಕರು ಮೊದಲಾದ ಆಟವೀಕರು ಜೇನುಹುಳಗಳಿಂದ ಮಾಡಲ್ಪಟ್ಟ ಮತ್ತು ಹಿಮವತ್ಪರ್ವತದಲ್ಲಿರುವ ಪುಷ್ಪಗಳಲ್ಲಿ ಹುಟ್ಟಿದ ಜೇನು ತುಂಬಿದ ಚಿನ್ನದ ಗುಡಾಣಗಳನ್ನೂ ಕಪ್ಪಿನ ಬಾಲಗಳುಳ್ಳ ಚಮರೀ ಮೃಗಗಳನ್ನೂ ಉತ್ತರ ಕುರುದೇಶಗಳಲ್ಲಿರುವ ದಿವ್ಯೋದಕಗಳನ್ನೂ ದಿವ್ಯ ಪ್ರಸೂನಗಳನ್ನೂ ಕೈಲಾಸ ಪರ್ವತಕ್ಕೆ ಉತ್ತರ ಭಾಗದಲ್ಲಿ ಮಹಾ ಫಲ ಸಮೇತಗಳಾಗಿರುವ ದಿವ್ಯೌಷಧಿಗಳನ್ನೂ ತಂದು ಧರ್ಮರಾಯನಿಗೆ ಕೊಟ್ಟರು; ಪರ್ವತಗಳಲ್ಲಿರುವ ವಸ್ತು ವಿಶೇಷಗಳನ್ನು ತಂದ ಪಾರ್ವತೀಯರು ಆತನ ಹಜಾರವನ್ನು ಕಾದಿದ್ದರು; ಪಶ್ಚಿಮ ದಿಕ್ಕಿನಲ್ಲಿ ಅಸ್ತಾಚಲ ಪ್ರಾಂತ್ಯದಲ್ಲಿ ಸಮುದ್ರ ಮಧ್ಯದ್ವೀಪದ ಲೋಹಿತಪುರಸಮೀಪದಲ್ಲಿದ್ದುಕೊಂಡು ಫಲಮೂಲಾಸನರಾಗಿ ಚರ್ಮವನ್ನು ಹೊದ್ದುಕೊಂಡಿರುವ ಕಿರಾತರು ಮಹಾರಾಜಯೋಗ್ಯಗಳಾದ ಕಂಬಳಗಳನ್ನೂ ಚಂದನಾಗರು ಮುಖ್ಯಗಳಾದ ಸುಗಂಧಗಳನ್ನೂ ಅತಿಮನೋಹರಗಳಾದ ಚರ್ಮಗಳನ್ನೂ ರತ್ನ ಕಾಂಚನಗಳನ್ನೂ ಅನರ್ಘ್ಯಗಳಾದ ಗಂಧಗಳನ್ನೂ ಹತ್ತುಸಾವಿರ ಕಿರಾತ ದಾಸೀಜನಗಳನ್ನೂ ಅತಿವಿಚಿತ್ರಗಳಾಗಿ ದ್ವೀಪಾಂತರದಲ್ಲಿ ಹುಟ್ಟಿದ ಮೃಗ ಪಕ್ಷಿಗಣಗಳನ್ನೂ ಪರ್ವತಗಳಲ್ಲಿ ಹುಟ್ಟಿದ ಶುದ್ಧ ಸುವರ್ಣವನ್ನೂ ತಂದು ಆತನ ಬಾಗಲಲ್ಲಿ ತಡೆಯಲ್ಪಟ್ಟು ಕಾದಿದ್ದರು; ಕಾವಲ್ಯ ದಧರೋರ್ವ ಶೂರ ಹೈಮವತ ಔದುಂಬರ ದರ್ವಿಭಾಗ ಪಾರವ ಬಾಹ್ಲಿಕ ಕಾ

ಶ್ಮೀರ ಕುಂತಲ ಗೌಡಕ ಹಂಸಕ ಶಿಬಿ ತ್ರಿಗರ್ತ ಯೌಧೇಯ ಮಾಂತ್ರಕ ವಸಾತಿಕ ಸಮಾಲವ ಕ್ಷುದ್ರಕ ಮಾಳವ ಶಾಂಡಿಕ ಬಧರ ಸಾಲ್ವ ಅಂಗ ವಂಗ ಕಳಿಂಗ ಗಯ ಮೊದಲಾದ ಅರಸುಗಳು ತಮ್ಮ ತಮ್ಮ ಬಲದೊಡನೆ ಕೂಡಿ ಅನೇಕ ಧನಗಳನ್ನು ತಂದು ಧರ್ಮರಾಯನಿಗೆ ಕೊಟ್ಟರು; ತಾಮ್ರಲಿಪ್ತ ಪೌಂಡ್ರಕರು ಮೊದಲಾದ ಅರಸುಗಳು ಪೀತಾಂಬರ ದುಕೂಲ ಮೊದಲಾದ ವಸ್ತ್ರಗಳನ್ನು ತಂದು ಬಾಗಲಲ್ಲಿ ತಡೆಯಲ್ಪಟ್ಟವರಾಗಿ ಕಾದಿದ್ದರು; ನೇಗಲು ಪ್ರಮಾಣವುಳ್ಳ ದಂತಗಳು ಸುವರ್ಣಮಯವಾದ ಜೋರಜಿ ಹಗ್ಗಗಳನ್ನೂ ಕಮಲದ ಕಾಂತಿಗಳುಳ್ಳ ರತ್ನ ಕಂಬಳಗಳೂ ಶಂಖಮಾಲಿಕೆಗಳೂ ಉಳ್ಳಂಥಾವಾಗಿ ಒಳ್ಳೇ ಕುಲದಲ್ಲಿ ಹುಟ್ಟಿದಂಥಾವಾಗಿ ಪರ್ವತಾಕಾರಗಳಾದ ಆನೆಗಳನ್ನೂ ಒಬ್ಬೊಬ್ಬನು ಒಂದೊಂದು ಸಾವಿರವನ್ನು ತಂದು ಬಾಗಲಲ್ಲಿರುವ ಅಧಿಕಾರಿಗಳ ಸಮೀಪದಲ್ಲಿ ಕಾದಿದ್ದರು; ವೈದೇಹಕ ಪುಂಡ್ರಕ ಗಾಲವ ತಾಂಬ್ರಲಿಪ್ತಕ ಮರುಕ ಕೌಶಿಕ ದರದ ಭೌಮೆಯ ನಟನಾಟಕ ಕರ್ನಾಟಕ ಕಾಂಸ್ಯಕುಟ್ಟ ಪದ್ಮಜಾಲ ಶುಚಿವರ ದಾಕ್ಷಿಣಾತ್ಯ ಕುಳಿಂದ ಶಬರ ಕಂಕಣ ಕಷ ಬರ್ಬರ ಯವನ ಘೂರ್ಜರ ಅಭೀರಕ ಪಪ್ಲವ ಶಕ ಕಾರೂಶ ತುಂಬುರ ಕೌಶಿಕಂಗಳು ಮೊದಲಾದ ದೇಶಗಳ ಅಧಿಪತಿಗಳು ತಮತಮಗೆ ಉಂಟಾದ ರತ್ನಗಳನ್ನು ತಂದು ಕಪ್ಪವಾಗಿ ಕೊಟ್ಟರು; ಮತ್ತೂ ಸಿಂಹಳದ್ವೀಪಗಳಲ್ಲಿರುವ ಅರಸುಗಳು ಸಮುದ್ರದಲ್ಲಿ ಹುಟ್ಟಿ ಅಮೂಲ್ಯಗಳಾಗಿರುವ ಮುಕ್ತಾ ವೈಡೂರ್ಯ ಮಣಿಸಮೂಹಗಳನ್ನೂ ದಕ್ಷಿಣಾವರ್ತ ಶಂಖಗಳನ್ನೂ ಮನೋಹರಂಗಳಾದ ಮುತ್ತಿನ ಚಿಪ್ಪುಗಳನ್ನೂ ತಂದು ಧರ್ಮರಾಯನಿಗೆ ಕೊಟ್ಟರು; ಇಂದ್ರನಿಗೆ ಸ್ನೇಹಿತನಾದ ಚಿತ್ರರಥನೆಂಬ ಗಂಧರ್ವ ಶ್ರೇಷ್ಠನು ಸುವರ್ಣಮಯ ವಸ್ತ್ರಾಲಂಕೃತಗಳಾಗಿ ಕಂಪಾದ ನೇತ್ರಾಂಚಲಗಳುಳ್ಳಂಥಾವುಗಳಾಗಿ ಸುವರ್ಣ ಭೂಷಣಾಭೂಷಿತಗಳಾಗಿ ದೇವಲೋಕದಲ್ಲಿ ಹುಟ್ಟಿದ ನಾನೂರು ಆನೆಗಳನ್ನು ಕಾಣಿಕೆಯಾಗಿ ತಂದುಕೊಟ್ಟನು; ಮಾವಿನ ತಿರುವರ್ಣವುಳ್ಳ ನೂರು ಕುದುರೆಗಳನ್ನು ತುಂಬುರನು ಕೊಟ್ಟನು; ಕುಳಿಂದ ದೇಶಾಧ್ಯಕ್ಷನು ಅನೇಕ ರತ್ನ ಕಾಂಚನಗಳನ್ನು ಕಪ್ಪವಾಗಿ ಸಮರ್ಪಿಸಿದನು; ಮತ್ಸ್ಯದೇಶಾಧಿಪತಿಯಾದ ವಿರಾಟನು ಕಾಂಚನಾಲಂಕಾರ ಶೋಭಿತಗಳಾದ ಇಪ್ಪತ್ತೈದು ಸಾವಿರ ಕುದುರೆಗಳನ್ನೂ ಪತ್ನೀಸಮೇತರಾದ ಹತ್ತುಸಾವಿರ ಊಳಿಗದವರನ್ನೂ ಮನೋಹರಾಂಗಿಗಳಾದ ನಾಲ್ಕು ಸಾವಿರ ದಾಸೀ ಜನಗಳನ್ನೂ ತಂದು ಕೊಟ್ಟನು; ಬಾಹ್ಲಿಕ ದೇಶಾಧೀಶ್ವರನು ಕುದುರೆಗಳನ್ನು ಕಟ್ಟಿರುವ ಇಪ್ಪತ್ತೈದು ರಥಗಳು ಆನೆಗಳು ತನ್ನ ಇವಷ್ಟನ್ನೂ ಯಜ್ಞಾರ್ಥವಾಗಿ ತಂದು ಕೊಟ್ಟನು; ಇವನ್ನು ನೋಡಿದ್ದು ಮೊದಲು ನನ್ನ ಮನಸ್ಸು ತಪಿಸುತಲಿಧೆ; ಜ್ಯೇಷ್ಠನನುಗನಾಗಿ ಗುಣವಂತನಾದ ನಾನು ಅಪ್ರಯೋಜಕನಾಗಿರಲು ಕನಿಷ್ಠನಮಕ್ಕಳಾಗಿ ಗುಣರಹಿತರಾದ ಪಾಂಡವರು ಅಭಿವೃದ್ಧಿಯನ್ನೈದುವದನ್ನು ನೋಡಿದರೆ ನೊಗದ ಮೇಲೆ ಕುದುರೆಯನ್ನು ಕಟ್ಟಿದಹಾಗೆ ವೈಪರೀತ್ಯವಾಗಿ ತೋರುತಲಿಧೆ; ಇವೆಲ್ಲ ನಿನ್ನಿಂದಲೇ ಆದವು; ಅಭಿಮಾನಶಾಲಿಗಳಾಗಿ ಬಲವಂತರಾದ ಅರಸುಗಳಷ್ಟುಮಂದಿಯೂ ತಮಗೆ ಕಾಣಿಕೆಯನ್ನು ಕೊಡುವವರಿಂದ ಪಾಂಡವರು ಗರ್ವಿಸಿಧಾರೆ; ವೇದಶಾಸ್ತ್ರಸಂಪನ್ನರಾದ ಬ್ರಾಹ್ಮಣರೂ ಸಮರ ಕರ್ಕಶರಾದ ಕ್ಷತ್ರಿಯರೂ ವೈಶ್ಯ ಶೂದ್ರರೂ ತಮಗೆ ವಿಹಿತವಾದ ಕಾರ್ಯಗಳನ್ನು ಮಾಡಿಕೊಂಡು ಆತನಿಗೆ ಸಂತೋಷವನ್ನು ಮಾಡುತಲಿಧಾರೆ; ಆದಿಮಧ್ಯಾಂತರದಲ್ಲಿ ಹುಟ್ಟಿದ ಮ್ಲೇಚ್ಛರು ನಾಲ್ಕು ವರ್ಣದವರು ಮೊದಲಾಗಿ ಲೋಕದಲ್ಲಿರುವ ಸಮಸ್ತ ಜನಗಳೂ ಆತನ ಪಟ್ಟಣಕ್ಕೆ ಬಂದು ವಾಸಮಾಡಿಕೊಂಡಿಧಾರೆ; ಈ ರೀತಿಯಿಂದ ಸಕಲರಾದ ಅರಸುಗಳೂ ತಂದುಕೊಟ್ಟ ಕಾಣಿಕೆಗಳನ್ನು ನೋಡಿ ಆ ಶತ್ರುಗಳು ಪಡುವಂಥಾ ಸಂತೋಷವನ್ನು ನೋಡಿದರೆ ಶರೀರವನ್ನು ಬಿಡಬೇಕೆಂದು ಇಚ್ಛೆ ಹುಟ್ಟುತಲಿಧೆ; ಧರ್ಮರಾಯನ ಮನೆಯಲ್ಲಿ ಊಟಮಾಡುವಂಥಾವರೂ ಪಡಿಯನ್ನು ತೆಗದುಕೊಳ್ಳುವಂಥಾವರೂ ಮೂರು ಪದ್ಮಗಳು; ಹತ್ತು ಸಾವಿರ ಆನೇಮಾವುತರು ಹತ್ತು ಸಾವಿರ ಕುದುರೆರಾವುತರು ಹತ್ತು ಸಾವಿರ ರಥ ಸಾರಥಿಗಳು ಲೆಕ್ಕವಿಲ್ಲದ ಕಾಲಾಳುಗಳೂ ಇಧಾರೆ; ಮತ್ತೂ ಆತನ ಯಾಗಶಾಲೆಯಲ್ಲಿ ಬಂದು ಕಡೆಯಲ್ಲಿ ಅಡಿಗೇ ಮಾಡುವಂಥಾವರು ಬಂದು ಕಡೆಯಲ್ಲಿ ಬ್ರಾಹ್ಮಣರನ್ನು ಕರೆಯುವಂಥಾವರು ಮತ್ತೊಂದು ಕಡೆಯಲ್ಲಿ ಪುಣ್ಯಾಹವಾಚನೆಯನ್ನು ಮಾಡುವಂಥಾವರಾಗಿದ್ದರು; ಮತ್ತೂ ಆ ಯಜ್ಞಕ್ಕೆ ಬಂದವರೊಳಗೆ ಹಸಿವಾಗಿದ್ದವನು ಊಟಮಾಡದಿದ್ದವನು ಸಂತೋಷಪಡದೇ ಇದ್ದವನು ಒಬ್ಬನನ್ನೂ ಕಾಣಲಿಲ್ಲಾ; ಬ

ಬ್ಬೊಬ್ಬನಿಗೆ ಮೂವತ್ತು ದಾಸೀಜನಗಳುಳ್ಳ ಎಂಭತ್ತೆಂಟು ಸಾವಿರ ಬ್ರಾಹ್ಮಣರು ಧರ್ಮರಾಯನಿಂದ ಸಂರಕ್ಷಿತರಾಗಿ ಆತನಿಗೆ ಜಯವಾಗಲೆಂದು ಆಶೀರ್ವಾದವನ್ನು ಮಾಡುತಲಿದ್ದರು ; ಜಿತೇಂದ್ರಿಯರಾದ ಹತ್ತು ಸಾವಿರ ಯತೀಶ್ವರರು ಆತನ ಮನೆಯಲ್ಲಿ ಸುವರ್ಣಪಾತ್ರೆಯಲ್ಲಿ ಊಟಮಾಡುತ್ತಿದ್ದರು ; ಮತ್ತೂ ಆತನ ಯಜ್ಞದಲ್ಲಿ ಕುರುಡರು ಕುಂಟರು ಹೆಳವರು ಕಿವಡರು ಮೂಗರು ಮೊದಲಾದವರು ಊಟಮಾಡುತ್ತಿರಲು ಅವರೆಲ್ಲರನ್ನೂ ದ್ರೌಪದಿಯು ಬಂದು ವಿಚಾರಿಸಿಕೊಳ್ಳುತ್ತಿದ್ದಳು ; ವಿವಾಹಸಂಬಂಧದಿಂದ ಅಂಧಕವೃಷ್ಣಿಶ್ರೇಷ್ಠರು ಹೊರತಾಗಿ ಮಿಕ್ಕಾದ ಅರಸುಗಳೊಳಗೆ ಧರ್ಮರಾಯನಿಗೆ ಕಾಣಿಕೆಯನ್ನು ಕೊಡದೇ ಇದ್ದವನಿಲ್ಲಾ.' "

## ೮೯ನೇ ಅಧ್ಯಾಯ.—ದ್ಯೂತ ಪರ್ವ ಶೇಷ.

" 'ಕೇಳು ದೊರೆಯೆ, ಸತ್ಯಸಂಧರಾಗಿ ಪ್ರತಾಪಶಾಲಿಗಳಾಗಿ ಸಕಲ ವಿದ್ಯಾಪಾರಂಗತರಾಗಿ ಮಹಾ ಯಾಗಗಳನ್ನು ಮಾಡಿ ಅವಭೃತಗಳನ್ನು ಮಾಡಿದ ಮಹಾತ್ಮರಾಗಿ ಕೀರ್ತಿಸಂಪನ್ನರಾದ ಮಹಾತ್ಮರಾಗಿ ಸಂತುಷ್ಟಚಿತ್ತರಾಗಿ ಮೂರ್ಧಾಭಿಷಿಕ್ತರಾದ ಅರಸುಗಳೆಲ್ಲರೂ ಧರ್ಮರಾಯನನ್ನು ಓಲಗಿಸುತ್ತಿದ್ದರು ; ಕೆಲವು ಅರಸುಗಳು ಅಧಿಕವಾಗಿ ಹಾಲನ್ನು ಕರೆಯುವಂಥಾ ಅನೇಕ ಗೋಸಹಸ್ರಗಳನ್ನೂ ಅವಭೃತಸ್ನಾನಾರ್ಥವಾಗಿ ಅತಿ ವಿಚಿತ್ರವಾದ ಭಾಂಡಗಳನ್ನೂ ಆ ಯುಧಿಷ್ಠಿರನಿಗೆ ಯಾಗ ರಕ್ಷಣಾರ್ಥವಾಗಿ ತಂದುಕೊಟ್ಟರು ; ಬಾಹ್ಲೀಕ ದೇಶಾಧೀಶ್ವರನು ಕಾಂಚನಾಲಂಕೃತವಾಗಿ ಮಹೋನ್ನತವಾದ ರಥವನ್ನೂ ಸುದಕ್ಷಿಣ ಭೂವಲ್ಲಭನು ಕಾಂಭೋಜದೇಶದ ಬಿಳೀ ಕುದುರೆಗಳನ್ನೂ ಚೇದಿರಾಜ್ಯಾಧ್ಯಕ್ಷನಾಗಿ ಮಹಾಕೀರ್ತಿಸಂಪನ್ನನಾಗಿ ಅಸಮಾನಬಲಶಾಲಿಯಾದ ಶಿಶುಪಾಲನು ರತ್ನಧ್ವಜವನ್ನೂ ದಕ್ಷಿಣ ದೇಶಾಧಿಪತಿಯಾದ ಮಾಗಧನು ಕವಚ ಕಿರೀಟಗಳನ್ನೂ ಸುವರ್ಣ ಪುಷ್ಪಮಾಲಿಕಗಳನ್ನೂ ಧನುರ್ಧರಶ್ರೇಷ್ಠನಾದ ವಸುದಾನನು ಅತ್ಯುನ್ನತನಾಗಿ ಅರವತ್ತು ವರುಷದ ಪ್ರಾಯವುಳ್ಳ ಒಂದು ಭದ್ರಗಜವನ್ನೂ ಮತ್ಸ್ಯ ದೇಶಾಧಿಪತಿಯು ದಾಳಗಳನ್ನೂ ಕುದುರೆಗಳನ್ನೂ ಏಕಲವ್ಯನು ರತ್ನಖಚಿತವಾದ ಪೈಜಾರುಗಳನ್ನೂ ಅವಂತಿ ದೇಶಾಧಿಪತಿಯಾದವನು ಅಭಿಷೇಕಾರ್ಥವಾಗಿ ಬಹುಪ್ರಕಾರಗಳಾದ ಪುಣ್ಯೋದಕಗಳನ್ನೂ ಚೇಕಿತಾನನು ಬತ್ತಳಿಕೆಗಳನ್ನೂ ಕಾಶೀವಲ್ಲಭನು ದಿವ್ಯ ಕಾರ್ಮುಖವನ್ನೂ ಶಲ್ಯನು ಸುವರ್ಣಮಯವಾದ ಹಿಡಿಯುಳ್ಳ ಖಡ್ಗವನ್ನೂ ಮಿಕ್ಕಾದ ಅರಸುಗಳು ನಾನಾಪ್ರಕಾರವಾದ ಆಯುಧಗಳನ್ನೂ ಹಿಡಿದು ಸುತ್ತಿಕೊಂಡಿರಲು ಧರ್ಮರಾಯನು ಅವಭೃತಸ್ನಾನಾರ್ಥವಾಗಿ ಹೊರಟನು ; ಆಗ ಋತ್ವಿಗ್ಜನಗಳು ದೇವೇಂದ್ರನ ಸಂಗಡ ಹೋಗುವ ಸಪ್ತಋಷಿಗಳ ತೆರದಿಂದ ಆತನ ಸಂಗಡಲೇ ಹೊರಟರು ; ಪರಾಕ್ರಮ ಧುರೀಣನಾದ ಸಾತ್ಯಕಿಯು ಛತ್ರವನ್ನೂ ಭೀಮಾರ್ಜುನರಿಬ್ಬರೂ ಚಾಮರಗಳನ್ನೂ ಹಿಡಿದುಕೊಂಡು ಬಂದರು. ಪೂರ್ವಕಾಲದಲ್ಲಿ ಕ್ಷೀರಸಮುದ್ರದಲ್ಲಿ ಹುಟ್ಟಿದ ಶಂಖವನ್ನು ಸಾವಿರ ಸುವರ್ಣದಿಂದ ಅಲಂಕರಿಸಿ ವಿಶ್ವಕರ್ಮನು ಬ್ರಹ್ಮದೇವನಿಗೆ ಕೊಟ್ಟನು ; ಆತನು ಇಂದ್ರನಿಗೆ ಕೊಟ್ಟನು ; ಆತನು ವರುಣನಿಗೆ ಕೊಟ್ಟನು ; ಅಂಥಾ ಶಂಖವನ್ನು ವರುಣನು ಧರ್ಮರಾಯನಿಗೆ ಕಳುಹಿಸಲು ಕೃಷ್ಣನು ಅದರಿಂದ ಧರ್ಮರಾಯನಿಗೆ ಅಭಿಷೇಕವನ್ನು ಮಾಡಿದನು ; ಅದನ್ನು ನೋಡಿ ನನ್ನ ಮನಸ್ಸು ಕ್ಲೇಶಪಡುತಲಿದೆ ; ಮತ್ತೂ ರಾಕ್ಷಸೋತ್ತಮರು ಸುವರ್ಣ ಕಲಶಗಳನ್ನು ತಕ್ಕೊಂಡು ಪೂರ್ವ ದಕ್ಷಿಣ ಪಶ್ಚಿಮ ಸಮುದ್ರಗಳಿಗೆ ಹೋಗಿ ಮನುಷ್ಯ ಸಂಚಾರವಿಲ್ಲದ ಉತ್ತರ ಸಮುದ್ರವನ್ನು ಬಿಟ್ಟು ಕಡಮೆ ಮೂರು ಸಮುದ್ರಗಳಿಂದಲೂ ಧರ್ಮರಾಯನ ಅಭಿಷೇಕಾರ್ಥವಾಗಿ ಉದಕಗಳನ್ನು ತಂದರು ; ಆ ಸಮಯದಲ್ಲಿ ಶುಭಪ್ರದಗಳಾದ ಶಂಖನಾದಗಳು ಕೇಳಲ್ಪಟ್ಟವು ; ಅದರಿಂದ ಹುಟ್ಟಿದ ಭಯದಿಂದ ನನಗೆ ರೋಮಾಂಚವು ಹುಟ್ಟಿತು ; ಸಕಲರಾದ ಅರಸುಗಳೂ ನಿಸ್ತೇಜಸ್ಕರಾಗಿ ಭೂಮಿಯಲ್ಲಿ ಬಿದ್ದರು ; ಅಂಥಾ ಅವಸ್ಥೆಯನ್ನು ನೋಡಿ ಕೃಷ್ಣದ್ವೈಪಾಯನನು ಪಾಂಡವರೈದುಮಂದಿಯು ಸಾತ್ಯಕಿಯು ಕೃಷ್ಣನೂ ಹಾಸ್ಯಮಾಡಿದರು ; ಆ ಸಮಯದಲ್ಲಿ ಧರ್ಮರಾಯನು ಸುವರ್ಣಮಯವಾದ ಕೊಂಬುಗಳುಳ್ಳ ಐನೂರು ಎತ್ತುಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು ; ವೈಶ್ಯನು

ಯುವನಾಶ್ವನು ಪೃಥುವು ಭಗೀರಥನು ಮೊದಲಾದ ಪೂರ್ವದ ಅರಸುಗಳ ವೈಭವಗಳೂ ಈ ಧರ್ಮರಾಯನ ಐಶ್ವರ್ಯಕ್ಕೆ ಸಮಾನವಾಗಲಾರವು; ಮೊದಲು ಹಸ್ತಿಂಪ್ರನು [illegible] ಮಾಡಿದ ರೀತಿಗೆ ಮಾಡಿ ಪಾಂಡವರು ಸಕಲೈಶ್ವರ್ಯಗಳನ್ನು ಅನುಭವಿಸುವದನ್ನು ನೋಡಿ ನಾನು ಯಾವ ರೀತಿಯಿಂದ ಸೈರಿಸುವೆನು! ಇನ್ನು ಬಾರಿ ಬಾರಿಗೂ ಹೇಳಿ ಪ್ರಯೋಜನವೇನು! ಪಾಂಡವರ ವೈಭವವನ್ನು ನೋಡಿ ಸಹಿಸುವದಕ್ಕೆ ಅಶಕ್ಯನಾದ್ದರಿಂದ ನನಗೆ ವೈವರ್ಣ್ಯವೂ ಕಾರ್ಶ್ಯವೂ ಶೋಕವೂ ಪ್ರಾಪ್ತವಾಯಿತು' ಎಂದು ದುರ್ಯೋಧನನು ಧೃತರಾಷ್ಟ್ರನಿಗೆ ಹೇಳಿದನು."

## ೯೦ ನೇ ಅಧ್ಯಾಯ.—ದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಈಪ್ರಕಾರದಿಂದ ಪಾಂಡವರ ಸಾಮ್ರಾಜ್ಯವನ್ನು ನೋಡಿ ಸಹಿಸಲಾರದೆ ದುಃಖಪಡುತ ನುಡಿಯುತಲಿರುವ ದುರ್ಯೋಧನನ ವಾಕ್ಯವನ್ನು ಕೇಳಿ ಧೃತರಾಷ್ಟ್ರನು 'ಎಲೈ ದುರ್ಯೋಧನನೆ, ಜ್ಯೇಷ್ಠಪುತ್ರನಾಗಿ ರಾಜ್ಯಾಭಿಷಿಕ್ತನಾದ ನೀನು ಪಾಂಡವರಲ್ಲಿ ವಿರೋಧ ಮಾಡುವದರಿಂದ ಆತ್ಮನಾಶನವು ಬಂದು ದುಃಖವೇ ಪ್ರಾಪ್ತವಾಗುವದು; ಆದ್ದರಿಂದ ಅದು ಯುಕ್ತವಲ್ಲಾ; ವಿವೇಕ ಧುರೀಣನಾಗಿ ನಿರ್ಮತ್ಸರನಾಗಿ ನಿನಗೆ ಪರಮಮಿತ್ರನಾದ ಧರ್ಮರಾಯನಮೇಲೆ ಹೀಗೆ ಕೋಪಿಸಿಕೊಳ್ಳುವದು ಉಚಿತವೆ? ನೀವಿಬ್ಬರೂ ಒಂದೇ ವಂಶದಲ್ಲಿ ಹುಟ್ಟಿ ಸಮಾನ ಪರಾಕ್ರಮಿಗಳಾಗಿರುವಲ್ಲಿ ಅಣ್ಣನ ವೈಭವವನ್ನು ತಮ್ಮನು ಪರಿಹರಿಸುವದಕ್ಕೆಣಿಸುವದು ದುರಾಶೆಯೇ ಹೊರತಾಗಿ ಮತ್ತೊಂದಲ್ಲ; ಆದ್ದರಿಂದ ಈ ದುರ್ಬುದ್ಧಿಯನ್ನು ಬಿಟ್ಟು ಬಿಡು; ನೀನೂ ಧರ್ಮರಾಯನೋಪಾದಿಯಲ್ಲಿ ಯಾಗಮಾಡಬೇಕೆಂದೆಣಿಸಿದರೆ ಸಕಲರಾದ ಅರಸುಗಳೂ ಬಹುಮಾನಪೂರ್ವಕವಾಗಿ ಪ್ರೀತಿಯಿಂದ ರತ್ನಕಾಂಚನ ಮೊದಲಾದ ವಸ್ತುಗಳನ್ನು ಕೊಡುವರು; ವೇದವೇದಾಂಗ ಪಾರಂಗತರಾದ ಬ್ರಾಹ್ಮಣರು ಯಾಜಕರಾಗಿ ಪ್ರವರ್ತಿಸಲು ಮಹಾಧ್ವರವನ್ನು ಮಾಡಿ ಸಂತೋಷದಿಂದ ಸುಖವಾಗಿರು; ಸಕಲ ಮನೋರಥಗಳನ್ನು ನೆರವೇರಿಸುವದಕ್ಕೆ ಸಾಮರ್ಥ್ಯವುಂಟಾಗಿ ಕಾಮಧೇನು ಚಂದದಿಂದ ಒಪ್ಪುತಲಿರುವ ಈ ಭೂಮಿಯು ವೀರಪತ್ನಿಯೆನಿಸಿಕೊಳ್ಳುವಳು; ಆಪ್ರಕಾರದಿಂದ ರಾಜ್ಯಲಕ್ಷ್ಮಿಯು ವೀರನಾದ ಪುರುಷನಿಗೆ ಕಳತ್ರದೋಪಾದಿಯಲ್ಲಿ ಅಧೀನೆಯಾದ್ದರಿಂದ ಅಂಥಾ ಶೌರ್ಯಧುರ್ಯರಿಗೆ ಅಧೀನೆಯಾಗಿ ಆತನು ಬಯಸಿದ ಬಯಕೆಗಳನ್ನು ಜೊತೆಗೊಳಿಸುವಳು; ನಿನಗೂ ಅಂಥಾ ಪರಾಕ್ರಮ ಶಕ್ತಿಯಿದ್ದರೆ ಚತುಸ್ಸಮುದ್ರ ಪರಿವೇಷ್ಟಿತವಾದ ಭೂಮಂಡಲವಷ್ಟನ್ನೂ ಪರಿಪಾಲಿಸುತಲಿದ್ದು; ಮಿತ್ರರಾದವರನ್ನು ಅವಮಾನಿಸುವದು ಪರರಿಗೆ ಅಪಕಾರವನ್ನು ಮಾಡುವದು ಪರರ ಧನಗಳಿಗೆ ಆಶೆಪಡುವದು ಸ್ವಕಾರ್ಯಪರನಾಗಿರುವದು ಎಂಬ ಈ ದುರ್ಗುಣಗಳು ಐಶ್ವರ್ಯವನ್ನು ಸಂಪಾದಿಸಲಾರವು; ದೊಡ್ಡದಾದ ಆಪತ್ತು ಬಂದಲ್ಲಿ ಧೈರ್ಯವನ್ನು ಬಿಡದೆ ಅಪ್ರಮತ್ತನಾಗಿ ವಿನಯಸಂಪನ್ನನಾಗಿರುವ ಪುರುಷನು ಯಾವಾಗಲೂ ಸಕಲ ಸೌಖ್ಯಗಳನ್ನು ಅನುಭವಿಸುವದರಿಂದ ಮನಸ್ಸಿನಲ್ಲಿರುವ ಅಸೂಯೆಗಳನ್ನು ಬಿಟ್ಟು ನಿನ್ನ ವೈಭವಗಳನ್ನು ಪಡಿಸುವ ಹಾಗೆ ಅನೇಕ ಯಾಗಗಳನ್ನು ಮಾಡುತ ರೂಪಲಾವಣ್ಯಶಾಲಿಗಳಾದ ಸ್ತ್ರೀಜನಗಳೊಡನೆ ಕ್ರೀಡಿಸುತ ಅಪೇಕ್ಷಿತೋಪಭೋಗಗಳನ್ನು ಪಡೆದು ಸುಖವಾಗಿರು' ಎಂದು ಧೃತರಾಷ್ಟ್ರನು ದುರ್ಯೋಧನನಿಗೆ ಹೇಳಿದನು."

## ೯೧ ನೇ ಅಧ್ಯಾಯ.—ದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ದುರ್ಯೋಧನನು ಹೀಗೆ ಹಿತೋಪದೇಶವನ್ನು ಮಾಡಿದ ಧೃತರಾಷ್ಟ್ರನ ವಚನವನ್ನು ಕೇಳಿ 'ಎಲೈ ರಾಯನೆ, ನೀನು ಸಕಲವನ್ನು ತಿಳಿದಿದ್ದೂ ಓಡೆಯಲ್ಲಿ ಕಟ್ಟಿದ ಓಡೆಯೋಪಾದಿಯಲ್ಲಿ ಪರಾಧೀನನಾಗಿ ಸ್ವಾರ್ಥದಲ್ಲಿ ಪ್ರಮತ್ತನಾಗಿ ನುಡಿಯುತ್ತಿದ್ದೀ; ನನ್ನಲ್ಲಿ ನಿನಗೆ ವಿರೋಧವು ಹುಟ್ಟಿದ ಹಾಗೆ ತಿಳಿಯುತ್ತದೆ; ನಿನ್ನಂಥಾ ಮಹಾನುಭಾವನು ಅಕೃತ್ಯವನ್ನು ಕೃತ್ಯವೆಂದು ಉಪದೇಶಮಾಡುವದರಿಂದ ಕೌರವರಿಗಿನ್ನು ಜೀವನವೇನು? ಸ್ವತಂತ್ರನಾದ ನೀನು ಪರವಾಕ್ಯವನ್ನು ಕೇಳಿ ಉಪದೇಶಮಾಡುವಂಥಾ ವಾಕ್ಯಗ

ಳು ರಾಜನೀತಿ ವಿರುದ್ಧಗಳಾಗಿವೆ; ಯಾರಾದರೂ ಬುದ್ಧಿಮಾರ್ಗವನ್ನು ಅನುಸರಿಸಿ ನಡಕೊಳ್ಳದಿರುವನೆ? ವೃದ್ಧನಾಗಿ ಬುದ್ಧಿಸಂಪನ್ನನಾಗಿ ಜಿತೇಂದ್ರಿಯನಾದ ನೀನು ಸ್ವಕಾರ್ಯನಿರತರಾಗಿ ಪ್ರವರ್ತಿಸಿದಂಥಾ ನಮಗೆ ಬುದ್ಧಿಭ್ರಾಂತವನ್ನು ಕಲ್ಪಿಸುತ್ತಿದ್ದೀಯೆ ಹೊರತಾಗಿ ಮತ್ತೊಂದಿಲ್ಲ; ಲೋಕದ ನಡತೆಗೂ ರಾಜನೀತಿಗೂ ದೂರವಾಗಿರುವದು ಎಂದು ಬೃಹಸ್ಪತಿ ವಾಕ್ಯಗಳು ಉಂಟಾಗಿರುವದರಿಂದ ಅರಸುಗಳು ತಮ್ಮ ಕಾರ್ಯವಾಗುವ ಉಪಾಯವನ್ನೇ ಚಿಂತಿಸುತ್ತಿರಬೇಕು; ಇದು ಧರ್ಮವು ಇದು ಅಧರ್ಮವು ಎಂದೆಣಿಸದೆ ಶತ್ರುಸಂಹಾರದಲ್ಲಿಯೇ ಯಾವಾಗಲೂ ಪ್ರಯತ್ನಮಾಡುವದು ಕ್ಷತ್ರಿಯರಿಗೆ ಸ್ವಧರ್ಮವು; ಸಾರಥಿಯಾದವನು ಕಶೇಕೋಲನ್ನು ತಕ್ಕೊಂಡು ಸಮಯವರಿತು ರಥಕ್ಕೆ ಕಟ್ಟಿದ ಕುದುರೆಗಳನ್ನು ನಾಲ್ಕು ದಿಕ್ಕುಗಳಲ್ಲಿ ನಡಿಸುವ ತೆರದಿಂದ ಅರಸಾದವನು ಉಪಾಯಾಂತರದಿಂದ ಶತ್ರುಗಳ ಐಶ್ವರ್ಯವನ್ನು ನಾಲ್ಕು ದಿಕ್ಕುಗಳಲ್ಲಿ ಚೆದರಿಸಬೇಕು; ಪ್ರಕಾಶದಿಂದಲಾದರೂ ಪ್ರಚ್ಛನ್ನವೇಷದಿಂದಲಾದರೂ ಶತ್ರುಗಳನ್ನು ಜಯಿಸುವಂಥಾ ಉಪಾಯವೆ ಅರಸುಗಳಿಗೆ ಶಸ್ತ್ರವಲ್ಲದೆ ಮತ್ತೊಂದು ಶಸ್ತ್ರವಿಲ್ಲಾ; ತನಗೆ ಇಷ್ಟುಮಾತ್ರವೆ ರಾಜ್ಯಸಾಕೆಂದು ತೃಪ್ತಿಯನ್ನೈದದೆ ಶತ್ರುಗಳನ್ನು ಜಯಿಸುವಂಥಾ ಉಪಾಯವನ್ನೇ ಯಾವ ಪುರುಷನು ಚಿಂತಿಸುವನೊ ಆತನು ರಾಜವಿಧಿಜ್ಞನಾಗಿ ಆತನಿಗೆ ಸಕಲೈಶ್ವರ್ಯಗಳೂ ಕೈಕೂಡುವದರಿಂದ ಇಂಥಾ ರಾಜಧರ್ಮವನ್ನು ಬಯಸುತಲಿದ್ದೇನೆ; ಈ ರಾಜ್ಯವನ್ನೂ ಧನವನ್ನೂ ತನ್ನದೆಂದು ಮನಸ್ಸಿನಲ್ಲೆಣಿಸುವದಕ್ಕೆ ಯಾರಿಗೂ ಕೆಲಸವಿಲ್ಲಾ; ಬಲವಂತನಾದವನು ದುರ್ಬಲರನ್ನು ಜಯಿಸಿ ಅದನ್ನು ತಕ್ಕೊಳ್ಳುವದೆ ಧರ್ಮವೆಂದು ಪ್ರಾಜ್ಞರು ಹೇಳುವರು; ಈ ಧರ್ಮವನ್ನು ಮನಸ್ಸಿನಲ್ಲಿ ತಿಳಿದು ಪ್ರಚ್ಛನ್ನನಾಗಿ ಮಹೇಂದ್ರನು ನಮುಚಿಯೊಡನೆ ಸ್ನೇಹವನ್ನು ಮಾಡಿ ಕಪಟೋಪಾಯದಿಂದ ಆತನ ಶಿರಸ್ಸನ್ನು ಖಂಡಿಸಿದನು; ಆದ್ದರಿಂದ ಶತ್ರುಗಳಲ್ಲಿ ಕಪಟೋಪಾಯವನ್ನು ಮಾಡಬೇಕು; ತೀರ್ಥಯಾತ್ರೆಯನ್ನು ಮಾಡದೇ ಇರುವ ಬ್ರಾಹ್ಮಣನೂ ಯುದ್ಧಕ್ಕೆ ಪ್ರಯತ್ನಮಾಡದೇ ಇರುವ ಕ್ಷತ್ರಿಯನೂ (ಬಿಲವನ್ನು ಹೊರಟು ಬರದೇ ಇರುವ ಕಪ್ಪೆಗಳೂ ಹುಳಗಳೂ ಸರ್ಪಗಳಿಂದ ನುಂಗಲ್ಪಡುವದರೋಪಾದಿಯಲ್ಲಿ) ಭೂಮಿಯಿಂದ ನುಂಗಲ್ಪಡುವರು; ಅರಸಿಗೆ ಸಮಾನ ಐಶ್ವರ್ಯವುಳ್ಳವನು ಶತ್ರುವೇ ಹೊರತಾಗಿ ಮತ್ತೊಬ್ಬನುಂಟೆ? ಕ್ಷತ್ರಿಯನಾದವನಿಗೆ ಶತ್ರುಸಮೃದ್ಧಿಯನ್ನು ಸಹಿಸಿರುವದು ಪುರುಷನಿಗೆ ಶರೀರದಲ್ಲಿ ಹುಟ್ಟಿದ ರೋಗದೋಪಾದಿಯಲ್ಲಿ ವಿನಾಶವನ್ನೈದಿಸುವದು; ಶತೃವಾದವನು ಬಲಹೀನನೆಂದು ಉಪೇಕ್ಷೆಮಾಡಿದರೆ ವೃಕ್ಷಮೂಲದಲ್ಲಿ ಹುಟ್ಟಿದ ಇರುವೆ ಹುತ್ತು ವೃಕ್ಷವನ್ನು ಆಕ್ರಮಿಸುವ ತೆರದಿಂದ ರಾಜ್ಯವಷ್ಟನ್ನೂ ಆಕ್ರಮಿಸುವನು; ತನಗಿಂತಲೂ ಅಧಿಕವಾದ ಶತ್ರುಗಳ ವೈಭವವನ್ನು ಸಹಿಸಲಾರದಿರುವದೆ ಮೂರ್ಧಾಭಿಷಿಕ್ತರಾದ ಅರಸುಗಳಿಗೆ ಧರ್ಮವಾದ್ದರಿಂದ ನೀನು ಶತೃಸಮೃದ್ಧಿಯನ್ನು ಸಹಿಸಬ್ಯಾಡ; ಇತರ ಜನ ಸಮೃದ್ಧಿಯೋಪಾದಿಯಲ್ಲಿ ಶತೃಗಳ ಐಶ್ವರ್ಯವನ್ನು ಎಣಿಸುವಂಥಾ ಕ್ಷತ್ರಿಯನು ಕೆಟ್ಟುಹೋಗುವನು; ಪರಾಕ್ರಮದಿಂದ ಸಕಲ ಶ್ರೇಯಸ್ಸುಗಳನ್ನು ಸಂಪಾದಿಸಿರುವ ಪಾಂಡವರ ಸಮೃದ್ಧಿಯು ನನಗೆ ದುಃಖಕಾರಣವಾದ್ದರಿಂದ ಅವರನ್ನು ಜಯಿಸಿ ಐಶ್ವರ್ಯವನ್ನು ತಕ್ಕೊಳ್ಳಬೇಕು; ಅಲ್ಲದಿದ್ದರೆ ಅವರಿಂದ ಹತನಾಗುವದೇ ಸರಿ ಎಂದು ನಿಶ್ಚೈಸಿದ್ದೇನೆ; ಪಾಂಡವರು ಐಶ್ವರ್ಯವಂತರಾಗಿರಲು ಅಪ್ರಯೋಜಕನಾಗಿರುವ ನನ್ನ ಜೀವನವು ಯಾತಕ್ಕೆ?' ಎಂದು ದುರ್ಯೋಧನನು ಧೃತರಾಷ್ಟ್ರನಿಗೆ ಹೇಳಿದನು."

## ೯೨ನೇ ಅಧ್ಯಾಯ.—ದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಶಕುನಿಯು ದುರ್ಯೋಧನನನ್ನು ನೋಡಿ 'ಎಲೈ ದುರ್ಯೋಧನನೆ, ನೀನು ಧರ್ಮರಾಯನ ಐಶ್ವರ್ಯವನ್ನು ನೋಡಿ ಯಾತಕ್ಕೆ ಕ್ಲೇಶಪಡಬೇಕು? ಪಾಂಡವರನ್ನು ಕರತರಿಸಿ ಯುದ್ಧವೆಂಬ ಪ್ರಸಂಗವನ್ನೇ ಬಿಟ್ಟು ಜೂಜಾಡುವದಕ್ಕೆ ತೊಡಗಿದರೆ ಜೂಜಿನಲ್ಲಿ ಸಾಮರ್ಥ್ಯವಿಲ್ಲದ ಪಾಂಡವರನ್ನು ಕ್ಷಣಮಾತ್ರದಲ್ಲಿ ಜಯಿಸುತಲಿದ್ದೇನೆ; ಪಂತವೆಂಬ ಧನುಸ್ಸನ್ನೂ ದಾಳಗಳೆಂಬ ಬಾಣಗಳನ್ನೂ ಅಕ್ಷಹೃದಯವೆಂಬ ಹೆದೆಯನ್ನೂ ಚಾರಿಯೆಂಬ ರಥವನ್ನೂ ಸಂಪಾದಿಸಿಕ್ಕೊಂಡು ಜೂಜೆಂಬ ಯುದ್ಧದಲ್ಲಿ ಕೌಂತೇಯರನ್ನು ಜಯಿಸಿ ಅವ

ರ ಸಕಲೈಶ್ವರ್ಯಗಳನ್ನೂ ನಿನಗೆ ಕೊಡುತಲಿದ್ದೇನೆ' ಅಂದನು. ದುರ್ಯೋಧನನು ಶಕುನಿಯ ವಾಕ್ಯಗಳನ್ನು ಕೇಳಿ ಧೃತರಾಷ್ಟ್ರನನ್ನು ನೋಡಿ 'ದ್ಯೂತದಲ್ಲಿ ಸಮರ್ಥನಾದ ಶಕುನಿಯು ಪಾಂಡವರೊಡನೆ ಜೂಜಾಡಿ ಅವರ ಪೃಥ ವವಷ್ಟನ್ನೂ ಅಪಹರಿಸುವವನಾಗಿ ನಡೆಯುತ್ತಾನಾದ್ದರಿಂದ ಆತನಿಗೆ ಅಪ್ಪಣೆಯನ್ನು ಕೊಡಬೇಕು' ಅಂದನು. ಧೃತರಾಷ್ಟ್ರನು 'ನಾನು ವಿದುರನ ಆಲೋಚನೆಯಿಂದ ನಡೆಕೊಳ್ಳುವಂಥಾವನು; ಇದರಿಂದ ಜಯವು ಬರಲಾ ರದೆಂದು ತೋರುವದರಿಂದ ಆತನ ಕೂಡೆ ಆಲೋಚಿಸಿ ಆ ಬಳಿಕ ಈ ಕಾರ್ಯವನ್ನು ನಿಶ್ಚೈಸಿ ಹೇಳುತಲಿದ್ದೇನೆ' ಅಂ ದನು. ದುರ್ಯೋಧನನು ತಂದೆಯನ್ನು ಕುರಿತು 'ಎಲೈ ರಾಜೇಂದ್ರನೆ, ಈ ವಿದುರನು ಕೃಷ್ಣನಿಗಿಂತಲು ಬುದ್ಧಿ ಸಂಪನ್ನನಾದರೂ ಧರ್ಮರಾಯನ ಪಕ್ಷನಾಗಿ ಹೇಳುವದರಿಂದ ಜಯವು ಬರಲಾರದು; ಧರ್ಮವಿಲ್ಲದಿರುವ ನೀತಿ ಯು ನೀತಿಯಿಲ್ಲದಿರುವ ಧರ್ಮವು ಈ ಎರಡೂ ಜಯವನ್ನುಂಟುಮಾಡಲಾರವು; ಧರ್ಮದಿಂದಲೂ ನೀತಿಯಿಂದ ಲೂ ಕೂಡಿರುವ ಪ್ರಯತ್ನದಿಂದ ಶತ್ರುಗಳನ್ನು ಜಯಿಸಬೇಕು; ಈ ವಿದುರನು ಪಾಂಡವರ ಪಕ್ಷಪಾತಿಯಾದ್ದ ರಿಂದ ಯಾವ ರೀತಿಯಿಂದಲಾದರೂ ನಮ್ಮ ಅಭೀಷ್ಟವನ್ನು ಕೊನೆಸಾಗಿಸದೆ ವಿಘ್ನಗಳನ್ನೇ ಮಾಡುವನು; ಲೋ ಕದಲ್ಲಿ ಜನರ ಬುದ್ಧಿಗಳು ಬಹು ವಿಧಗಳಾಗಿರುವದರಿಂದ ಸ್ವಕಾರ್ಯವನ್ನು ಬೇರೆಯವರನ್ನು ಕೇಳಿ ಮಾಡುವರೆ? ಶತ್ರು ಗಳ ಭಯವಿಲ್ಲದೆ ತನ್ನ ಶರೀರ ಸಂರಕ್ಷಣವನ್ನು ಮಾಡಿಕೊಳ್ಳುವಂಥಾವನು ಯಾವಾಗಲೂ ಮಳೆಯಲ್ಲಿ ನೆನೆದ ಜೀ ರ್ಣವಸ್ತ್ರದೋಪಾದಿಯಲ್ಲಿ ವಿನಾಶವನ್ನೈದುವನು; ರೋಗವು ಮೃತ್ಯುವು ತನಗೆ ಶ್ರೇಯಸ್ಸು ಬರುವ ಪರ್ಯಂತರ ವೂ ಕಾದಿರುವದಿಲ್ಲ; ಆದ್ದರಿಂದ ಮನುಷ್ಯನು ತನಗೆ ಸಾಮರ್ಥ್ಯವೂ ಆಯುಸ್ಸೂ ಇರುವಾಗಲೆ ಶ್ರೇಯಸ್ಕರಗಳಾದ ಕಾರ್ಯಗಳನ್ನು ಮಾಡಬೇಕು' ಅಂದನು. ಧೃತರಾಷ್ಟ್ರನು 'ಬಲವಂತರಾದ ಪಾಂಡವರೊಡನೆ ನೀನು ವಿರೋಧವ ನ್ನು ಮಾಡುವದು ನನಗೆ ಸಮ್ಮತವಲ್ಲಾ; ಬಲವದ್ವಿರೋಧವು ಲೋಹನಿರ್ಮಿತವಲ್ಲದ ಶಸ್ತ್ರದಹಾಗೆ ವಿನಾಶವ ನ್ನೈದಿಸುವದು; ಉಪದ್ರವಕಾರಣವಾದ ಜೂಜಿನಾಟವು ಯಾವ ರೀತಿಯಿಂದ ಪ್ರವರ್ತಿಸಿದರೂ ಅತಿ ಘೋರವಾದ ಕಲಹವು ಬರುವದು; ಆದರಿಂದ ಶ್ರೇಯಸ್ಸು ಬರುತ್ತದೆಂದು ನಿನ್ನ ಮನಸ್ಸಿನಲ್ಲೆಣಿಸಬ್ಯಾಡ' ಎಂದು ನುಡಿದ ನು. ದುರ್ಯೋಧನನು 'ದ್ಯೂತವಾಡುವದು ಯುಕ್ತವೆಂದು ಶಾಸ್ತ್ರವಿಧಿಜ್ಞರಾದ ದೊಡ್ಡವರು ಹೇಳುವದರಿಂದ ಯು ದ್ಧವೂ ಅನರ್ಥವೂ ಬರಲಾರವೆಂದು ನನ್ನ ಮನಸ್ಸಿನಲ್ಲಿ ತೋರುತಲಿದೆ; ಆದ್ದರಿಂದ ಶಕುನಿಯ ವಾಕ್ಯವನ್ನು ಕೇಳಿ ಸಭಾನಿರ್ಮಾಣಕ್ಕೆ ಅಪ್ಪಣೆಯನ್ನು ಕೊಡು; ದ್ಯೂತವನ್ನು ಆಡುವಂಥಾವರಿಗೆ ಸ್ವರ್ಗಸೌಖ್ಯ ಉಂಟಾಗುವದರಿಂದ ಜೂಜಾಡುವದು ನಮಗೆ ಯುಕ್ತವು; ಯಾವ ರೀತಿಯಿಂದಲಾದರೂ ಪಾಂಡವರ ಕೂಡೆ ದ್ಯೂತವನ್ನು ಆಡುವದಕ್ಕೆ ಅಪ್ಪಣೆಯನ್ನು ಕೊಡಬೇಕು' ಅಂದನು. ಧೃತರಾಷ್ಟ್ರನು ದುರ್ಯೋಧನನನ್ನು ನೋಡಿ 'ಯಾವ ರೀತಿಯಿಂದ ನೋ ಡಿದರೂ ನಿನ್ನ ಮಾತುಗಳು ನನಗೆ ಅಯುಕ್ತವಾಗಿ ತೋರುತಲಿವೆ; ಇನ್ನು ನಿನ್ನ ಮನಸ್ಸು ಬಂದರೀತಿಗೆ ಮಾಡು; ಆ ಬಳಿಕ ಅನರ್ಥವು ಸಂಭವಿಸಿ ನೀನು ಪಶ್ಚಾತ್ತಾಪ ಪಡುತ್ತಿದ್ದೀ; ಅಗ ನನ್ನಿಂದ ತೀರಿಸುವದಕ್ಕೆ ಶಕ್ಯವಲ್ಲಾ; ಮುಂದೆ ಬರುವಂಥಾ ಅನರ್ಥವನ್ನು ಈಗಲೇ ಹೇಳುತಲಿದ್ದೇನೆ; ಇದು ಬರೀಮಾತಲ್ಲಾ; ರಾಜನೀತಿ ವಿಶಾರದನಾದ ವಿದುರನು ಈ ದ್ಯೂತದಿಂದ ಹಾನಿ ಬರುತ್ತದೆಂದು ಮೊದಲೇ ಹೇಳಿದ್ದಾನೆ; ಈಗ ದ್ಯೂತೋದ್ಯೋಗವು ಪ್ರಾಪ್ತವಾ ಯಿತು; ಇನ್ನು ಮೇಲೆ ಕ್ಷತ್ರಿಯಕುಲವಷ್ಟೂ ನಿಶ್ಶೇಷವಾಗಿ ಸವೆದು ಹೋಗುತಲಿದೆ' ಅಂದನು.

"ಕೇಳು ಜನಮೇಜಯನೇ, ಈ ಪ್ರಕಾರವಾಗಿ ನುಡಿದು ಮೋಹಾಧುರೀಣನಾದ ಧೃತರಾಷ್ಟ್ರನು ದೈವಯತ್ನ ವನ್ನು ಪರಿಹರಿಸುವದಕ್ಕೆ ಶಕ್ಯವಲ್ಲವೆಂದು ಮನಸ್ಸಿನಲ್ಲೆಣಿಸಿ ಪುತ್ರವಾತ್ಸಲ್ಯದಿಂದ ಅವನ ವಾಕ್ಯವನ್ನು ಅತಿಕ್ರಮಿಸ ಲಾರದೆ ಶಿಲ್ಪಿಕರನ್ನು ಕರತರಿಸಿ ಸಹಸ್ರಸ್ತಂಭಶೋಭಿತವಾಗಿ ಹೇಮ ವೈಡೂರ್ಯ ವಿಚಿತ್ರಿತವಾಗಿ ಚಂದ್ರಕಾಂತನಿ ರ್ಮಿತಗಳಾದ ನೂರು ಬಾಗಲುಗಳಿಂದ ಅಲಂಕೃತವಾಗಿ ಒಂದು ಹರಿದಾರಿ ವಿಸ್ತಾರವುಳ್ಳಂಥಾ ಒಂದು ಸಭಾಮಂಟಪ ವನ್ನು ಶೀಘ್ರವಾಗಿ ನಿರ್ಮಿಸಲು ಅಪ್ಪಣೆಯನ್ನು ಕೊಟ್ಟನು. ಅವರು ಆತನ ವಚನ ಪ್ರಮಾಣದಿಂದ ಸಕಲ ದ್ರ ವ್ಯಗಳನ್ನೂ ತಂದು ದಿವ್ಯವಾಗಿ ಅತ್ಯಾಶ್ಚರ್ಯಕರವಾಗಿ ರತ್ನಕಾಂಚನ ಶೋಭಿತವಾದ ಒಂದು ಸಭಾ ಭವನವನ್ನು ಶೀಘ್ರವಾಗಿ ಮಾಡಿ, ಅನೇಕ ಪ್ರಕಾರಗಳಾದ ಶಯನಾಸನಗಳನ್ನು ಸಂಘಟಿಸಿ, ಸುವರ್ಣಮಯಗಳಾದ ಚಿತ್ರಗಳಿಂ

ದ ಅಲಂಕರಿಸಿ, ಆ ದ್ಯೂತ ಸಭಾ ಭವನವನ್ನು ಧೃತರಾಷ್ಟ್ರನಿಗೊಪ್ಪಿಸಿದರು. ಆತನು ಮಂತ್ರಿ ಮುಖ್ಯನಾದ ವಿದುರನನ್ನು ಕುರಿತು 'ನೀನು ಧರ್ಮರಾಯನ ಸಮೀಪಕ್ಕೆ ಹೋಗಿ ರತ್ನಕಾಂಚನ ಮಯವಾಗಿ ವಿಚಿತ್ರವಾಗಿರುವ ಈ ಸಭಾ ಭವನವನ್ನು ನೋಡಿ ದುರ್ಯೋಧನಾದಿಗಳೊಡನೆ ಸ್ನೇಹದಿಂದ ಜೂಜಾಡುವದಕ್ಕೆ ಸಹೋದರ ಸಹಿತನಾಗಿ ಹಸ್ತಿನಾಪಟ್ಟಣಕ್ಕೆ ಬರಬೇಕೆಂದು ನಾನು ಹೇಳಿದೆನೆಂದೇಳಿ ಧರ್ಮರಾಯನನ್ನು ಕರದುಕೊಂಡು ಬಾ' ಅಂದನು. ಹೀಗೆ ಅಪ್ರಯೋಜಕಗಳಾದ ವಾಕ್ಯಗಳನ್ನು ನುಡಿಯುವ ಅಂಬಿಕಾ ಪುತ್ರನ ವಚನವನ್ನು ಕೇಳಿ ವಿದುರನು ಧೃತರಾಷ್ಟ್ರನನ್ನು ನೋಡಿ 'ಎಲೈ ಕೌರವೇಂದ್ರನೆ, ನೀನು ಇಂಥಾ ಅಕೃತ್ಯಗಳನ್ನು ಮಾಡುವದರಿಂದ ನಿನ್ನ ಮಕ್ಕಳಿಗೆ ಪರಸ್ಪರ ವಿರೋಧವು ಹುಟ್ಟಿ ಆ ಬಳಿಕ ಕುಲಕ್ಷಯವು ಬರುವದು ; ಅವರ ಸಮೀಪಕ್ಕೆ ನನ್ನನ್ನು ಯಾಕೆ ಕಳುಹಿಸಬೇಕು ? ಈ ಕಾರ್ಯವು ನನ್ನ ಮನಸ್ಸಿಗೆ ಸರಿಬರಲಿಲ್ಲಾ' ಎನಲು ಧೃತರಾಷ್ಟ್ರನು 'ಲೋಕದಲ್ಲಿ ಸಮಸ್ತರಾದವರೂ ದೈವಪರತಂತ್ರರೆ ಹೊರತಾಗಿ ಸ್ವತಂತ್ರರಲ್ಲವಲ್ಲಾ ? ದೈವಾನುಗ್ರಹವಿದ್ದರೆ ಕಲಹವು ಬಂದು ದಿವಸಕ್ಕೂ ಬರಲಾರದು ; ಆದ್ದರಿಂದ ನೀನು ಶೀಘ್ರವಾಗಿ ಇಂದ್ರಪ್ರಸ್ಥಕ್ಕೆ ಹೋಗಿ ಪಾಂಡವರನ್ನು ಇಲ್ಲಿಗೆ ಕರಕೊಂಡು ಬಾ' ಎಂದು ಕಳುಹಿಸಿದನು."

## ೯೩ನೇ ಅಧ್ಯಾಯ.—ದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಮಹಾವೇಗ ಸಂಪನ್ನಗಳಾಗಿ ಶಿಕ್ಷಿತಗಳಾಗಿ ಬಲಶಾಲಿಗಳಾದ ಕುದುರೆಗಳನ್ನು ಕಟ್ಟಿರುವ ರಥವನ್ನು ಕೊಟ್ಟು ಧೃತರಾಷ್ಟ್ರನು ಬಲಾತ್ಕಾರದಿಂದ ಕಳುಹಿಸಲು ವಿದುರನು ಅನೇಕ ದೇಶಗಳನ್ನು ದಾಟಿ, ಇಂದ್ರಪ್ರಸ್ಥ ಪಟ್ಟಣಕ್ಕೆ ಹೋಗಿ, ಅಲ್ಲಿದ್ದ ಬ್ರಾಹ್ಮಣರಿಂದ ಪೂಜಿತನಾಗಿ, ಕುಬೇರನ ಮನೆಗೆ ಸಮಾನವಾದ ರಾಜಮಂದಿರವನ್ನು ಪ್ರವೇಶಿಸಿ, ಧರ್ಮರಾಯನ ಸಮೀಪಕ್ಕೆ ಹೋದನು. ಸತ್ಯಸಂಧನಾಗಿರುವ ಧರ್ಮರಾಯನು ಆತನಿಗೆ ಪೂಜೆಯನ್ನು ಮಾಡಿ, ಆತನನ್ನು ನೋಡಿ 'ನಿನ್ನ ಮುಖದಲ್ಲಿ ಮುಗುಳುನಗೆ ತೋರುತಲದೆ; ಅಲ್ಲಿರುವಂಥಾವರು ಕ್ಷೇಮದಲ್ಲಿದ್ದಾರೆಯೇ ? ದುರ್ಯೋಧನಾದಿಗಳು ಕೌರವೇಶ್ವರನಿಗೆ ಸಮ್ಮತವಾಗಿ ನಡದುಕೊಳ್ಳುತಲಿದ್ದಾರೆಯೇ ? ಎಂದು ಕೇಳಿದನು. ವಿದುರನು ಧರ್ಮರಾಯನನ್ನು ನೋಡಿ 'ಮಹೇಂದ್ರನಿಗೆ ಸಮಾನನಾದ ಧೃತರಾಷ್ಟ್ರನು ವಿನಯಸಂಪನ್ನರಾದ ಪುತ್ರ, ಮಿತ್ರ, ಬಂಧುಜನಗಳೊಡನೆ ಕೂಡಿ ಸುಖವಾಗಿದ್ದಾನೆ: ಆತನು ನಿಮ್ಮ ಕ್ಷೇಮವನ್ನು ಕೇಳಿದನು ; ಮತ್ತು '—ನಿಮ್ಮ ಸಭಾಭವನಕ್ಕೆ ಸಮಾನವಾದ ಬಂದು ಸಭಾಭವನವನ್ನು ನಿರ್ಮಿಸಿದೆವು ; ನೀನು ತಮ್ಮಂದರೊಡನೆ ಕೂಡಿ ಆ ಸಭಾಭವನವನ್ನು ನೋಡಿ ವಿನೋದಾರ್ಥವಾಗಿ ನಿನ್ನ ತಮ್ಮಂದರಾದ ದುರ್ಯೋಧನಾದಿಗಳೊಡನೆ ಸ್ನೇಹದಿಂದ ದ್ಯೂತವನ್ನು ಆಡುವದಕ್ಕೋಸ್ಕರ ಅಲ್ಲಿಗೆ ಬರಬೇಕು ; ನೀನು ಬರಬೇಕೆಂದು ನಾನೂ ದುರ್ಯೋಧನನು ಮೊದಲಾದವರೂ ಕೌರವರಷ್ಟುಮಂದಿಯೂ ಪ್ರೀತಿಯಿಂದ ಎದುರು ನೋಡುತಲಿದ್ದೇವೆ—' ಎಂದು ನಿನ್ನ ಕೂಡೆ ಹೇಳಹೇಳಿದನು; ದ್ಯೂತದಲ್ಲಿ ಸಮರ್ಥರಾದ ಕೆಲವು ಧೂರ್ತರು ಆ ಸಭಾಮಂಟಪದಲ್ಲಿ ಬಂದು ಇದ್ದಾರೆ; ಅಲ್ಲಿಗೆ ಬಂದು ಅವರನ್ನು ನೋಡುತ್ತಿದ್ದೀ' ಅಂದನು. ಧರ್ಮರಾಯನು ವಿದುರನನ್ನು ನೋಡಿ 'ಲೋಕದಲ್ಲಿ ದ್ಯೂತವು ಕಲಹಕ್ಕೆ ಕಾರಣವಾಗಿರುವದು ; ಬುದ್ಧಿಸಂಪನ್ನನಾದವನು ಜೂಜಾಡುವನೆ? ನಾವಷ್ಟುಮಂದಿಯೂ ನಿನ್ನ ಆಜ್ಞೆಯೊಳಗೆ ಇರುವವರಾದ್ದರಿಂದ ಯುಕ್ತಾಯುಕ್ತಗಳನ್ನು ನೀನೇ ನಿಶ್ಚೈಸಿ ಹೇಳಬೇಕು' ಅಂದನು. ಆ ಮಾತು ಕೇಳಿ ವಿದುರನು ಧರ್ಮರಾಯನನ್ನು ನೋಡಿ 'ಇದು ಅನರ್ಥಕ್ಕೆ ಹೇತುವಾಗಿರುವದೆಂದು ವಿಚಾರಿಸಿ ಬ್ಯಾಡವೆಂದು ಬಹುಪ್ರಕಾರವಾಗಿ ಹೇಳಿದೆನು ; ಆದರೂ ನಿಮ್ಮನ್ನು ಕರಕೊಂಡು ಬರಬೇಕೆಂದು ಕಳುಹಿಸಿದನು ; ಇನ್ನು ಮೇಲೆ ನಿನಗೆ ತೋರಿದ ರೀತಿಗೆ ಮಾಡು' ಅಂದನು. ಯುಧಿಷ್ಠಿರನು 'ಆ ಸಭೆಯೊಳಗೆ ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳು ಹೊರತಾಗಿ ದ್ಯೂತದಲ್ಲಿ ಸಮರ್ಥರಾದವರು ಯಾರಿದ್ದಾರೆ ; ಅವರ ಕೂಡೆ ತೊಡರಿಕೊಂಡು ಬಹುಪ್ರಕಾರವಾಗಿ ದ್ಯೂತದಲ್ಲಿ ಪ್ರವರ್ತಿಸುವವರನ್ನು ತಿಳುಹಿಸಬೇಕು' ಎಂದು

ಕೇಳಿದನು. ವಿದುರನು 'ದ್ಯೂತಕ್ರೀಡಾ ಸಮರ್ಥನಾಗಿ ಅಕ್ಷಹೃದಯಜ್ಞನಾಗಿ ಗಾಂಧಾರ ದೇಶಾಧಿಪತಿಯಾದ ಶಕುನಿಯೂ, ಚಿತ್ರಸೇನನೂ, ಪುರುಮಿತ್ರನು, ಸತ್ಯವ್ರತನು, ಜಯಂತನು ಎಂಬವರು ಅಲ್ಲಿ ಇದ್ದಾರೆ' ಅಂದನು. ಧರ್ಮರಾಯನು 'ನೀನು ಹೇಳಿದವರಷ್ಟುಮಂದಿಯೂ ಮಹಾಮಾಯೋಪಾಯವುಳ್ಳವರೂ ಕಪಟಾತ್ಮಕರೂ ವಂಚಕರೂ ಎಂದು ಪ್ರಸಿದ್ಧರಾಗಿರುವರು; ಇಂಥಾವರೊಡನೆ ನಮಗೆ ದ್ಯೂತವು ಪ್ರಾಪ್ತವಾದದ್ದು ದೈವಸಂಕಲ್ಪವೇ ಸರಿ; ಆದರೂ ಧೃತರಾಷ್ಟ್ರನ ವಾಕ್ಯಗಳನ್ನು ದಾಟುವದಕ್ಕೆ ಶಕ್ಯವಲ್ಲಾ; ಶಕುನಿಯೊಡನೆ ಜೂಜಾಡುವದು ನನಗೆ ಸಮ್ಮತವಲ್ಲಾ; ಆತನು ದಿಟ್ಟತನದಿಂದ ಸಭಾಮಧ್ಯದಲ್ಲಿ ನನ್ನನ್ನು ದ್ಯೂತಕ್ಕೆ ಕರೆಯದೇ ಹೋಗನು; ಎಲ್ಲಿಯಾದರೂ ತಂದೆಯಾದವನು ಮಗನಿಗೆ ಹಿತವನ್ನೇ ಹೊರತಾಗಿ ಅಹಿತವನ್ನು ಹೇಳನು; ನೀನು ಹ್ಯಾಗೆ ಹೇಳಿದರೆ ಹಾಗೆ ನಡಕೊಳ್ಳುತಲಿದ್ದೇನೆ; ಅದು ಹಾಗಿರಲಿ ದ್ಯೂತದಲ್ಲಿ ಪ್ರೀತಿಯುಳ್ಳಂಥಾವನು ಯಾರಾದರೂ ನನ್ನನ್ನು ದ್ಯೂತಕ್ಕೆ ಕರದರೆ ನಾನು ಹೋಗದೇಯಿರುವದಿಲ್ಲಾ; ಇದು ನನಗೆ ಶಾಶ್ವತವಾದ ವ್ರತವು' ಎಂದು ನುಡಿದು ಹಸ್ತಿನಾಪಟ್ಟಣಕ್ಕೆ ಹೋಗುವದಕ್ಕೆ ಪ್ರಯಾಣ ಸನ್ನಾಹವನ್ನು ಮಾಡಿಸಿದನು.

"ಕೇಳು ಜನಮೇಜಯನೆ, ಆ ಬಳಿಕ ತೇಜೋಧುರಂಧರನಾಗಿ ಪರಿವಾರ ಸಮೇತನಾದ ಧರ್ಮರಾಯನು ಬ್ರಾಹ್ಮಣೋತ್ತಮರಿಗೆ ಅನೇಕ ಧನಗಳನ್ನು ಯಾತ್ರಾದಾನವಾಗಿಕೊಟ್ಟು, ಅವರು ಸ್ವಸ್ತಿವಾಚನವನ್ನು ಮಾಡಲು ಧೌಮ್ಯನೊಡನೆ ಅಂತಃಪುರದ್ವಾರದಿಂದ ಹೊರಟು, ಹಾರ ಕಿರೀಟ ಕುಂಡಲಾದಿ ಭೂಷಣ ಭೂಷಿತನಾಗಿ ಸರ್ವಲಕ್ಷಣ ಲಕ್ಷಿತನಾಗಿ ಮಹಾರಾಜ ಯೋಗ್ಯನಾಗಿ ಸರ್ವಾಲಂಕಾರ ಶೋಭಿತನಾಗಿ ಮಧ್ಯಮವಯೋವಿಜೃಂಭಿತನಾದ ಭದ್ರಗಜವನ್ನೇರಿ, ಕಾಂಚನಮಯವಾದ ಸಿಂಹಾಸನದಲ್ಲಿ ಕುಳಿತುಕೊಂಡು, ಕನಕ ಚಿತ್ರಿತವಾದ ವೇದಿಕಾಮಧ್ಯದಲ್ಲಿರುವ ಯಜ್ಞೇಶ್ವರನೋಪಾದಿಯಲ್ಲಿ ಪ್ರಕಾಶಿಸುತ ಚತುರಂಗಬಲವು ಸಂಗಡಬರಲು, ಮಿಕ್ಕಾದವರು ರಥ ಆಂದೋಳಿಕಗಳು ಮೊದಲಾದ ವಾಹನಗಳನ್ನೇರಿ ರಥದ ಚಕ್ರಧ್ವನಿಯಿಂದ ಆಕಾಶವನ್ನು ತುಂಬುತ ಸುತ್ತಲಿರಲು, ಸೂತ ಮಾಗಧ ವಂದಿ ಜನಗಳು ಬಹುಪ್ರಕಾರವಾಗಿ ಸ್ತುತಿಸಲು, ಚತುರಂಗ ಬಲ ಸಮೇತನಾಗಿ ಸಹಸ್ರ ಕಿರಣಗಳಿಂದ ಒಪ್ಪುತಲಿರುವ ಸೂರ್ಯನೋಪಾದಿಯಲ್ಲಿ ಸಕಲ ಸೇನಾಸಮೇತನಾಗಿ, ಪೂರ್ಣಿಮಾರಾತ್ರಿ ಮಧ್ಯದಲ್ಲಿ ಪ್ರಕಾಶಿಸುತಲಿರುವ ಚಂದ್ರನೋಪಾದಿಯಲ್ಲಿ ಪ್ರಕಾಶಮಾನವಾದ ಶ್ವೇತಛತ್ರವು ಮೆರೆಯುತ್ತಿರಲು, ಸುವರ್ಣದಂಡ ಮಂಡಿತಗಳಾದ ಚಾಮರಗಳು ಉಭಯಪಾರ್ಶ್ವಗಳಲ್ಲಿಯೂ ಬೀಸುತ್ತಿರಲು, ಮದ್ದಾನೆಯಮೇಲೆ ಕುಳಿತುಕೊಂಡಿರುವ ಮಾದ್ರೀಪುತ್ರರು ತಮ್ಮ ಕಾಂತಿ ವಿಶೇಷಗಳನ್ನು ನಾಲ್ಕುದಿಕ್ಕುಗಳಲ್ಲಿ ಪ್ರಕಾಶವಾಗುವಹಾಗೆ ಮಾಡುತ್ತಿರಲು ಹಸ್ತಿನಾಪುರಕ್ಕೆ ಹೊರಟನು. ಬುದ್ಧಿಸಂಪನ್ನನಾದ ಅರ್ಜುನನು ಬಿಳೀ ಕುದುರೆಗಳನ್ನು ಕಟ್ಟಿರುವಂಥಾದ್ದಾಗಿ ಯಜ್ಞೇಶ್ವರನ ಪ್ರಸಾದಲಬ್ಧವಾದ ರಥವನ್ನೇರಿ ಗಾಂಡೀವವನ್ನು ಹಿಡಿದು ಸಂಗಡಲೇ ಬರಲು, ಧರ್ಮರಾಯನೂ ಭೀಮನೂ ನಕುಲ ಸಹದೇವರೂ ಸಕಲ ಸೈನ್ಯಪರಿವೃತರಾಗಿ ನಡೆಯುತ್ತಿರಲು, ದ್ರೌಪದಿ ಮೊದಲಾದ ಅಂತಃಪುರ ಸ್ತ್ರೀಯರು ಅಂದಳ ಪಲ್ಲಕ್ಕಿ ಮೊದಲಾದ ವಾಹನಗಳನ್ನೇರಿ ಸೇನೆಗಿಂತಲೂ ಮೊದಲೇ ಹೋಗುತ್ತಿದ್ದರು. ಆ ಸಮಯದಲ್ಲಿ ಧ್ವಜಪತಾಕಾ ಸಮೇತವಾಗಿ ನಾನಾವಿಧ ಶಸ್ತ್ರಶೋಭಿತವಾಗಿ ವೀರಭಟ ಸಿಂಹನಾದ ಮೊದಲಾಗಿ ಶಂಖ ಭೇರಿ ಮೃದಂಗ ತಾಳಾದಿ ವಾದ್ಯಘೋಷ ಪರಿಪೂರ್ಣವಾಗಿ ಸೇನೆಯು ನಡೆಯುತ್ತಿರಲು ಧರ್ಮರಾಯನು ಲಂಕಾಪಟ್ಟಣದಲ್ಲಿರುವ ಕುಬೇರನ ಚಂದದಿಂದೊಪ್ಪುತಿದ್ದನು. ಆ ಬಳಿಕ ದೇವಗಣ ಪರಿವೃತನಾದ ದೇವೇಂದ್ರನು ಬೃಹಸ್ಪತಿಯನ್ನು ಅನುಸರಿಸುವ ಚಂದದಿಂದ ಸಮಸ್ತ ಬಲ ಪರಿವೇಷ್ಟಿತನಾದ ಅರ್ಜುನನು ಧರ್ಮರಾಯನ ಸಂಗಡ ಬರುತ್ತಿರಲು ಧರ್ಮರಾಯನು ಸಕಲಸೇನಾಸಮೇತನಾದ ಕುಬೇರನೋಪಾದಿಯಲ್ಲಿ ಅನೇಕ ಕಾನನೋಪವನಗಳನ್ನೂ ಸರಸ್ಸುಗಳನ್ನೂ ದಾಟಿ ಹಸ್ತಿನಾ ಪಟ್ಟಣದ ಸಮೀಪದಲ್ಲಿ ಸಮವಾಗಿ ಮನೋಹರವಾಗಿರುವ ಒಂದು ಪ್ರದೇಶದಲ್ಲಿ ಪಾಳ್ಯವನ್ನು ಇಳಿಸಿದನು. ಆ ಸಮಯದಲ್ಲಿ ವಿದುರನು ಧರ್ಮರಾಯನ ಸಮೀಪಕ್ಕೆ ಹೋಗಿ ಶೋಕಗದ್ಗದ ಕಂಠವುಳ್ಳವನಾಗಿ ಧೃತರಾಷ್ಟ್ರನು ಮಾಡಿದ ದುರ್ನೀತಿಗಳನ್ನು ವಿಸ್ತಾರವಾಗಿ ತಿಳುಹಿಸಿದನು. ಧರ್ಮರಾಯನು ಆ ವಿದುರನ ವಾಕ್ಯವನ್ನು ಕೇಳಿ 'ದ್ಯೂತಕ್ಕೆ ಯಾರು ಕರದರೂ ಬರುತಲಿದ್ದೇನೆಂದು ಪ್ರತಿಜ್ಞೆಯನ್ನು ಮಾಡಿ

ದ್ದೇನೆ; ಆದ್ದರಿಂದ ಇದನ್ನು ಸಹಿಸಬೇಕು; ಸಕಲ ಜನಗಳಿಗೂ ಶುಭವಾಗಲಿ; ಅತಿತೇಜಸ್ಸು ದೃಷ್ಟಿನಿರೋಧವನ್ನು ಮಾಡುವ ಹಾಗೆ ದೈವವು ಬುದ್ಧಿಭ್ರಂಶವನ್ನು ಕಲ್ಪಿಸಲು ಹಗ್ಗಗಳಿಂದ ಕಟ್ಟಲ್ಪಟ್ಟ ಮರ್ದ್ದಾನಯೋಪಾದಿಯಲ್ಲಿ ಮನುಷ್ಯನು ದೈವದಿಂದ ಪ್ರೇರಿತನಾಗಿ ಪ್ರವರ್ತಿಸುತಲಿದ್ದಾನೆ' ಎಂದು ನುಡಿದು, ಮೂರನೇ ದಿವಸದಲ್ಲಿ ಬಾಹ್ಲೀಕನಿಂದ ಕೊಡಲ್ಪಟ್ಟ ರಥವನ್ನೇರಿ, ಚತುರಂಗಬಲಗಳು ಪೋಲಗಿಸಲು ತಮ್ಮಂದಿರೊಡನೆ ಕೂಡಿ ಹಸ್ತಿನಾಪಟ್ಟಣವನ್ನು ಪ್ರವೇಶಿಸಿ, ಧೃತರಾಷ್ಟ್ರನ ಮನೆಗೆ ಹೋಗಿ, ಭೀಷ್ಮ ದ್ರೋಣ ಕೃಪ ಕರ್ಣ ಸೋಮದತ್ತರನ್ನೂ ತಮ್ಮಂದಿರೊಡನೆ ಕೂಡಿರುವ ದುರ್ಯೋಧನನನ್ನೂ ಮತ್ತು ಅಲ್ಲಿಗೆ ಬಂದ ಅರಸುಗಳನ್ನೂ ಉಚಿತಪ್ರಕಾರದಿಂದ ನೋಡಿ, ಅವರಿಂದ ಪೂಜಿತನಾಗಿ, ತಮ್ಮಂದಿರೊಡನೆ ಕೂಡಿ ಅಂತಃಪುರಕ್ಕೆ ಹೋಗಿ, ನಕ್ಷತ್ರಗಳೊಡನೆ ಕೂಡಿರುವ ರೋಹಿಣೀದೇವಿಯೋಪಾದಿಯಲ್ಲಿ ಸೊಸೆಯರ ಮಧ್ಯದಲ್ಲಿದ್ದ ಪತಿವ್ರತಾಶಿರೋಮಣಿಯಾದ ಗಾಂಧಾರಿಗೆ ನಮಸ್ಕಾರವನ್ನು ಮಾಡಿ, ಅವಳ ಆಶೀರ್ವಾದವನ್ನು ತಕ್ಕೊಂಡು ವೃದ್ಧನಾದ ಕೌರವೇಶ್ವರನ ಸಮೀಪಕ್ಕೆ ಹೋಗಿ ದಂಡಪ್ರಣಾಮಗಳನ್ನು ಮಾಡಿದನು. ಆತನು ಅಷ್ಟುಮಂದಿಯ ಶಿರಸ್ಸನ್ನೂ ಅಘ್ರಾಣಿಸಲೂ ಪುರುಷಶ್ರೇಷ್ಠರಾಗಿ ಮನೋಹರಾಕಾರಿಗಳಾದ ಪಾಂಡವರನ್ನು ನೋಡಿ ಕೌರವರಷ್ಟುಮಂದಿಯೂ ಸಂತೋಷಪಟ್ಟರು. ಆ ಬಳಿಕ ಪಾಂಡವರ ಅಪ್ಪಣೆಯಿಂದ ದ್ರೌಪದಿ ಮೊದಲಾದ ಸ್ತ್ರೀಜನಗಳು ಅಂತಃಪುರಕ್ಕೆ ಹೋದರು. ದ್ರೌಪದಿಯು ಮಹಾವಿಭವವನ್ನು ನೋಡಿ ಸಹಿಸಲಾರದೆ ಕೌರವರ ಅಂತಃಪುರದ ಸ್ತ್ರೀಜನರು ಅಸೂಯೆಯಿಂದ ಕೂಡಿದ್ದರು. ಪಾಂಡುಕುಮಾರಕರು ಗರುಡಿಗೆ ಹೋಗಿ ಮುಹೂರ್ತ ಮಾತ್ರವು ಸಾಧಕವನ್ನು ಮಾಡಿ ಆ ಬಳಿಕ ಸಂಧ್ಯಾವಂದನಾದಿ ಕಾರ್ಯಗಳನ್ನು ಮಾಡಿ, ಬ್ರಾಹ್ಮಣರು ಸ್ವಸ್ತಿವಾಚನವನ್ನು ಮಾಡಲು ಅವರಿಗೆ ಸತ್ಕಾರಗಳನ್ನು ಮಾಡಿ, ಮನೋಹರವಾದ ಭಕ್ಷ್ಯಭೋಜ್ಯ ಸಮೇತವಾದ ಭೋಜನದಿಂದ ಸಂತುಷ್ಟರಾಗಿ, ಸ್ತ್ರೀಜನರಿಂದ ಮಧುರ ಗಾನಗಳನ್ನು ಕೇಳುತ ದಿವ್ಯಗಂಧ ಮಾಲ್ಯಗಳನ್ನು ಧರಿಸಿ ಕೇಳೀಗೃಹಗಳಲ್ಲಿ ಆ ರಾತ್ರಿ ಸುಖವಾಗಿ ನಿದ್ರಿಸಿ, ಪ್ರಾತಃಕಾಲದಲ್ಲಿ ಮಾಗಧ ಸ್ತುತಿವಚನಗಳಿಂದ ನಿದ್ರೆಯೆಸೆಯಿಂದೆದ್ದು ಪ್ರಾತಃಕಾಲ ಸಂಧ್ಯಾವಂದನಾದಿ ಕೃತ್ಯಗಳನ್ನು ತೀರಿಸಿಕೊಂಡು, ಅತಿಮನೋಹರವಾಗಿ ಧೂರ್ತಜನ ಸಹಿತವಾದ ಸಭಾಸ್ಥಾನವನ್ನು ಪ್ರವೇಶಿಸಿದರು."

## ೫೪ನೇ ಅಧ್ಯಾಯ.—ದ್ಯೂತಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಶಕುನಿಯು ಧರ್ಮರಾಯನನ್ನು ನೋಡಿ 'ಎಲೈ ಧರ್ಮರಾಯನೆ, ಸಭೆಯಲ್ಲಿರುವಂಥಾವರೂ ನಾವೂ ನೀವು ಬರುವದನ್ನೇ ನೋಡಿಕೊಂಡಿದ್ದೆವು; ಜೂಜಾಡುವದಕ್ಕೆ ಇದೇ ಸಮಯವು' ಅಂದನು. ಯುಧಿಷ್ಠಿರನು ಶಕುನಿಯನ್ನು ಕುರಿತು 'ಕ್ಷತ್ರಿಯರಿಗೆ ಪರಾಕ್ರಮವೇ ಹೊರತಾಗಿ ನಿಕೃಷ್ಟವಾಗಿ ಪಾಪಸ್ವರೂಪವಾಗಿ ಸಜ್ಜನನಿಂದಿತವಾಗಿರುವ ಈ ದ್ಯೂತವು ಧರ್ಮವಲ್ಲಾ; ಇದನ್ನು ಬಹುಪ್ರಕಾರವಾಗಿ ಸ್ತುತಿಸುತ ವಂಚನೆಯಿಂದ ನಮ್ಮನ್ನು ಜಯಿಸಬೇಕೆಂದು ಎಣಿಸಿದ್ದಿ; ಇದು ಉಚಿತವಲ್ಲಾ' ಅಂದನು. ಶಕುನಿಯು ಧರ್ಮರಾಯನನ್ನು ಕುರಿತು 'ಲೋಕದಲ್ಲಿ ಯಾವ ಪುರುಷನು ದ್ಯೂತವಿಧಿಜ್ಞನಾಗಿ ಬುದ್ಧಿವಂತನಾಗಿ ಮನಸ್ಸಿನಲ್ಲಿ ಕ್ಲೇಶಪಡದೆ ಸ್ನೇಹಭಾವದಿಂದ ಜೂಜನ್ನು ಆಡುವನೊ ಆತನಿಗೆ ಸಕಲ ಭಾಗ್ಯಗಳೂ ಉಂಟಾಗುವದರಿಂದ ನಿಂದಿತವಲ್ಲಾ; ಕಾಲಕ್ಷೇಪಕ್ಕೂ ಪರಜಯಕ್ಕೂ ಕಾರಣವಾಗಿರುವದರಿಂದ ಮನಸ್ಸಿನಲ್ಲಿ ಸಂಶಯ ಬ್ಯಾಡಾ; ಆಡುವದಕ್ಕೆ ಬಾ; ಇದಕ್ಕೆ ಪಂಥವನ್ನು ವಿಧಿಸು' ಅಂದನು. ಧರ್ಮರಾಯನು ಶಕುನಿಯನ್ನು ನೋಡಿ 'ಸಕಲ ಲೋಕಸಂಚಾರದಿಂದ ಸಕಲ ಲೋಕವೃತ್ತಾಂತವನ್ನು ತಿಳಿದು ಅಭಿಜ್ಞನಾಗಿ ಮುನಿಶ್ರೇಷ್ಠನಾದ ಅಸಿತ ದೇವಲನು ಈ ಜೂಜು ಪಾಪಸ್ವರೂಪವೆನ್ನುತಲೂ ಇದನ್ನು ಧೂರ್ತರು ಆಚರಿಸುವರೆನ್ನುತಲೂ ಅರಸುಗಳಿಗೆ ನೀತಿಮಾರ್ಗದಿಂದ ಯುದ್ಧದಲ್ಲಿ ಜಯಿಸುವದೇ ಧರ್ಮವೆನ್ನುತಲೂ ಮ್ಲೇಚ್ಛಭಾಷೆಯಿಂದ ನುಡಿಯಬಾರದು ಎನ್ನುತಲೂ ಕಪಟೋಪಾಯಗಳನ್ನು ಮಾಡಬಾರದು ಎನ್ನುತಲೂ ಹೇಳಿದ್ದಾನೆ; ನಾವು ಬ್ರಾಹ್ಮಣರಿಗೆ ಹಿತವನ್ನಾಚರಿಸುವದೇ ಧ

ರ್ಮವು; ನೀನು ಅಕ್ಷವಿದ್ಯಾಸಮರ್ಥನೆಂದು ವಂಚನೋಪಾಯಗಳನ್ನು ಮಾಡಿ ನಮ್ಮನ್ನು ಜಯಿಸುವದಕ್ಕೇನ ಬ್ಯಾಡ; ನೀತಿಮಾರ್ಗವನ್ನು ಅತಿಕ್ರಮಿಸಿ ಬರುವಂಥಾ ಧನಸೌಖ್ಯಗಳು ನಮಗೆ ಸಮ್ಮತವಲ್ಲಾ; ಇದು ಪಾಪಾತ್ಮಕರಿಗೆ ಹೊರತಾಗಿ ಸತ್ಪುರುಷರಿಗೆ ವಿಹಿತವಲ್ಲಾ' ಅಂದನು. ಶಕುನಿಯು ಆತನನ್ನು ನೋಡಿ 'ಶ್ರೋತ್ರಿಯನಾದವನು ಅಶ್ರೋತ್ರಿಯನನ್ನೂ ಶಾಸ್ತ್ರಜ್ಞನಾದವನು ಅಶಾಸ್ತ್ರಜ್ಞನನ್ನೂ ಬಲವಂತನಾದವನು ದುರ್ಬಲನನ್ನೂ ಅಸ್ತ್ರಾಭ್ಯಾಸವುಳ್ಳಂಥಾವನು ಅಸ್ತ್ರಾಭ್ಯಾಸವಿಲ್ಲದೇ ಇರುವಂಥಾವನನ್ನೂ ದ್ಯೂತಜ್ಞನು ದ್ಯೂತಜ್ಞನಲ್ಲದೇ ಇರುವಂಥಾವನನ್ನೂ ಜಯಿಸುವದು ಯುಕ್ತವೇ ಹೊರತಾಗಿ ಮಾಯೋಪಾಯವಲ್ಲಾ; ನಿನ್ನನ್ನು ವಂಚನೆಯಿಂದ ಜಯಿಸುತಲಿದೇನೆಂದು ಭಯವಿದ್ದರೆ ಜೂಜನ್ನಾಡದೆ ಸುಮ್ಮನೇ ಹೊರಟು ಹೋಗೂ' ಅಂದನು.

"ಆ ಮಾತನ್ನು ಕೇಳಿ ಧರ್ಮರಾಯನು ಶಕುನಿಯನ್ನು ನೋಡಿ 'ಎಲೈ ಶಕುನಿಯೆ, ಯಾರಾದರೂ ದ್ಯೂತಕ್ಕೆ ಕರೆದರೆ ನಾನು ಅವರಕೂಡೆ ಆಡದೆ ಬಿಡುವದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿರುವೆನಾದ್ದರಿಂದ ದೈವಸಂಕಲ್ಪವು ಪ್ರಬಲವು; ಅದನ್ನು ಪರಿಹರಿಸುವದಕ್ಕೆ ಶಕ್ಯವಲ್ಲಾ; ಅದು ಹಾಗಿರಲಿ; ಈ ಸಮಸ್ತರಾದ ಅರಸುಗಳೊಳಗೆ ಯಾರಕೂಡೆ ಆಡಬೇಕು; ಇದಕ್ಕೆ ಪಂಥವೇನು? ಎಂದು ಕೇಳಿದನು. ಆಗ ದುರ್ಯೋಧನನು 'ಸಕಲ ರತ್ನಕಾಂಚನಗಳನ್ನೂ ಪಂಥಕ್ಕೆ ಕೊಡುತಲಿದ್ದೇನೆ; ನಾನಾಡುವದಕ್ಕೆ ಬದಲಾಗಿ ನನ್ನ ಸೋದರ ಮಾವನಾದ ಶಕುನಿಯು ದ್ಯೂತವನ್ನು ಆಡುತಲಿದಾನೆ' ಅಂದನು. ಧರ್ಮರಾಯನು 'ಒಬ್ಬನಿಗೋಸ್ಕರ ಒಬ್ಬನು ಜೂಜಾಡುವದು ಎಲ್ಲಿಯಾದರೂ ಉಂಟೊ? ಇದು ನಿನಗೆ ಉಚಿತವೆಂದು ತೋರಿದರೆ ಆಡುತಲಿದೇನೆ' ಎಂದು ದ್ಯೂತಕ್ಕೆ ಆರಂಭಿಸಿದ ಸಮಯದಲ್ಲಿ ಸಕಲ ನರೇಂದ್ರ ಪರಿವೃತನಾದ ಧೃತರಾಷ್ಟ್ರನು ಬಂದು ಸಭಾಮಂಟಪದಲ್ಲಿ ಕುಳಿತುಕೊಂಡನು; ಭೀಷ್ಮದ್ರೋಣ ಕೃಪವಿದುರರೂ ಜೂಜನ್ನಾಡುವದು ಪ್ರೀತಿಯಿಲ್ಲದಿದ್ದರೂ ಅರಸನ ಸಂಗಡಲೇ ಬಂದು ಚಿಂತೆಯಿಂದ ಉಚಿತಾಸನಗಳಲ್ಲಿ ಕುಳಿತಿದ್ದರು; ಆಗ ಸಿಂಹಸ್ಕಂಧರಾಗಿ ತೇಜೋವಿರಾಜಮಾನರಾಗಿ ವೇದವೇದಾಂಗ ವಿಶಾರದರಾದ ಅನೇಕ ಅರಸುಗಳಿಂದ ಆ ಸಭಾ ಭವನವು ದೇವಗಣಸಂವೃತವಾದ ಸ್ವರ್ಗದೋಪಾದಿಯಲ್ಲಿ ಕಾಣಿಸ್ಪಟ್ಟಿತು. ಆ ಬಳಿಕ ಧರ್ಮರಾಯನು ಸಮುದ್ರದ ಸುಳಿಯೋಪಾದಿಯಲ್ಲಿ ಪ್ರಕಾಶಮಾನವಾಗಿ ಅಮೂಲ್ಯಗಳಾಗಿ ಕಾಂಚನಾಲಂಕೃತಗಳಾಗಿರುವ ಮುತ್ತಿನ ಹಾರಗಳನ್ನು ತೆಗೆದು 'ಇದನ್ನು ಪಂತವಾಗಿ ಇಡುತಲಿದೇನೆ; ನಿನ್ನ ಪಂತವೇನು?' ಎಂದು ಕೇಳಲು ದುರ್ಯೋಧನನು 'ನನಗೆ ಅನೇಕ ವಸ್ತುವಾಹನಗಳವೆ; ಅದನ್ನು ಹೇಳಕೊಳ್ಳಬಾರದು; ಅವುಗಳನ್ನು ಕೊಡುತಲಿದೇನೆ; ಗೆದ್ದುಕೋ' ಅಂದನು. ಆ ಬಳಿಕ ಅಕ್ಷಹೃದಯಜ್ಞನಾದ ಶಕುನಿಯು ಆ ದಾಳಗಳನ್ನು ಕೈಗೆ ತಕ್ಕೊಂಡು ದಾಳಗಳನ್ನು ಹಾಕಿ 'ಇದೊ ಗೆದ್ದೆನು!' ಅಂದನು."

## ೬೯ನೇ ಅಧ್ಯಾಯ.—ದ್ಯೂತಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ಶಕುನಿಯನ್ನು ನೋಡಿ 'ನೀನು ಆ ಪಂಥವನ್ನು ಮೋಸದಿಂದ ಗೆದ್ದೀ; ಅದು ಹೋಗಲಿ; ಏಳು ಸಾವಿರ ಮೊಹರಗಳಿಂದ ಮಾಡಲ್ಪಟ್ಟ ಗಂಡಿಗಳೂ ಮುಕ್ತಾಹಾರಗಳೂ ಅಪರಮಿತವಾದ ಸುವರ್ಣವೂ ನನ್ನ ಬೊಕ್ಕಸದಲ್ಲವೆ; ಈ ಪಂಥಕ್ಕೆ ನಿಲ್ಲು' ಅಂದನು. ಶಕುನಿಯು ದಾಳಗಳನ್ನು ತಳಿಸಿ 'ಇದೊ ಗೆದ್ದೆನು!' ಅಂದನು. ಧರ್ಮರಾಯನು 'ಸಾವಿರ ರಥಗಳಿಗೆ ಸಮಾನವಾಗಿ ವ್ಯಾಘ್ರಚರ್ಮದಿಂದ ಸುತ್ತಲ್ಪಟ್ಟಂಥಾದ್ದಾಗಿ ಸುವರ್ಣ ಚಕ್ರಶೋಭಿತವಾಗಿ ಕಾಂಚನ ಕಿಂಕಿಣೀ ಜಾಲ ವಿರಾಜಮಾನವಾಗಿ ಜಯಪ್ರದವಾಗಿ ಮೇಘಸಾಗರ ನಿರ್ಘೋಷವಾಗಿ ಕಾಲುಗಳನ್ನು ಭೂಮಿಯಲ್ಲಿಡದೆ ಅತಿತ್ವರೆಯಿಂದ ಹೋಗುವ ಎಂಟು ಕುದುರೆಗಳನ್ನು ಕಟ್ಟಿರುವ ರಥವನ್ನು ಪಂಥವಾಗಿಟ್ಟೆನು' ಎನಲು ಶಕುನಿಯು ಪಗಡೆಗಳನ್ನು ಹಾಕಿ 'ಇದನ್ನೂ ಗೆದ್ದೆನು!' ಅಂದನು. ಧರ್ಮರಾಯನು 'ಸುವರ್ಣ ಭೂಷಣಾಕಕ್ಷ್ಯಾ ವಿರಾಜಮಾನಗಳಾಗಿ ಸುವರ್ಣಮಾಲಿಕಾಲಂಕೃತಗಳಾಗಿ ಬಿಂದುಜಾಲಗಳಿಂದ ಒಪ್ಪಿರುವಂಥಾವಾಗಿ ದೀರ್ಘದಂತ ವಿರಾಜಮಾನಗಳಾಗಿ ಪರ್ವತದೋಪಾದಿಯಲ್ಲಿ ಉ

ನ್ನತಗಳಾಗಿ ಎಂಟು ಹೆಣ್ಣಾನೆಗಳಿಂದ ಕೂಡಿರುವಂಥಾವಾಗಿ ಶತ್ರುಪುರ ಭಂಜನಗಳಾಗಿ ಮಹಾ ಮೇಘಸಂಕಾಶಗಳಾಗಿರುವ ಸಾವಿರ ಆನೆಗಳನ್ನು ಪಂತಕ್ಕೆ ಕುರಿತೆನು ' ಎನಲೂ ಶಕುನಿಯು ಅದನ್ನೂ ಜಯಿಸಿದನು. ಆ ಬಳಿಕ ಧರ್ಮರಾಯನು ಶಂಖಗಳಿಂದ ಮಾಡಲ್ಪಟ್ಟ ಭುಜಕೀರ್ತಿಗಳನ್ನೂ ಧರಿಸಿರುವಂಥಾವರಾಗಿ ನಾನಾ ಭೂಷಣಾಲಂಕೃತರಾಗಿ ವಿಚಿತ್ರಾಂಬರಧಾರಿಗಳಾಗಿ ಪುಷ್ಪಮಾಲ್ಯಾಲಂಕೃತರಾಗಿ ಯೌವನವತಿಗಳಾಗಿ ನೃತ್ಯಗೀತವಿಶಾರದರಾಗಿ ಸ್ನಾತಕರಿಗೂ ಬ್ರಾಹ್ಮಣರಿಗೂ ಅಮಾತ್ಯರಿಗೂ ಅರಸುಗಳಿಗೂ ತನ್ನ ಅನುಜ್ಞೆಯಿಂದ ಶಿಶ್ರೂಷೆಯನ್ನು ಮಾಡುತಲಿದ್ದ ಬಂದು ಲಕ್ಷ ದಾಸೀ ಜನಗಳನ್ನು ಪಂತವೆಂದು ನುಡಿಯಲು, ಕಪಟದ್ಯೂತ ವಿಶಾರದನಾದ ಶಕುನಿಯು ಅದನ್ನೂ ಜಯಿಸಿದನು. ಮತ್ತೂ ಯುಧಿಷ್ಠಿರನು ಸಧರ್ಮರಾಗಿ ಹಿತಸಂಚಾರಿಗಳಾಗಿ ಬುದ್ಧಿ ಸಂಪನ್ನರಾಗಿ ಸುವರ್ಣ ಕುಂಡಲಾ ಲಂಕೃತರಾಗಿ ಪಾತ್ರೆಗಳನ್ನು ತಕ್ಕೊಂಡು ಅಹೋರಾತ್ರೆಯಲ್ಲಿಯೂ ಅಥಿತಿ ಪೂಜೆಯನ್ನು ಮಾಡುವಂಥಾವರಾಗಿ ಯೌವನಾಲಂಕಾರ ಶೋಭಿತರಾದ ಲಕ್ಷ ಪರಿಚಾರಕ ಜನವನ್ನು ಪಂಥವೆಂದು ನುಡಿಯಲು, ಶಕುನಿಯು ಅದನ್ನೂ ಜಯಿಸಿದನು. ಸುವರ್ಣ ದಂಡಪತಾಕಾಲಂಕಾರ ಶೋಭಿತಗಳಾಗಿ ಉತ್ತಮಾಶ್ವಸಮೇತಗಳಾಗಿ ಯುದ್ಧವನ್ನು ಮಾಡಿದರೂ ಸುಮ್ಮನೇ ಇದ್ದರೂ ಬಂದು ತಿಂಗಳಿಗೆ ಸಾವಿರ ಮೊಹರಗಳು ಸಂಬಳವುಳ್ಳಂಥಾವರಾಗಿ ವಿಚಿತ್ರಯೋಧರಾದ ರಥಿಕರಿಂದ ಅಲಂಕೃತರಾಗಿರುವ ಬಂದು ಲಕ್ಷ ರಥಗಳು ಪಂಥವಿಡಲ್ಪಡಲು ಆ ದುರಾತ್ಮಕನಾದ ಶಕುನಿಯು ಅದನ್ನೂ ಜಯಿಸಿದನು. ಮತ್ತೂ ಧರ್ಮರಾಯನು ತಿತ್ತಿರಿಪಕ್ಷಿವರ್ಣವುಳ್ಳಂಥಾವಾಗಿ ಸುವರ್ಣ ಮಾಲಿಕಾಲಂಕೃತಗಳಾಗಿರುವ ಮತ್ತೂ ಸಾವಿರ ರಥಗಳನ್ನೂ ಹತ್ತು ಸಾವಿರ ಕೊಲ್ಲಾರ ಭಂಡಿಗಳನ್ನೂ ಬಂದೊಂದು ವರ್ಣಕ್ಕೆ ಹತ್ತು ಸಾವಿರ ಕುದುರೆಗಳನ್ನೂ ಸಣ್ಣಕ್ಕಿ ಹಾಲು ತುಪ್ಪ ಕಡಲೆ ಮೊದಲಾದ ವಸ್ತುಗಳು ಆಹಾರವಾಗುಳ್ಳ ಅರವತ್ತು ಸಾವಿರ ಕುದುರೆಗಳನ್ನೂ ಪಂಥವೆನಲು, ಶಕುನಿಯು ಅದನ್ನೂ ಜಯಿಸಿದನು. "

## ೯೬ನೇ ಅಧ್ಯಾಯ.—ದ್ಯೂತಪರ್ವಶೇಷ.

" ಕೇಳು ಜನಮೇಜಯನೆ, ಈ ಪ್ರಕಾರದಿಂದ ಅತಿಘೋರವಾದ ಸಕಲ ಜನ ಕ್ಷಯಕಾರಣವಾಗಿರುವ ದ್ಯೂತವು ನಡೆಯುವ ಸಮಯದಲ್ಲಿ ಸಕಲಜನ ಸಂಶಯ ನಿವಾರಕ ಚತುರನಾದ ವಿದುರನು ಧೃತರಾಷ್ಟ್ರನನ್ನು ನೋಡಿ ' ಎಲೈ ಕೌರವೇಶ್ವರನೆ, ಮರಣವು ಬಯಸುವಂಥಾವನಿಗೆ ಔಷಧವು ರುಚಿಸದೇ ಇರುವ ತೆರದಿಂದ ನನ್ನ ವಾಕ್ಯಗಳು ನಿನಗೆ ಅಸಮ್ಮತವಾಗಿ ತೋರುತಲಿವೆ; ಆದರೂ ಹಿತೋಪದೇಶವನ್ನು ಮಾಡಬೇಕಾದ್ದರಿಂದ ಹೇಳುತಲಿದೇನೆ ಕೇಳು; ಮೊದಲು ಪಾಪಾತ್ಮಕನಾಗಿ ಕುರುವಂಶನಾಶಕನಾದ ದುರ್ಯೋಧನನು ಹುಟ್ಟಿದ ಸಮಯದಲ್ಲಿ ನರಿಯೋಪಾದಿಯಲ್ಲಿ ಸ್ವರದಿಂದ ರೋಧನವನ್ನು ಮಾಡಿದವನಾದ್ದರಿಂದ ಇವನಿಂದ ಬಹುಜನ ಕ್ಷಯವಾಗುತಲಿದೆ; ದುರ್ಯೋಧನ ನಾಮಧೇಯದಿಂದ ಬಂದು ನರಿ ಬಂದು ನಿನ್ನ ಮನೆಯಲ್ಲಿದೆ; ಅದನ್ನು ನೀನು ಮತ್ತನಾಗಿ ತಿಳಿಯಲಿಲ್ಲಾ; ಮಂದಬುದ್ಧಿಯಾದ ಬೇಡನು ಮರದಕೊಂಬು ಮುರಿದುಬಿದ್ದರೆ ತಾನೂ ಬೀಳುವನೆಂದೆಣಿಸದೆ ಜೇನುತುಪ್ಪವನ್ನು ತಕ್ಕೊಳ್ಳಬೇಕೆಂಬ ಬುದ್ಧಿಯಿಂದ ವೃಕ್ಷವನ್ನು ಏರುವ ಚಂದದಿಂದ ದುಷ್ಟಾತ್ಮಕನಾದ ದುರ್ಯೋಧನನು ತನ್ನ ನಾಶವನ್ನು ತಿಳಿಯಲಾರದೆ ಮಹಾರಥಿಕರಾದ ಪಾಂಡವರ ಐಶ್ವರ್ಯವನ್ನು ಕಪಟದಿಂದ ಅಪಹರಿಸುತಲಿದಾನೆ; ಇವನು ಪಾಪಾತ್ಮನು ಎಂದು ತಿಳಿದಿದೆ; ಅಂಧಕವೃಷ್ಣಿ ಭೋಜಯಾದವ ಪ್ರಭೃತಿಗಳು ಕ್ರೂರನಾದ ಕಂಸನನ್ನು ಪರಿಹರಿಸಿ ಕೃಷ್ಣನಿಂದ ಕಂಸನು ಹತನಾದಮೇಲೆ ಈಗ ಸುಖದಿಂದ ಇರ್ಧಾರೆ; ನೀನೂ ಈ ಧೂರ್ತನಾದ ದುರ್ಯೋಧನನನ್ನು ನಿಗ್ರಹಿಸಿದರೆ ಕೌರವವಂಶಕ್ಕೆ ಶ್ರೇಯಸ್ಸಾಗುವದರಿಂದ ಅರ್ಜುನನಿಗೆ ಅಪ್ಪಣೆಯನ್ನು ಕೊಟ್ಟರೆ ಈಗಲೇ ಶಿಕ್ಷಿಸುತಲಿದಾನೆ; ಬಂದು ಕಾಗಿಯನ್ನು ಕೊಟ್ಟು ಐದು ನವಿಲುಗಳನ್ನು ತಕ್ಕೊಳ್ಳುವಹಾಗೂ ಬಂದು ನರಿಯನ್ನು ಕೊಟ್ಟು ಐದು ಹೆಬ್ಬುಲಿಗಳನ್ನು ಸಂಗ್ರಹಿಸಿದಹಾಗೂ ಈ ದುರ್ಯೋಧನನನ್ನು ಬಿಟ್ಟು ಪುರುಷ ಕಂಠೀರವರಾದ ಪಾಂಡವರನ್ನು ಪರಿಗ್ರಹಿಸು; ಶೋಕ ಸಾಗರದಲ್ಲಿ ಯಾಕೆ ಮುಳುಗಬೇಕು! ಬಂದು ವಂಶವನ್ನು ಸಂರಕ್ಷಿಸುವದ

ಕ್ಕೋಸ್ಕರ ಒಬ್ಬನನ್ನು ಪರಿಹರಿಸಬೇಕು; ಒಂದು ಗ್ರಾಮವನ್ನು ರಕ್ಷಿಸುವದಕ್ಕೋಸ್ಕರ ಒಂದು ಮನೆಯವರನ್ನು ಬಿಟ್ಟುಬಿಡಬೇಕು; ಒಂದು ದೇಶ ನಿಮಿತ್ತವಾಗಿ ಒಂದು ಗ್ರಾಮವನ್ನು ಬಿಟ್ಟುಬಿಡಬೇಕು; ತನ್ನ ಶರೀರವನ್ನು ರಕ್ಷಿಸುವದಕ್ಕೋಸ್ಕರ ದೇಶವನ್ನು ಬಿಟ್ಟುಬಿಡಬೇಕು—ಎಂದು ಧರ್ಮಶಾಸ್ತ್ರವು ಹೇಳುತಲಿವೆ; ಸರ್ವಜ್ಞನಾಗಿ ಶತ್ರುಭಯಂಕರನಾಗಿರುವ ಶುಕ್ರನು ದುರಾತ್ಮಕನಾದ ಜಂಭಕಾಸುರನನ್ನು ಪರಿಹರಿಸುವಹಾಗೆ ಹೇಳಿದ್ದನ್ನು ಕೇಳಿ ವುಂಟಲ್ಲಾ! ಪೂರ್ವದಲ್ಲಿ ಒಬ್ಬನ ಮನೆಯಲ್ಲಿ ಹಿರಣ್ಯಷ್ಠೀವಿಗಳೆಂಬ ಕೆಲವು ಪಕ್ಷಿಗಳು ವಾಸಮಾಡಿಕೊಂಡಿದ್ದವು; ಅವು ಪ್ರತಿದಿನವೂ ಕೆಲವು ಸುವರ್ಣವನ್ನು ಇಕ್ಕುತಿದ್ದವು; ಅದರಿಂದ ಅವನು ಕೆಲವು ದಿವಸಗಳು ಜೀವನಮಾಡಿಕೊಂಡು ಬಂದನು; ಒಂದು ದಿವಸದಲ್ಲಿ ಅತ್ಯಾಶೆಯಿಂದ ಅವುಗಳನ್ನು ಹಿಡಿದು ಹೊಟ್ಟೆಯನ್ನು ಶೀಳಿ, ಏನನ್ನೂ ಕಾಣದೆ ಇಹಪರ ಸೌಖ್ಯಗಳು ಎರಡೂ ಯಿಲ್ಲದೆ ಕೆಟ್ಟತೆರದಿಂದ ನೀನೂ ದುರಾಶೆಯಿಂದ ಪಾಂಡವರ ಕೂಡೆ ವಿರೋಧವನ್ನು ಮಾಡಿಕೊಂಡು ಸುವರ್ಣಷ್ಠೀವಿಗಳೆಂಬ ಪಕ್ಷಿಗಳನ್ನು ಕೊಂದವನೋಪಾದಿಯಲ್ಲಿ ಪಶ್ಚಾತ್ತಾಪವನ್ನೈದುತಿದ್ದಿ; ಗಾಳದಲ್ಲಿರುವ ಮಾಂಸವನ್ನು ಭಕ್ಷಿಸುವದಕ್ಕೆ ಹೋದ ಮತ್ಸ್ಯದೋಪಾದಿಯಲ್ಲಿ ನೀನು ಯಾಕೆ ಕೆಟ್ಟುಹೋಗಬೇಕು? ಪುಷ್ಪಮಾಲಿಕೆಗಳುಳ್ಳಂಥಾವನು ಉದ್ಯಾನವನದಲ್ಲಿರುವ ವೃಕ್ಷಗಳನ್ನು ಪ್ರತಿದಿನವೂ ರಕ್ಷಿಸುತ ಅಂದಂದಿಗೆ ಹುಟ್ಟಿದ ಹುವ್ವುಗಳನ್ನು ತಕ್ಕೊಳ್ಳುವಹಾಗೆ ನೀನು ಕುಂತಿಯಮಕ್ಕಳ ದೆಸೆಯಿಂದ ಸಕಲ ಶುಭಗಳನ್ನು ಪಡೆಯಬೇಕಲ್ಲದೆ ಇದ್ದಲಿಗೋಸ್ಕರ ಮಹಾ ವೃಕ್ಷವನ್ನು ಛೇದಿಸಿ ನಿಂದಿತನಾಗಿ ಫಲಹೀನನಾದವನ ತೆರದಿಂದ ಪುತ್ರ ಮಿತ್ರ ಸಮೇತನಾಗಿ ಪರಾಭವವನ್ನು ಯಾತಕ್ಕೆ ಪಡೆಯಬೇಕು? ಈ ಪಾಂಡವರೈದುಮಂದಿಯೂ ಸಕಲ ಸದ್ಗುಣ ಸೌಂದರ್ಯ ಪರಾಕ್ರಮ ಧುರೀಣರಾಗಿದ್ದಾರೆ; ದೇವತೆಗಳೊಡನೆ ಕೂಡಿದ ದೇವೇಂದ್ರನಾದರೂ ಅವರನ್ನು ನೋಡುವದಕ್ಕೆ ಸಮರ್ಥನಲ್ಲಾ.'"

## ೯೪ ನೇ ಅಧ್ಯಾಯ.—ದ್ಯೂತಪರ್ವ ಶೇಷ.

"'ಎಲೈ ಧೃತರಾಷ್ಟ್ರನೆ, ಈ ದ್ಯೂತವು ವಿರೋಧಕ್ಕೆ ಕಾರಣವು; ವಿರೋಧದಿಂದ ಭಯಂಕರವಾದ ಯುದ್ಧವಾಗುವದು; ಈ ದುರ್ಯೋಧನನಿಂದ ಇಷ್ಟು ಅನರ್ಥವು ಬರುತಲಿದೆ; ವೃಷಭನು ತನ್ನ ಮದದಿಂದ ತನ್ನ ಕೊಂಬುಗಳನ್ನು ಮುರಿದುಕೊಳ್ಳುವತೆರದಿಂದ ಈ ಪಾಪಚಿತ್ತನಾದ ಸುಯೋಧನನು ಮತ್ತನಾಗಿ ಸ್ವಜನಕ್ಕೆ ಹಾನಿಯನ್ನು ಮಾಡುತಲಿದಾನೆ; ಧೀರನಾಗಿ ಬುದ್ಧಿಸಂಪನ್ನನಾದ ಶಂತನುವಂಶದಲ್ಲಿಯೂ ಪ್ರತೀಪಕುಲದಲ್ಲಿಯೂ ಬಾಹ್ಲೀಕಕುಲದಲ್ಲಿಯೂ ಹುಟ್ಟಿದ ಮಹಾನುಭಾವರಾದ ಅರಸುಗಳಷ್ಟುಮಂದಿಯು ಈ ದುರಾತ್ಮಕನ ದುಷ್ಕೃತ್ಯದಿಂದ ನಿಷ್ಕಾರಣವಾಗಿ ಸವದುಹೋಗುತಲಿದಾರೆ; ಇವನ ದೆಸೆಯಿಂದ ರಾಜ್ಯಕ್ಕೆ ಹಾನಿಬರುತಲಿದೆ; ಈ ಪಾಪಚಿತ್ತನಾದ ದುರ್ಯೋಧನನು ಮತ್ತನಾಗಿ ಸ್ವಜನಕ್ಕೆಹಾನಿಯನ್ನು ಮಾಡುತಲಿದಾನೆ; ಧೀರನಾಗಿ ಬುದ್ಧಿಸಂಪನ್ನನಾದ ಪುರುಷನು ತನ್ನ ಬುದ್ಧಿಯನ್ನು ಬಿಟ್ಟು ಪ್ರಾಕೃತಮನುಷ್ಯನ ಬುದ್ಧಿಯನ್ನು ಅನುಸರಿಸಿದರೆ ಅಸಮರ್ಥನಾದ ಅಂಬಿಗನುಳ್ಳ ಓಡೆಯನ್ನೇರಿದ ಮನುಷ್ಯನು ಸಮುದ್ರಮಧ್ಯದಲ್ಲಿ ಮುಳುಗಿಹೋಗುವ ಚಂದದಿಂದ ದುಃಖಸಾಗರದಲ್ಲಿ ಮುಳುಗಿಹೋಗುವನು; ಈ ದುರ್ಯೋಧನನು ಪಾಂಡವರನ್ನು ಜೂಜಿನಿಂದ ಜಯಿಸುತಲಿದಾನೆಂದು ನೀನು ಸಂತೋಷಭರಿತನಾಗಿದ್ದಿ; ಇದರಿಂದ ಸಮಸ್ತ ಭೂಮಂಡಲದಲ್ಲಿ ಪ್ರಜಾಕ್ಷಯವಾದ ಯುದ್ಧವು ಬರುತಲಿದೆ; ಈಗ ನೀನು ದ್ಯೂತವನ್ನು ಆಡಲು ಕಟ್ಟುಮಾಡುವದೇ ತೊರತಾಗಿ ಇದರಿಂದ ಪ್ರಯೋಜನವೇನೂ ಇಲ್ಲಾ; ದುರ್ಬುದ್ಧಿಗಳಾದ ಶಕುನಿ ಮೊದಲಾದವರ ಆಲೋಚನೆಯು ನಿನ್ನ ಮನಸ್ಸಿನಲ್ಲಿ ನೆಟ್ಟುಯಿದೆ; ಅದು ಉಚಿತವಲ್ಲಾ; ಯಾವರೀತಿಯಿಂದಲಾದರೂ ಪರಿಹರಿಸಿ ಸತ್ಯಸಂಧನಾದ ಧರ್ಮರಾಯನೊಡನೆ ಸ್ನೇಹವನ್ನು ಮಾಡಿ ಆತನನ್ನು ಮಂತ್ರಿಯಾಗಿ ಮಾಡಿಕೊಂಡು ಸಕಲ ಸೌಖ್ಯಗಳನ್ನು ಅನುಭವಿಸುತ ಸುಖದಿಂದಿರು. ಎಲೈ ಈ ಸಭೆಯಲ್ಲಿರುವ ಅರಸುಗಳಿರಾ, ಮಹಾಜ್ವಾಲೆಗಳಿಂದ ಭಯಂಕರವಾದ ಯಜ್ಞೇಶ್ವರನೊಡನೆ ಯುದ್ಧವನ್ನು ಮಾಡಿ ಶಾಂತಿಯನ್ನೈದುವವರುಂಟೆ? ಆದ್ದರಿಂದ ನನ್ನ ವಾ

ಕ್ಯವನ್ನು ಅತಿಕ್ರಮಿಸದೆ ಸುಖವಾಗಿರಿ; ಯುಧಿಷ್ಠಿರನು ಭೀಮಾರ್ಜುನ ನ[illegible]ರು ಜಾಜಿನ ಪರಾ ಕಿನಿಂದ ಇವಾರೆಯೋ ಹೊರತಾಗಿ ಇವರು ಕೋಪಿಸಿಕೊಂಡರೆ ಯುದ್ಧದಲ್ಲಿ ಅವ[illegible]ಲ್ಲಿರುವಂಥಾ ಸಾಮ ರ್ಥ್ಯವುಳ್ಳ ಪುರುಷನೂ ವುಂಟೆ? ಎಲೈ ಧೃತರಾಷ್ಟ್ರನೆ, ನಿನಗೆ ಬೇಕಾದಷ್ಟು ಧ[illegible]ರೂ ಪಾಂಡವರ ಧನವ ನ್ನು ದ್ಯೂತದಿಂದ ಅಪಹರಿಸಬೇಕೆ? ಆ ಬಳಿಕ ಸರ್ವಸ್ವವೂ ಹೋಗುವದು ನಿನಗೆ ತಿಳಿಯಲಿಲ್ಲವೆ ?. ಈ ಅರ್ಜುನ ನು ಮನುಷ್ಯಮಾತ್ರದವನೆ ? ಈ ಶಕುನಿಯು ಜೂಜಾಡುವದಕ್ಕೆ ಸಮರ್ಥನೆಂದು ನಾನು ತಿಳಿದಿದ್ದೇನೆ, ಮಹಾಮಾ ಯಾಬಲ ಸಮನ್ವಿತನಾದ ಈ ದುರಾತ್ಮಕನನ್ನು ಅವನ ದೇಶಕ್ಕೆ ಕಳುಹಿಸುವದು ಯುಕ್ತವೆಂದು ತೋರುತಲಿದೆ' ಎಂದು ವಿದುರನು ಧೃತರಾಷ್ಟ್ರನಿಗೆ ಹೇಳಿದನು."

## ೬೮ ನೇ ಅಧ್ಯಾಯ.—ದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ದುರ್ಯೋಧನನು ವಿದುರನನ್ನು ಕುರಿತು 'ಎಲೈ ವಿದುರನೆ, ನೀನು ನಮ್ಮವನೆಂದು ಪ್ರಛನ್ನನಾಗಿದ್ದುಕೊಂಡು ಧೃತರಾಷ್ಟ್ರನ ಮಕ್ಕಳು ವಿವೇಕ ಹೀನರೆಂದು ನಿಂದಿಸಿ ಪಾಂಡವರು ಪರಾಕ್ರಮ ಧುರೀಣರೆಂದು ಬಹುಪ್ರಕಾರವಾಗಿ ಸ್ತುತಿಸುತ್ತಿದ್ದೀ; ಆದ್ದರಿಂದ ನೀನೇ ನಮಗೆ ಪ್ರದಾನಶತ್ರುವೆಂದು ತಿಳಿದೆನು; ಸತ್ಪುರುಷರಾದವರನ್ನು ದುಷ್ಟರೆನ್ನುತಲೂ ದುಷ್ಟರಾದವರನ್ನು ಸತ್ಪುರುಷರೆನ್ನುತಲೂ ಹೇಳುವದ ರಿಂದ ನೀನು ಪಾಂಡವರ ಪಕ್ಷಪಾತಿಯೆಂದು ಈ ಹೊತ್ತು ತಿಳಿಯಿತು; ಲೋಕದಲ್ಲಿ ಕಪಟಿಯಾದವನ ಹೃದಯವ ನ್ನು ನಾಲಿಗೆಯು ವಾಕ್ಯದಿಂದ ಪ್ರಕಾಶಮಾಡುವದರಿಂದ ನಮ್ಮಲ್ಲಿ ಪ್ರೀತಿಯಿಲ್ಲದಿರುವಂಥಾ ನಿನ್ನನ್ನು ನಿರಾಕರಿಸುವ ದೆ ನಮಗೆ ಯುಕ್ತವು; ಬೆಕ್ಕು ತನ್ನ ಮರಿಗಳನ್ನು ಕೊಲ್ಲುವತೆರದಿಂದ ಸ್ವಜನದ್ರೋಹವನ್ನು ಮಾಡುವದಕ್ಕೆಣಿಸಿ ದ ನಿನ್ನನ್ನು ಕೊಲ್ಲದೆ ಇಷ್ಟುದಿನವೂ ರಕ್ಷಿಸಿದ್ದು ಹಾವಿನ ಮರಿಯನ್ನುತೊಡೆಯಲ್ಲಿರಿಸಿಕೊಂಡು ಹಾಲನ್ನುಯರದ ಚೆಂದವಾಯಿತು; ಇಂಥಾ ಸ್ವಾಮಿದ್ರೋಹವನ್ನು ಮಾಡುವಂಥಾನಿನ್ನನ್ನುಪಾಪಾತ್ಮನೆಂದು ಪ್ರಜೆಗಳು ಹೇಳಲಾರರೆ? ಇಂಥಾ ಪಾಪಕ್ಕೆ ನೀನು ಯಾತಕ್ಕೆ ಭಯಪಡುವದಿಲ್ಲಾ? ನಾವು ದ್ಯೂತದಿಂದ ಶತ್ರುಗಳನ್ನು ಜಯಿಸಿ ಸಕಲ ಧನ ಗಳನ್ನು ತಕ್ಕೊಂಡೆವು; ನೀನು ಶತ್ರುಗಳ ಪಕ್ಷಪಾತಿಯಾಗಿ ಇನ್ನುಮೇಲೆ ನಮ್ಮನ್ನು ದುರ್ಭಾಷೆಗಳಿಂದ ದೂ ಷಿಸುವದು ನಿನಗೆ ಉಚಿತವಲ್ಲಾ; ಲೋಕದಲ್ಲಿ ತನಗೆ ಅಸಮ್ಮತವಾದ ಕಾರ್ಯವನ್ನು ಹೇಳುವಂಥಾವನೇ ವಿರೋಧಿ ಯೆನಿಸಿಕೊಳ್ಳುವನು; ನೀನು ನಮ್ಮನ್ನು ಆಶ್ರಯಿಸಿಕೊಂಡು ಸಕಲವಾದ ರಹಸ್ಯಕಾರ್ಯಗಳನ್ನು ಪ್ರಕಾಶಮಾಡು ತ ವೈರಿಗಳನ್ನು ಸ್ತುತಿಸುತ್ತಿದ್ದಿ; ನೀನು ದುಷ್ಟ ಹೃದಯದಿಂದ ನಮ್ಮನ್ನು ಅವಮಾನಿಸಿ ನುಡಿಯಬ್ಯಾಡ; ಇ ನ್ನೂ ದೊಡ್ಡವರನ್ನು ಕೇಳಿ ನಿನ್ನ ಮನಸ್ಸನ್ನು ಶಿಕ್ಷಿಸಿಕೊ; ಇನ್ನುಮೇಲೆ ತೋರಿದ ರೀತಿಗೆ ನುಡಿಯಬ್ಯಾಡ; ಇಷ್ಟು ದಿನವೂ ನೀನು ವಿವೇಕಶಾಲಿಯೆಂದು ಪ್ರಸಿದ್ಧಿಪಡದ ಗೌರವಕ್ಕೆ ಹಾನಿಯನ್ನು ಮಾಡಿಕೊಂಡು ಯಾಕೆ ನಮ್ಮನ್ನು ದೂಷಿಸುತಿದ್ದಿ? ದೊಡ್ಡವರ ಸಮೀಪಕ್ಕೆ ಹೋಗಿ ಅವರನ್ನು ಚನ್ನಾಗಿ ಕೇಳಿ ತಿಳಿದುಕೊಂಡು ಪರ ರಕಾರ್ಯಕ್ಕೆ ವ್ಯಾಪಿಸದೆ ಸುಮ್ಮನೇ ಇರು; ನೀನು ಎಷ್ಟು ಪ್ರಕಾರವಾಗಿ ನುಡಿದರೂ ನಾವು ಸಹಿಸಿರುವದರಿಂದ ಸ್ವಾ ತಂತ್ರ್ಯವನ್ನು ಕಲ್ಪಿಸಿಕೊಂಡು ಕಠಿಣ ಭಾಷಣೆಗಳಿಂದ ನಮಗೆ ಅವಮಾನವನ್ನು ಕಲ್ಪಿಸಬ್ಯಾಡ; ನಿನ್ನನ್ನು ಕ ರದು ನಮಗೆ ಬುದ್ಧಿಹೇಳಬೇಕೆಂದು ಪ್ರಾರ್ಥಿಸಿದರೆ ಆಗ ಹೇಳುವದೇ ಹೊರತಾಗಿ ಇನ್ನುಮೇಲೆ ಬಾಧಿಸದೇ ಸು ಮ್ಮನೇ ಇರು; ಪುರುಷನು ಗರ್ಭದಲ್ಲಿರುವದು ಮೊದಲಾದ ಶಿಕ್ಷಕನು ಪರಮೇಶ್ವರನೆ ಹೊರತಾಗಿ ಮತ್ತೊಬ್ಬ ನುಂಟೆ? ಆದ್ದರಿಂದ ಉನ್ನತಸ್ಥಳದಲ್ಲಿರುವ ವುದಕವು ಹಳ್ಳದಲ್ಲಿ ಪ್ರವಹಿಸುವ ರೀತಿಯಿಂದ ಈಶ್ವರಾನುಗುಣವಾಗಿ ನಡದುಕೊಳ್ಳುತಲಿದೇವೆ; ಲೋಕದಲ್ಲಿ ಮಂದಬುದ್ಧಿಯಾದವರು ತಮ್ಮ ಹಣೆಯಲ್ಲಿ ಕಲ್ಲುಚಚ್ಚಿಕೊಳ್ಳುವದೂ ಒ ಬ್ಬನಿಗೊಬ್ಬನು ಭೂಮಿಯಲ್ಲಿ ಬಿದ್ದು ಹೊರಳ್ಯಾಡುವದೂ ಆಗಿದೆ; ಇದು ಪರಮೇಶ್ವರನ ಪ್ರೇರಣೆಯೇ ಹೊರ ತಾಗಿ ತಮ್ಮ ಬುದ್ಧಿಯಿಂದ ಮಾಡುವದಲ್ಲ; ಆದ್ದರಿಂದ ನಾನೂ ಈಶ್ವರನ ಪ್ರೇರಣೆಯಿಂದ ಮಾಡುತಲಿದೇನೆ; ತ

ನ್ನ ಮಾತನ್ನು ಕೇಳದೇ ಇರುವವನಿಗೆ ಬುದ್ಧಿ ಹೇಳುವಂಥಾವನೂ ತನ್ನ ವಾಕ್ಯಗಳನ್ನು ಕೇಳುವಂಥಾವನಿಗೆ ಬುದ್ಧಿ ಹೇಳದೆ ಇರುವಂಥಾವನೂ ಇಬ್ಬರೂ ಮೂರ್ಖರೆನಿಸಿಕೊಳ್ಳುವರು; ಅಗ್ನಿಯು ಮನೆಯನ್ನು ದಹಿಸುವದಕ್ಕಿಂತಲು ಮೊದಲೇ ಪ್ರಯತ್ನಮಾಡಬೇಕೇ ಹೊರತಾಗಿ ಜಾಜ್ವಲ್ಯಮಾನವಾಗಿ ದಹಿಸುತಲಿರುವ ಸಮಯದಲ್ಲಿ ಯತ್ನ ಮಾಡಿದರೆ ಭಸ್ಮವಾಗಿ ಹೋಗುವದೇ ಹೊರತಾಗಿ ಒಂದು ವಸ್ತುವಾದರೂ ಸಿಕ್ಕುವದೆ? ಜಾರಿಣಿಯಾದ ಸ್ತ್ರೀಗೆ ಪುರುಷನು ಎಷ್ಟು ಉಪಲಾಲಿಸಿದರೂ ಪರಪುರುಷನ ಮೇಲೆ ಪ್ರೀತಿಯಿರುವ ಹಾಗೆ ನಾವೆಷ್ಟು ಪ್ರೀತಿಮಾಡಿದರೂ ನಮ್ಮಲ್ಲಿ ದ್ವೇಷವನ್ನು ಮಾಡಿ ಪಾಂಡವರನ್ನು ಸ್ತುತಿಮಾಡುವದರಿಂದ ಇನ್ನುಮೇಲೆ ಇಲ್ಲಿರದೆ ಪಾಂಡವರ ಸಮೀಪಕ್ಕೆ ಹೋಗಿ ಅಲ್ಲಿಯೇ ಇರು' ಅಂದನು.

"ಆ ವಾಕ್ಯಗಳನ್ನು ಕೇಳಿ ವಿದುರನು ದುರ್ಯೋಧನನನ್ನು ಕುರಿತು 'ಎಲೈ ದುರಾತ್ಮನೆ, ಹಿತೋಪದೇಶವನ್ನು ಮಾಡಿದ ಮಾತ್ರದಿಂದಲೇ ಹೀಗೆ ಪರಿಹಾಸೋಕ್ತಿಗಳನ್ನಾಡಿದ್ದರಿಂದ ಇಂಥಾ ನಿನ್ನ ಬಂಧುತ್ವದಿಂದ ಆಗತಕ್ಕಂಥಾ ಕಾರ್ಯವೇನಿದೆ? ಅರಸುಗಳ ಮನಸ್ಸುಗಳು ಚಂಚಲವಾಗಿರುವದರಿಂದ ಒಳ್ಳೇಮಾತುಗಳನ್ನೇ ಆಡುತ್ತಿದ್ದು ಆ ಮೇಲೆ ವನಕೆ ಪೆಟ್ಟುಗಳಿಂದ ಕೊಲ್ಲುವರು; ನೀನು ನೀತಿವಿಜ್ಞನಾದ ನನ್ನನ್ನು ಮೂರ್ಖನೆಂದೆಣಿಸಿದೆ; ಒಬ್ಬ ಪುರುಷನನ್ನು ವಿವೇಕಶಾಲಿಯೆಂದೆಣಿಸಿ ಆತನ ಬುದ್ಧಿಯನ್ನು ಅನುಸರಿಸಿ ನಡಕೊಳ್ಳುತ ಆ ಬಳಿಕ ಪರಿಹರಿಸುವಂಥಾವನು ಮೂರ್ಖನೇ ಹೊರತಾಗಿ ಬುದ್ಧಿ ಹೇಳಿದಂಥಾವನು ಮೂರ್ಖನಾಗುವನೆ? ಜಾರಕಾಂತೆಯು ಶ್ರೋತ್ರಿಯನಾದವನ ಯಾಗಾದಿ ಕರ್ಮಗಳಿಗೆ ಅಯೋಗ್ಯಳಾದ ತೆರದಿಂದ ದುಷ್ಟನಾದವನು ಶ್ರೇಯಸ್ಸಿಗೆ ಯೋಗ್ಯನಲ್ಲಾ; ಯೌವನದಿಂದ ಜಗ್ಗುತಲಿರುವ ಸ್ತ್ರೀಗೆ ವೃದ್ಧಪುರುಷನು ಸಮ್ಮತನಾಗದೇ ಇರುವ ತೆರದಿಂದ ನಿನಗೆ ಹಿತವನ್ನು ಬಯಸಿ ಹೇಳಿದ್ದರಿಂದ ವಿರೋಧಿಯಾದೆನು; ನಿನಗೆ ಹಿತಗಳಾದ ಸಕಲ ಕಾರ್ಯಗಳನ್ನು ತಿಳಿದು ಹೇಳುವ ನನ್ನನ್ನು ಅಹಿತನಾಗೆಣಿಸಿದವನಾದ್ದರಿಂದ ನಿನ್ನ ಪಟ್ಟಣದಲ್ಲಿರುವ ಸ್ತ್ರೀಯರು ಬಾಲಕರು ಕುರುಡರು ಕುಂಟರು ಜಡರು ಮೊದಲಾದವರ ಬುದ್ಧಿಯನ್ನು ಕೇಳಿ ಬದುಕು; ಕಾರ್ಯವನ್ನು ಹೇಳುವಾಗ ಸಮ್ಮತನಾಗಿ ತೋರಿ ಆ ಬಳಿಕ ಅಪ್ರಿಯವಾಕ್ಯಗಳನ್ನು ನುಡಿಯುವಂಥಾವನು ಹೊರತಾಗಿ ಅಪ್ರಿಯವಾಗಿದ್ದು ಆ ಬಳಿಕ ಪ್ರಿಯವಾಗುವಂಥಾ ವಾಕ್ಯಗಳನ್ನು ಹೇಳುವಂಥಾವನು ದೊರೆಯಲಾರನು, ಇಂಥಾ ವಾಕ್ಯಗಳನ್ನು ಹೇಳುವಂಥಾ ಮಂತ್ರಿಯೂ ಆತನ ಮಂತ್ರವನ್ನು ಆದರಿಸುವಂಥಾ ಪ್ರಭುವೂ ಇರುವದು ದುರ್ಲಭವು; ಧೊರೆಗೆ ಯಾರಲ್ಲಿ ಪ್ರೀತಿಯೋ ಆತನು ಸತ್ಪುರುಷನೂ ಬುದ್ಧಿಶಾಲಿಯೂ ಆಗಿ ತೋರುವನು; ಯಾರಲ್ಲಿ ಪ್ರೀತಿಯಿಲ್ಲವೊ ಆ ಪುರುಷನು ಎಂಥಾ ಸತ್ಪುರುಷನಾಗಿ ಸಮರ್ಥನಾದರೂ ಅಪ್ರಿಯನಾಗಿ ತೋರುವನು; ಲೋಕದಲ್ಲಿ ರೋಗವನ್ನು ಪರಿಹರಿಸುವಂಥಾದ್ದಾಗಿ ಅತಿಕ್ಷಾರವಾಗಿ ಅತಿವುಷ್ಣವಾಗಿರುವ ಔಷಧವನ್ನು ವಿವೇಕಶಾಲಿಯಾದವನು ಪರಿಗ್ರಹಿಸುವನು; ಅವಿವೇಕಿಯಾದವನು ಅಂಗೀಕರಿಸನು; ಆದ್ದರಿಂದ ನನ್ನ ವಚನಗಳನ್ನು ಕೇಳಿ ಸುಖವಾಗಿರು; ಪುತ್ರ ಮಿತ್ರ ಸಮೇತನಾದ ಈ ಧೃತರಾಷ್ಟ್ರನಿಗೆ ಪರಾಕ್ರಮವೂ ಕೀರ್ತಿಯೂ ಧನವೂ ವುಂಟಾಗಬೇಕೆಂದು ಪ್ರಾರ್ಥಿಸುತಲಿದ್ದೇನೆ; ನಿನ್ನ ಮನಸ್ಸಿನಲ್ಲಿ ಹ್ಯಾಗೆಣಿಸಿಕೊಂಡರೂ ಎಣಿಸಿಕೊ; ಸರ್ಪಗಳಿಗೂ ನೇತ್ರದಲ್ಲಿ ವಿಷವುಳ್ಳಂಥಾ ಶೂನ್ಯಗಾರರಿಗೂ ಕೋಪಹುಟ್ಟಿಸಿದರೆ ಹಾನಿಬರುವ ರೀತಿಗೆ ಪಾಂಡವರಿಗೆ ಕೋಪವನ್ನು ಹುಟ್ಟಿಸಿದರೆ ಹಾನಿಬರುವದು; ಆದ್ದರಿಂದ ಅವರಿಗೆ ಕೋಪವನ್ನು ಹುಟ್ಟಿಸಬ್ಯಾಡ' ಎಂದು ವಿದುರನು ದುರ್ಯೋಧನನಿಗೆ ಹೇಳಿದನು."

---

## ೯೯ ನೇ ಅಧ್ಯಾಯ.—ದ್ಯೂತಪರ್ವಶೇಷ.

"ಕೇಳು ಜನಮೇಜಯನೇ, ಈ ಪ್ರಕಾರದಿಂದ ವಿದುರನು ದುರ್ಯೋಧನನಿಗೆ ನೀತಿಯನ್ನು ಹೇಳುತಿದ್ದ ಸಮಯದಲ್ಲಿ ಶಕುನಿಯು ಧರ್ಮರಾಯನನ್ನು ಕುರಿತು 'ಎಲೈ ಪಾಂಡುಪೌತ್ರನೆ, ಈಗ ಹೇರಳವಾದ ಧನಗಳನ್ನು ಸೋತೆಯಲ್ಲಾ; ಇನ್ನೂ ಏನಾದರೂ ಪಂಥವುಂಟಾದರೆ ಹೇಳು' ಅಂದನು. ಧರ್ಮರಾಯನು 'ನನಗೆ ಲೆಕ್ಕವಿಲ್ಲದ ಧನಕನಕ ರತ್ನರಾಶಿಗಳಿವೆ; ನೀನು ಕೇಳುವದು ಯಾತಕ್ಕೆ? ಅಯುತವು ಪ್ರಯುತವು ನಿಖರ್ವವು

ರ್ಬುದವು ಕವಚವು ಪ್ರತಿ ಕವಚವು ಸಮುದ್ರವು ಎಂಬ ಸಂಖ್ಯೆವುಳ್ಳ ಧನಗಳಿವೆ; ಇದಕ್ಕೆ ಪಂಥವಾಗಿಸಿಲ್ಲು' ಅಂ
ದನು. ಮಹಾಮಾಯಾವಿಯಾದ ಆ ದುರಾತ್ಮಕನು ಕಪಟ ಮಾರ್ಗಗಳಿಂದ ಆ ದಾಳಗಳನ್ನು ಹಾಕಿ 'ಇದೊ ಜ
ಯಿಸಿದೆನು!' ಅಂದನು. ಧರ್ಮರಾಯನು 'ಆನೆಗಳು ಕುದುರೆಗಳು ಹಸುಗಳು ಸಂಖ್ಯೆಯಿಲ್ಲದ ಆಡು ಕುರಿಗಳು
ಇನ್ನೂ ಮಿಕ್ಕಾದ ವಸ್ತುಗಳನ್ನು ಪಂತಕ್ಕೆ ಒಡ್ಡಿದೆನು' ಎನಲು, ಆ ಪಾಪಾತ್ಮನು 'ಇದೋ ಗೆದ್ದೆನು!' ಅಂದನು.
ಮತ್ತೂ ಧರ್ಮರಾಯನು 'ಪಟ್ಟಣಗಳನ್ನೂ ಗ್ರಾಮಗಳನ್ನೂ ಭೂಮಿಯನ್ನೂ ಬ್ರಾಹ್ಮಣರ ಸ್ವತ್ತು ಹೊರತಾ
ಗಿ ಮಿಕ್ಕಾದ ಜನರೊಡನೆ ಕೂಡಿರುವ ಸಮಸ್ತ ವಸ್ತುಗಳನ್ನೂ ಪಂತಕ್ಕೆ ಕೊಟ್ಟೆನು' ಎನಲು ದ್ಯೂತವಿಶಾರದನಾ
ಗಿ ದುಷ್ಟಾತ್ಮಕನಾದ ಶಕುನಿಯು ಅವನ್ನೂ ಜಯಿಸಿದನು. ಆ ಬಳಿಕ ಧರ್ಮರಾಯನು 'ಶ್ಯಾಮವರ್ಣನಾಗಿ ಯೌ
ವನಾಭಿರಾಮನಾಗಿ ಅರುಣಲೋಚನನಾಗಿ ಸಿಂಹಸ್ಕಂಧನಾಗಿ ತೇಜೋವಿರಾಜಮಾನನಾಗಿರುವ ಈ ನಕುಲನನ್ನು ದು
ರ್ಯೋಧನನಿಗೆ ಧನವಾಗಿ ಪಂತಕ್ಕೆ ಹಾಕಿದೆ' ಎನಲೂ ಶಕುನಿಯು ಆತನನ್ನು ನೋಡಿ 'ಈ ನಕುಲನು ನಿನಗೆ ಅ
ತಿಪ್ರಿಯನಾದ್ದರಿಂದ ಆತನನ್ನು ನಾನು ಜಯಿಸಿದರೆ ಇನ್ನು ಯಾರನ್ನು ಪಂತಕ್ಕೆ ಒಡ್ಡುತ್ತಿದ್ದೀ' ಎಂದು ನುಡಿಯು
ತ ಕಪಟಮಾರ್ಗದಿಂದ ದಾಳಗಳನ್ನು ಹಾಕಿ 'ಇದೊ ಜಯಿಸಿದೆನು!' ಅಂದನು. ಆಗ ಯುಧಿಷ್ಠಿರನು 'ಸಕಲ
ಧರ್ಮಜ್ಞನಾಗಿ ಜಗತ್ಪ್ರಸಿದ್ಧನಾಗಿರುವ ಈ ಸಹದೇವನನ್ನು ಪಂತಕ್ಕೆ ಒಡ್ಡುವದು ಯುಕ್ತವಲ್ಲಾ: ಆದರೂ ಅ
ಮೂಲ್ಯವಾಗಿ ಪುರುಷ ರತ್ನವಾಗಿರುವ ಈತನನ್ನು ಒಡ್ಡಿದೆನು' ಎನಲು ಶಕುನಿಯು ಧರ್ಮರಾಯನನ್ನು ಕುರಿ
ತು 'ಭೀಮಾರ್ಜುನರಿರುವಾಗ ಮಾದ್ರೀದೇವಿಯ ಮಕ್ಕಳನ್ನು ಪಂತಕ್ಕೆ ಒಡ್ಡಿದ್ದರಿಂದ ಇವರಲ್ಲಿ ಅತ್ಯಂತ ಪ್ರೀತಿ
ಯಿರುವದು ನಾನು ಅರಿಯದೆ ಹೋದೆನು' ಎಂದು ಆ ದುಷ್ಟಾತ್ಮಕನು ದಾಳಗಳನ್ನು ಹಾಕಿ 'ಇದೊ ಜಯಿಸಿದೆ
ನು!' ಅಂದನು. ಯುಧಿಷ್ಠಿರನು ಆ ಶಕುನಿಯನ್ನು ಕುರಿತು 'ನಾವೈದುಮಂದಿಯೂ ಏಕಹೃದಯದಿಂದಿರುವಾ
ಗ ಮಿತ್ರಭೇದಕಗಳಾಗಿರುವ ವಚನಗಳನ್ನಾಡಿ ನಮ್ಮಿಷ್ಟಮಂದಿಯನ್ನೂ ಜಯಿಸಬೇಕೆಂದು ಪಾಪಬುದ್ಧಿಯನ್ನು
ಎಣಿಸಿದೆ' ಅಂದನು. ಶಕುನಿಯು ಧರ್ಮರಾಯನನ್ನು ಕುರಿತು 'ನಮ್ಮಂಥಾ ಮಂದಬುದ್ಧಿಗಳಾದವರು ಹಳ್ಳದ
ಲ್ಲಿ ಬೀಳುವದೂ ಉನ್ಮತ್ತನಾದವನು ಕಲ್ಲಿನಿಂದ ಚಚ್ಚಿಕೊಳ್ಳುವದೂ ಯುಕ್ತವೇ ಸರಿ; ವಿವೇಕಸಂಪನ್ನನಾಗಿ ಶ್ರೇ
ಷ್ಠನಾದ ನಿನಗೋಸ್ಕರ ನಮಸ್ಕಾರ; ಧೂರ್ತನಾದ ಮನುಷ್ಯನು ಮನಸ್ಸಿನಲ್ಲೆಣಿಸಿದಂಥಾ ಅರ್ಥವನ್ನು ಮಾಡುತ
ನಿದ್ರಾಸಮಯದಲ್ಲಾದರೂ ಕಳವಳಿಸುತಲಿರುವನಾದ್ದರಿಂದ ಈ ಮಾದ್ರಿಯ ಮಕ್ಕಳಲ್ಲಿ ವಿರೋಧವುಂಟಾಗಿರುವವ
ನಾದ್ದರಿಂದ ಮೊದಲು ಇವರನ್ನು ಪಂತಕ್ಕೆ ಒಡ್ಡಿದೆ' ಅಂದನು. ಧರ್ಮರಾಯನು 'ಭಯಂಕರವಾದ ಯುದ್ಧಸ
ಮುದ್ರದಲ್ಲಿ ಮುಳುಗಿಸದೆ ಓಡೆಯೋಪಾದಿಯಲ್ಲಿ ದಡವನ್ನು ಸೇರಿಸುವದಕ್ಕೆ ಸಮರ್ಥನಾಗಿ ಶತ್ರುಭಯಂಕರನಾಗಿ
ಮಹಾ ವೇಗಸಂಪನ್ನನಾಗಿ ಜಗದೇಕವೀರನಾಗಿರುವ ಅರ್ಜುನನು ಪಂತಕ್ಕೆ ಒಡ್ಡುವದಕ್ಕೇ ಯೋಗ್ಯನಲ್ಲಾ; ಆದ
ರೂ ಪಂತಕ್ಕೆ ಒಡ್ಡಿದೆ' ಎನಲು, ಕ್ರೂರಚಿತ್ತನಾದ ಶಕುನಿಯು ಕಪಟದಿಂದ ಆಕ್ಷಣದಲ್ಲಿಯೆ ದಾಳಗಳನ್ನು ಉರು
ಳಿಸಿ 'ಎಲೈ ಧರ್ಮನಂದನನೆ, ಧನುರ್ಧರಶ್ರೇಷ್ಠನಾಗಿ ವಂಶಭೂಷಣನಾಗಿ ಸವ್ಯಸಾಚಿಯಾದ ಅರ್ಜುನನು ನ
ನ್ನಿಂದ ಜಯಿಸಲ್ಪಟ್ಟನು; ಇನ್ನು ಭೀಮಸೇನನು ಒಬ್ಬನಿದ್ಧಾನೆ; ಆತನನ್ನೂ ಪಂತಕ್ಕೆ ಒಡ್ಡು' ಅಂದನು. ಧರ್ಮ
ರಾಯನು 'ಸಿಂಹಸ್ಕಂಧನಾಗಿ ಕೋಪಶೀಲನಾಗಿ ಭುಜಬಲಧುರಂಧರನಾಗಿ ಅಸಮಾನ ಪರಾಕ್ರಮಶಾಲಿಯಾಗಿ ಶತ್ರು
ಸಂಹಾರಕನಾಗಿ ಗದಾಯುದ್ಧ ವಿಶಾರದನಾಗಿ ಸೇನಾನಾಯಕನಾಗಿ ದೇವೇಂದ್ರನು ದಾನವ ಸಂಹಾರವನ್ನು ಮಾಡುವ
ತೆರದಿಂದ ಅಸಹಾಯಶೂರನಾಗಿರುವ ಭೀಮಸೇನನನ್ನು ಪಂತಕ್ಕೆ ಒಡ್ಡುವದು ವುಚಿತವಲ್ಲಾ; ಆದರೂ ಪಂತಕ್ಕೆ
ಒಡ್ಡಿದೆನು' ಎನಲು ಮಾಯೋಪಾಯ ನಿಪುಣನಾದ ಶಕುನಿಯು ದಾಳಗಳನ್ನು ಹಾಕಿ ಜಯಿಸಿ ಧರ್ಮರಾಯನ
ನ್ನು ನೋಡಿ 'ಸಮಸ್ತ ಧನವನ್ನು ಸಮಸ್ತ ವಸ್ತುವಿಶೇಷವನ್ನು ಭೂಮಿಯನ್ನು ರಥ ಗಜ ತುರಗ ಪದಾತಿಗಳ
ಸಮೂಹಗಳನ್ನು ಒಡಹುಟ್ಟಿದವರನ್ನೂ ಸೋತೆಯಲ್ಲಾ; ಇನ್ನು ನಿನಗೆ ಯಾವ ಧನವಿದೆ? ಎಂದು ಕೇಳಿದನು. ಧ
ರ್ಮರಾಯನು 'ಸಹೋದರರಿಗೆ ಪ್ರೀತಿಪಾತ್ರನಾದ ನನ್ನನ್ನು ಪಂಥಕ್ಕೆ ಒಡ್ಡಿದೆ' ಎನಲು ಆ ದುರಾತ್ಮಕನು ಮಾ
ಯೋಪಾಯಗಳಿಂದ ದಾಳಗಳನ್ನು ಹಾಕಿ ಜಯಿಸಿ ಧರ್ಮರಾಯನನ್ನು ನೋಡಿ 'ಮಿಕ್ಕಾದ ಧನವಿರುವಾಗ ತನ್ನ

ಶರೀರವನ್ನು ಪಂತಕ್ಕೆ ಕೊಟ್ಟು ಸೋತವರುಂಟೆ? ಇನ್ನು ಯೇನಾದರೂ ಜೀವನವಿದ್ದರೆ ಈ ಪಂತವನ್ನು ಆಡಿ ನಿನ್ನನ್ನು ಬಿಡಿಸಿಕೊ' ಎಂದು ತನ್ನಿಂದ ಜಯಿಸಲ್ಪಟ್ಟ ಪಾಂಡವರೈದುಮಂದಿಯನ್ನೂ ನೋಡುತ ಧರ್ಮರಾಯನನ್ನು ಕುರಿತು 'ನಿನಗೆ ಇನ್ನೊಂದು ಧನವಿದೆ; ಅದು ಯಾವದೆಂದರೆ ನಿಮ್ಮ ಪ್ರಾಣಕಾಂತೆಯಾದ ದ್ರೌಪದಿಯನ್ನು ಪಂಥಕ್ಕೆ ಕೊಟ್ಟು ನಿನ್ನನ್ನು ಬಿಡಿಸಿಕೊ' ಅಂದನು. ಧರ್ಮರಾಯನು 'ಅತಿ ಮನೋಹರಾಂಗಿಯಾಗಿ ಯೌವನೋಜ್ವಲಾಂಗಿಯಾಗಿ ಅನುರಾಗವತಿಯಾಗಿ ಶರದಿಂದೀವರಾಕ್ಷಿಯಾಗಿ ನೀಲೋತ್ಪಲಗಂಧಿಯಾಗಿ ಕುಸುಮಮಾಲಿಕಾಲಂಕೃತೆಯಾಗಿ ವಿಕಚಾಬ್ಜಮುಖಿಯಾಗಿ ಕುಂದರದನೆಯಾಗಿ ವೇದಿಮಧ್ಯೆಯಾಗಿ ಅತಿ ದೀರ್ಘವೇಣಿಯಾಗಿ ಸೌಂದರ್ಯದಲ್ಲಿ ಲಕ್ಷ್ಮೀದೇವಿಗೆ ಸಮಾನಳಾಗಿ ದಯೆಯು ರೂಪಾತಿಯುವು ಪುತ್ರಸಂಪತ್ತಿಯೂ ಉಂಟಾಗಿ ಲೋಕದಲ್ಲಿ ಪುರುಷರು ಭಾರ್ಯೆಯಲ್ಲಿ ಇಚ್ಛೈಸುವ ಸಕಲ ಸದ್ಗುಣಗಳುಂಟಾಗಿರುವ ಪತಿವ್ರತಾಶಿರೋಮಣಿಯಾಗಿ ಗೋಪಾಲಕರು ಮೊದಲಾದ ಪರಿಜನಗಳನ್ನು ತಾಯಿಯೋಪಾದಿಯಲ್ಲಿ ರಕ್ಷಿಸುತಲಿರುವ ದ್ರೌಪದಿಯನ್ನು ಒಡ್ಡಿದೆನು' ಅಂದನು.

"ಕೇಳು ಜನಮೇಜಯನೆ, ಈಪ್ರಕಾರವಾಗಿ ನುಡಿದ ಧರ್ಮರಾಯನ ವಾಕ್ಯಗಳನ್ನು ಕೇಳಿ ಆ ಸಭೆಯಲ್ಲಿದ್ದಂಥಾವರಷ್ಟುಮಂದಿಯೂ ಆತನನ್ನು ನೋಡಿ 'ಈತನು ಎಂಥಾವನು! ಅಪ್ರಯೋಜಕನು!' ಎಂದು ನಿಂದಿಸಿದರು. ಭೀಷ್ಮದ್ರೋಣ ಕೃಪ ಅಶ್ವತ್ಥಾಮ ಮೊದಲಾದವರಿಗೆ ದುಃಖದಿಂದ ಮೈಯ್ಯೆಲ್ಲಾ ಬೆವರಲು ವಿದುರನು ವಿನಮ್ರಮುಖನಾಗಿ ಕೈಯಲ್ಲಿ ತಲೆಯನ್ನು ಇಟ್ಟುಕೊಂಡು ಮಹಾಸರ್ಪದೋಪಾದಿಯಲ್ಲಿ ನಿಟ್ಟುಸುರುಗಳನ್ನು ಬಿಡುತ ನಿಶ್ಚೇಷ್ಟನಾಗಿದ್ದನು; ಬಾಹ್ಲೀಕ ಸೋಮದತ್ತ ಸಂಜಯರು ಪ್ರತೀಪವಂಶದಲ್ಲಿ ಹುಟ್ಟಿದ ಅರಸುಗಳು ಭೂರಿಶ್ರವನು ಯುಯುತ್ಸುವು ಇವರು ಮೊದಲಾದವರು ಕೈಗಳನ್ನು ಉಜ್ಜುತ ತಲೆಯನ್ನು ಬಗ್ಗಿಸಿಕೊಂಡು ಚಿಂತೆಯಿಂದ ನಿಟ್ಟುಸುರುಗಳನ್ನು ಬಿಡುತ್ತಿದ್ದರು. ಈಪ್ರಕಾರದಿಂದ ಸಕಲರು ಮಹಾದುಃಖಾಕ್ರಾಂತರಾಗಿ ಕಂಬನಿಗಳನ್ನು ತುಂಬಿರಲು ಧೃತರಾಷ್ಟ್ರನು ಸಂತೋಷಪಡುತ 'ಈಗ ಏನು ಜಯಿಸಿದನು?' ಎನುತ ತನ್ನ ಹೃದಯಾಭಿಪ್ರಾಯವು ಪ್ರಕಾಶವಾಗುವಹಾಗೆ ಬಾರಿ ಬಾರಿಗೂ ಸಂಜಯನನ್ನು ಕೇಳುತಿದ್ದನು. ಕರ್ಣ ದುರ್ಯೋಧನರೂ ದುಶ್ಶಾಸನ ಮೊದಲಾದ ತಮ್ಮಂದಿರೂ ಸಂತೋಷಪಡುತ್ತಿದ್ದರು. ಆ ಸಮಯದಲ್ಲಿ ಶಕುನಿಯು ಮುಂದೆ ಬರುವಂಥಾ ಅನರ್ಥವನ್ನು ತಿಳಿಯದೆ ದಾಳಗಳನ್ನು ಹಾಕಿ 'ಜಯಿಸಿದೆನು!' ಎಂದು ದಾಳಗಳನ್ನು ಕೈಗೆ ತೆಕ್ಕೊಂಡು ನಗುತ್ತಿದ್ದನು" ಎಂದು ವೈಶಂಪಾಯನ ಮುನೀಂದ್ರನು ಜನಮೇಜಯರಾಯನಿಗೆ ಹೇಳಿದನು.

---

## ೧೦೦ ನೇ ಅಧ್ಯಾಯ.—ದ್ಯೂತಪರ್ವಶೇಷ.

ಅನಂತರದಲ್ಲಿ ವೈಶಂಪಾಯನ ಮುನೀಂದ್ರನು ಜನಮೇಜಯರಾಯನನ್ನು ಕುರಿತು ಇಂತೆಂದನು:

"ಕೇಳು ಜನಮೇಜಯನೆ, ಆ ಬಳಿಕ ದುರ್ಯೋಧನನು ವಿದುರನನ್ನು ನೋಡಿ 'ಈ ಪಾಂಡವರ ಪ್ರಾಣಕಾಂತೆಯಾದ ದ್ರೌಪದಿಯನ್ನು ಕರತಂದು ನಮ್ಮ ಮನೆಯಲ್ಲಿರುವ ದಾಸೀಜನಗಳೊಡನೆ ಕಸಗುಡಿಸುವದು ಮೊದಲಾದ ಕೃತ್ಯಗಳಿಗೆ ಕಟ್ಟುಮಾಡು' ಅಂದನು. ವಿದುರನು ದುರ್ಯೋಧನನನ್ನು ನೋಡಿ 'ಎಲೈ ಮೂಢಾತ್ಮನೆ, ಇಂಥಾ ಕಾರ್ಯಗಳು ಕಾಲಪಾಶದ ಕಟ್ಟುಗಳೆಂದು ತಿಳಿಯದೆ ಇಲಿಯು ಬಿಲದಲ್ಲಿ ಬೀಳುವದನ್ನು ತಿಳಿಯದೆಯೂ ಹುಲ್ಲೆಯು ಹೆಬ್ಬುಲಿಗೆ ಕೋಪವನ್ನು ಹುಟ್ಟಿಸುವ ತೆರದಿಂದಲೂ ಕೋಪಿಸಿಕೊಂಡಿರುವ ಸರ್ಪಗಳನ್ನು ಶಿರಸ್ಸುಗಳಲ್ಲಿರಿಸಿಕೊಳ್ಳುವಹಾಗೆಯೂ ಪಾಂಡವರಿಗೆ ಅತಿ ಕೋಪವನ್ನು ಹುಟ್ಟಿಸಿ ಮೃತ್ಯುಮುಖವನ್ನೈದಬ್ಯಾಡ; ದ್ರೌಪದಿಯನ್ನು ತಾನು ಮುಂದೆ ಸೋಲಿ ಸ್ವತಂತ್ರನಲ್ಲದ ಧರ್ಮರಾಯನ ಪಂತದಲ್ಲಿ ಜಯಿಸಿದ್ದರಿಂದ ದಾಸೀತ್ವಕ್ಕೆ ನಿಯಮಕಳಲ್ಲ; ಬಿದಿರಫಲವು ವಿನಾಶವನ್ನೈದುವದಕ್ಕೆ ಫಲವು ಕಾಣಿಸುವ ತೆರದಿಂದ ನಿಮ್ಮ ವಂಶಕ್ಕೆ ಹಾನಿಬರುವ ವೈರಕ್ಕೆ ಕಾಲಪರಿಪಾಕವನ್ನೈದಿದ ನಿನಗೆ ಈ ದ್ಯೂತವು ಲಭಿಸಿತು; ಪರಮರ್ಮಭೇದನವು ಕ್ರೂರಕೃತ್ಯವು ಪರರ ಮರ್ಮಗಳನ್ನು ಎತ್ತಾಡುವದು ಪರಭಯಂಕರಗಳಾದ ವಚನಗಳನ್ನು ಉಗ್ಗಳಿಸುವದು ಅಶ್ಲೀಲಭಾಷಣೆ

ಳಗನ್ನಾಡುವದು ಇವು ಸತ್ಪುರುಷನಾದವನಿಗೆ ಅಸಮ್ಮತಗಳಾಗಿರುವವು; ಕಠಿನವಾಕ್ಯಗಳನ್ನು ಬಬ್ಬನ ಕಿವಿಗೆ ಕೇಳುವಹಾಗೆ ನುಡಿವರೆ ಅದು ಬಹು ದುಃಖಕರವಾದ್ದರಿಂದ ಪಂಡಿತನಾದ ಪುರುಷನು ಇಂಥಾ ದುರ್ವಾಕ್ಯಗಳನ್ನು ಬಿಡಬೇಕು; ಆಡು ತನ್ನ ಕೊರಳನ್ನು ಕುಯ್ಯುವದಕ್ಕೆ ಆಯುಧವನ್ನು ಹುಡುಕುತಲಿರುವ ಘಾತುಕನಿಗೆ ತನ್ನ ಕಾಲುಗಳಿಂದ ಭೂಮಿಯನ್ನು ಅಗದು ಆಯುಧವನ್ನು ತೋರಿಸಿಕೊಟ್ಟು ತಾನು ಸಮಡುಹೋಗುವಹಾಗೆ ಪರಾಕ್ರಮವಂತರಾದ ಪಾಂಡುಪುತ್ರರಿಗೆ ಕೋಪವನ್ನು ಹುಟ್ಟಿಸಿ ವಿನಾಶವನ್ನೈದುತ್ತಿದ್ದೀ; ಸ್ತೋತ್ರಾರ್ಹನಾಗಿ ತಪೋವನ ಸಂಚಾರಿಯಾದ ಮುನೀಂದ್ರನು ಮಹಾನುಭಾವನಾದ ಸಕಲ ವಿದ್ಯಾಪಾರಂಗತನು ಮೊದಲಾದವರನ್ನು ಯಾವ ಪುರುಷನು ದುರ್ಭಾಷೆಗಳಿಂದ ದೂಷಿಸುವನೋ ಆತನು ನರಕಕ್ಕೆ ಹೋಗುವನು; ಈ ದ್ಯೂತವು ತಮ್ಮಂಗರು ಮಕ್ಕಳೊಡನೆ ಕೂಡಿರುವ ನಿನಗೂ ನಿನ್ನನ್ನು ಅನುಸರಿಸಿರುವಂಥಾವರಿಗೂ ಅತಿ ಘೋರವಾದ ನರಕಕ್ಕೆ ರಾಜಮಾರ್ಗವೆಂದು ತಿಳಿಯಲಾರದೇ ಇದ್ದೀ; ಪುತ್ರಸಹಿತನಾದ ಧೃತರಾಷ್ಟ್ರನು ನನ್ನ ಹಿತೋಪದೇಶವನ್ನು ಕೇಳದೇ ಇರುವದು ಗುಂಡುತೇಲಿ ಬೆಂಡು ಮುಳುಗಿದ ಚಂದವಾಯಿತು; ನೀವು ದುರಾಶೆಯಿಂದ ನನ್ನ ವಾಕ್ಯಗಳನ್ನು ಕೇಳದಿರುವದರಿಂದ ಕೌರವರಿಗಷ್ಟೂ ವಿನಾಶಕಾಲವೆಂದು ನಿಶ್ಚೈಸಿದೆನು' ಎಂದು ವಿದುರನು ದುರ್ಯೋಧನನಿಗೆ ಹೇಳಿದನು."

## ೧೦೧ ನೇ ಅಧ್ಯಾಯ.—ದ್ಯೂತಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ದುರ್ಮದಾಂಧನಾದ ದುರ್ಯೋಧನನು ಗರ್ವೋದ್ದೀಪಿತನಾಗಿ ವಿದುರನನ್ನು ಆಚಾರ್ಯನು ಮೊದಲಾದವರ ಸನ್ನಿಧಾನದಲ್ಲಿ ಬಹುಪ್ರಕಾರವಾಗಿ ನಿಂದಿಸುತ ಪ್ರಾತಿಕಾಮಿಯೆಂಬ ತನ್ನ ಸಾರಥಿಯನ್ನು ನೋಡಿ 'ಈ ವಿದುರನು ಪಾಂಡವ ಪಕ್ಷಪಾತಿಯಾದ್ದರಿಂದ ನಮ್ಮನ್ನು ಅಪ್ರಿಯವಾಗಿ ನುಡಿಯುತಲಿದ್ದಾನೆ; ಕೌಂತೇಯರ ದೆಸೆಯಿಂದ ನೀನು ನಿರ್ಭಯನಾಗಿ ಅಂತಃಪುರಕ್ಕೆ ಹೋಗಿ ದ್ರೌಪದಿಯನ್ನು ಕರಕೊಂಡು ಬಾ' ಅಂದನು. ಆ ಸಾರಥಿಯು ದುರ್ಯೋಧನನ ವಾಕ್ಯವನ್ನು ಅಂಗೀಕರಿಸಿ ಅತಿ ಶೀಘ್ರದಿಂದ ಸಿಂಹವಿರುವ ಗುಹೆಯನ್ನು ಪ್ರವೇಶಿಸುವ ನಾಯಿಯೋಪಾದಿಯಲ್ಲಿ ಅಂತಃಪುರವನ್ನು ಪ್ರವೇಶಿಸಿ, ದ್ರೌಪದೀ ಸಮೀಪಕ್ಕೆ ಹೋಗಿ, ಆಕೆಯನ್ನು ಕುರಿತು 'ಧರ್ಮರಾಯನು ಮದಾಂಧನಾಗಿ ಜೂಜಾಡಿ ನಿನ್ನನ್ನು ಸೋತನು; ಆದ್ದರಿಂದ ಧೃತರಾಷ್ಟ್ರನ ಮಕ್ಕಳ ಮನೆಗೆ ಕೆಲಸಮಾಡುವದಕ್ಕೆ ನಿನ್ನನ್ನು ಕರಕೊಂಡು ಹೋಗುವದಕ್ಕೆ ಬಂದೆನು' ಅಂದನು. ದ್ರೌಪದಿಯು ಸಾರಥಿಯನ್ನು ನೋಡಿ 'ಇಂಥಾ ವಾಕ್ಯಗಳನ್ನಾಡಬಹುದೆ? ಎಲ್ಲಾದರೂ ದ್ಯೂತಕ್ಕೆ ಧರ್ಮಪತ್ನಿಯನ್ನು ಪಂಥಮಾಡುವರುಂಟೆ? ಅದಲ್ಲದೆ ಯುಧಿಷ್ಠಿರನು ಪ್ರಮತ್ತನಾಗಿ ದ್ಯೂತವನ್ನಾಡಿದನೊ ಅಥವಾ ಮತ್ತೊಂದು ಪಂಥವನ್ನು ಮಾಡುವದಕ್ಕೆ ಇಲ್ಲದೇ ಹೋಯಿತೋ ಏನೋ ಸಂಶಯವಾಗಿದೆ; ಇದಷ್ಟನ್ನೂ ನಿಶ್ಚಯವಾಗಿ ಹೇಳು' ಎಂದು ಕೇಳಿದಳು. ಆ ಸಾರಥಿಯು ದ್ರೌಪದಿಯನ್ನು ಕುರಿತು 'ಧರ್ಮರಾಯನು ಶಕುನಿಯೊಡನೆ ಜೂಜಾಡಿ ಸಕಲೈಶ್ವರ್ಯಗಳನ್ನು ಕಳಕೊಂಡು ಕಡೆಯಲ್ಲಿ ತನ್ನ ಸಹೋದರರಾದ ಭೀಮಾರ್ಜುನ ನಕುಲ ಸಹದೇವರನ್ನು ಸೋತು ಆ ಬಳಿಕ ನಿನ್ನನ್ನೂ ಸೋತನು' ಅಂದನು. ದ್ರೌಪದಿಯು ಅವನನ್ನು ನೋಡಿ 'ನೀನು ದ್ಯೂತದಿಂದ ಪ್ರಮತ್ತನಾದ ಧರ್ಮರಾಯನ ಸಮೀಪಕ್ಕೆ ಹೋಗಿ '—ಮೊದಲು ಜೂಜಿನಲ್ಲಿ ನಿನ್ನನ್ನು ಸೋತೆಯೊ ಅಲ್ಲದೇ ನನ್ನನ್ನು ಪಂಥಕ್ಕೆ ಒಡ್ಡಿದೆಯೊ—' ಎಂದು ನನ್ನ ವಚನವಾಗಿ ಕೇಳಿಬಾ; ಆ ಬಳಿಕ ನಿನ್ನ ಸಂಗಡ ಬರುತಲಿದ್ದೇನೆ' ಅಂದಳು. ಆ ಸಾರಥಿಯು ಸಭಾಭವನಕ್ಕೆ ಹೋಗಿ ಧರ್ಮರಾಯನನ್ನು ಕುರಿತು ದ್ರೌಪದಿಯ ವಾಕ್ಯಗಳಷ್ಟನ್ನೂ ಹೇಳಲು ಧರ್ಮರಾಯನು ನಾಚಿಕೆಯಿಂದ ಏನೂ ಅನ್ನಲಾರದೆ ಸುಮ್ಮನೇ ಇದ್ದನು. ಆ ಸಮಯದಲ್ಲಿ ದುರ್ಯೋಧನನು ಪ್ರಾತಿಕಾಮಿಯನ್ನು ನೋಡಿ 'ಇದಕ್ಕೆ ನೀನು ರಾಜಪಟ್ಟಕ್ಕೆ ಯಾತಕ್ಕೆ ತಿರುಗಬೇಕು? ತಾನೇ ಇಲ್ಲಿಗೆ ಬಂದು ಕೇಳಿದರೆ ತಮ್ಮ ಇಬ್ಬರ ವಾಕ್ಯಗಳೂ ಆಷ್ಟುಮಂದಿಗೂ ವಿಶದವಾದೀತು' ಎನಲು ಆ ಸಾರಥಿಯು ಆ ವಾಕ್ಯವನ್ನು ಕೇಳಿ ತಿರಿಗೂ ಅಂತಃಪುರಕ್ಕೆ ಹೋಗಿ ದ್ರೌಪದಿಯನ್ನು ಕುರಿತು 'ಸಭೆಯವರಷ್ಟುಮಂದಿಯೂ ನಿನ್ನನ್ನು ಕರತರ

ಹೇಳಿದನು ; ಕೌರವರಿಗಷ್ಟು ವಿನಾಶಕಾಲವು ಬರುವ ಹಾಗೆ ತೋರುತಲಿದೆ ! ಎಲೈ ತಾಯೆ, ಯಾರಾದರೂ ನಿನ್ನನ್ನು ಸಭೆಗೆ ಕರತರಿಸಿದರೆ ಆತನು ಮಾನವೂ ಪ್ರಾಣವೂ ಉಂಟಾಗಿ ಬದುಕುವನೆ ! ?' ಅಂದನು. ದ್ರೌಪದಿಯು 'ಜೂಜಿನಲ್ಲಿ ಸಮರ್ಥನೂ ಅಸಮರ್ಥನೂ ಪಂಥಾ ಹಾಕಿ ಇಬ್ಬರೂ ಜೂಜಾಡುವದು ದೈವಕೃತವಾದ್ದರಿಂದ ಧರ್ಮವೇ ಶರಣವೆಂದು ನಂಬಿರುವ ನಮ್ಮನ್ನು ಅಂಥಾ ಧರ್ಮವೇ ಸಂರಕ್ಷಿಸುತಲಿದೆ !' ಎಂದು ಎಣಿಸುತಲಿರುವ ಸಮಯದಲ್ಲಿ ಧರ್ಮನಂದನನು ದುರ್ಯೋಧನನ ದುರ್ನಯದಿಂದ ನಡದ ಅಭಿಪ್ರಾಯವನ್ನು ತಿಳಿದು ಆಪ್ತನಾದ ದ್ಯೂತನನ್ನು ದ್ರೌಪದಿಯ ಸನ್ನಿಧಾನಕ್ಕೆ ಕಳುಹಿಸಿದನು. ಏಕವಸ್ತ್ರೆಯಾಗಿ ರಜಸ್ವಲೆಯಾದ ದ್ರೌಪದಿಯು ಸಭಾಮಧ್ಯದಲ್ಲಿ ಅತಿ ದುಃಖದಿಂದ ಬಂದು ಧೃತರಾಷ್ಟ್ರನ ಮುಂದೆ ನಿಂತು ಮಹಾಧ್ವನಿಯಿಂದ ರೋದನವನ್ನು ಮಾಡುತ್ತಿರಲು, ದುರಾತ್ಮನಾದ ದುರ್ಯೋಧನನು ಸಭೆಯವರು ನೋಡುತ್ತಿರಲು ಆ ಸಾರಥಿಯನ್ನು ಕುರಿತು 'ದ್ರೌಪದಿಯನ್ನು ಇಲ್ಲಿ ಕರಕೊಂಡು ಬಾ ; ದ್ಯೂತದಿಂದ ಗೆದ್ದು ತನ್ನನ್ನು ತಕ್ಕೊಂಡದ್ದು ಇಷ್ಟುಮಂದಿಗೂ ತಿಳಿಯಲಿ' ಅಂದನು. ಆ ಸಾರಥಿಯು ದ್ರೌಪದಿಯ ಕೋಪಕ್ಕೆ ಭಯಪಟ್ಟು ದುರ್ಯೋಧನನ ದುರ್ನಯಕ್ಕೆ ಮನಸ್ಸಿನಲ್ಲಿ ನಿಂದಿಸುತ ಸಭೆಯವರನ್ನು ನೋಡಿ 'ಪಾಂಚಾಲಿಗೆ ನಾನು ಏನು ಹೇಳಲಿ ?' ಎಂದು ದೈನ್ಯೋಕ್ತಿಗಳನ್ನು ನುಡಿಯುತಲಿರಲು ದುರ್ಯೋಧನನು ದುಶ್ಶಾಸನನ್ನು ಕರದು 'ಈ ಪ್ರಾತಿಕಾಮಿಯು ಮಂದಬುದ್ಧಿಯಾದ್ದರಿಂದ ಭೀಮಸೇನನಿಗೆ ಭಯಪಡುತಲಿದಾನೆ ; ನೀನು ಹೋಗಿ ದ್ರೌಪದಿಯನ್ನು ಇಲ್ಲಿಗೆ ಕರಕೊಂಡು ಬಾ ; ನಮಗೆ ಭೃತ್ಯರಾದ ಪಾಂಡವರು ಏನುಮಾಡ್ಯಾರು !' ಅಂದನು.

"ಕೇಳು ಜನಮೇಜಯನೆ, ಆ ಪಾಪಾತ್ಮನ ಮಾತನ್ನು ಕೇಳಿ ದುಶ್ಶಾಸನನು ಕೋಪದಿಂದ ಕಣ್ಣುಗಳನ್ನು ಕೆಂಪು ಮಾಡಿಕೊಂಡು ದ್ರೌಪದಿಯ ಸಮೀಪಕ್ಕೆ ಹೋಗಿ 'ನಿನ್ನನ್ನು ಜೂಜಿನಲ್ಲಿ ಧರ್ಮ ಪ್ರಕಾರದಿಂದ ಜಯಿಸಿದೆವು ; ಇನ್ನು ಮೇಲೆ ನಾಚಿಕೆಯಾಕೆ ? ಈ ಹೊತ್ತು ಮೊದಲುಗೊಂಡು ದುರ್ಯೋಧನನನ್ನು ಕಾಣಿಸಿಕೊಂಡು ಕೌರವರನ್ನು ಸೇವಿಸು' ಅಂದನು. ಆ ಪತಿವ್ರತಾ ರತ್ನವು ಶೀಘ್ರವಾಗಿ ಎದ್ದು ಅತಿ ವಿವರ್ಣವಾದ ತನ್ನ ಮುಖವನ್ನು ಹಸ್ತಗಳಿಂದ ಮುಚ್ಚಿಕೊಂಡು ದೈನ್ಯದಿಂದ ಅಳುತ, ಧೃತರಾಷ್ಟ್ರನ ಸ್ತ್ರೀಜನಗಳಿದ್ದ ತಾವಿಗೆ ಹೋಗುತ್ತಿರಲು ಪಾಪಾತ್ಮನಾದ ದುಶ್ಶಾಸನನು ರೋಷಾವೇಶದಿಂದ 'ಎಲ್ಲಿಗೆ ಹೋಗುತ್ತೀಯೇ ?' ಎಂದು ಅಟ್ಟಿಕೊಂಡು ಸಂಗಡಲೇ ಹೋಗಿ ರಾಜಸೂಯಾವಭೃತದಲ್ಲಿ ಮಂತ್ರಪೂತಗಳಾದ ಜಲಗಳಿಂದ ನೆನೆಯಲ್ಪಟ್ಟಂಥಾವುಗಳಾಗಿ ಅತಿದೀರ್ಘಗಳಾಗಿ ವಕ್ರಗಳಾಗಿರುವ ದ್ರೌಪದಿಯ ಮುಂಡೇಕೂದಲುಗಳನ್ನು ಹಿಡಿದು ಪಾಂಡವರ ಭುಜಬಲವನ್ನು ಗಣನೇಮಾಡದೆ ಬಲಾತ್ಕಾರದಿಂದ ಮಹಾ ಘಾಳಿಯಿಂದ ಚಲಿಸುತಲಿರುವ ಬಾಳೇಗಿಡದೋಪಾದಿಯಲ್ಲಿ ನಡುಗುತಲಿರುವ ದ್ರೌಪದೀದೇವಿಯನ್ನು ಅನಾಥೆಯಾದ ಸ್ತ್ರೀಯೋಪಾದಿಯಲ್ಲಿ ಸಭಾಮಧ್ಯಕ್ಕೆ ಎಳದುಕೊಂಡು ಹೋದನು. ಆ ಸಮಯದಲ್ಲಿ ತಲೆಯನ್ನು ಬಗ್ಗಿಸಿಕೊಂಡು ದ್ರೌಪದಿಯು ಗದ್ಗದಸ್ವರದಿಂದ 'ಎಲೈ ರಾಜಕುಮಾರನೇ ರಜಸ್ವಲೆಯಾಗಿ ಒಂದು ವಸ್ತ್ರವನ್ನು ಉಟ್ಟುಕೊಂಡಿರುವ ನನ್ನನ್ನು ಸಭೆಗೆ ಕರಕೊಂಡು ಹೋಗುವದು ಯುಕ್ತವಲ್ಲಾ' ಎಂದು ನುಡಿದಳು. ಅವನು ಆಕೆಯ ಮುಂಡೇಕೂದಲುಗಳನ್ನು ಬಿಗದು ಹಿಡಿದು 'ನೀನು ಋತುಮತಿಯಾದರೂ ಆಗೂ ; ಏಕವಸ್ತ್ರಧಾರಿಣಿಯಾದರೂ ಆಗೂ ; ವಸ್ತ್ರಹೀನೆಯಾದರೂ ಆಗೂ ; ನಾವು ದ್ಯೂತದಲ್ಲಿ ಜಯಿಸಿದವರಾದ್ದರಿಂದ ದಾಸೀಕೃತ್ಯವನ್ನು ಮಾಡಿಸುವದಕ್ಕೆ ಹಿಡದುಕೊಂಡೋಗುತಲಿದೇವೆ ; ಶ್ರೀಮನ್ನಾರಾಯಣನಾದ ಕೃಷ್ಣನಿಗಾದರೂ ನರನಾದ ವಿಜಯನಿಗಾದರೂ ಇಲ್ಲವೆ ನಿನಗೆ ರಕ್ಷಕರು ಯಾರೋ ಅವರಿಗಾದರೂ ಮೊರೆಯಿಕ್ಕಿ ನಿನ್ನನ್ನು ಬಿಡಿಸಿಕೊ' ಅಂದನು. ಚದರಿದ ಮುಂಡೇಕೂದಲುಗಳುಳ್ಳಂಥಾವಳಾಗಿ ಕದರಿದ ಮುಂಗುರುಳುಗಳುಳ್ಳಂಥಾವಳಾಗಿ ಜಾರಿದ ಶರಗುಳ್ಳಂಥಾವಳಾಗಿ ನಾಚಿಕೆಯಿಂದ ಬಗ್ಗಿಸಲ್ಪಟ್ಟ ಮುಖವುಳ್ಳವಳಾಗಿ ಕೋಪೋದ್ದೀಪಿತೆಯಾದ ಆ ದ್ರೌಪದಿಯು ಆತನಿಂದ ಎಳೆಯಲ್ಪಟ್ಟು 'ಎಲೆ ಪಾಪಾತ್ಮನೆ, ಈ ಸಭಾಮಧ್ಯದಲ್ಲಿ ಸಕಲಶಾಸ್ತ್ರ ವಿಶಾರದರಾಗಿ ಯಾಗಶೀಲರಾಗಿ ಮಹೇಂದ್ರ ಸಮಾನರಾದ ದೊಡ್ಡವರಿದ್ದಾರೆ ; ಇವರ ಸಮೀಪಕ್ಕೆ ಬಂದು ಹ್ಯಾಗೆ ನಿಂತುಕೊಳ್ಳಲಿ ? ಎಲೆ ದುರಾಚಾರನೆ, ಇನ್ನು ನನ್ನನ್ನು ಬಿಟ್ಟುಬಿಡು ; ಇಂದ್ರನು ಮೊದಲಾದ ದೇವತೆಗಳು ನಿನಗೆ ಸಹಾಯವಾಗಿ ಬಂದರೂ ನನ್ನ ಪತಿ

ಗಳಾದ ಪಾಂಡವರ ಕೋಪವನ್ನು ಸಹಿಸುವರೆ? ಸಕಲ ಧರ್ಮರಹಸ್ಯಜ್ಞನಾದ ಈ ಧರ್ಮರಾಯನು ಧರ್ಮಪಾಶಬದ್ಧನಾಗಿಧಾನೆ; ನನ್ನ ಪತಿವ್ರತಾ ಧರ್ಮವನ್ನು ಬಿಟ್ಟು ಅವರಲ್ಲಿ ದೋಷ ಲೇಶವನ್ನಾದರೂ ಎಣಿಸಬಹುದೆ? ಋತುಮತಿಯಾದ ನನ್ನನ್ನು ಇಲ್ಲಿಗೆ ಎಳಕೊಂಡು ಬರುವದು ನೀಚಕೃತ್ಯವು; ಇದೊಂದು ಪ್ರತಾಪವೆಂದು ನಿನ್ನನ್ನು ಯಾರಾದರೂ ಸ್ತುತಿಸುವರೇ! ಈ ಕೌರವರ ಧರ್ಮವನ್ನೂ ಕ್ಷಾತ್ರವನ್ನೂ ಸುಡಬ್ಯಾಡವೆ! ಇದನ್ನು ಇಷ್ಟುಮಂದಿಯೂ ಸುಮ್ಮನೆ ನೋಡುತಲಿಧಾರೆ; ಭೀಷ್ಮದ್ರೋಣರಲ್ಲಿ ಸತ್ಯವಿಲ್ಲವೆ! ಧೃತರಾಷ್ಟ್ರನು ಮೊದಲಾಗಿ ಕುರುವೃದ್ಧರೊಳಗೆ ಈ ಕೃತ್ಯವನ್ನು ಮಾಡಬಾರದೆಂದು ತಡೆಯುವವರಿಲ್ಲದೆ ಹೋದರು!' ಎಂದು ಪ್ರಳಾಪಿಸುತ ಮತ್ತು ಸಭಾಜನರಷ್ಟುಮಂದಿಯನ್ನು ನೋಡಿ 'ಜೂಜಿನಲ್ಲಿ ನಾನು ಜಯಿಸಲ್ಪಟ್ಟದ್ದು ಉಂಟೊ ಇಲ್ಲವೊ ತಿಳುಹಿಸಬೇಕು' ಎಂದು ಕೇಳಿದಳು. ಹೀಗೆ ದೀನಾಲಾಪಗಳನ್ನು ನುಡಿಯುತ ಕೋಪೋದ್ದೀಪಿತವಾದ ನೋಟದಿಂದ ಕಾಂತೇಯರನ್ನು ಚುರಚುರನೆ ನೋಡಲು ಮೊದಲೇ ರೋಷಾವೇಶದಿಂದ ಪರವಶರಾಗಿರುವ ಪಾಂಡವರು ರೋಷವು ದ್ವಿಗುಣಿಸಿ ನಿಟ್ಟುಸುರುಗಳನ್ನು ಬಿಡುತ ರಾಜ್ಯ ಧನಕನಕ ವಸ್ತುವಾಹನಗಳು ಹೋಗುವಾಗ ಇಲ್ಲದ ಶೋಕವನ್ನು ಅನುಭವಿಸುತ್ತಿದ್ದರು. ಆಗ ದುಶ್ಯಾಸನನು ತನ್ನ ಗಂಡರನ್ನೇ ನೋಡುತಲಿರುವ ದ್ರೌಪದಿಯನ್ನು ಎಳದು ಬಾರಿಬಾರಿಗೂ ಹೆಸರಿಡಿದು ಕರಿಯುತ ಅಟ್ಟಹಾಸವನ್ನು ಮಾಡುತಿದ್ದನು; ಅದನ್ನು ನೋಡಿ ಕರ್ಣನು ಸಂತೋಷಪಟ್ಟು ನಗುತ ದುಶ್ಯಾಸನನನ್ನು ಬಹುಪ್ರಕಾರವಾಗಿ ಸ್ತುತಿಸಿದನು; ಸಾಬಲನು ಅದೇಪ್ರಕಾರವಾಗಿ ಹೊಗಳಿದನು. ಆ ಸಮಯದಲ್ಲಿ ಅತ್ಯಂತವಾಗಿ ದುಃಖಪಟ್ಟು ಅನಾಥೆಯೋಪಾದಿಯಲ್ಲಿ ಆತನಿಂದ ಎಳೆಯಲ್ಪಟ್ಟ ಆ ಪತಿವ್ರತಾಶಿರೋಮಣಿಯ ಶೋಕವನ್ನು ನೋಡಿ ದುರ್ಯೋಧನ ದುಶ್ಯಾಸನ ಕರ್ನ ಶಕುನಿಗಳು ಹೊರತಾಗಿ ಮಿಕ್ಕಾದವರಷ್ಟುಮಂದಿಯೂ ಶೋಕಾಕ್ರಾಂತರಾಗಿದ್ದರು. ಬುದ್ಧಿಸಂಪನ್ನನಾದ ಭೀಷ್ಮನು ದುರ್ಯೋಧನಾದಿಗಳ ಹೃದಯವನ್ನು ತಿಳಿದು ಇದಷ್ಟೂ ದೈವಕೃತವೆಂದೆಣಿಸಿ ದ್ರೌಪದಿಯನ್ನು ನೋಡಿ 'ಮೊದಲು ತನ್ನನ್ನು ಸೋತು ಆ ಬಳಿಕ ನಿನ್ನನ್ನು ಪಂಥಕ್ಕೆ ಒಡ್ಡುವದಕ್ಕೆ ಧರ್ಮರಾಯನು ಸ್ವತಂತ್ರನಲ್ಲವೆನ್ನುತಲೂ ಎಷ್ಟಾದರೂ ಹೆಂಡತಿಯು ಗಂಡನ ಆಧೀನವಾಗಿರುವಳೂ ಎನ್ನುತಲೂ ಎರಡು ಪ್ರಕಾರವಾಗಿ ತೋರುವದರಿಂದ ನೀನು ಕೇಳಿದ ಪ್ರಶ್ನೆಗೆ ಧರ್ಮಸೂಕ್ಷ್ಮವನ್ನು ತಿಳಿದು ವಿವರಿಸುವದಕ್ಕೆ ಶಕ್ಯವಲ್ಲವೆಂದು ತೋರುತಲಿಧೆ; ಈ ಧರ್ಮರಾಯನು ಸಮಸ್ತ ಭೂಮಂಡಲವನ್ನೂ ಧನಕನಕ ರತ್ನ ಸಂಚಯವನ್ನೂ ಪರಿಹರಿಸುವನೇ ಹೊರತಾಗಿ ಸತ್ಯವನ್ನು ಬಿಡನು; ಈತನು ಸೋತನು; ಶಕುನಿಯು ದ್ಯೂತದಲ್ಲಿ ಅದ್ವಿತೀಯನಾಗಿ ಕಪಟಾತ್ಮಕನಾದ್ದರಿಂದ ವಂಚನೋಪಾಯವನ್ನು ಸ್ವಲ್ಪವಾದರೂ ತಿಳಿಯದೇ ಇರುವ ಧರ್ಮರಾಯನನ್ನು ದ್ಯೂತಕ್ಕೆ ಕರದು ಜಯಿಸಿದನು; ಹೀಗಿರುವದ್ದರಿಂದ ಏನು ಹೇಳುವದಕ್ಕೂ ಶಕ್ಯವಲ್ಲ' ಅಂದನು. ದ್ರೌಪದಿಯು 'ದ್ಯೂತವಿದ್ಯಾ ವಿಶಾರದರಾಗಿ ಕಪಟಶಾಲಿಗಳಾಗಿ ಬಹುದುರ್ಜನರಾದ ಶಕುನಿ ಮೊದಲಾದವರು ಕೂಡಿ ಪರಿಶುದ್ಧಹೃದಯನಾಗಿ ಜೂಜಿನಲ್ಲಿ ಜಾಣನಲ್ಲದಿರುವ ಧರ್ಮರಾಯನನ್ನು ಬಲಾತ್ಕಾರದಿಂದ ಕರದು ಜಯಿಸಿದರು; ಆ ಬಳಿಕ ನನ್ನನ್ನು ಪಂಥದಲ್ಲಿ ಜಯಿಸಿದರು; ಈಪ್ರಕಾರದಲ್ಲಿ ನಡದದ್ದರಿಂದ ಇಲ್ಲಿರುವ ಕೌರವಶ್ರೇಷ್ಠರು ತಮ್ಮ ಕುಮಾರಕರಿಗೂ ಸೊಸೇರಿಗೂ ಶಿಕ್ಷಕರಾದ್ದರಿಂದ ಇಷ್ಟನ್ನೂ ಪರಾಂಬರಿಸಿ ಇದ್ದ ಸ್ಥಿತಿಯನ್ನು ಹೇಳಬೇಕು; ವೃದ್ಧರಿಲ್ಲದಿರುವದು ಸಭೆಯಲ್ಲವೆನ್ನುತಲೂ ಧರ್ಮವನ್ನು ತಿಳಿಯದಿರುವಂಥಾವರು ವೃದ್ಧರಲ್ಲವೆನ್ನುತಲೂ ಸತ್ಯವಿಲ್ಲದಿರುವಂಥಾದ್ದು ಧರ್ಮವಲ್ಲವೆನ್ನುತಲೂ ಒಬ್ಬನ ದಾಕ್ಷಿಣ್ಯದಿಂದ ಹೇಳುವದು ಸತ್ಯವಲ್ಲವೆನ್ನುತಲೂ ದೊಡ್ಡವರು ಹೇಳುವರು' ಎಂದು ನುಡಿಯುತ ಅತಿ ದೈನ್ಯದಿಂದ ಗಂಡರನ್ನು ನೋಡುತಲಿರುವ ದ್ರೌಪದಿಯನ್ನು ಕುರಿತು—ದುಶ್ಯಾಸನನು ಅತಿ ಕಠಿನವಾಕ್ಯಗಳಿಂದ ಅಪ್ರಿಯಗಳನ್ನೇ ಆಡುತಲಿದ್ದನು. ಆ ಸಮಯದಲ್ಲಿ ಜಾರಿದ ಶರಗುವುಳ್ಳಂಥಾವಳಾಗಿ ಪ್ರಷ್ಟಪತಿಯಾಗಿ ಸಭೆಯವರನ್ನು ನೋಡುತಲಿರುವ ಪಾಂಚಾಲಿಯನ್ನು ನೋಡಿ ಭೀಮಸೇನನು ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ಧರ್ಮರಾಯನನ್ನು ಕುರಿತು ಬಹಳವಾಗಿ ಕೋಪಿಸಿಕೊಂಡನು."

## ೧೦೭ ನೇ ಅಧ್ಯಾಯ.—ದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಭೀಮನು ಧರ್ಮರಾಯನನ್ನು ನೋಡಿ 'ಎಲೈ ಧರ್ಮನಂದನನೆ, ಲೋಕದಲ್ಲಿ ದ್ಯೂತದಲ್ಲಿ ಪ್ರವರ್ತಿಸುವಂಥಾ ಧೂರ್ತರಿಗೆ ಸೂಳೆಯರೂ ಗಾಡಿಯರೂ ಉಂಟಾಗಿರುವರು; ಅಂಥಾವರನ್ನು ಸಹಾ ಪಂಥಕ್ಕೆ ಒಡ್ಡುವದನ್ನು ಕಂಡು ಕೇಳಿದ್ದಿಲ್ಲಾ; ಹೀಗಿರುವಲ್ಲಿ ನೀನು ದಯಾವಿಹೀನನಾಗಿ ದ್ರೌಪದಿಯನ್ನು ಜೂಜಿಟ್ಟು ಹೀಗೆ ಮಾಡಿದೆ; ನೀನು ನಮಗೆ ಅರಸಾದ್ದರಿಂದ ನಾನಾದೇಶದ ಅರಸುಗಳು ಕಾಣಿಕೆಯಾಗಿ ತಂದುಕೊಟ್ಟ ನವರತ್ನಗಳು ವಾಹನಗಳು ಕವಚಗಳು ಆಯುಧಗಳು ಮೊದಲಾದ ವಸ್ತುವಿಶೇಷಗಳನ್ನೂ ನಮ್ಮನ್ನೂ ನಿನ್ನ ಶರೀರವನ್ನೂ ಪಂಥಕ್ಕೆ ಒಡ್ಡಿ ಶತ್ರುಗಳ ಪಾಲುಮಾಡಿದ್ದಕ್ಕೂ ಕೋಪಹುಟ್ಟಲಿಲ್ಲಾ; ಈ ದ್ರೌಪದಿಯನ್ನು ಪಂಥಕ್ಕೆ ಒಡ್ಡಿ ಅನುಚಿತವನ್ನು ಮಾಡಿದೆ; ಪಾಂಡವರನ್ನೈದಿದ ಈ ಬಾಲಿಕಾರತ್ನಕ್ಕೆ ಕಪಟಾತ್ಮಕರಾಗಿ ಕ್ರೂರರಾಗಿ ಕ್ಷುದ್ರರಾಗಿರುವ ಈ ಕೌರವರಿಂದ ಇಷ್ಟು ಪಾಡಾಯಿತು; ಅತಿ ಸುಕುಮಾರಾಂಗಿಯಾದ ಈ ಸ್ತ್ರೀರತ್ನವು ನಿನ್ನ ದೆಸೆಯಿಂದ ಇಷ್ಟು ಆಪತ್ತುಗಳನ್ನು ಪಡದಳಾದ್ದರಿಂದ ನನ್ನ ಕೋಪಕ್ಕೆ ನಿನ್ನನ್ನೇ ಲಕ್ಷ್ಯವಾಗಿ ಮಾಡಿ ನಿನ್ನ ಬಾಹುದ್ವಯವನ್ನು ದಹಿಸುತಲಿದೇನೆ' ಎಂದು ನುಡಿದು ಸಹದೇವನನ್ನು ಕರದು 'ಯಜ್ಞೇಶ್ವರನನ್ನುತಾ' ಅಂದನು. ಅರ್ಜುನನು 'ಎಲೈ ಭೀಮಸೇನನೆ, ಇಂಥಾ ವಾಕ್ಯಗಳನ್ನು ನೀನು ಯಾವಾಗಲಾದರೂ ನುಡಿದುಂಟೆ? ಆದ್ದರಿಂದ ಕಪಟಸ್ವಭಾವರಾಗಿರುವ ವೈರಿಗಳು '—ಭೀಮನು ಇಷ್ಟುಮಾತ್ರನವನೆ!—' ಎಂದು ನುಡಿದುಕೊಳ್ಳುವದಕ್ಕೆ ಅವಕಾಶವನ್ನು ಕಲ್ಪಿಸಬಹುದೇ? ಧಾರ್ಮಿಕಶ್ರೇಷ್ಠನಾದ ಧರ್ಮರಾಯನನ್ನು ಅತಿಕ್ರಮಿಸದೆ ಧರ್ಮವನ್ನೇ ಆಶ್ರಯಿಸು; ಈ ಧರ್ಮರಾಯನು ದ್ಯೂತದಲ್ಲಿ ತನಗೆ ಪ್ರೀತಿಯಿಲ್ಲದಿದ್ದರೂ ದ್ಯೂತಕ್ಕೆ ಕರದದ್ದೇ ಆದರೆ ಆಡದಿರುವದಿಲ್ಲವೆಂಬ ಪ್ರತಿಜ್ಞೆಯನ್ನು ನೆರವೇರಿಸುವದೆ ನಮಗೆ ಕೀರ್ತಿಕರವಲ್ಲವೆ?' ಅಂದನು. ಭೀಮನು ಅರ್ಜುನನನ್ನು ನೋಡಿ 'ಕ್ಷತ್ರಿಯ ಧರ್ಮವನ್ನು ಅನುಸರಿಸಿ ನಡಿಸಿದನೆಂದು ತಿಳಿದದ್ದರಿಂದ ಇಂಥಾ ದುರವಸ್ಥೆಗೆ ಪಾಲುಮಾಡಿದ ಈ ಧರ್ಮರಾಯನ ಬಾಹುಯುಗವನ್ನು ಹಿಡಿದು ದಹಿಸದೆ ಬಿಟ್ಟೆನು' ಎಂದು ಸುಮ್ಮನಾದನು.

"ಕೇಳು ಜನಮೇಜಯನೇ, ಈ ಪ್ರಕಾರವಾಗಿ ಪಾಂಡವರೂ ಪಾಂಚಾಲಿಯೂ ಬಹುದುಃಖಾಕ್ರಾಂತರಾಗಿರುವ ಸಮಯದಲ್ಲಿ ದುರ್ಯೋಧನನ ತಮ್ಮನಾದ ವಿಕರ್ಣನು ಸಭೆಯಲ್ಲಿರುವಂಥಾವರನ್ನು ನೋಡಿ 'ಎಲೈ ಅರಸುಗಳಿರಾ, ಈಗ ಈ ದ್ರೌಪದಿಯು ಕೇಳಿದ ಪ್ರಶ್ನೆಗೆ ರಹಸ್ಯವನ್ನು ತಿಳಿದು ಉತ್ತರವನ್ನು ಕೊಡದೇಹೋದರೆ ನಮಗೆಲ್ಲರಿಗೂ ನರಕವು ಬಂದು ಪ್ರಾಪ್ತವಾಗುವದು; ಕುರುಶ್ರೇಷ್ಠರಾದ ಭೀಷ್ಮ ಧೃತರಾಷ್ಟ್ರರೂ ಮಹಾ ಬುದ್ಧಿಸಂಪನ್ನನಾದ ವಿದುರನೂ ಶಿಕ್ಷಕರಾದ ಕೃಪಾಚಾರ್ಯನೂ ದ್ರೋಣನೂ ಇಷ್ಟುಮಂದಿಯೂ ಇದ್ದುಕೊಂಡು ಈ ಸಂಶಯವನ್ನು ಪರಿಹರಿಸದೆ ಸುಮ್ಮನಿರುವದು ಉಚಿತವೆ? ಎಲೈ ನಾನಾದೇಶಗಳ ದೆಸೆಯಿಂದ ಬಂದ ಅರಸುಗಳಿರಾ, ಈ ದ್ರೌಪಧಿಯು ಕೇಳಿದ ಪ್ರಶ್ನೆಗೆ ಕಾಮಕ್ರೋಧಾದಿಗಳನ್ನು ಬಿಟ್ಟು ಧರ್ಮಸೂಕ್ಷ್ಮವನ್ನು ವಿಚಾರಿಸಿ ನಿಮ್ಮನಿಮ್ಮ ಬುದ್ಧಿಗೆ ತೋರಿದರೀತಿಗೆ ತಿಳುಹಿಸಿರಿ' ಎಂದು ಬಾರಿಬಾರಿಗೂ ಹೇಳಿದರೂ ಅವರೂ ಏನು ಅನ್ನದಿದ್ದರು. ಮತ್ತೂ ಅವರನ್ನು ಕುರಿತು ವಿಕರ್ಣನು 'ನೀವು ತಿಳಿದು ಹೇಳದೇ ಸುಮ್ಮನಿದ್ದರೂ ನನಗೆ ತೋರಿದ ಮಾರ್ಗವನ್ನು ತಿಳುಹಿಸುತಲಿದೇನೆ ಕೇಳಿ: ಅರಸುಗಳಿಗೆ ದ್ಯೂತವು ಪಾನವು ವನಿತಾಸಕ್ತಿಯು ಬೇಟೆಗೆ ಹೋಗುವದು ಎಂಬ ನಾಲ್ಕು ವ್ಯಸನಗಳುಂಟು; ಅವಲ್ಲಿ ಆಸಕ್ತನಾದ ಪುರುಷನು ಧರ್ಮದೂರನಾಗಿರುವದರಿಂದ ಆತನು ಆಚರಿಸಿದ ಕಾರ್ಯವನ್ನೆಣಿಸಬಾರದು ಎಂದು ರಾಜನೀತಿ ವಿಧಿಜ್ಞರು ಹೇಳುವರು; ಆದ್ದರಿಂದ ದ್ಯೂತಾಸಕ್ತನಾದ ಈ ಧರ್ಮರಾಯನನ್ನು ದ್ಯೂತಕ್ಕೆ ಬಲಾತ್ಕಾರದಿಂದ ಕರದು ಆಡಿದ್ದರಿಂದಲೂ, ಈ ದ್ರೌಪದಿಯನ್ನು ಪಂಥಕ್ಕೆ ಒಡ್ಡಬೇಕೆಂದು ಶಕುನಿಯು ತಾನೇ ಕೇಳಿದ್ದರಿಂದಲೂ, ಈ ದ್ರುಪದರಾಯನ ಮಗಳು ಪಾಂಡವರೈದುಮಂದಿಗೂ ಅಧೀನೆಯಾದ್ದರಿಂದಲೂ ಯುಧಿಷ್ಠಿರನು ಮೊದಲು ತಾನು ಸೋತು ಆ ಬಳಿಕ ಪಂಥಕ್ಕೆ ಇವಳನ್ನು ನಿಯಮಿಸಿದ್ದರಿಂದಲೂ ಈ ದ್ರೌಪದಿಯು ಜಯಿಸಲ್ಪಟ್ಟದ್ದು ನನಗೆ ಉಚಿತವಾಗಿ ತೋರಲಿಲ್ಲಾ' ಅಂದನು. ಆ ಸಮಯದಲ್ಲಿ ವಿಕರ್ಣನ ವಾಕ್ಯಗಳನ್ನು ಸ್ತುತಿಸುವಂಥಾವರ ವಾಕ್ಯಧ್ವನಿಗಳು ಆ ಸಭಾಭವನವನಷ್ಟನ್ನೂ ವ್ಯಾಪಿಸಿದವು. ಅದನ್ನು ನೋಡಿ ಕರ್ಣನು

ಕೋಪಪರವಶನಾಗಿ ಕೈಯ್ಯನ್ನೆತ್ತಿ ಕೋಲಾಹಲವನ್ನು ನಿಲ್ಲಿಸಿ 'ಈ ವಿಕರ್ಣನಿಗೆ ಬುದ್ಧಿ ಕೆಟ್ಟುಹೋಯಿತು; ಅರಣೀದೆಸೆಯಿಂದ ಹುಟ್ಟಿದ ಅಗ್ನಿಯು ಅರಣಿಯನ್ನು ದಹಿಸುವಹಾಗೆ ಈತನು ತಾನು ಹುಟ್ಟಿದ ಕೌರವರ ವಂಶವನ್ನೂ ಕೆಡಿಸುತಲಿಧಾನೆ; ಶರೀರದಲ್ಲಿ ಹುಟ್ಟಿದ ರೋಗವು ಶರೀರವನ್ನು ಕೆಡಿಸುವಹಾಗೂ ತನಗೆ ಜೀವನವಾಗಿರುವ ಹುಲ್ಲನ್ನು ತಾನೇ ತುಳಿದು ಕೆಡಿಸುವ ಪಶುವಿನೋಪಾದಿಯಲ್ಲಿಯೂ ಈತನು ಸ್ವಪಕ್ಷವನ್ನೇ ಕೆಡಿಸುತಲಿಧಾನೆ; ಎಲೈ ವಿಕರ್ಣನೇ, ದ್ರೋಣನು ಭೀಷ್ಮನು ಕೃಪನು ಅಶ್ವತ್ಥಾಮನು ಮಹಾಬುದ್ಧಿಸಂಪನ್ನನಾದ ವಿದುರನು ಧೃತರಾಷ್ಟ್ರನು ಗಾಂಧಾರಿಯು ಮೊದಲಾದವರನ್ನು ದ್ರೌಪದಿಯು ಕೇಳಿದ್ದಕ್ಕೆ ಅವರು ಧರ್ಮಮಾರ್ಗದಿಂದ ಜಯಿಸಲ್ಪಟ್ಟಂಥಾದ್ದು ಯಾವದೆಂದು ಯೋಚಿಸಿ ಏನೂ ತೋರದೆ ಪ್ರತ್ಯುತ್ತರವನ್ನು ಕೊಡದೆ ಸುಮ್ಮನೇ ಇರಲು ನೀನು ಚಿಕ್ಕವನಾದರೂ ಸರ್ವಜ್ಞನ ಹಾಗೆ ನುಡಿಯುತ್ತಿದ್ದೀ; ನೀನು ಮಂದಬುದ್ಧಿಯಾದ್ದರಿಂದ ಧರ್ಮಸೂಕ್ಷ್ಮವನ್ನು ಅರಿಯದೆ ದ್ರೌಪದಿಯು ಜಯಿಸಲ್ಪಡಲಿಲ್ಲವೆಂದು ಸಭಾಮಧ್ಯದಲ್ಲಿ ನುಡಿಯುತ್ತಿದ್ದಿ; ಧರ್ಮರಾಯನು ತನಗಿರುವ ಸರ್ವಸ್ವವನ್ನೂ ಸೋತು ದ್ರೌಪದಿಯನ್ನು ಪಂಥಕ್ಕೆ ಒಡ್ಡಬೇಕೆಂದು ಶಕುನಿಯು ಹೇಳಲು ಆ ಅರ್ಥವನ್ನು ಸಮ್ಮತಿಸಿ ಹಾಗೆ ಮಾಡಿದನು; ಸಮಸ್ತರಾದವರೂ ತಿಳಿಯುವ ಹಾಗೆ ಸೋತಿರುವಾಗ ಹೀಗೆ ಹೇಳಬಹುದೆ? '—ರಜಸ್ವಲೆಯಾಗಿ ಏಕವಸ್ತ್ರಧಾರಿಯಾಗಿರುವ ಸ್ತ್ರೀಯನ್ನು ಸಭೆಗೆ ತರುವದು ಯುಕ್ತವೇ?—' ಎಂದು ಕೇಳಿದರೆ ಹೇಳುತಲಿಧೇನೆ ಕೇಳು; ಲೋಕದಲ್ಲಿ ಒಬ್ಬ ಹೆಣ್ಣಿಗೆ ಒಬ್ಬ ಗಂಡನನ್ನು ದೇವರು ಕಲ್ಪಿಸಿದನು; ಇವಳು ಐದುಮಂದಿಗೆ ಹೆಂಡತಿಯಾದ್ದರಿಂದ ಇವಳು ವೇಶ್ಯೆಯೆಂದು ನಿಶ್ಚೈಸಿದೇನು; ಆದ್ದರಿಂದ ಹ್ಯಾಗಿದ್ದರೂ ಸಭೆಗೆ ತರುವದು ಅಕೃತ್ಯವಲ್ಲ; ಎಲೈ ದುಶ್ಶಾಸನನೇ, ಈ ಧರ್ಮರಾಯನು ಸಕಲ ಧನವನ್ನೂ ರಾಜ್ಯವನ್ನೂ ಸಹೋದರರನ್ನೂ ದ್ರೌಪದಿಯನ್ನೂ ಧರ್ಮಪ್ರಕಾರದಿಂದ ಶಕುನಿಗೆ ಸೋತದ್ದು ತಿಳಿದಿದ್ದೂ ಬಾಲ್ಯದಿಂದ ವಿಕರ್ಣನು ಈ ಪ್ರಕಾರದಿಂದ ಅರಿಯದೆ ಹೇಳುತಲಿಧಾನೆ; ಈ ಪಾಂಡವರೂ ದ್ರೌಪದಿಯೂ ಕಟ್ಟಿರುವ ವಸ್ತ್ರಗಳನ್ನು ಕಳದು ಹಾಕು' ಅಂದನು. ಆ ವಾಕ್ಯವನ್ನು ಕೇಳಿ ಪಾಂಡವರು ತಾವು ಹೊದ್ದುಕೊಂಡಿದ್ದ ವಸ್ತ್ರಗಳನ್ನು ತೆಗದು ಸಭಾಮಧ್ಯದಲ್ಲಿ ಹಾಕಿ ಸುಮ್ಮನೇ ಇದ್ದರು.

"ಕೇಳು ಜನಮೇಜಯನೇ, ಆ ಬಳಿಕ ದುಶ್ಶಾಸನನು ದ್ರೌಪದಿಯ ವಸ್ತ್ರವನ್ನು ಅಪಹರಿಸಬೇಕೆಂದು ಬಲತ್ಕಾರದಿಂದ ಶರಗನ್ನು ಹಿಡಿದು ಎಳೆಯುವ ಸಮಯದಲ್ಲಿ ದ್ರೌಪದಿಯು ಮಹತ್ತಾದ ಆಪತ್ತು ಬಂದ ಸಮಯದಲ್ಲಿ ಜಗದೀಶ್ವರನಾದ ನಾರಾಯಣನನ್ನು ಸ್ಮರಿಸಬೇಕೆಂಬ ವಸಿಷ್ಠನ ವಚನವನ್ನು ಸ್ಮರಿಸಿ 'ಗೋವಿಂದ! ಕೃಷ್ಣ! ಅಚ್ಯುತ! ಆಪನ್ನಿವಾರಕನಾಗಿ ಲೋಕೇಶ್ವರನಾಗಿ ದೇವದೇವನಾಗಿರುವ ಜನಾರ್ದನಾ! ಶಂಖಚಕ್ರಗದಾಧರ! ನಾಶರಹಿತ ಗೋವಿಂದ ಪುಂಡರೀಕಾಕ್ಷ ದ್ವಾರಕಾಪುರನಿವಾಸ ಯದುನಂದನಾ! ನೀನು ಎಲ್ಲಿದ್ದೀ! ಅನಾಥೆಯೋಪಾದಿಯಲ್ಲಿ ಈ ದುರವಸ್ಥೆಯನ್ನೈದಿರುವ ನನ್ನನ್ನು ರಕ್ಷಿಸದೇ ಉಪೇಕ್ಷೆಮಾಡಬಹುದೆ!' ಎಂದು ಬಹುಪ್ರಕಾರವಾಗಿ ಪ್ರಾರ್ಥಿಸಿದಳು. ಆಗ ನಾರಾಯಣಾತ್ಮಕನಾಗಿ ವಿಶ್ವವ್ಯಾಪಕನಾಗಿ ಧರ್ಮಸ್ವರೂಪನಾದ ಕೃಷ್ಣನು ಪತಿವ್ರತಾಶಿರೋಮಣಿಯಾದ ಪಾಂಚಾಲರಾಯನ ಕನ್ಯಕೆಗೆ ನಾನಾಪ್ರಕಾರಗಳಾದ ವಸ್ತ್ರಗಳು ಅಕ್ಷಯವಾಗುವ ಹಾಗೆ ಅನುಗ್ರಹಿಸಿದನು. ಆ ಬಳಿಕ ಪಾಪಚಿತ್ತನಾದ ದುಶ್ಶಾಸನು ಪಾಂಚಾಲಿಯ ವಸ್ತ್ರವನ್ನು ಅಪಹರಿಸಲು ಅಂಥಾ ವಸ್ತ್ರವು ಮತ್ತೊಂದು ತೋರಿತು; ಅದನ್ನೂ ಗ್ರಹಿಸಲು ಮತ್ತೊಂದಿತ್ತು; ಅದನ್ನೂ ಗ್ರಹಿಸಲು ಮತ್ತೊಂದು ಕಾಣಿಸಿತು; ಹೀಗೆ ನಾನಾಪ್ರಕಾರಗಳಾದ ವಸ್ತ್ರಗಳನ್ನು ಬಾರಿಬಾರಿಗೂ ಅಪಹರಿಸುತ್ತಿದ್ದರೂ ಅನೇಕ ವಸ್ತ್ರಗಳು ಶರೀರದಲ್ಲಿ ಹುಟ್ಟಿ ಬರುತ್ತಿರಲು ಆ ಸಭೆಯಲ್ಲಿರುವಂಥಾವರು ಆ ಮಹಾದ್ಭುತವನ್ನು ನೋಡಿ ದ್ರೌಪದೀದೇವಿಯ ಪಾತಿವ್ರತ್ಯವನ್ನು ಬಹುಪ್ರಕಾರವಾಗಿ ಸ್ತುತಿಸುವಂಥಾವರಾಗಿಯೂ ದುರ್ಯೋಧನನು ಮೊದಲಾದ ಧೃತರಾಷ್ಟ್ರನ ಮಕ್ಕಳು ದುಷ್ಟಾತ್ಮರೆಂದು ನಿಂದಿಸುವಂಥಾವರಾಗಿಯೂ ಇದ್ದರು. ಕಡೆಯಲ್ಲಿ ದುಶ್ಶಾಸನನು ವಸ್ತ್ರಗಳನ್ನು ಸಭಾಮಧ್ಯದಲ್ಲಿ ಅನೇಕವಾದ ರಾಶಿಗಳಾಗಿ ಹಾಕಿ ಶ್ರಮದಿಂದ ಲಜ್ಜಿತನಾಗಿ ಕೆಳಗೆ ಬಿದ್ದನು. ಆಗ ಭೀಮಸೇನನು ಕೋಪೋದ್ದೀಪಿತನಾಗಿ ಅಟ್ಟಹಾಸದಿಂದ ಹಲ್ಲುಮುಡಿಯನ್ನು ಕಚ್ಚಿ ಕೈಯನ್ನು ತೀಡುತ ಸಭೆಯಲ್ಲಿದ್ದ

ಅರಸುಗಳನ್ನು ಕುರಿತು ‘ಕೇಳಿರೈ ಅರಸುಗಳಿರಾ, ಮೊದಲು ಯಾರೂ ನುಡಿಯದೇ ಇರುವಂಥಾದ್ದಾಗಿ ಇನ್ನು ಮೇಲೆ ಒಬ್ಬನೂ ಹೇಳುವದಕ್ಕೆ ಅಶಕ್ಯವಾಗಿರುವ ಪ್ರತಿಜ್ಞೆಯನ್ನು ಮಾಡುತಲಿದ್ದೇನೆ ಕೇಳಿ : ದುರ್ಬುದ್ಧಿಯಾಗಿ ಪಾಪಾತ್ಮನಾಗಿ ಭರತಕುಲ ನಿಕೃಷ್ಟನಾಗಿರುವ ಈ ದುಶ್ಶಾಸನನ ವಕ್ಷಸ್ಥಲವನ್ನು ಬಲಾತ್ಕಾರದಿಂದ ಹಿಡಿದು ಸೀಳಿ ರಕ್ತವನ್ನು ಕುಡಿಯುತಲಿದ್ದೇನೆ ; ಹಾಗೆ ಮಾಡದೆ ಹೋದರೆ ನಮ್ಮ ವಂಶಕರ್ತರಾದ ಪೂರ್ವದ ಅರಸುಗಳು ಹೋದ ಗತಿಗೆ ಹೋಗಲುಳ್ಳವನಲ್ಲ ! ’ ಎಂದು ನುಡಿದನು. ಭೀಮನ ಪ್ರತಿಜ್ಞೆಯನ್ನು ಕೇಳಿ ಸಂತೋಷಪಟ್ಟು ಆತನನ್ನು ಹೊಗಳುತ ಸಮಸ್ತರಾದ ಅರಸುಗಳು ಕೌರವರನ್ನು ದೂಷಿಸುವಂಥಾ ಶಬ್ದಗಳು ಸಭಾಮಧ್ಯದಲ್ಲಿ ಒಮ್ಮಡಿಯಾಗಿ ವ್ಯಾಪಿಸಿತು ; ಕೆಲವು ಸತ್ಪುರುಷರು ‘ದ್ರೌಪದಿ ಕೇಳಿದ ಪ್ರಶ್ನೆಗೆ, ಕಟಕಟಾ ! ಒಬ್ಬನಾದರೂ ಉತ್ತರವನ್ನು ಕೊಡದೇಹೋದನು ! ’ ಎಂದು ಪಶ್ಚಾತ್ತಾಪವನ್ನು ಮಾಡುತ ಧೃತರಾಷ್ಟ್ರನನ್ನು ಬಹುಪ್ರಕಾರವಾಗಿ ದೂಷಿಸುತಲಿದ್ದರು. ಆ ಸಮಯದಲ್ಲಿ ವಿವಿಧ ಧರ್ಮಜ್ಞನಾದ ವಿದುರನು ‘ಈ ದ್ರೌಪದಿಯು ಕೌರವರಿಂದ ಇಂಥಾ ಕ್ಲೇಶಗಳನ್ನು ಅನುಭವಿಸುತ ಅನಾಥೆಯೋಪಾದಿಯಲ್ಲಿ ಅಳುತಲಿದ್ದಾಳೆ ; ಲೋಕದಲ್ಲಿ ಪ್ರಶ್ನೆಯೆಂಬ ಅಗ್ನಿಜ್ವಾಲೆಯು ಸಭಾಮಧ್ಯದಲ್ಲಿ ಪ್ರವೇಶಿಸಲು ಧರ್ಮವೆಂಬ ಉದಕದಿಂದ ಸಜ್ಜನರು ಆರಿಸಿ ಕೆಡಿಸದೇ ಯಿದ್ದರೆ ಅದು ಸಮಸ್ತರಾದವರನ್ನು ದಹಿಸುವದು ; ಆ ಪ್ರಶ್ನೆಯಲ್ಲಿರುವಂಥಾ ಅರ್ಥವನ್ನು ನ್ಯಾಯವಾಗಿ ಹೇಳುವದಕ್ಕೆ ಸತ್ಪುರುಷರಿಗೆ ಹೊರತಾಗಿ ಕಾಮಕ್ರೋಧವಶಾತ್ಮರಿಗೆ ಶಕ್ಯವಲ್ಲ ; ಪ್ರಾಜ್ಞನಾದ ವಿಕರ್ಣನು ಈ ದ್ರೌಪದಿಯು ಕೇಳಿದ ಅರ್ಥಕ್ಕೆ ಯಥಾರ್ಥವಾಗಿ ತಿಳುಹಿಸಿದನು ; ನಿಮಗೆ ತೋರಿದರೀತಿಗೆ ವಿವರಿಸಿರಿ ; ಧರ್ಮಸೂಕ್ಷ್ಮವನ್ನು ತಿಳಿದ ಪುರುಷನು ತಾನು ತಿಳಿದದ್ದನ್ನು ವಿವರಿಸದೆ ಯಿದ್ದರೆ ಅಸತ್ಯದಿಂದ ಬರುವಂಥಾ ದೋಷದಲ್ಲಿ ಅರ್ಧದೋಷವನ್ನು ಅನುಭವಿಸುವನು ; ಅದನ್ನು ವಿಪರೀತವಾಗಿ ಹೇಳಿದರೆ ಅನೃತದೋಷವನ್ನು ಅನುಭವಿಸುವನು ; ಈ ಅರ್ಥದಲ್ಲಿ ಒಂದು ಇತಿಹಾಸವನ್ನು ಹೇಳುತಲಿದ್ದೇನೆ ಕೇಳಿ : ಮೊದಲು ಪ್ರಹ್ಲಾದನಮಗನಾದ ವಿರೋಚನನೂ ಅಂಗೀರಸನ ಪುತ್ರನಾದ ಸುಧನ್ವನೂ ಒಂದು ಕನ್ಯಕಾ ನಿಮಿತ್ತವಾಗಿ ತಮ್ಮ ಪ್ರಾಣಗಳಿಗೆ ಪಂಥವನ್ನು ಹಾಕಿಕೊಂಡು ದೈತ್ಯಶ್ರೇಷ್ಠನಾದ ಪ್ರಹ್ಲಾದನ ಸಮೀಪಕ್ಕೆ ಹೋಗಿ ‘—ನಮ್ಮಿಬ್ಬರೊಳಗೆ ಶ್ರೇಷ್ಠನಾರು ? ನಿಜವಾಗಿ ಹೇಳು—’ ಎನಲು ಆತನು ಏನೂ ಅನ್ನದೆ ಭಯಪಟ್ಟು ಸುಮ್ಮನೇ ಇದ್ದನು. ಸುಧನ್ವನು ಬ್ರಹ್ಮದಂಡದೋಪಾದಿಯಲ್ಲಿ ಉರಿಯುತ ಆತನನ್ನು ಕುರಿತು ‘—ನೀನು ಸಟೆಯಾಡಿದರೂ ಏನೂ ಹೇಳದೇ ಸುಮ್ಮನೇ ಇದ್ದರೂ ಮಹೇಂದ್ರನ ವಜ್ರಾಯುಧವು ನಿನ್ನ ತಲೆಯನ್ನು ಒಡೆಯಲುಳ್ಳಂಥಾದ್ದು !—’ ಎಂದು ನುಡಿದನು. ಆ ವಾಕ್ಯವನ್ನು ಕೇಳಿ ಪ್ರಹ್ಲಾದನು ಅರಳೀಎಲೆಯೋಪಾದಿಯಲ್ಲಿ ನಡುಗಿ ತೇಜೋವಿರಾಜಮಾನನಾಗಿ ಮಹಾಯೋಗಿಯಾದ ಕಾಶ್ಯಪ ಮಹಾಮುನೀಂದ್ರನ ಸಮೀಪಕ್ಕೆ ಹೋಗಿ ‘—ನೀನು ದೇವದಾನವ ಧರ್ಮವನ್ನು ತಿಳಿದಿರುವವನಾದ್ದರಿಂದ ಈ ಧರ್ಮರಹಸ್ಯವನ್ನು ಹೇಳು : ಒಬ್ಬನು ಮಾಡಿದ ಪ್ರಶ್ನೆಗೆ ಉತ್ತರವನ್ನು ತಾನು ತಿಳಿದಿದ್ದರೂ ಅದನ್ನು ವಿವರಿಸದಿರುವಂಥಾವನೂ ಅದನ್ನು ಅಸತ್ಯವಾಗಿ ನುಡಿಯುವಂಥಾವನೂ ಯಾವ ಲೋಕಕ್ಕೆ ಹೋಗುವರು ? ಇದನ್ನು ತಿಳುಹಿಸು—’ ಎಂದು ಕೇಳಿದನು. ಆ ಕಾಶ್ಯಪಮುನಿಯು ‘—ಯಾರು ತನ್ನನ್ನು ಕೇಳಿದ ಅರ್ಥವನ್ನು ತಿಳಿದಿದ್ದು ಕಾಮಕ್ರೋಧ ಭಯಗಳಿಂದ ಹೇಳದಿರುವನೋ ಆತನು ಸಾವಿರ ವರುಣ ಪಾಶಗಳಿಂದ ಪೀಡಿತನಾಗುವನು ; ಕೂಟ ಸಾಕ್ಷಿಯನ್ನು ನುಡಿಯುವಂಥಾ ಪುರುಷನು ಕೋಕರ್ಣಶಿಪ್ಪಿಲವೆಂಬ ನರಕದಲ್ಲಿ ಬಹು ದಿನಗಳು ಬಿದ್ದು ಅಂಥಾ ಸಾವಿರ ವರುಣ ಪಾಶಗಳಿಂದ ಪೀಡಿತನಾಗುವನು ; ಆ ಪಾಶಗಳು ವರುಷಕ್ಕೆ ಒಂದೊಂದಾಗಿ ಬಿಟ್ಟು ಹೋಗುವವು ; ಆದ್ದರಿಂದ ಬುದ್ಧಿಸಂಪನ್ನನಾದವನು ಸತ್ಯವನ್ನೇ ನುಡಿಯಬೇಕು ; ಯಾವ ಸಭೆಯಲ್ಲಿ ಅಧರ್ಮದಿಂದ ಧರ್ಮವು ಬಾಧಿಸಲ್ಪಡುವದೋ ಆ ಧರ್ಮಕ್ಕೆ ಬಂದ ಹಾನಿಯನ್ನು ತೀರಿಸದಿದ್ದರೆ ಆ ಸಭೆಯವರಿಗೆ ಅನರ್ಥವು ಬರುವದು ; ಪಾಪಕರ್ಮವನ್ನು ಮಾಡುವದಕ್ಕೆ ಕಟ್ಟುಮಾಡಿದಂಥಾ ಪ್ರಧಾನ ಪುರುಷನಿಗೆ ಆ ಪಾಪದಲ್ಲಿ ಅರ್ಧಪಾಪವು ಬರುವದು ; ಮಾಡಿದಂಥಾವನಿಗೆ ಸಿಂತದ್ದರಲ್ಲಿ ಅರ್ಧಪಾಪವು ಬರುವದು ; ಅವರಿಬ್ಬರನ್ನೂ ನಿಂದಿಸದೇ ಸುಮ್ಮನಿರುವಂಥಾವರಿಗೆ ಮಿಕ್ಕಪಾಪವು ಬರುವದರಿಂದ ನಿಂದಾಯೋಗ್ಯರಾದವರನ್ನು ನಿಂದಿಸಿದರೆ ಆ ದುಷ್ಕೃತವು ಸಭೆಯಲ್ಲಿರುವಂಥಾವರನ್ನು ಸೇರದೆ ಪಾಪದ

ವರನ್ನೇ ಸೇರುವದು; ಯಾರಾದರೂ ವ್ಯವಹಾರದಲ್ಲಿ ಸತ್ಯವನ್ನು ಬಿಟ್ಟು ನುಡಿವರೆ ಆತನು ಹದಿನಾಲ್ಕು ತರದವರೊಡನೆ ಕೂಡಿ ಯಾಗಾದಿ ಸತ್ಕರ್ಮಗಳಿಗೂ ಕೆರೆ ತೋಪು ಮೊದಲಾದ ಧರ್ಮಗಳಿಗೂ ವಿಘ್ನಮಾಡಿದ ಪಾಪವನ್ನು ಅನುಭವಿಸುವನು; ಧನವನ್ನು ಅಪಹರಿಸಲ್ಪಟ್ಟಂಥಾವನು, ಮಗನನ್ನು ಕಳಕೊಂಡಂಥಾವನು, ಶತ್ರುಗಳಕೈಗೆ ಸಿಕ್ಕಿ ಹಿಂಸೆಪಡುವಂಥಾವನು, ರಾಜಪೀಡಿತನು, ಪತಿಯನ್ನು ಅಗಲಿದಂಥಾ ಸ್ತ್ರೀಯು, ಬಂಧುಗಳಿಂದ ಪರಿತ್ಯಜಿಸಲ್ಪಟ್ಟಂಥಾ ಪುರುಷನು, ವಿವಾಹವಿಲ್ಲದಿರುವಂಥ ಕನ್ಯಕೆಯು, ಸಾಕ್ಷಿಗಳಿಂದ ಬಿಡಲ್ಪಟ್ಟಂಥಾ ಪುರುಷನು—ಇವರೆಲ್ಲರ ದುಃಖವು ಸಮವಾಗಿರುವದು ಎಂದು ದೇವತೆಗಳು ನುಡಿಯುವರು; ಇಷ್ಟು ದುಃಖಗಳನ್ನೂ ಸಟೆಯಾಡುವಂಥಾವನು ಅನುಭವಿಸುವನು; ಬಂದನ್ನು ನೋಡಿದ್ದರಿಂದಲಾಗಲಿ ಕೇಳಿದ್ದರಿಂದಾಗಲಿ ಮನಸ್ಸಿನಲ್ಲಿ ಗ್ರಹಿಸಿದ್ದರಿಂದಲಾಗಲಿ ಸಾಕ್ಷಿಯಾಗುತ್ತಾನೆ; ಆದ್ದರಿಂದ ಸಾಕ್ಷಿಯಾದವನು ಧರ್ಮವನ್ನೇ ಯಥಾರ್ಥವಾಗಿ ಹೇಳಬೇಕು; ಹಾಗೆ ನುಡಿಯುವಂಥಾವರಿಗೆ ಬಂದುದಿನವೂ ಹಾನಿಬರಲಾರದು—' ಎಂದು ಕಾಶ್ಯಪಮುನೀಂದ್ರನು ಹೇಳಿದನು. ಆತನ ವಾಕ್ಯಗಳನ್ನು ಕೇಳಿ ಪ್ರಹ್ಲಾದನು ತನ್ನ ಕುಮಾರನಾದ ವಿರೋಚನನನ್ನು ನೋಡಿ '—ನಿನಗಿಂತಲೂ ಸುಧನ್ವನು ಶ್ರೇಷ್ಠನು: ಈತನ ತಂದೆಯಾದ ಆಂಗೀರಸನು ನನಗಿಂತಲೂ ಶ್ರೇಷ್ಠನು: ಈ ಸುಧನ್ವನ ತಾಯಿಯು ನಿನ್ನ ತಾಯಿಗಿಂತಲೂ ಶ್ರೇಷ್ಠಳಾಗಿರುವಳು; ಈ ವಿಪ್ರಕುಮಾರಕನು ನಿನ್ನನ್ನು ಗೆದ್ದವನಾದ್ದರಿಂದ ನಿನ್ನ ಪ್ರಾಣಗಳು ಆತನ ಅಧೀನಗಳು—' ಎಂದು ನುಡಿದನು. ಆ ವಾಕ್ಯವನ್ನು ಕೇಳಿ ಸುಧನ್ವನು ಪ್ರಹ್ಲಾದನನ್ನು ನೋಡಿ '—ನೀನು ಧರ್ಮವನ್ನು ಹಿಡಿದು ಪುತ್ರಸ್ನೇಹವನ್ನು ಬಿಟ್ಟು ಯಥಾರ್ಥವನ್ನೇ ನುಡಿದದ್ದರಿಂದ ನಿನ್ನ ಕುಮಾರಕನು ಆಯುಷ್ಮಂತನಾಗಿ ನೂರುವರ್ಷಗಳು ಸುಖವಾಗಿ ವೃದ್ಧಿಯನ್ನೈದಲೀ—' ಎಂದು ನುಡಿದು ಯಥೇಚ್ಛವಾಗಿ ಹೋದನು. ಆದ್ದರಿಂದ ಈ ಧರ್ಮ ರಹಸ್ಯವನ್ನು ವಿಚಾರಿಸಿ ದ್ರೌಪದಿ ಕೇಳಿದ ಪ್ರಶ್ನೆಗೆ ಪ್ರತ್ಯುತ್ತರವನ್ನು ಹೇಳೀ' ಎಂದು ನುಡಿದ ವಿದುರನ ವಚನವನ್ನು ಕೇಳಿ ಸಭೆಯಲ್ಲಿದ್ದಂಥಾವರೆಲ್ಲರು ಸುಮ್ಮನೇಯಿರಲು ಕರ್ಣನು ದುಶ್ಶಾಸನನನ್ನು ನೋಡಿ '—ದಾಸಿಯಾದ ಈ ಪಾಂಚಾಲಿಯನ್ನು ಮನೆಗೆ ಕರಕೊಂಡುಹೋಗು' ಅಂದನು. ಆ ಬಳಿಕ ದುಶ್ಶಾಸನನು ಲಜ್ಜಾಭಾರದಿಂದ ನಡುಗುತ ಬಾರಿಬಾರಿಗೂ ಪಾಂಡವರನ್ನು ನೋಡುತಲಿರುವ ಪಾಂಚಾಲ ರಾಜ ಕನ್ಯಕೆಯನ್ನು ಹಿಡಿದು ಎಳದನು."

## ೧೦೩ ನೇ ಅಧ್ಯಾಯ.—ದ್ಯೂತಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ದ್ರೌಪದೀದೇವಿಯು ಸಭೆಯವರನ್ನು ನೋಡಿ 'ಈ ದುರಾತ್ಮನಾದ ದುಶ್ಶಾಸನನು ನನ್ನನ್ನು ಬಲಾತ್ಕಾರದಿಂದ ಎಳಕೊಂಡುಬರುವ ಸಮಯದಲ್ಲಿ ಕುರುವೃದ್ಧರಾದ ನೀವು ಉಪೇಕ್ಷೆ ಮಾಡಬಹುದೆ? ನನ್ನಲ್ಲಿ ಅಪರಾಧವೇನು? ಇವನು ಹೀಗೆ ಮಾಡಬಹುದೆ?' ಎಂದು ಕೇಳಲು ದುಶ್ಶಾಸನನು ದ್ರೌಪದಿಯ ಶರಗನ್ನು ಹಿಡಿದು ಬಲವಾಗಿ ಎಳದನು. ಅಂಥಾ ಕ್ರೂರಕೃತ್ಯಕ್ಕೆ ಪಾತ್ರಳಲ್ಲದ ದ್ರೌಪದಿಯು ಆ ಸಭಾಮಧ್ಯದಲ್ಲಿ ಬಿದ್ದು ಬಹಳವಾಗಿ ಹಂಬಲಿಸುತ ಸಭೆಯವರನ್ನು ನೋಡಿ 'ಅಯ್ಯಯ್ಯೋ! ಸ್ವಯಂವರ ಸಮಯದಲ್ಲಿ ರಂಗಮಂಟಪದಲ್ಲಿ ಮೊದಲು ಪೊಂದುಸಾರಿ ಅರಸರಿಂದ ನೋಡಲ್ಪಟ್ಟದ್ದೆ ಹೊರತಾಗಿ. ಸೂರ್ಯಚಂದ್ರರೂ ಅರಿಯದಹಾಗೆ ಅಂತಃಪುರದಲ್ಲಿದ್ದ ನನ್ನನ್ನು ಈಗ ಈ ದುರಾತ್ಮಕನು ಸಭೆಗೆ ಕರತಂದದ್ದರಿಂದ ಇಷ್ಟುಮಂದಿಯೂ ನೋಡುವಹಾಗೆ ಅರಸುಗಳ ಮಧ್ಯದಲ್ಲಿ ನಿಂತೆನು! ನನ್ನಮೇಲೆ ವಾಯುವು ಸೋಕಿದರೂ ಸಹಿಸದೇಯಿರುವಂಥಾ ಪಾಂಡವರು ಈ ದುರಾತ್ಮನಿಂದ ಬಂದ ಇಂಥಾ ದುರವಸ್ಥೆಯನ್ನು ನೋಡಿ ಹ್ಯಾಗೆ ಸಹಿಸಿದರೊ! ಈ ಕುರುವೃದ್ಧರಿಗೆ ಸೊಸೆಯಾದ ನಾನು ಸಭಾಮಧ್ಯದಲ್ಲಿ ಕ್ಲೇಶಪಡುತ್ತಿರಲು ಎಲ್ಲರೂ ಹೀಗೆ ಉಪೇಕ್ಷೆ ಮಾಡಿಕೊಂಡಿರುವದು ಕಾಲವೈಪರೀತ್ಯವೊ! ಸುಕುಮಾರಾಂಗಿಯಾಗಿ ಪತಿವ್ರತೆಯಾಗಿರುವ ನಾನು ಸಭಾಮಧ್ಯದಲ್ಲಿ ಇವನಿಂದ ಇಷ್ಟು ಕಷ್ಟಪಡುವದಕ್ಕಿಂತಲೂ ದೈನ್ಯವೇನಿದೆ! ಅರಸುಗಳಲ್ಲಿಷ್ಟು ಅಧರ್ಮಉಂಟೆ! ಅಂತಃಪುರಸ್ತ್ರೀಜನರನ್ನು ಸಭೆಗೆ ಕರ

ಕೊಂಡು ಬರುವದು ಯುಕ್ತವೆ! ವಂಶ ಪಾರಂಪರ್ಯವಾಗಿ ಬಂದಂಥಾ ಧರ್ಮವು ಕೌರವರಿಂದ ಈ ಹೊತ್ತು ಕೆಟ್ಟು ಹೋಯಿತು! ಧೃಷ್ಟದ್ಯುಮ್ನನಿಗೆ ತಂಗಿಯಾಗಿ ಪಾಂಡವರಿಗೆ ಹೆಂಡತಿಯಾಗಿ ವಾಸುದೇವನಿಗೆ ಸಖಿಯಾಗಿ ಸತ್ಕುಲ ಪ್ರಸೂತೆಯಾಗಿರುವ ನಾನು ದಾಸಿಯಾಗಿರುವದೂ ದಾಸಿಯಾಗವೇಯಿರುವದೂ ತಿಳುಹಿಸುವಂಥಾವರಿಲ್ಲವೇ! ಈ ಪಾಪಕರ್ಮನು ಕೌರವರ ಕೀರ್ತಿಯನ್ನು ಕೆಡಿಸಿ ನನ್ನನ್ನು ಬಾಧಿಸುತಲಿಧಾನೆ; ಬಾರಿಬಾರಿಗೂ ಕೇಳಿದರೂ ಪ್ರತ್ಯುತ್ತರವನ್ನು ಹೇಳದೆ ಸುಮ್ಮನೆ ಯಾಕಿರಬೇಕು! ನನ್ನನ್ನು ಜಯಿಸಿದರೆಂದಾದರೂ ಜಯಿಸಲಿಲ್ಲವೆಂದಾದರೂ ಧರ್ಮಸೂಕ್ಷ್ಮವನ್ನು ತಿಳುಹಿಸಿದರೆ ಹಾಗೆ ಮಾಡುವೆನಲ್ಲ! ಎಂದು ಕ್ಲೇಶಪಟ್ಟು ಬಹುಪ್ರಕಾರವಾಗಿ ಪ್ರಳಾಪಿಸುತ್ತಿದ್ದಳು. ಆಗ ಭೀಷ್ಮನು ದ್ರೌಪದಿಯನ್ನು ಕುರಿತು 'ಎಲೆ ತಾಯೇ, ಧರ್ಮ ಸೂಕ್ಷ್ಮವನ್ನು ವಿವರಿಸುವದಕ್ಕೆ ಮಹಾನುಭಾವರಾದ ಬ್ರಾಹ್ಮಣರಿಗಾದರೂ ಶಕ್ಯವಲ್ಲಾ; ಲೋಕದಲ್ಲಿ ಬುದ್ಧಿಸಂಪನ್ನನಾದವನು ಸಕಲ ಧರ್ಮ ಸೂಕ್ಷ್ಮವನ್ನು ತಿಳಿಯುವನು; ಆತನ ನೀತಿ ವಾಕ್ಯಗಳು ಅಧರ್ಮವು ಹೆಚ್ಚಾಗಿರುವಂಥಾ ತಾವಿನಲ್ಲಿ ಕೆಡುವವು; ಧರ್ಮವು ಸೂಕ್ಷ್ಮವಾಗಿರುವದರಿಂದ ಇದು ನನ್ನಿಂದಾ ನಿಶ್ಚೈಸುವದಕ್ಕೆ ಕೂಡದೆಯಿಧೆ; ಈ ಕೌರವರು ಲೋಭಮೋಹ ಪರಾಯಣರಾದ್ದರಿಂದ ಇವರ ವಂಶಕ್ಕೆ ಶೀಘ್ರವಾಗಿ ವಿನಾಶವು ಬರುತಲಿದೆ; ಲೋಕದಲ್ಲಿ ಮಹಾಕುಲ ಪ್ರಸೂತರಾದವರು ಮಹಾ ದುಃಖವನ್ನೈದಿದಂಥಾವರಾದರೂ ಧರ್ಮವನ್ನು ಬಿಡದೆ ಪ್ರವರ್ತಿಸುವರಾದ್ದರಿಂದ ನೀನು ಇಂಥಾ ದುರವಸ್ಥೆಯಲ್ಲಿಯೂ ಧರ್ಮವನ್ನು ಆಶ್ರೈಸಿರುವದ್ದರಿಂದ ನಿನ್ನ ಚರಿತ್ರವು ಸ್ತುತಿಸುವದಕ್ಕೆ ಯೋಗ್ಯವಾಯಿತು; ವೃದ್ಧರಾಗಿ ಧರ್ಮ ವಿಧಿಜ್ಞರಾಗಿರುವ ಈ ದ್ರೋಣಾಚಾರ್ಯನು ಮೊದಲಾದವರು ತಲೆಗಳನ್ನು ಬಗ್ಗಿಸಿಕೊಂಡು ನಿಶ್ಚೇಷ್ಟಿತರಾಗಿದ್ದಾರೆ; ಸಮಸ್ತ ಧರ್ಮವಿಶಾರದನಾದ ಯುಧಿಷ್ಠಿರನು ಈ ಪ್ರಶ್ನೆಗೆ ಉತ್ತರವನ್ನು ಕೊಡಲುಳ್ಳವನೆಂದು ನಿಶ್ಚೈಸಿದೆನು; ಆದ್ದರಿಂದ ನೀನು ಸೋಲಲ್ಪಟ್ಟದ್ದೂ ಇಲ್ಲದ್ದೂ ಆತನೇ ಹೇಳಲಿ' ಎಂದು ಭೀಷ್ಮನು ಹೇಳಿದನು."

## ೧೦೪ ನೇ ಅಧ್ಯಾಯ.—ದ್ಯೂತಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಸಕಲ ಸದ್ಗುಣಸಂಪನ್ನೆಯಾಗಿ ಅತಿದುಃಖಿತೆಯಾದ ದ್ರೌಪದಿಯು ಕುಬ್ಜಪಕ್ಷಿ ಹಕ್ಕಿಯೋಪಾದಿಯಲ್ಲಿ ಪ್ರಳಾಪಿಸುತ್ತಲಿರುವ ಸಮಯದಲ್ಲಿ ಅರಸುಗಳಷ್ಟುಮಂದಿಯೂ ದುರ್ಯೋಧನನಿಗೆ ಭಯಪಟ್ಟು ಯಾವದೂ ನುಡಿಯದೇ ಸುಮ್ಮನಿದ್ದರು. ಪಾಪಾತ್ಮನಾದ ದುರ್ಯೋಧನನು ಮೌನವನ್ನು ವಹಿಸಿರುವ ಮಹೀಪತಿಗಳನ್ನು ನೋಡಿ ಮಂದಹಾಸವನ್ನು ಮಾಡುತ ದ್ರೌಪದಿಯನ್ನು ನೋಡಿ 'ನೀನು ಕೇಳಿದ ಅರ್ಥಕ್ಕೆ ಭೀಮಾರ್ಜುನ ನಕುಲ ಸಹದೇವರಲ್ಲಿ ಯಾರಾದರೂ '—ನಾವಷ್ಟುಮಂದಿಯೂ ಇರುವಾಗ ಈ ದ್ರೌಪದಿಯನ್ನು ಪಂಥಕ್ಕೆ ಒಡ್ಡುವದಕ್ಕೆ ಧರ್ಮರಾಯನಿಗೆ ಸ್ವತಂತ್ರವಿಲ್ಲಾ—' ಎಂದು ಸಕಲರಾದ ಅರಸುಗಳೂ ತಿಳಿಯುವ ಹಾಗೆ ಈತನಲ್ಲಿ ತಪ್ಪು ಹೊರಿಸಿದರೆ ನಿನ್ನನ್ನು ದಾಸತ್ವದಿಂದ ಬಿಡಿಸುತಲಿಧೇನೆ; ಮಹೇಂದ್ರಸಮಾನನಾಗಿ ಮಹಾತ್ಮನಾಗಿ ಧರ್ಮನಿರತನಾಗಿರುವ ಈ ಧರ್ಮರಾಯನು ತಾನು ನಿನ್ನನ್ನು ಸೋಲುವದಕ್ಕೆ ಸ್ವತಂತ್ರನಲ್ಲವೆಂದು ನುಡಿದರೂ ಸಾಕು; ನಿನ್ನನ್ನು ಬಿಡಿಸುತಲಿದೇನೆ; ಅಲ್ಪಭಾಗ್ಯರಾಗಿ ಸಮಸ್ತವನ್ನೂ ಸೋತು ದುಃಖಿಸುತಲಿರುವ ನಿನ್ನ ಪತಿಗಳನ್ನು ನೋಡಿ ಇಲ್ಲಿರುವ ವೃದ್ಧಜನಗಳು ಪಶ್ಚಾತ್ತಾಪಪಡುತಲಿಧಾರೆ; ಇನ್ನೇನು ಮಾಡ್ಯಾರು?' ಎಂದು ನುಡಿದನು. ಆತನ ವಚನವನ್ನು ಕೇಳಿ ಸಕಲರಾದ ಅರಸುಗಳೂ ಸುಯೋಧನನನ್ನು ಅನೇಕ ಪ್ರಕಾರವಾಗಿ ಸ್ತುತಿಸುತ ಧರ್ಮಾತ್ಮನಾದ ಧರ್ಮರಾಯನೂ ಭೀಮಾರ್ಜುನ ನಕುಲಸಹದೇವರೂ ಏನು ಹೇಳುವರೊ ಕೇಳಬೇಕೆಂಬ ಕುತೂಹಲದಿಂದ ಅವರನ್ನು ತಪ್ಪದೇ ನೋಡುತ ಕೋಲಾಹಲ ಧ್ವನಿಯನ್ನು ಬಿಟ್ಟು ಸುಮ್ಮನೇ ಇದ್ದರು. ಆ ಸಮಯದಲ್ಲಿ ಭೀಮಸೇನನು ವರ್ತುಲವಾಗಿ ಚಂದನಾಲಂಕೃತವಾಗಿರುವ ತನ್ನ ಭುಜದಂಡವನ್ನು ಎತ್ತಿ ಸಭಾಸದರನ್ನು ಕುರಿತು 'ಸತ್ಯಸಂಧನಾಗಿ ಸುಕೃತಶಾಲಿಯಾಗಿರುವ ಈ ಧರ್ಮರಾಯನು ನಮಗೂ ನಮ್ಮ ವಂಶಕ್ಕೂ

ಗುರುವಾಗಿರುವದರಿಂದ ನಾವು ಸೈರಿಸಿಯಿಧೇವೆ; ಆತನು ಜಯಿಸಲ್ಪಟ್ಟರೆ ನಾವಷ್ಟೂ ಜಯಿಸಲ್ಪಟ್ಟಂಥಾವರು ಎಂಬುವದಕ್ಕೆ ಸಂಶಯವಿಲ್ಲಾ; ಹಾಗಿಲ್ಲವಿದ್ದರೆ ಈ ದ್ರೌಪದಿಯು ಕೇಶಪಾಶವನ್ನು ಹಿಡಿದಂಥಾ ಮನುಷ್ಯನು ಪ್ರಾಣಸಹಿತವಾಗಿ ಭೂಮಿಯಲ್ಲಿರುವನೆ! ಪರಿಘೋಪಮಾನಗಳಾದ ನನ್ನ ಭುಜಗಳನ್ನು ನೋಡಿ ಈ ಬಾಹುಮಧ್ಯದಲ್ಲಿ ಬಿದ್ದರೆ ದೇವೇಂದ್ರನಾದರೂ ತಪ್ಪಿಸಿಕೊಳ್ಳುವದಕ್ಕೆ ಸಮರ್ಥನಾಗುವನೆ! ಧರ್ಮರಾಯನಲ್ಲಿರುವ ಗೌರವದಿಂದಲೂ ಈ ಅರ್ಜುನನು ಬಾರಿ ಬಾರಿಗೂ ತಡೆಯುವದರಿಂದಲೂ ನಾನು ಧರ್ಮಪಾಶಬದ್ಧನಾಗಿ ಇಷ್ಟನ್ನೂ ಸಹಿಸಿಧೇನೆ; ಧರ್ಮರಾಯನು ಸ್ವಲ್ಪವಾಗಿ ಅಪ್ಪಣೆಯನ್ನು ಕೊಟ್ಟರೆ ಕ್ಷುದ್ರಮೃಗಗಳನ್ನು ಸಂಹರಿಸುವ ಮಹಾಸಿಂಹದೋಪಾದಿಯಲ್ಲಿ ಈ ಧೃತರಾಷ್ಟ್ರನ ಮಕ್ಕಳಷ್ಟುಮಂದಿಯನ್ನೂ ಸುತ್ತಿಕೊಂಡು ನನ್ನ ಹಸ್ತವೆಂಬ ಖಡ್ಗದಿಂದ ತುಮುರು ತುಮುರಾಗಿ ಮಾಡುವೆನು' ಎಂದು ರೋಷಾವೇಶದಿಂದ ತುಟಿಗಳು ನಡುಗುವ ಹಾಗೆ ಬಾರಿಬಾರಿಗೂ ನುಡಿಯುತಲಿರುವ ಭೀಮನನ್ನು ಕುರಿತು ವಿದುರ ಭೀಷ್ಮದ್ರೋಣರು 'ಎಲೈ ಭೀಮಸೇನನೆ, ನೀನು ಹೇಳಿದಷ್ಟು ಮಾಡುವ ಸಮರ್ಥನೇ ಸರಿ; ಆದರೂ ಈ ಸಮಯದಲ್ಲಿ ಕೋಪವನ್ನು ಸಹಿಸಬೇಕು' ಎಂದು ನುಡಿದರು."

## ೧೦೫ನೇ ಅಧ್ಯಾಯ.—ದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಆ ಸಮಯದಲ್ಲಿ ಕರ್ಣನು ದ್ರೌಪದಿಯನ್ನು ನೋಡಿ 'ಲೋಕದಲ್ಲಿ ಭೃತ್ಯನು ಶಿಷ್ಯನು ಸ್ತ್ರೀಯು ಈ ಮೂರುಮಂದಿಯೂ ಅಸ್ವತಂತ್ರರಾಗಿದ್ದಾರೆ; ಈ ಕೌರವರಿಗೆ ಭೃತ್ಯರಾದ ಪಾಂಡವರಿಗೆ ನೀನು ಪತ್ನಿಯಾದ್ದರಿಂದ ನಿನಗೆ ಸ್ವತಂತ್ರವಿಲ್ಲ; ಈ ಧೃತರಾಷ್ಟ್ರನ ಮಕ್ಕಳು ನಿನಗೆ ಅಧಿಪತಿಗಳು; ಇವರ ಮನೆಗಳಲ್ಲಿ ದಾಸೀಕೃತ್ಯವನ್ನು ಮಾಡಿಕೊಂಡಿರು; ಈ ಪಾಂಡವರು ಜೂಜಿನಲ್ಲಿ ನಿನ್ನನ್ನು ಸೋತವರಾದ್ದರಿಂದ ಇವರು ನಿನಗೆ ಅಧಿಪತಿಗಳಲ್ಲಾ; ಇನ್ನುಮೇಲೆ ಜೂಜಿನಲ್ಲಿ ಸೋತು ದಾಸ್ಯವನ್ನು ಸಂಪಾದಿಸದಂಥಾ ಬೇರೆ ಬಂದು ಗಂಡನನ್ನು ವರಿಸು; ಇಷ್ಟುದಿನವು ನಿನ್ನ ಪತಿಗಳಲ್ಲಿ ಭಯಭಕ್ತಿಯಾಗಿ ನಡದ ತೆರದಿಂದ ದಾಸ್ಯದಲ್ಲಿ ಹಾಗೆ ಪ್ರವರ್ತಿಸು; ಇವರಿಗೆ ಪೌರುಷವೂ ಪ್ರತಾಪವೂ ಇದ್ದದ್ದಕ್ಕೆ ಫಲವಲ್ಲವೆ ನಿನ್ನನ್ನು ಜೂಜಿನಲ್ಲಿ ಸೋತದ್ದು' ಎಂದು ನುಡಿದನು. ಕರ್ಣನ ವಾಕ್ಯವನ್ನು ಕೇಳಿ ಕೋಪಶೀಲನಾಗಿ ಧರ್ಮಪಾಶಬದ್ಧನಾದ ಭೀಮನು ಮಹಾಸರ್ಪದೋಪಾದಿಯಲ್ಲಿ ನಿಟ್ಟುಸುರುಗಳನ್ನು ಬಿಡುತ ಆತನನ್ನು ದಹಿಸುವತೆರದಿಂದ ರೋಷದಿಂದ ಕಣ್ಣುಗಳನ್ನು ಕೆಂಪು ಮಾಡಿಕೊಂಡು ಚುರಚುರನೆ ನೋಡುತ ಧರ್ಮರಾಯನನ್ನು ಕುರಿತು 'ನೀನು ಪಂಥವನ್ನು ಸೋತದ್ದರಿಂದಲೂ ಅವರಿಗೆ ನಾವು ಭೃತ್ಯರಾದ್ದರಿಂದಲೂ ಕರ್ಣನು ಹೇಳಿದ ವಾಕ್ಯಗಳನ್ನು ಕೇಳಿದ್ದರಿಂದಲೂ ನನ್ನ ಮನಸ್ಸಿಗೆ ಕೋಪವಿಲ್ಲ; ಈ ದ್ರೌಪದಿಯನ್ನು ನೀನು ಜೂಜಿನಲ್ಲಿ ಪಂಥಕ್ಕೆ ಒಡ್ಡದೇ ಇದ್ದರೆ ನಿನ್ನನ್ನು ಇವರು ಹೀಗನ್ನುವರೆ!' ಅಂದನು. ಭೀಮನ ವಾಕ್ಯಗಳನ್ನು ಕೇಳಿ ದುರ್ಯೋಧನನು ಅಚೇತನನೋಪಾದಿಯಲ್ಲಿ ಮೌನದಲ್ಲಿರುವ ಧರ್ಮರಾಯನನ್ನು ಕುರಿತು 'ಈ ಭೀಮಾರ್ಜುನ ನಕುಲ ಸಹದೇವರು ನಿನ್ನ ಅಧೀನವಾಗಿರುವದ್ದರಿಂದ ಈ ದ್ರೌಪದಿಯು ನಮ್ಮಿಂದ ಜಯಿಸಲ್ಪಟ್ಟದ್ದೂ ಇಲ್ಲದ್ದೂ ನೀನೇ ತಿಳುಹಿಸಬೇಕು' ಎಂದು ನುಡಿದು ಕದಳೀಸ್ತಂಭ ಸಮಾನವಾಗಿ ಸರ್ವಲಕ್ಷಣ ಲಕ್ಷಿತವಾಗಿ ಕರಿಕರೋಪಮಾನವಾಗಿ ವಜ್ರಕ್ಕೆ ಸಮಾನವಾದ ತನ್ನ ತೊಡೆಯನ್ನು ಮುಗುಳುನಗೆಯಿಂದ ದ್ರೌಪದಿಗೆ ತೋರಿಸಿದನು. ಆಗ ಭೀಮನು ಕೋಪಿಸಿಕೊಂಡು ಸಮಸ್ತರಾದವರೂ ಕೇಳುವ ಹಾಗೆ 'ಈಗ ಈ ದುರಾತ್ಮನು ದ್ರೌಪದಿಗೆ ತೋರಿಸಿದ ತೊಡೆಯನ್ನು ನನ್ನ ಗದಾಪ್ರಹಾರದಿಂದ ಪುಡಿಪುಡಿಮಾಡದಿದ್ದರೆ ನಾನು ಪಿತೃಲೋಕಕ್ಕೆ ಹೊರಗಾಗಲುಳ್ಳವನು! ಎಂದು ಘಟ್ಟಿಯಾಗಿ ಕೂಗಿ ನುಡಿದನು; ಆತನ ರೋಮಕೂಪದೆಸೆಯಿಂದು ಟ್ಟಿದ ಕಿಡಿಗಳು ಯಜ್ಞೇಶ್ವರನ ದೆಸೆಯಿಂದ ಹುಟ್ಟಿದ ಜ್ವಾಲೆಗಳಿಂದ ದಹಿಸಲ್ಪಡುವ ವೃಕ್ಷದ ಪೊಟರೆಗಳ ದೆಸೆಯಿಂದ ಬೀಳುತಲಿರುವ ಕಿಡಿಗಳೋಪಾದಿಯಲ್ಲಿ ಉದುರುತ್ತಿದ್ದವು. ಆ ಸಮಯದಲ್ಲಿ ವಿದುರನು ಸುಯೋಧನನನ್ನು ಕುರಿತು 'ಭೀಮನ ದೇಹದ್ದೆಸೆಯಿಂದ ಹೊರಟು ಬರುವ ಕಿಡಿಗಳನ್ನು ನೋಡಿದೆಯಾ? ಈತನ ದೆಸೆಯಿಂದ ಕೌರ

ನ ಪುತ್ರರನ್ನು ಮಹಾಧನುಷ್ಯರ ಬಂದುಕಿರಿಸಿ ಎಂದು ತಿಳಿಕೊ; ದೈವಸಂಕಲ್ಪದಿಂದ ಭರತವಂಶಕ್ಕೆ ಅನರ್ಥ ಬಂತು! ಈಗ ನೀವು ನ್ಯಾಯವನ್ನು ಅತಿ ಲೋಕದಲ್ಲಿಲ್ಲದ ಅಕೃತ್ಯವಾಗಿ ದ್ರೌಪದಿಯನ್ನು ಭಂಗಪಡಿಸಿದ್ದರಿಂದ ಈ ಮಹತ್ತಾದ ಧ್ಯಾಸನಿಗೆ ಹಾನಿಯುಂಟಾಗುವುದು! ಈ ದ್ರೌಪದಿಯು ಜಯಿಸಲ್ಪಟ್ಟಳೆಂದು ಕುರುವೃದ್ಧರೆಲ್ಲಾ ಚಿಂತಾಕ್ರಾಂತರಾಗಿದ್ದಾರೆ; ಮೋಸ್ತ್ರದಿಂದ ಈ ಸಭೆಯು ದೂಷಿತವಾಯಿತು; ಈ ಧರ್ಮರಾಯನು ತನ್ನನ್ನು ಸೋಲುವದಕ್ಕಿಂತಲೂ ಮೊದಲೆ ಪಾಂಚಾಲಿಯನ್ನು ಪಣಕ್ಕೆ ಒಡ್ಡಿದ್ದರೆ ಈ ದ್ರೌಪದಿಯು ಜಯಿಸಲ್ಪಡುವಳು; ಮೊದಲು ತಾನು ಸೋತು ಆ ಬಳಿಕ ದ್ರೌಪದಿಯನ್ನು ಸೋತವನಾದ್ದರಿಂದ ಈ ದ್ರೌಪದಿಯು ಜಯಿಸಲ್ಪಟ್ಟಂಥಾವಳಲ್ಲ; ಈ ಶಕುನಿಯು ದುರ್ನೀತಿಗಳನ್ನು ಕಲಿತು ಪಾಂಡವರ ಧನವನ್ನೆಲ್ಲಾ ಅಪಹರಿಸಿದೆ; ಅದು ಸ್ವಪ್ನಲಬ್ಧವಾದ ದ್ರವ್ಯದ ಚಂದದಿಂದ ಹೋಗುವದೇ ಹೊರತಾಗಿ ನಿಲ್ಲಲಾರದು; ಇನ್ನುಮೇಲಾದರೂ ಈ ವಂಚಕನ ವಾಕ್ಯಗಳನ್ನು ಕೇಳಿ ಅಪಕೀರ್ತಿಯನ್ನು ಪಡಬ್ಯಾಡ' ಅಂದನು. ಸುಯೋಧನನು ವಿದುರನನ್ನು ನೋಡಿ 'ನೀನು ಹೇಳಿದ ಪ್ರಕಾರಕ್ಕೆ ಈ ಭೀಮಾರ್ಜುನ ನಕುಲ ಸಹದೇವರು ಪಾಂಚಾಲಿಯನ್ನು ಸೋಲುವದಕ್ಕೆ ಧರ್ಮರಾಯನಿಗೆ ಸ್ವತಂತ್ರವಿಲ್ಲವೆಂದು ನುಡಿದರೆ ಬಿಟ್ಟುಬಿಡುತಲಿದ್ದೇನೆ' ಅಂದನು. ಅದನ್ನು ಕೇಳಿ ಅರ್ಜುನನು ಸಭೆಯವರನ್ನು ಕುರಿತು 'ಈ ಜೂಜಾಡುವದಕ್ಕಿಂತಲೂ ಮೊದಲೇ ಧರ್ಮರಾಯನು ನಮಗಷ್ಟು ಅಧೀಶ್ವರನು; ಸೋತಮೇಲೆ ದ್ರೌಪದಿಗೆ ಅಧೀಶ್ವರನು ಹ್ಯಾಗೆ ಅಲ್ಲಾ?' ಅಂದನು. ಕೌರವಶ್ರೇಷ್ಠರಷ್ಟುಮಂದಿಯೂ ಆ ಅರ್ಥವನ್ನು ವಿಚಾರಿಸಿ ಸುಮ್ಮನಿರಲು ಸೂತನ ಮಗನಾದ ಕರ್ಣನು ದುಶ್ಶಾಸನನನ್ನು ಕುರಿತು 'ವ್ಯರ್ಥಾಲಾಪಗಳನ್ನು ಯಾಕೆ ನುಡಿಯುವೀ? ನನ್ನ ಮಾತಿನ ಪ್ರಕಾರದಿಂದ ದ್ರೌಪದಿಯನ್ನು ಕರಕೊಂಡು ಹೋಗಿ ದಾಸೀ ಕೃತ್ಯವನ್ನು ಮಾಡಿಸು' ಅಂದನು. ಕರ್ಣನ ವಾಕ್ಯವನ್ನು ಕೇಳಿ ಶಕುನಿಯು 'ಯುಕ್ತವಾಯಿತು' ಎಂದು ನುಡಿದನು.

“ಕೇಳು ಜನಮೇಜಯನೇ, ಆ ಬಳಿಕ ದುಶ್ಶಾಸನನು ದ್ರೌಪದಿಯನ್ನು ದಾಸೀಗೃಹಕ್ಕೆ ಕರಕೊಂಡು ಹೋಗುವದಕ್ಕೆ ಬಲಾತ್ಕಾರದಿಂದ ಎಳೆಯಲು ದೇವಕನ್ಯಕೆಯೋಪಾದಿಯಲ್ಲಿರುವ ದ್ರೌಪದಿಯು ಮಹಾಧ್ವನಿಯಿಂದ ರೋದನವನ್ನು ಮಾಡುತ 'ಎಲೈ ಭೀಷ್ಮದ್ರೋಣ ಕೃಪಾಶ್ವತ್ಥಾಮ ವಿದುರುಗಳಿರಾ, ನೀವು ಧರ್ಮಾತ್ಮರಾದ್ದರಿಂದ ನನ್ನ ಆಪತ್ತನ್ನು ಪರಿಹರಿಸಿ ರಕ್ಷಿಸೀ! ಎಲೈ ಧೃತರಾಷ್ಟ್ರ ಮಹಾರಾಯನೆ, ನಿನ್ನ ಸೊಸೆಯಾದ ನನ್ನನ್ನು ಈ ಕ್ಲೇಶದಿಂದ ಯಾಕೆ ಪರಿಹರಿಸಲಾರೇ! ಎಲೆ ಗಾಂಧಾರಿ ತಾಯೆ, ನೀನು ಸಕಲವನ್ನೂ ತಿಳಿದ ವಿವೇಕಶಾಲಿಯನ್ನುವರೇ! ಓ ಕುಂತಿಯೇ, ನೀನು ವೀರಜನನಿಯಾಗಿಯೂ ದುರ್ಯೋಧನನ ದೆಸೆಯಿಂದ ಬಂದ ಭಯವನ್ನು ತೀರಿಸಿ ರಕ್ಷಿಸದೆ ಉಪೇಕ್ಷೆಮಾಡಿದೆಯೋ! ಈ ದುರ್ಜನರಿಂದ ಪೀಡಿಸಲ್ಪಟ್ಟಂಥಾ ನನ್ನಮೇಲೆ ಸೊಸೆಯೆಂದು ಮನಸ್ಸಿನಲ್ಲಿ ಸ್ವಲ್ಪವಾದರೂ ಕರುಣವಿಲ್ಲದೇ ಹೋಯಿತೇ! ಅನಾಥೆಯೋಪಾದಿಯಲ್ಲಿ ಹಂಬಲಿಸುತಲಿರುವ ನನ್ನ ಮೊರೆಯನ್ನು ಕೇಳುವಂಥಾವರು ಒಬ್ಬರೂ ಇಲ್ಲವ್ರೇ! ಕಟಕಟಾ! ಮಂದಭಾಗ್ಯಳಾಗಿ ದುರ್ಯೋಧನನ ದೆಸೆಯಿಂದ ಇಷ್ಟು ಕ್ಲೇಶವನ್ನು ಅನುಭವಿಸುವಂಥಾ ನನ್ನನ್ನು ಪಾಂಡುರಾಯನಾದರೂ ಧರ್ಮರಾಯನಾದರೂ ವಾಯುದೇವನಾದರೂ ದೇವೇಂದ್ರನಾದರೂ ಅಶ್ವಿನೀದೇವತೆಗಳಾದರೂ ತಮ್ಮ ಸೊಸೆಯೆಂದು ರಕ್ಷಿಸದೇ ಹೋದರು! ಅನ್ಯಷ್ಟ್ರಹೀನೆಯಾಗಿ ಪತಿವ್ರತೆಯಾದ ನನ್ನ ಜೀವನವು ಯಾತಕ್ಕೆ!' ಎಂದು ಬಹುಪ್ರಕಾರವಾಗಿ ಹಂಬಲಿಸುತಲಿದ್ದಳು. ಆ ಸಮಯದಲ್ಲಿ ದ್ರೌಪದಿಯನ್ನು ಕುರಿತು ವಿದುರನು 'ತಾಯೆ, ನೀನು ಆಡಿದ ವಾಕ್ಯಗಳನ್ನು ಕೇಳಿ ಈ ಪಾಂಡವರು ಏನೂ ಅನ್ನಲಾರದೆ ಸುಮ್ಮನೇ ಇದ್ದಾರೆ; ನಿನಗೆ ಕ್ಷೇಮವನ್ನು ಬಯಸುತಲಿರುವ ನನ್ನ ವಾಕ್ಯಗಳನ್ನು ಕೇಳಿ ಸುಮ್ಮನೇ ಇರು; ಪಾಪಾತ್ಮನಾಗಿ ಕೃತಘ್ನನಾಗಿ ದುರ್ಜನ ಸಮೇತನಾದ ದುರ್ಯೋಧನನೂ ಅವನ ಮಾತನ್ನು ಕೇಳುವಂಥಾ ಧೃತರಾಷ್ಟ್ರನೂ ನನ್ನ ಮಾತನ್ನು ಕೇಳದೇ ಹೋದರು. ಎಲೈ ದುರ್ಯೋಧನನೇ, ಮಹಾಪತಿವ್ರತೆಯಾದ ದ್ರೌಪದಿಗೆ ಇಂಥಾ ಮನಃಖೇದವನ್ನು ಮಾಡಿ ಯಾಕೆ ವಿನಾಶವನ್ನೈದುತ್ತೀ? ಎಲೈ ಕೌರವೇಂದ್ರನಾದ ಧೃತರಾಷ್ಟ್ರನೇ, ಈ ದ್ರೌಪದಿಗೆ ಬಂದ ಆಪತ್ತನ್ನು ಪರಿಹರಿಸದೇ ಹೋದೆಯಲ್ಲ! ಪಾಪಾತ್ಮನಾಗಿ ಕುಲನಾಶಕನಾದ ಸುಯೋಧನನು ಸಹೋದರಾಮಾತ್ಯಸಹಿತನಾಗಿ ಧರ್ಮರಾಯ ಭೀಮಾರ್ಜುನ ನಕುಲ ಸಹದೇವರಿಂ

ದ ಸ್ವಲ್ಪಕಾಲದಲ್ಲೇ ನಷ್ಟವಾಗಿ ಹೋಗುತಲಿದಾನೆ; ನಿನ್ನ ಮಗನಿಗೆ ಬುದ್ಧಿಯನ್ನು ಹೇಳು' ಎಂದು ಹೇಳಿದನು. ಆತನ ವಾಕ್ಯಗಳಿಗೆ ಮಂದಬುದ್ಧಿಯಾದ ಧೃತರಾಷ್ಟ್ರನು ಪ್ರತ್ಯುತ್ತರವನ್ನು ಕೊಡದೆ ಸುಮ್ಮನಿದ್ದನು. ದೇವ ಮಾಯಾಮೋಹಿತನಾದ ಸುಯೋಧನನು ವಿದುರನ ವಾಕ್ಯಗಳಲ್ಲಿ ಅನಾದರಣೆಯನ್ನು ಮಾಡುತ ದ್ರೌಪದಿಗೆ ಬಾರಿ ಬಾರಿಗೂ ತನ್ನ ತೊಡೆಯನ್ನು ತೋರಿಸುತ್ತಿದ್ದನು.

"ಆ ಬಳಿಕ ಬಲಧುರಂಧರನಾಗಿ ಅಭಿಮಾನಶಾಲಿಯಾದ ಭೀಮಸೇನನು ದುರ್ಯೋಧನನು ಮಾಡಿದ ಅವಮಾನದಿಂದ ಹುಟ್ಟಿದ ಕೋಪವನ್ನು ತಾನೇ ತಡದು ಸಭಾಮಧ್ಯದ್ದೆಸೆಯಿಂದ ಎದ್ದು ರಾಜಸಮೂಹವನ್ನು ನೋಡಿ 'ನಾನು ಯಾವರೀತಿಯಿಂದಲಾದರೂ ದುರ್ಯೋಧನನನ್ನು ಸಂಹರಿಸುತಲಿಧೇನೆ! ಈ ಅರ್ಜುನನು ಸೂತಪುತ್ರನಾದ ಕರ್ಣನನ್ನು ಸಂಹರಿಸುತಲಿಧಾನೆ! ಸಹದೇವನು ದ್ಯೂತವಿದ್ಯಾವಿಶಾರದನಾದ ಶಕುನಿಯನ್ನು ಕೊಂದುಹಾಕುತಲಿಧಾನೆ! ದೇವತಾನುಗ್ರಹದಿಂದ ನನ್ನ ಪ್ರತಿಜ್ಞೆಗೆ ಅನುಕೂಲವಾಗಿ ಒಂದು ಯುದ್ಧ ಮಾತ್ರ ಬರಬೇಕು! ಇನ್ನೊಂದು ಹೇಳುತಲಿಧೇನೆ ಕೇಳಿ: ಈಹೊತ್ತು ನಡದ ಅಕ್ರಮಗಳ ದೆಸೆಯಿಂದ ಮುಂದೆ ಸಂಭವಿಸುವ ಯುದ್ಧದಲ್ಲಿ ನನ್ನ ಗದಾಪ್ರಹಾರದಿಂದ ದುರ್ಯೋಧನನ ತೊಡೆಯನ್ನು ಮುರಿದು ಭೂಮಿಯಲ್ಲಿ ಕೆಡಹಿ ಇವನ ಶಿರಸ್ಸನ್ನು ನನ್ನ ಪಾದದಿಂದ ಒದೆಯುತಲಿಧೇನೆ! ಮತ್ತು ಕ್ರೂರಕರ್ಮನಾದ ದುಶ್ಯಾಸನನ ಎದೆಯನ್ನು ಶೀಳಿ ಸಿಂಹದೋಪಾದಿಯಲ್ಲಿ ರಕ್ತವನ್ನು ಹೀರಲುಳ್ಳವನು!' ಎಂದು ನುಡಿದನು. ಅರ್ಜುನನು ಭೀಮಸೇನನನ್ನು ನೋಡಿ 'ಎಲೈ ಭೀಮಸೇನನೆ, ಇವರು ನಿನ್ನ ಕೂಡೆ ವೈರವನ್ನು ಮಾಡಿ ತಮಗೆ ಮುಂದೆಬರುವಂಥಾ ಮಹಾಭಯವನ್ನರಿಯದೆ ದುರ್ಬುದ್ಧಿಗಳಾಗಿ ಮನೆಗಳಲ್ಲಿ ಸುಖದಿಂದಿರುವರೆಂದೆಣಿಸಿಧಾರೆ; ಈ ಸುಯೋಧನಾದಿಗಳಷ್ಟುಮಂದಿಯೂ ಹೋದವರಾಗಿ ತಿಳಿಕೊ; ಸತ್ಪುರುಷನಾದವನು ಶೌರ್ಯಕೋಪದಿಂದ ವೀರ್ಯವಿಕ್ರಮವನ್ನು ಕಾರ್ಯಮುಖದಲ್ಲಿ ತೋರಿಸುವನೇಹೊರತಾಗಿ ಮಾತುಗಳಿಂದ ತೋರಿಸನು; ಈ ದುರ್ಯೋಧನ ದುಶ್ಯಾಸನ ಕರ್ಣಶಕುನಿಗಳು ಕ್ಷತ್ರಧರ್ಮದಿಂದ ರಣಕ್ಕೆ ಬಂದು ನಿಂತರೆ ಇವರ ರಕ್ತವನ್ನು ಭೂಮಿದೇವಿಯು ಪಾನಮಾಡಲುಳ್ಳವಳು! ಅನೃತಭಾಷಿಗಳಾಗಿ ದುರಾತ್ಮಕರಾಗಿರುವ ಶತ್ರುಗಳಿಗೆ ಪ್ರೇರಕನಾದ ಈ ಕರ್ಣನನ್ನು ನಿನ್ನ ಅಪ್ಪಣೆಯಿಂದ ಪುತ್ರಮಿತ್ರಸಮೇತವಾಗಿ ತೀಕ್ಷ್ಣವಾದ ಬಾಣಪರಂಪರೆಗಳಿಂದ ಸಂಹರಿಸಿ ಯಮನ ಸದನಕ್ಕೆ ಕಳುಹಿಸಲುಳ್ಳವನು? ಹಿಮವತ್ಪರ್ವತವು ಚಲಿಸಿದರೂ ಸೂರ್ಯಬಿಂಬವು ಮಾಸಿಹೋದರೂ ಚಂದ್ರನಲ್ಲಿ ಶೈತ್ಯವಿಲ್ಲದೆ ಹೋದರೂ ನನ್ನ ಪ್ರತಿಜ್ಞೆಯು ವ್ಯರ್ಥವಾಗಲಾರದು!' ಅಂದನು. ಈಪ್ರಕಾರದಿಂದ ಅರ್ಜುನನು ನುಡಿಯಲು ಮಹಾಪ್ರತಾಪಶಾಲಿಯಾಗಿ ಶಕುನಿಯನ್ನು ಕೊಂದುಹಾಕಬೇಕೆಂಬ ಬುದ್ಧಿವುಳ್ಳವನಾಗಿ ರೋಷದಿಂದ ಕೆಂಪಾದ ಕಣ್ಣುಗಳುಳ್ಳಂಥಾ ಸಹದೇವನು ಸರ್ಪದೋಪಾದಿಯಲ್ಲಿ ಕೋಪದಿಂದೆದ್ದು ಶಕುನಿಯನ್ನು ಕುರಿತು 'ಎಲೆ ನೃಪಾಧಮನೆ, ಕೌರವವಂಶದ ಕೀರ್ತಿಯನ್ನು ಕೆಡಿಸಿ ದ್ಯೂತವನ್ನಾಡ್ಡಿ ನಮ್ಮನ್ನು ಜಯಿಸಿದೆ; ಈಗ ನಿನ್ನ ಕೈಯಲ್ಲಿರುವ ಧಾಳಗಳೇ ಯುದ್ಧಸಮಯದಲ್ಲಿ ನಿನ್ನನ್ನು ಕೊಲ್ಲುವ ತೀಕ್ಷ್ಣಗಳಾದ ಬಾಣಗಳೆಂದು ತಿಳೀ; ಇನ್ನು ಏನೇನು ಮಾಡಬೇಕೊ ಆ ಕಾರ್ಯಗಳಷ್ಟನ್ನೂ ಮಾಡು; ಪೂಜ್ಯನಾಗಿ ಶ್ರೇಷ್ಠನಾದ ಭೀಮಸೇನನು ನನಗೆ ಕಟ್ಟುಮಾಡಿಸಿದ ಪ್ರಕಾರಕ್ಕೆ ಪುತ್ರಮಿತ್ರಸಹಿತನಾದ ನಿನ್ನನ್ನು ಯುದ್ಧದಲ್ಲಿ ಸಂಹರಿಸುತ್ತೇನೆ' ಅಂದನು. ಆ ಸಮಯದಲ್ಲಿ ಅತಿಸೌಂದರ್ಯಶಾಲಿಯಾದ ನಕುಲನು ಸಭಾಮಧ್ಯದಲ್ಲಿ ನಿಂತು 'ದುರಾತ್ಮನಾಗಿ ಪುರುಷಾಧಮನಾದ ಶಕುನಿಯ ಮಗನನ್ನು ನಾನು ಸಂಹರಿಸಲುಳ್ಳವನು; ಮತ್ತೂ ಈ ದ್ರೌಪದಿಯನ್ನು ದುರ್ಭಾಷೆಗಳನ್ನಾಡಿ ದುರ್ವೃತ್ತರಾಗಿ ಕಾಲಪ್ರೇರಿತರಾದ ಧೃತರಾಷ್ಟ್ರನ ಮಕ್ಕಳಷ್ಟನ್ನೂ ಧರ್ಮರಾಯನ ಅಪ್ಪಣೆಯಿಂದ ದ್ರೌಪದಿಗೆ ಪ್ರಿಯವಾಗುವಹಾಗೆ ಸಂಹರಿಸಲುಳ್ಳವನು! ಅಂದನು. ಅನಂತರದಲ್ಲಿ ದ್ರೌಪದಿಯು ದುರ್ಯೋಧನನನ್ನು ಚುರುಚುರನೇ ನೋಡಿ 'ಎಲೆ ದುರಾತ್ಮನಾದ ದುರ್ಯೋಧನನೆ, ನೀನು ತೊಡೆಯನ್ನು ತೋರಿಸಿದವನಾದ್ದರಿಂದ ನಿನಗೆ ಆ ತೊಡೆಯಲ್ಲೇ ಅಪಮೃತ್ಯು ಬರಲುಳ್ಳಂಥಾದ್ದು! ನನಗೆ ಕ್ಲೇಶವನ್ನು ಮಾಡಿದ ದುಶ್ಯಾಸನನ ರಕ್ತವನ್ನು ಭೀಮಸೇನನು ಹೀರಲುಳ್ಳವನು! ಈ ಕಠಿನಹೃದಯನಾದ ಕರ್ಣನನ್ನು ಪುತ್ರಮಿತ್ರಾಮಾತ್ಯ ಪರಿವಾರ ಸಮೇತವಾಗಿ ಸಮರ ಕರ್ಕಶನಾದ ಧನಂಜಯನು ಸಂಹರಿಸಲುಳ್ಳವನು! ಧರ್ಮನಿರತನಾಗಿ ಕೋಪಶೀಲನಾದ ಈ ಸಹದೇವನು 'ಈ ದಾರು

ಣಕರ್ಮಕ್ಕೆ ಕಾರಣನಾದ ಶಕುನಿಯನ್ನು ಸಂಹರಿಸಲುಳ್ಳವನು!' ಎಂದು ಪತಿವ್ರತಾಶಿರೋಮಣಿಯಾದ ದ್ರೌಪದಿಯು ನುಡಿದಳು. ಆ ಸಮಯದಲ್ಲಿ ಅಂತರಿಕ್ಷದ್ದೆಸೆಯಿಂದ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಯುತ ಬಹುಪ್ರಕಾರವಾಗಿ ದ್ರೌಪದಿಯನ್ನು ಸ್ತುತಿಸಿದರು. ಆ ಬಳಿಕ ಅರ್ಜುನನು 'ಈ ಧೃತರಾಷ್ಟ್ರನ ಮಕ್ಕಳು ಯಾವನ ಭುಜಬಲವನ್ನು ಆಶ್ರಯಿಸಿಕೊಂಡು ಇಂಥಾ ಅಕೃತ್ಯಗಳನ್ನು ಮಾಡುವರೊ ಅಂಥಾ ಕರ್ಣನನ್ನು ಪುತ್ರಮಿತ್ರಪರಿವಾರಸಮೇತವಾಗಿ ಸಂಹರಿಸದೇ ಬಿಡುವದಿಲ್ಲಾ; ನನ್ನ ಆಯುಧದ ಆಣೆ!' ಎಂದು ತನ್ನ ಆಯುಧವನ್ನು ಮುಟ್ಟಿ ಪ್ರತಿಜ್ಞೆಯನ್ನು ಮಾಡಿ ಸಭೆಯಲ್ಲಿರುವ ಅರಸುಗಳನ್ನು ನೋಡಿ 'ಎಲೈ ಅರಸುಗಳಿರಾ, ಈ ದ್ರೌಪದಿಯನ್ನು ಈಪ್ರಕಾರದಿಂದ ಭಂಗಪಡಿಸಿದ ನಿಕೃಷ್ಟಾತ್ಮಕರಾದ ಧೃತರಾಷ್ಟ್ರನ ಮಕ್ಕಳನ್ನು ಸ್ತುತಿಸುವ ಅಷ್ಟುಮಂದಿಯನ್ನು ಒಂದು ಮುಹೂರ್ತದಲ್ಲಿ ಸಂಹರಿಸಿ ಯಮನ ಪಟ್ಟಣಕ್ಕೆ ಕಳುಹಿಸುವೆನೆ ಹೊರತಾಗಿ ನಾನು ಸಹಿಸುವೆನೆ! ಈ ಧರ್ಮರಾಯನು ದಯಾಶಾಲಿಯಾದ್ದರಿಂದ ನಾನು ಏನೂ ಅನ್ನಲಾರದೆ ಸುಮ್ಮನೇ ಇಧೇನೆ.'

"ಕೇಳು ಜನಮೇಜಯನೆ, ಈಪ್ರಕಾರವಾಗಿ ನುಡಿದು ಕ್ರೋಧಾವಿಷ್ಟಹೃದಯನಾಗಿ, ಶೌರ್ಯಾಟೋಪದೀಪಿತನಾಗಿ ಎದ್ದು ನಿಂತು, ಗಾಂಡೀವವನ್ನು ಕೈಗೆ ತಕ್ಕೊಂಡು, ವಿರೋಧಿ ರಾಜವರ್ಗವನ್ನು ಚುರಚುರನೆ ನೋಡುತ ದಕ್ಷಾಧ್ವರಧ್ವಂಸವನ್ನು ಮಾಡುವದಕ್ಕೆ ತೊಡಗಿದ ಫಾಲಾಕ್ಷನೋಪಾದಿಯಲ್ಲಿಯೂ ಸಕಲ ಲೋಕಗಳನ್ನು ದಹಿಸುವದಕ್ಕೋಸ್ಕರ ಉರಿಯುತಲಿರುವ ಪ್ರಳಯಕಾಲಾಗ್ನಿಯೋಪಾದಿಯಲ್ಲಿಯೂ ಮಹಾಕಾರ್ಮುಕಹಸ್ತನಾಗಿ ಕ್ರೋಧಾವೇಶದಿಂದ ನಿಟ್ಟುಸುರುಗಳನ್ನು ಬಿಡುತಲಿರುವ ಅರ್ಜುನನನ್ನು ನೋಡಿ ಆತನ ಶೌರ್ಯಾಟೋಪಕ್ಕೆ ಸಕಲರಾದ ಅರಸುಗಳೂ ಭಯಭ್ರಾಂತರಾಗಿ ಯವೆಗಳನ್ನು ಬಿಡುವದಕ್ಕೆ ಸಾಮರ್ಥ್ಯವಿಲ್ಲದೆ ನಿಶ್ಶೇಷವಾಗಿ ತಮ್ಮ ಪ್ರಾಣಗಳಲ್ಲಿ ಆಶೆಯಿಲ್ಲದೇ ಇದ್ದರು! ಮತ್ತು ಕೋಪಪರವಶನಾದ ಅರ್ಜುನನ ಪ್ರತಾಪಕ್ಕೆ ಭಯಪಡುತ ಭೂಚಕ್ರವಷ್ಟೂ ಕುಲಾಲಚಕ್ರದೋಪಾದಿಯಲ್ಲಿ ತಿರುಗುತ್ತಿತ್ತು! ಖೇಚರಗಳಾದ ಭೂತಗಳೂ ಭಯಪಟ್ಟವು! ಸೂರ್ಯನು ತೇಜೋವಿಹೀನನಾದನು! ವಾಯುವು ಬೀಸುವದಕ್ಕೆ ಭಯಪಟ್ಟನು! ಚಂದ್ರಗ್ರಹತಾರಕಗಳು ದಶದಿಕ್ಕುಗಳಲ್ಲೂ ಚದರಿದವು! ಚರಾಚರಾತ್ಮಕವಾದ ಸಕಲ ಪ್ರಪಂಚವೂ ಕಲಕಿತು! ಹಾಗೆ ಆಕಾಶಮಧ್ಯದಲ್ಲಿ ಪ್ರಕಾಶಿಸುತ್ತಲಿರುವ ಸೂರ್ಯನೋಪಾದಿಯಲ್ಲಿಯೂ ಕಾಲಾಂತಕನೋಪಾದಿಯಲ್ಲಿಯೂ ಕಾಣಿಸುವ ಅರ್ಜುನನನ್ನು ನೋಡಿ ಭೀಮನೂ ಯುದ್ಧಸನ್ನದ್ಧನಾಗಿ ನಿಂತನು. ಮಹಾಸರ್ಪವನ್ನು ಸಂಹರಿಸುವ ಗರುಡನೋಪಾದಿಯಲ್ಲಿ ತೋರುತಲಿರುವ ಅರ್ಜುನನನ್ನು ನೋಡಿ ದ್ರೌಪದಿಯು ಸಂತೋಷಪಡುತ್ತಿದ್ದಳು. ಪ್ರಳಯಕಾಲಾಗ್ನಿಯೋಪಾದಿಯಲ್ಲಿ ಉರಿಯುತ ಬರುತಲಿರುವ ಅರ್ಜುನನನ್ನು ನೋಡಿ ಪೌರಜನಗಳು ತಲ್ಲಣಿಸಿದರು. ಆ ಸಮಯದಲ್ಲಿ ಧರ್ಮಯುಕ್ತಚಿತ್ತನಾಗಿ ದಯಾಶಾಲಿಯಾದ ಧರ್ಮರಾಯನು ಉಪೇಂದ್ರನನ್ನು ತಡೆಯುವ ದೇವೇಂದ್ರನೋಪಾದಿಯಲ್ಲಿ ಅರ್ಜುನನನ್ನು ತಡೆದು 'ಎಲೈ ಅರ್ಜುನನೆ, ಈ ಸಮಯದಲ್ಲಿ ಸಾಹಸವನ್ನು ತೋರಿಸಿದರೆ ನಮ್ಮ ಕೀರ್ತಿಗೆ ಹಾನಿಬರುವದು; ಈ ಕಠಿನಹೃದಯನಾದ ಕರ್ಣನನ್ನು ಕೋಪಾನಲದಿಂದ ದಹಿಸಬೇಕೆಂದೆಣಿಸಿದ ಸಮಯದಲ್ಲಿ ಇವನ ಪಾದಗಳು ನಮ್ಮ ಕುಂತೀದೇವಿಯ ಪಾದಗಳ ಛಂದದಿಂದ ತೋರಿದ್ದರಿಂದ ಮನ್ನಿಸಿದೆನು; ನೀನೂ ಲೋಕಹಿತಾರ್ಥವಾಗಿ ಈ ಕೋಪವನ್ನು ಬಿಟ್ಟುಬಿಡು' ಎಂದು ನುಡಿಯಲು ಅರ್ಜುನನು ಕೋಪವನ್ನು ಬಿಟ್ಟು ಸುಮ್ಮನಾದನು; ಸಕಲ ಜನಗಳೂ ಸಂತೋಷಪಡಲು ಭೀಮನೂ ಕೋಪವನ್ನು ಬಿಟ್ಟು ಸುಮ್ಮನೇ ಆದನು.

"ಕೇಳು ಜನಮೇಜಯನೆ, ಆ ಸಮಯದಲ್ಲಿ ಧೃತರಾಷ್ಟ್ರನ ಅಗ್ನಿಹೋತ್ರಗೃಹದಲ್ಲಿ ನರಿಗಳು ಕೂಗಿದವು; ಆ ದುರ್ನಿಮಿತ್ತಗಳನ್ನು ಕೇಳಿ ಬುದ್ಧಿಸಂಪನ್ನನಾದ ವಿದುರನೂ ಗಾಂಧಾರಿಯೂ ಭೀಷ್ಮದ್ರೋಣಕೃಪಾಚಾರ್ಯರೂ ಅತ್ಯಂತ ಖೇದವನ್ನು ಪಟ್ಟರು. ವಿದುರನೂ ಗಾಂಧಾರಿಯೂ ಶೋಕಾಕ್ರಾಂತಹೃದಯರಾಗಿ ಅತಿಘೋರವಾದ ಆ ದುಶ್ಶಕುನಗಳನ್ನು ಧೃತರಾಷ್ಟ್ರನಿಗೆ ತಿಳುಹಿಸಿದರು. ಆಗ ಪ್ರಜ್ಞಾಶಾಲಿಯಾದ ಧೃತರಾಷ್ಟ್ರನು ದುರ್ಯೋಧನನನ್ನು ನೋಡಿ 'ಎಲೆ ದುರಾತ್ಮನೇ, ಪಾಂಡವರಿಗೆ ಧರ್ಮಪತ್ನಿಯಾಗಿ ಪತಿವ್ರತಾಶಿರೋಮಣಿಯಾದ ಪಾಂ

ಪಾಂಚಾಲರಾಯನ ಮಗಳನ್ನು ಸಭಾಮಧ್ಯದಲ್ಲಿ ಧಿಕ್ಕಾರದಲ್ಲಿ ಭಂಗಪಡಿಸಿದವರ ಪಾಪದಿಂದ ಈ [illegible] ಸ್ನುಷೆಯದೆ!’ ಎಂದು ಶಿಕ್ಷೆಯಿಂದ ಎದ್ದು ಬಂದು ದ್ರೌಪದಿಯನ್ನು ಕರೆದು ಸಮಾಧಾನಮಾಡಿ ‘ ಎಲ್ಲ [illegible] ಗೆ ನೀನು ಶೀಲಗುಣ ಸಮೇತೆಯಾದ್ದರಿಂದ ನೀನು ಕೇಳಿದ ವರವನ್ನು ಕೊಡುತಲಿದ್ದೇನೆ, ಬೇಡಿಕೊ’ ಅಂದನು. ಆ ದೇವಿಯು ‘ ಎಲೈ ಕೌರವ್ಯೋತ್ತಮನೆ, ವರವನ್ನು ಕೊಡುವದಾಗಿ ಹೇಳುವದರಿಂದ ನಿಮ್ಮನ್ನು ಬಂದು ವರವು ಪ್ರಾರ್ಥಿಸುತಲಿದ್ದೇನೆ; ಅಧಿಕವಾಗಿ ಅಭಿಮಾನಶಾಲಿಯಾಗಿ ಪೂಜ್ಯನಾಗಿರುವ ಪ್ರತಿವಿಂದ್ಯನನ್ನು ನಿನ್ನ ಕುಮಾರಕರು ದಾಸೀಪುತ್ರನೆಂದು ಕರೆದರೆ ನಾನು ದೇಹವನ್ನು ಬಿಡುವೆನಾದ್ದರಿಂದ ಸಕಲ ಧರ್ಮವಿಧಿಜ್ಞನಾದ ಧರ್ಮರಾಯನಿಗೆ ದಾಸತ್ವವಿಲ್ಲದಹಾಗೆ ಅನುಗ್ರಹಿಸಬೇಕು; ಎಂದು ಕೇಳಿದಳು. ಧೃತರಾಷ್ಟ್ರನು ‘ ಹಾಗೇ ಆಗಲೀ! ನಿನಗೆ ಬಂದು ವರವನ್ನು ಕೊಟ್ಟಮಾತ್ರದಿಂದಲೆ ನನ್ನ ಮನಸ್ಸು ಸಂತೋಷಪಡಲಿಲ್ಲ; ಇನ್ನೊಂದು ವರವನ್ನು ಬೇಡಿಕೊ; ಅಂದನು. ದ್ರೌಪದಿಯು ‘ ದಿವ್ಯಕಾರ್ಮುಕಹಸ್ತರಾದ ಭೀಮಾರ್ಜುನ ನಕುಲ ಸಹದೇವರಿಗೆ ದಾಸಭಾವವನ್ನು ಬಿಡಿಸುವದು ಎರಡನೇ ವರವು’ ಅಂದಳು. ಧೃತರಾಷ್ಟ್ರನು ‘ ಅದನ್ನೂ ಕೊಟ್ಟೆನು! ಪತಿವ್ರತಾಶಿರೋಮಣಿಯಾದ ನಿನ್ನ ಕಣ್ಣಿನ ನೀರು ಬೀಳುವ ಮನೆಗೆ ಬಾಧಕಬರುವದರಿಂದ ನಿನ್ನ ಮನಸ್ಸಿಗೆ ಸಂತೋಷವನ್ನು ಕಲ್ಪಿಸಬೇಕಾದವಕ್ಕೆ ಣಿಸಿದ್ದೇನೆ; ಇನ್ನೂ ಬೇಕಾದ ವರಗಳನ್ನು ಬೇಡಿಕೊ’ ಅಂದನು. ದ್ರೌಪದಿಯು ಧೃತರಾಷ್ಟ್ರನನ್ನು ಕುರಿತು ‘ ಎಲೈ ಅರಸೆ, ವೈಶ್ಯನು ಬಂದು ವರವನ್ನೂ ಕ್ಷತ್ರಿಯಸ್ತ್ರೀಯರು ಎರಡು ವರಗಳನ್ನೂ ಅರಸುಗಳು ಮೂರು ವರಗಳನ್ನೂ ಬ್ರಾಹ್ಮಣರು ನೂರು ವರಗಳನ್ನೂ ಬೇಡಬಹುದು; ಅಧಿಕವಾಗಿ ಆಶೆಪಟ್ಟು ಕೇಳಿದರೆ ಧರ್ಮಹಾನಿಬರುವದು; ಅದ್ದರಿಂದ ನನಗೆ ಇಷ್ಟುಮಾತ್ರವೇ ಸಾಕು; ಇನ್ನು ವರಗಳು ಬ್ಯಾಡ; ನನ್ನ ಪತಿಗಳು ದಾಸಭಾವದ್ದೆಸೆಯಿಂದ ಮುಕ್ತರಾದದ್ದೇ ನನಗೆ ಸಕಲ ಭಾಗ್ಯಗಳು ಬಂದಹಾಗೆ; ಮಿಕ್ಕಾದಂಥಾದ್ದು ಪುಣ್ಯವಶದಿಂದ ತಮಗೆ ತಾವೇ ಆಗುತಲಿವೆ’ ಅಂದಳು.”

## ೧೦೬ ನೇ ಅಧ್ಯಾಯ.—ದ್ಯೂತಪರ್ವಶೇಷ.

“ಕೇಳು ಜನಮೇಜಯನೆ, ಆ ಬಳಿಕ ಕರ್ಣನು ಸಭೆಯವರನ್ನು ನೋಡಿ ‘ ಲೋಕದಲ್ಲಿ ಅತಿ ಮನೋಹರಗಳಂದ ರೂಪು ಸೌಂದರ್ಯಗಳಿಂದ ಕೂಡಿದ ವನಿತಾಜನಗಳಲ್ಲಿ ಕ್ಷಮೆಯಿರುವದು ದುರ್ಲಭವೆಂದು ಕೇಳಿ ಉಂಟಲ್ಲಾ! ಈ ರೂಪವತಿಯಾದ ದ್ರೌಪದಿಯು ಇಂಥಾ ಕ್ಷಮೆಯಿಂದ ಸಮುದ್ರಮಧ್ಯದಲ್ಲಿ ಮುಳುಗುವ ಜನರನ್ನು ದ್ವೀಪಕ್ಕೆ ಸೇರಿಸುವ ಓಡೆಯು ತೆರದಿಂದ ಆಪತ್ತು ಅಪಕೀರ್ತಿಯೆಂಬ ಸಮುದ್ರದಲ್ಲಿ ಮುಳುಗುತ ಧೃತರಾಷ್ಟ್ರನ ಕೃತ್ಯಕ್ಕೆ ಅತಿಕುಪಿತರಾದ ಪಾಂಡವರನ್ನು ಉದ್ಧರಿಸಿದವಳಾದ್ದರಿಂದ ಈ ಪಾಂಚಾಲಿಗೆ ಸಮಾನರಾದ ಸ್ತ್ರೀಜನರು ಉಂಟೆ!’ ಎಂದು ನುಡಿದನು. ಆ ವಾಕ್ಯಗಳನ್ನು ಕೇಳಿ ಕೋಪಶೀಲನಾಗಿ ಅಭಿಮಾನಶಾಲಿಯಾದ ಭೀಮಸೇನನು ಅರ್ಜುನನನ್ನು ನೋಡಿ ‘ ಈ ದುರಾತ್ಮಕನಾದ ಕರ್ಣನು ನಮ್ಮನ್ನು ದ್ರೌಪದಿ ರಕ್ಷಿಸಿದಳೆಂದು ಹೇಳುತಲಿದ್ದಾನೆ; ಲೋಕದಲ್ಲಿ ಅರಸುಗಳಿಗೆ ಯುದ್ಧದಲ್ಲಿ ಹಿಂದೆಗೆಯದಿರುವದು ಯುದ್ಧಕ್ಕೆ ಕರೆದರೆ ಹೋಗುವದು ಭಾರ್ಯಾಸಂರಕ್ಷಣವು ಈ ಮೂರು ತೇಜಸ್ತ್ರಯವೆಂದು ಧರ್ಮಶಾಸ್ತ್ರದಲ್ಲಿ ದೇವಲ ವಚನವುಂಟು; ಅಪವಿತ್ರವಾಗಿ ಪ್ರಾಣರಹಿತವಾಗಿ ಜ್ಞಾತಿಜನರಿಂದ ಬಿಡಲ್ಪಟ್ಟಂಥಾ ದೇಹವನ್ನು ಬಿಟ್ಟು ಹೋಗುವಂಥಾ ಪುರುಷನಿಗೆ ಸಂತಾನವೂ ವಿದ್ಯವೂ ಸಹಾಯವಾಗಿ ಬಂದು ಸಂರಕ್ಷಿಸುವದರಿಂದ ಸಂತಾನ ಸತ್ಕರ್ಮಗಳೂ ವಿದ್ಯಗಳೂ ಭಾರ್ಯಾಧೀನವಾಗಿರುವವು; ಭಾರ್ಯಾಸಂರಕ್ಷಣವು ಮೂರನೇ ತೇಜಸ್ಸೆಂದು ಪ್ರಶಸ್ತವಾಗಿರುವದು; ಈ ದ್ರೌಪದೀ ದೇವಿಯನ್ನು ಶತ್ರುಗಳು ಭಯಭಂಗಪಡಿಸಿದ್ದರಿಂದ ಭಾರ್ಯಾಸಂರಕ್ಷಣವೆಂಬ ತೇಜಸ್ಸು ಕೆಟ್ಟುಹೋಯಿತು; ಇಂಥಾ ಸ್ತ್ರೀಗರ್ಭದಲ್ಲಿ ಹುಟ್ಟಿದ ಸಂತಾನದಿಂದ ನಮಗೆ ಶ್ರೇಯಸ್ಸಾಗುವದೆ?’ ಅಂದನು. ಧನಂಜಯನು ಭೀಮನನ್ನು ನೋಡಿ ‘ ಎಲೈ ಭೀಮಸೇನನೆ, ನೀಚನು ಹೇಳುವ ಕಠಿನವಾಕ್ಯಗಳು ವ್ಯರ್ಥವಾಗಬೇಕೇ ಹೊರತಾಗಿ ಅದನ್ನು ಕೇಳಿ ಕೋಪಿಸಬಹುದೆ! ಆತ್ಮಜ್ಞಾನವುಂಟಾದ

ಧರ್ಮರು ಒಬ್ಬನು ಮಾಡಿದ ವೈರವನ್ನು ಸ್ಮರಿಸದೆ ಅವನಿಗೆ ಶ್ರೇಯಸ್ಸನ್ನೇ ಅಪೇಕ್ಷಿಸುತಲಿರುವರು' ಎಂದು ಸಮಾಧಾನಮಾಡಿದನು. ಆದರೂ ಕೋಪವನ್ನು ಬಿಡದೇ ಭೀಮನು ಧರ್ಮರಾಯನನ್ನು ಕುರಿತು 'ಎಲೈ ಧರ್ಮನಂದನನೆ, ಈ ಕ್ಲೇಶವೂ ಈ ಅಪವಾದವೂ ನಮಗೆ ಯಾತಕ್ಕೆ? ನೀನು ಅಪ್ಪಣೆಯನ್ನು ಕೊಟ್ಟರೆ ಒಬ್ಬನನ್ನೂ ಬಿಡದೆ ನಿಮಿಷಮಾತ್ರದಿಂದ ಅಷ್ಟುಮಂದಿಯನ್ನೂ ಪುತ್ರಮಿತ್ರಸಮೇತರಾಗಿ ಸಂಹರಿಸುತಲಿದ್ದೇನೆ; ಆ ಬಳಿಕ ಯಥಾಪ್ರಕಾರವಾಗಿ ಸಕಲ ಭೂಮಂಡಲವನ್ನೂ ಪರಿಪಾಲಿಸು' ಎಂದು ನುಡಿದು ಮೃಗಸಮೂಹಗಳ ಮಧ್ಯದಲ್ಲಿ ತಿರುಗುತಲಿರುವ ಸಿಂಹದೋಪಾದಿಯಲ್ಲಿ ರಾಜಲೋಕಮಧ್ಯದಲ್ಲಿ ಗದಾದಂಡವನ್ನು ತಿರುಗಿಸುತಲಿರಲು ಆತನನ್ನು ಅರ್ಜುನನು ತನ್ನ ಭುಜಬಲದಿಂದಲೂ ಪ್ರಿಯಭಾಷಣೆಗಳಿಂದಲೂ ತಡೆದನು; ಮತ್ತೂ ರೋಷಾಂತರ್ದಾಹದಿಂದ ಬೆವರು ಹುಟ್ಟಿ ಯುಗಾಂತಕಾಲಾಂತಕನೋಪಾದಿಯಲ್ಲಿ ಲಲಾಟದಲ್ಲಿ ಹುಬ್ಬುಗಳನ್ನು ನಟಿಸುತ್ತ ದುರ್ನಿರೀಕ್ಷಣನಾಗಿ ಮುಖನಾಸಿಕಾಕರ್ಣನೇತ್ರಗಳಲ್ಲಿ ಧೂಮಾಗ್ನಿಸಮೇತಗಳಾದ ಅಗ್ನಿಜ್ವಾಲೆಗಳು ಹುಟ್ಟುತಲಿರುವ ಭೀಮನನ್ನು ತನ್ನ ಭುಜಬಲದಿಂದ ಹಿಡಿದು ಕೋಪವನ್ನು ಪರಿಹರಿಸಿ ಧರ್ಮರಾಯನು ಧೃತರಾಷ್ಟ್ರನ ಸನ್ನಿಧಾನಕ್ಕೆ ಹೋಗಿ ಕೈಮುಗಿದನು." '

## ೧೦೩ ನೇ ಅಧ್ಯಾಯ.—ದ್ಯೂತಪರ್ವ ಸಮಾಪ್ತಿ.

"ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ಧೃತರಾಷ್ಟ್ರನನ್ನು ನೋಡಿ 'ಎಲೈ ಕೌರವೇಶ್ವರನೆ, ನೀನು ನಮಗಷ್ಟು ಅಧೀಶ್ವರನಾದ್ದರಿಂದಲೂ ನಾವಷ್ಟು ನಿನ್ನ ಅಪ್ಪಣೆಯಿಂದ ನಡದುಕೊಳ್ಳುವರಾದ್ದರಿಂದಲೂ ನಾವು ನಡದುಕೊಳ್ಳತಕ್ಕಂಥಾ ಕಾರ್ಯಗಳನ್ನು ವಿವರಿಸು' ಎಂದು ಕೇಳಿದನು. ಧೃತರಾಷ್ಟ್ರನು ಧರ್ಮರಾಯನನ್ನು ಕುರಿತು 'ಧನಕನಕ ವಸ್ತುವಾಹನ ಮೊದಲಾದ ನಿನ್ನ ಐಶ್ವರ್ಯವಷ್ಟನ್ನೂ ತಿರಿಗಿ ಕೊಟ್ಟೆನು; ಅವನ್ನು ತೆಕ್ಕೊಂಡು ತಮ್ಮಂದಿರೊಡನೆ ಕೂಡಿ ನನ್ನ ಅಪ್ಪಣೆಯಿಂದ ನಿಮ್ಮ ಪಟ್ಟಣಕ್ಕೆ ಹೋಗಿ ಸುಖವಾಗಿರು; ವೃದ್ಧನಾಗಿರುವ ನನ್ನ ಬುದ್ಧಿಯು ನಿನಗೆ ಶ್ರೇಯಸ್ಕರವಾಗಿರುವದು; ಇನ್ನೊಂದು ಹೇಳುತಲಿದ್ದೇನೆ ಕೇಳು: ಮಹಾಪ್ರಾಜ್ಞನಾದ ನೀನು ವಿನೀತನಾಗಿ ದೊಡ್ಡವರ ಸೇವೆಯನ್ನು ಮಾಡಿದವನಾದ್ದರಿಂದ ಧರ್ಮಸೂಕ್ಷ್ಮವನ್ನು ತಿಳಿದ ಮಹಾನುಭಾವನು; ಲೋಕದಲ್ಲಿರುವಂಥಾ ಮರವನ್ನು ಕಡಿಯುವದಕ್ಕೆ ಸಾಧನವಾದ ಆಯುಧವನ್ನು ಕಲ್ಲಿನಮೇಲೆ ಪ್ರಯೋಗಿಸಿದರೆ ಅದಕ್ಕೆ ಹಾನಿಬರುವ ತೆರದಿಂದ ಸಕಲಗುಣಸಂಪನ್ನರಾದ ನಿಮ್ಮಂಥಾ ಮಹಾನುಭಾವರಿಗೆ ಅಪರಾಧವನ್ನು ಮಾಡಿದ ದುರ್ಯೋಧನಾದಿಗಳಿಗೆ ಹಾನಿಬರುವದೇ ಹೊರತಾಗಿ ನಿಮಗೆ ಸ್ವಲ್ಪವಾದರೂ ಹಾನಿಬರಲಾರದು; ಸತ್ಪುರುಷನಾದವನು ಗುಣವನ್ನೇ ಸ್ವೀಕರಿಸುವನೇ ಹೊರತಾಗಿ ಪರರುಮಾಡಿದ ಅಪಕಾರವನ್ನು ಮನಸ್ಸಿನಲ್ಲೆಣಿಸನು; ನೀನು ಬುದ್ಧಿಸಂಪನ್ನನಾದ್ದರಿಂದ ನನ್ನ ವಾಕ್ಯಗಳನ್ನು ಕೇಳಿ ಶಾಂತಿಯನ್ನೈದು; ವಿವಾದವು ಬಂದಲ್ಲಿ ನರಾಧಮರಾದವರು ದುರ್ಭಾಷೆಗಳನ್ನು ನುಡಿಯುವರು; ಒಬ್ಬನು ತನ್ನನ್ನು ಅವಮಾನಿಸಿ ನುಡಿದರೆ ಆ ಬಳಿಕ ಕಠಿನೋಕ್ತಿಗಳನ್ನು ನುಡಿಯುವದು ಮಧ್ಯಮಪುರುಷನ ಗುಣವು; ಯಾರು ಹ್ಯಾಗೆ ಹೇಳಿದರೂ ಸಹಿಸಿ ಸುಮ್ಮನೇ ಇರುವದೆ ಉತ್ತಮಪುರುಷರ ಗುಣಗಳಾದ್ದರಿಂದ ಸಜ್ಜನರಾದವರು ಪರರಲ್ಲಿ ಗುಣವನ್ನೆಣಿಸುವರೇ ಹೊರತಾಗಿ ಅವರು ತಮ್ಮಲ್ಲಿ ಮಾಡಿದ ಅಪಕಾರವನ್ನು ಎಣಿಸರು; ನೀನು ಸಕಲಧರ್ಮಜ್ಞನಾದ್ದರಿಂದ ಈ ದುರಾತ್ಮಕರಾದ ದುರ್ಯೋಧನಾದಿಗಳು ಮಾಡಿದ ಕ್ರೂರಕೃತ್ಯಗಳನ್ನು ಮನಸ್ಸಿನಲ್ಲಿ ಸ್ಮರಿಸಬೇಡ, ಕುರುಡನಾಗಿ ವೃದ್ಧನಾಗಿ ನಿನ್ನಲ್ಲಿ ಅನುಕೂಲನಾಗಿ ತಂದೆಯಾಗಿರುವ ನನ್ನನ್ನೂ ತಾಯಾಗಿರುವ ಗಾಂಧಾರಿಯನ್ನೂ ನೋಡಿ ನಮ್ಮ ಇಬ್ಬರಿಗೂ ಸಮ್ಮತವಿಲ್ಲದೇ ಇರುವ ಈ ಅಪರಾಧವನ್ನು ಸೈರಿಸು; ಅಣ್ಣತಮ್ಮಂದಿರಾದ ದುರ್ಯೋಧನಾದಿಗಳಿಗೂ ನಿಮಗೂ ಇರುವ ಮೈತ್ರಿಯನ್ನೂ ನಿಮ್ಮ ಬಲಾಬಲವನ್ನೂ ನೋಡಬೇಕೆಂದು ಮೊದಲು ಜೂಜಾಡುವ ಸಮಯದಲ್ಲಿ ಉಪೇಕ್ಷಿಸಿದ್ದೆನು; ಇವರಷ್ಟುಮಂದಿಗೂ ಶಿಕ್ಷಕನಾಗಿರುವ ನೀನೂ ಸಕಲ ಶಾಸ್ತ್ರವಿಶಾರದನಾಗಿ ಬುದ್ಧಿಸಂಪನ್ನನಾಗಿ ಮಂತ್ರಿಮುಖ್ಯನಾದ ವಿದುರನೂ ಈ ಕೌರವರ ದುರ್ನೀತಿಗಳನ್ನು ಮನಸ್ಸಿನಲ್ಲೆಣಿಸದೇ ಇರಬೇಕು; ನಿನ್ನಲ್ಲಿ ಧರ್ಮವು ಭೀಮನಲ್ಲಿ ಪರಾಕ್ರಮವು ಅರ್ಜುನನಲ್ಲಿ ಶೌರ್ಯವು ಪುರುಷಶ್ರೇಷ್ಠರಾದ ನಕುಲಸಹದೇವರಲ್ಲಿ ಭಕ್ತಿ ಗುರುತಿ

ಶುಶ್ರೂಷೆಗಳೂ ಉಂಟಾಗಿರುವದರಿಂದ ನೀವು ಸಕಲ ಶುಭಗಳು ಧರ್ಮವು ಭ್ರಾತೃಸ್ನೇಹವೂ ಉಂಟಾಗಿ ಸುಖವಾಗಿರುತ್ತಿದ್ದೀರಿ; ಇನ್ನು ಇಂದ್ರಪ್ರಸ್ಥಪಟ್ಟಣಕ್ಕೆ ಹೋಗೀ' ಅಂದನು. ಆ ಬಳಿಕ ಭರತಕುಲಶ್ರೇಷ್ಠನಾದ ಧರ್ಮರಾಯನು ತನ್ನ ಮನಸ್ಸಿನಲ್ಲಿದ್ದ ಸಂಶಯಗಳು ತೀರಿತೆಂದು ತಮ್ಮಂದಿರೂ ತಾನೂ ಸೂರ್ಯಸಂಕಾಶಗಳಾದ ರಥಗಳನ್ನೇರಿ ಪಾಂಚಾಲಿಯೊಡನೆ ಕೂಡಿ ಇಂದ್ರಪ್ರಸ್ಥ ಪಟ್ಟಣಕ್ಕೆ ಹೊರಟರು."

## ೧೮ ನೇ ಅಧ್ಯಾಯ.—ಅನುದ್ಯೂತಪರ್ವ.

ಅನಂತರದಲ್ಲಿ ಜನಮೇಜಯರಾಯನು ವೈಶಂಪಾಯನ ಮುನೀಂದ್ರನನ್ನು ನೋಡಿ "ಎಲೈ ವೈಶಂಪಾಯನ ಮುನೀಂದ್ರನೇ, ಈಪ್ರಕಾರದಿಂದ ಪಾಂಡವರು ಸಕಲೈಶ್ವರ್ಯಸಂಪನ್ನರಾಗಿ ತಮ್ಮ ಪಟ್ಟಣಕ್ಕೆ ಹೋದ ವೃತ್ತಾಂತವನ್ನು ಕೇಳಿ ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನನು ಮೊದಲಾದವರು ಏನುಮಾಡಿದರು ?" ಎಂದು ಕೇಳಿದನು. ವೈಶಂಪಾಯನ ಮುನೀಶ್ವರನು ಜನಮೇಜಯರಾಯನನ್ನು ಕುರಿತು "ಕೇಳು ಜನಮೇಜಯನೆ, ಈಪ್ರಕಾರವಾಗಿ ಪ್ರಜ್ಞಾಶಾಲಿಯಾದ ಧೃತರಾಷ್ಟ್ರನು ಪಾಂಡವರನ್ನು ತಮ್ಮ ಪಟ್ಟಣಕ್ಕೆ ಕಳುಹಿಸಲು ದುಶ್ಶಾಸನನು ಅದನ್ನು ನೋಡಿ ದುಃಖಪಟ್ಟು ದುರ್ಯೋಧನನ ಸಮೀಪಕ್ಕೆ ಹೋಗಿ 'ಎಲೈ ಕೌರವೇಂದ್ರನೆ, ವೃದ್ಧನಾದ ಧೃತರಾಷ್ಟ್ರನು ನಾವು ಮಾಡಿದ ಪ್ರಯತ್ನವಷ್ಟೂ ನಿಷ್ಫಲವಾಗುವಹಾಗೆ ಮಾಡಿ ಪಾಂಡುಕುಮಾರಕರಿಗೆ ಸಕಲ ಕಾರ್ಯವನ್ನೂ ನಿರ್ವಹಿಸಿದನು ; ಇದನ್ನು ಕೇಳಿದಿರಾ ?' ಅಂದನು. ದುರ್ಯೋಧನ ಕರ್ಣಶಕುನಿಗಳು ಪಾಂಡವರ ನಿಮಿತ್ತವಾಗಿ ಅನ್ಯೋನ್ಯವು ಕೆಲವು ಹೊತ್ತು ವಿಚಾರಿಸಿ ಮಹಾಬುದ್ಧಿಸಂಪನ್ನನಾದ ಧೃತರಾಷ್ಟ್ರನ ಸಮೀಪಕ್ಕೆ ಹೋಗಿ ಅವರಲ್ಲಿ ದುರ್ಯೋಧನನು ತನ್ನ ತಂದೆಯ ಪಾದಗಳಿಗೆ ನಮಸ್ಕಾರವನ್ನು ಮಾಡಿ ಮೃದುವಾಕ್ಯಗಳಿಂದ ಇಂತೆಂದನು : 'ಕೇಳು ಭರತಕುಲಶ್ರೇಷ್ಠನೆ, ಯುದ್ಧದಿಂದಲಾಗಲಿ ಕಪಟಮಾರ್ಗದಿಂದಲಾದರೂ ಶತ್ರುಸಂಹಾರವನ್ನು ಮಾಡಬೇಕೆಂದು ಅಮರಗುರುವಾದ ಬೃಹಸ್ಪತಿಯು ನುಡಿದ ನೀತಿವಾಕ್ಯಗಳನ್ನು ನೀನು ಅರಿಯೆಯಾ ! ಪಾಂಡವರನ್ನು ಜಯಿಸಿ ಪಡದ ಸಕಲ ಧನವನ್ನೂ ವೆಚ್ಚಮಾಡಿ ಮಹತ್ತಾದ ಸೇನೆಯನ್ನು ಕಟ್ಟಿ ಅವರನ್ನು ಜಯಿಸಬೇಕೆಂದು ಎಣಿಸಿದ್ದೆವು ; ನೀನು ತಿರಿಗಿ ಕಳುಹಿಸಿ ಕೊಟ್ಟವನಾದ್ದರಿಂದ ಬಲಪರಾಕ್ರಮ ಧುರೀಣರಾದ ಪಾಂಡವರು ನಾಳೆಯೇ ನಮಗೆ ಅಪ್ರಿಯವನ್ನು ಮಾಡದೇ ಬಿಡರು ; ತನ್ನನ್ನು ಕಚ್ಚುವದಕ್ಕೆ ಬಂದ ವಿಷಜ್ವಾಲಾಬಲವಾಗಿರುವ ಸರ್ಪವನ್ನು ಕೊರಳಲ್ಲಿ ಸುತ್ತಿಕೊಳ್ಳುವವರುಂಟೆ ? ಶಸ್ತ್ರಾಸ್ತ್ರಸಮೇತರಾಗಿ ದಿವ್ಯರಥಾರೂಢರಾಗಿ ಕೋಪೋದ್ದೀಪಿತರಾಗಿರುವ ಪಾಂಡವರು ರೋಷಭೀಷಣಗಳಾದ ಮಹಾಸರ್ಪಗಳೋಪಾದಿಯಲ್ಲಿ ನಮ್ಮಷ್ಟುಮಂದಿಯನ್ನು ನಿಶ್ಶೇಷವಾಗಿ ಕೊಲ್ಲದೆ ಬಿಡುವರೆ ? ಅತಿಕುಪಿತನಾಗಿ ಗಾಂಡೀವಧರನಾಗಿ ಧನುರ್ವಿದ್ಯಾವಿಶಾರದನಾಗಿ ಅಕ್ಷಯ ತೂಣೀರಧರನಾದ ಅರ್ಜುನನು ಯುದ್ಧಸನ್ನದ್ಧನಾಗಿ ಬಂದು ಕೌರವರಷ್ಟುಮಂದಿಯನ್ನೂ ಸಂಹರಿಸದೆ ಹೋಗುವನೆ ? ಭೀಷ್ಮನು ದ್ರೋಣನು ಅಶ್ವತ್ಥಾಮನು ಮಹಾರಥನಾದ ಕೃಪಾಚಾರ್ಯನು ವಿಕರ್ಣನು ಸೈಂಧವನು ಬಾಹ್ಲೀಕನು ಸೋಮದತ್ತನು ಭೂರಿಶ್ರವನು ಶಲ್ಯನು ಶಕುನಿಯು ಉಲೂಕನು ಮತ್ತೂ ಇರುವ ಕೌರವರೂ ಯುದ್ಧಸನ್ನದ್ಧರಾಗಿ ಒಗ್ಗಟ್ಟಾಗಿ ನಿಂತರೂ ಸಮರ ಗರ್ಜಯನಾದ ಅರ್ಜುನನನ್ನು ನೋಡುವದಕ್ಕಾದರೂ ಸಮರ್ಥರೆ ? ಸಹಸ್ರಬಾಹುವಾದ ಕಾರ್ತವೀರ್ಯಾರ್ಜುನನಿಗೆ ಸಮಾನನಾದ ಅರ್ಜುನನಿಗೆದುರಾಗಿ ನಿಂತು ಹೋರುವದಕ್ಕೆ ಸಾಮರ್ಥ್ಯವುಳ್ಳಂಥಾ ಬಿಲ್ಲುಗಾರನು ಲೋಕದಲ್ಲಿ ಉಂಟೆ ?' ಅಂದನು. ಧೃತರಾಷ್ಟ್ರನು ದುರ್ಯೋಧನನನ್ನು ಕುರಿತು 'ಎಲೈ ಮಗನೆ, ಧನಂಜಯ ಸಮಾನವಿಕ್ರಮನಾಗಿ ಮಹಾವೀರನಾದ ಕಾರ್ತವೀರ್ಯಾರ್ಜುನನ ಮಹತ್ವವನ್ನು ನನಗೆ ತಿಳುಹಿಸು' ಅಂದನು. ಸುಯೋಧನನು ಧೃತರಾಷ್ಟ್ರನನ್ನು ಕುರಿತು 'ಎಲೈ ತಂದೆಯೇ, ಬ್ರಹ್ಮದೇವನ ಹದಿನೈದನೇತರದಲ್ಲಿ ಹೇಹಯಾಧೀಶ್ವರನಾಗಿ ಶೌರ್ಯವೂ ಸಾವಿರ ಬಾಹುಗಳೂ ಉಂಟಾಗಿ ಧನುರ್ಧರಾಗ್ರೇಸರನಾಗಿ ಸ್ತೋತ್ರಕ್ಕೆ ಯೋಗ್ಯನಾದ ಕಾರ್ತವೀರ್ಯಾರ್ಜುನನೆಂಬ ಅರಸು ಒಬ್ಬನುಂಟು' ಎನಲು ಧೃತರಾಷ್ಟ್ರನು ದುರ್ಯೋಧನನನ್ನು ಕುರಿತು 'ಬ್ರಹ್ಮದೇವನು ಮೊದಲಾದ ಹದಿನೈದು ಸಂಖ್ಯೆಯುಳ್ಳ ಕಾರ್ತವೀರ್ಯಾರ್ಜುನನ ಪಿತಾಮಹರನ್ನು ಕ್ರಮವಾಗಿ ಅವರ ವೃತ್ತಾಂತಗಳೊಡನೆ ಹೇಳು.' ಅಂದನು.

“ ಆ ಬಳಿಕ ದುರ್ಯೋಧನನು ‘ ಎಲೈ ತಂದೆಯೇ, ಕಾರ್ತವೀರ್ಯನ ಮಹಾತ್ಮ್ಯವನ್ನು ಸವಿಸ್ತಾರವಾಗಿ ಹೇಳುತಲಿದ್ದೇನೆ ಕೇಳು : ಜಗತ್ಕಾರಣಭೂತನಾದ ನಾರಾಯಣನ ದೆಸೆಯಿಂದ ಲೋಕಪಿತಾಮಹನಾದ ಬ್ರಹ್ಮದೇವನು ಹುಟ್ಟಿದನು ; ಆತನ ದೆಸೆಯಿಂದ ಅತ್ರಿಮಹಾಮುನೀಶ್ವರನು ಹುಟ್ಟಿದನು ; ಆತನ ದೆಸೆಯಿಂದ ಚಂದ್ರನು ಹುಟ್ಟಿದನು ; ಚಂದ್ರನಿಗೆ ಬುಧನು, ಬುಧನಿಗೆ ಪುರೂರವನು, ಪುರೂರವನಿಗೆ ಆಯುವು, ಆಯುವಿಗೆ ನಹುಷನು, ನಹುಷನಿಗೆ ಯಯಾತಿಯು, ಯಯಾತಿಗೆ ಯದುವು, ಯದುವಿಗೆ ಸಹಸ್ರಾಜನು, ಸಹಸ್ರಾಜನಿಗೆ ಚಕ್ರದಾಸನು, ಚಕ್ರದಾಸನಿಗೆ ಹೇಹಯನು, ಹೇಹಯನಿಗೆ ಧರ್ಮನೇತ್ರನು, ಧರ್ಮನೇತ್ರನಿಗೆ ಕಾರ್ತನು, ಕಾರ್ತನಿಗೆ ಕೃತವೀರ್ಯನು, ಕೃತವೀರ್ಯನಿಗೆ ಅರ್ಜುನನು, ಹುಟ್ಟಿದರು ; ಅರ್ಜುನನು ಅತ್ರಿಯಮಗನಾದ ದತ್ತಾತ್ರೇಯನನ್ನು ಕುರಿತು ಅತಿಘೋರವಾದ ತಪಸ್ಸನ್ನು ಹತ್ತು ಸಾವಿರ ವರುಷಗಳು ಮಾಡಲು ಆ ಮುನೀಶ್ವರನು ಪ್ರಸನ್ನನಾಗಿ ಸಾವಿರ ಭುಜಗಳು ಉಂಟಾಗುವದು, ಸಕಲ ಶತ್ರುಸಂಹಾರವನ್ನು ಮಾಡಿ ನೀತಿಮಾರ್ಗದಿಂದ ಸಕಲ ಭೂಮಂಡಲವನ್ನಾಳುವದು, ಅಧರ್ಮಪ್ರವರ್ತಕರಾದ ಜನರನ್ನು ಶಿಕ್ಷಿಸಿ ಧರ್ಮಪ್ರವರ್ತಕರಾಗಿ ಮಾಡುವ ಸಾಮರ್ಥ್ಯವುಂಟಾಗುವದು, ತನಗಿಂತಲೂ ಪರಾಕ್ರಮಶಾಲಿಯಾದ ಪುರುಷನಿಂದ ಯುದ್ಧದಲ್ಲಿ ಬೀಳುವದು, ಎಂಬ ನಾಲ್ಕು ವರಗಳನ್ನು ಕೊಟ್ಟನು ; ಆ ಕೃತವೀರ್ಯನ ಮಗನು ಯುದ್ಧಸನ್ನದ್ಧನಾಗಿ ಹೊರಟಲ್ಲಿ ದಿವ್ಯರಥಧ್ವಜಗಳೂ ಸಾವಿರ ಬಾಹುಗಳೂ ಉಂಟೆಂದು ಕೇಳಿಯುಂಟು ; ಅಂಥಾ ಮಹಾಬಲಸಂಪನ್ನನಾದ ಕಾರ್ತವೀರ್ಯಾರ್ಜುನನು ಸಪ್ತದ್ವೀಪಸಹಿತವಾಗಿ ಚತುಸ್ಸಮುದ್ರಪರಿವೇಷ್ಟಿತವಾದ ಭೂಮಂಡಲದಲ್ಲಿರುವ ಅರಸುಗಳನ್ನು ನಿಜಭುಜಬಲಗಳಿಂದ ಜಯಿಸಿ ಅನೇಕ ಯಾಗಗಳನ್ನು ಮಾಡಿದನು.’ ”

## ೧೯ನೇ ಅಧ್ಯಾಯ.—ಅನುದ್ಯೂತಪರ್ವ ಶೇಷ.

“ ‘ ಕೇಳು ದೊರೆಯೇ, ಒಂದು ದಿವಸದಲ್ಲಿ ಮಾಹಿಷ್ಮತೀಪುರಾಧೀಶ್ವರನಾದ ಕಾರ್ತವೀರ್ಯಾರ್ಜುನನು ಸ್ತ್ರೀಜನಸಮೇತನಾಗಿ ನರ್ಮದಾನದಿಗೆ ಹೋಗಿ ಜಲಕ್ರೀಡಾಸಮಾಸಕ್ತನಾಗಿರುವ ಸಮಯದಲ್ಲಿ ಲಂಕಾಪುರಾಧೀಶ್ವರನಾದ ರಾವಣನು ನಿಖಿಲರಾಕ್ಷಸ ಸೇನಾಸಮೇತನಾಗಿ ಆ ಪ್ರದೇಶಕ್ಕೆ ಹೋಗಿ ನರ್ಮದಾಮಧ್ಯದಲ್ಲಿ ಜಲಕ್ರೀಡೆಯನ್ನು ಆಡುತಲಿರುವ ಕಾರ್ತವೀರ್ಯಾರ್ಜುನನನ್ನು ನೋಡಿ ವರದಾನಗರ್ವಿತನಾಗಿ ಕ್ರೋಧಾವೇಶದಿಂದ ದೇವೇಂದ್ರನ ಮೇಲೆ ಕಾಣಿಸಿಕೊಳ್ಳುವ ಶಂಬರಾಸುರನೋಪಾದಿಯಲ್ಲಿ ಆತನಮೇಲೆ ಕಾಣಿಸಿಕೊಂಡನು ; ಆ ಅರ್ಜುನನು ಆತನನ್ನು ನೋಡಿ ಮುಹೂರ್ತ ಮಾತ್ರವು ಯುದ್ಧಮಾಡಿ ತನ್ನ ಭುಜಬಲದಿಂದ ಆ ರಾವಣಾಸುರನನ್ನು ಹಿಡಿದು ಧನುಸ್ಸಿನ ಹೆದೆಯಿಂದ ಆತನ ಕೈಗಳನ್ನು ಕಟ್ಟಿ ತನ್ನ ಪಟ್ಟಣಕ್ಕೆ ಹಿಡಿದುಕೊಂಡು ಹೋದನು. ಮತ್ತೊಂದು ದಿವಸದಲ್ಲಿ ಧನುರ್ವಿದ್ಯಾ ವಿಶಾರದನಾದ ಅರ್ಜುನನು ಸಮುದ್ರತೀರಕ್ಕೆ ಹೋಗಿ ತೀಕ್ಷ್ಣವಾದ ಬಾಣಪರಂಪರೆಗಳಿಂದ ಸಮುದ್ರವನ್ನು ಮುಚ್ಚಲು ಸಮುದ್ರನು ಬಂದು ಆ ಕಾರ್ತವೀರ್ಯಾರ್ಜುನನಿಗೆ ನಮಸ್ಕಾರವನ್ನು ಮಾಡಿ ಕೈಮುಗಿದು ‘—ಎಲೈ ವೀರಾಗ್ರೇಸರನೆ, ನನ್ನ ಮೇಲೆ ಯಾಕೆ ಬಾಣವನ್ನು ಪ್ರಯೋಗಿಸಬೇಕು ; ನನ್ನನ್ನು ಆಶ್ರಯಿಸಿರುವ ಸಕಲ ಭೂತಗಳೂ ನಿನ್ನ ಬಾಣಾಗ್ನಿಜ್ವಾಲೆಗಳಿಂದ ದಹಿಸಲ್ಪಡುತಲಿವೆ : ಆದ್ದರಿಂದ ನನಗೆ ಅಭಯವನ್ನು ಕೊಟ್ಟು ಸಂರಕ್ಷಿಸು ; ನನ್ನಿಂದ ಆಗತಕ್ಕಂಥಾ ಕಾರ್ಯವೇನು ವಿವರಿಸು—’ ಎನಲು ಕಾರ್ತವೀರ್ಯಾರ್ಜುನನು ಸಮುದ್ರನನ್ನು ಕುರಿತು ‘—ನಾನು ಯುದ್ಧಾರ್ಥವಾಗಿ ನಿನ್ನ ಸಮೀಪಕ್ಕೆ ಬಂದೆನು ; ನನ್ನ ಕೂಡೆ ಯುದ್ಧಕ್ಕೆ ಬಾ ; ಹಾಗೆ ಬಾರದೆ ಇದ್ದರೆ ನಿನ್ನನ್ನು ಬಾಧಿಸದೆ ಬಿಡುವದಿಲ್ಲಾ—’ ಅಂದನು. ಆ ಸಮುದ್ರನು ‘—ಭೂಲೋಕದಲ್ಲಿ ಮಹಾಬಲಪರಾಕ್ರಮಶಾಲಿಗಳಾದ ಅರಸುಗಳಿದ್ಧಾರೆ ; ಅವರ ಕೂಡೆ ಯುದ್ಧವನ್ನು ಮಾಡು—’ ಅಂದನು. ಕಾರ್ತವೀರ್ಯಾರ್ಜುನನು ‘—ದಿವ್ಯಾಯುಧಗಳನ್ನು ಧರಿಸಿ ನನ್ನ ಕೂಡೆ ಯುದ್ಧವನ್ನು ಮಾಡುವಂಥಾ ಪುರುಷನಿದ್ದರೆ ತಿಳುಹಿಸು—’ ಎನಲು ಸಮುದ್ರನು ‘—ತೇಜೋವಿರಾಜಮಾನನಾದ ಜಮದಗ್ನಿಯೆಂಬ ಒಬ್ಬ ಮುನೀಶ್ವರನುಂಟು ; ಆತನ ಕುಮಾರನು ಯುದ್ಧಮಾಡುವದಕ್ಕೆ ಸಮರ್ಥನು ; ಅಲ್ಲಿಗೆ ಹೋಗು—’ ಅಂದನು. ಕಾರ್ತವೀರ್ಯಾರ್ಜುನನು

'—ಮೊದಲು ನಾರದನಿಂದಲೂ ಹೀಗೆ ಕೇಳಿದ್ದೇನೆ—' ಎಂದು ಧನುರ್ಧರನಾಗಿ ರೋಷಭೀಷಣಾಕಾರನಾಗಿ ಸಕಲ ಸೇನಾಸಮೇತನಾಗಿ ಜಮದಗ್ನಿ ಮುನೀಶ್ವರನ ಆಶ್ರಮಕ್ಕೆ ಹೋಗಿ ಅವರಿಗೆ ಕೋಪಕಾರಣಗಳಾದ ಕೃತ್ಯಗಳನ್ನು ಮಾಡುತಿದ್ದನು. ಅದನ್ನು ನೋಡಿ ಪರಶುರಾಮನು ಕೋಪಾವೇಶದಿಂದ ಯಜ್ಞೇಶ್ವರನೋಪಾದಿಯಲ್ಲಿ ಉರಿಯುತ ಆತನ ಸರ್ವಸೈನ್ಯವನ್ನೂ ದಹಿಸಬೇಕೆಂದೆಣಿಸಿ ಸೂರ್ಯನೋಪಾದಿಯಲ್ಲಿ ಹೊರಟು ಕಾರ್ತವೀರ್ಯಾರ್ಜುನನಮೇಲೆ ಕಾಣಿಸಿಕೊಂಡನು. ಹೀಗೆ ಆ ಯೋಧಶ್ರೇಷ್ಠರೀರ್ವರೂ ವೃತ್ರದೇವೇಂದ್ರರ ಚಂದದಿಂದ ನೋಡುವಂಥಾವರಿಗೆ ಆಶ್ಚರ್ಯಕರವಾಗಿ ದಾರುಣವಾದ ಯುದ್ಧವನ್ನು ಮಾಡುವಲ್ಲಿ ಪರಶುರಾಮನು ಕೋಪಾವೇಶದಿಂದ ಪರಶುವನ್ನು ತೆಗೆದು ಬಹು ಶಾಖಾಸಮೇತವಾದ ವೃಕ್ಷವನ್ನು ಕಡಿಯುವ ತೆರದಿಂದ ಅರ್ಜುನನನ್ನು ಖಂಡಿಸಿದನು. ಈಪ್ರಕಾರದಿಂದ ಮೃತನಾದ ಕಾರ್ತವೀರ್ಯನನ್ನು ನೋಡಿ ಅವನ ಬಂಧುಗಳು ಖಡ್ಗಶಕ್ತಿ ತೋಮರ ಮೊದಲಾದ ಆಯುಧಗಳನ್ನು ಧರಿಸಿ ಪರಶುರಾಮನಮೇಲೆ ಒಮ್ಮಡಿಯಾಗಿ ಕಾಣಿಸಿಕೊಂಡರು, ಆತನು ದಿವ್ಯ ರಥಾರೂಢನಾಗಿ ಮಹಾಕೋದಂಡವನ್ನು ಭುಜದಂಡದಲ್ಲಿ ಅಮರಿಸಿ ತನ್ನ ದಿವ್ಯಾಸ್ತ್ರಗಳು ಭೂನಭೋಂತರಗಳನ್ನು ವ್ಯಾಪಿಸಲು ಸಮಸ್ತರಾದ ಅರಸುಗಳನ್ನು ಪಿಟ್ಟಕ್ಕಿದನು. ಅವರು ಭಯಭ್ರಾಂತರಾಗಿ ಸಿಂಹಕ್ಕೆ ಭಯಪಟ್ಟು ಓಡುವ ಕ್ಷುದ್ರಮೃಗಗಳೋಪಾದಿಯಲ್ಲಿ ಓಡಿ ಗಿರಿದುರ್ಗಗಳನ್ನು ಶೇರಿಕೊಂಡಿದ್ದರು ; ಆ ದುರ್ಗಭೂಮಿಗಳಲ್ಲಿ ಬ್ರಾಹ್ಮಣರಿಲ್ಲದ್ದರಿಂದ ಆ ಅರಸುಮಕ್ಕಳಿಗೆ ಉಪನಯನಾದಿ ಕೃತ್ಯಗಳನ್ನು ಮಾಡುವದಕ್ಕೆ ದಿಕ್ಕಿಲ್ಲದೇ ಶಬರ ದ್ರಾವಿಡ ಕಾಶ ಪುಂಡ್ರಜಾತಿಗಳಲ್ಲಿ ಬೆರದು ಕ್ಷತ್ರಧರ್ಮಬಹಿಷ್ಕೃತರಾಗಿ ಶೂದ್ರತ್ವವನ್ನೈದಿದರು ; ಮತ್ತೂ ಪರಶುರಾಮನು ಕ್ಷತ್ರಿಯರಷ್ಟುಮಂದಿಯನ್ನೂ ಹುಡಿಕಿ ಇಪ್ಪತ್ತೊಂದುಸಾರಿ ಸಂಹರಿಸಿದನು. ಆ ಬಳಿಕ ಅಶರೀರವಾಣಿ '—ಎಲೈ ಭೃಗುನಂದನನೆ, ಬ್ರಾಹ್ಮಣನಾದ ನೀನು ಈ ಕ್ರೂರಕರ್ಮವನ್ನು ಬಿಟ್ಟು ಶಮಪ್ರಧಾನನಾಗಿರು ; ಈ ಕ್ಷತ್ರಿಯ ವಧೆಯನ್ನು ಬಾರಿಬಾರಿಗೂ ಮಾಡುವದು ಉಚಿತವಲ್ಲಾ—' ಎಂದು ಕೇಳಲ್ಪಡಲು ಆತನ ಸನ್ನಿಧಾನಕ್ಕೆ ಋಚೀಕನು ಮೊದಲಾದ ಪಿತೃದೇವತೆಗಳು ಬಂದು '—ಎಲೈ ಭೃಗುನಂದನನೆ, ನೀನು ಮಹಾನುಭಾವನು ; ಇನ್ನುಮೇಲೆ ಕೋಪವನ್ನು ಬಿಟ್ಟುಬಿಡು—' ಅಂದರು. ಪರಶುರಾಮನು ತನ್ನ ತಂದೆಯ ಮರಣವು ; ಮನಸ್ಸಿಗೆ ಕ್ಲೇಶವನ್ನು ಮಾಡುತ್ತಿರಲು ಅವರನ್ನು ನೋಡಿ '—ನನ್ನನ್ನು ತಡೆಯುವದು ಯುಕ್ತವಲ್ಲಾ ; ಸುಮ್ಮನೇ ಇರಿ—' ಅಂದನು. ಆ ಪಿತೃದೇವತೆಗಳು ಪರಶುರಾಮನನ್ನು ನೋಡಿ '—ಸಕಲ ಕ್ಷತ್ರಿಯ ಸಂಹಾರವನ್ನು ಯಾಕೆ ಮಾಡಬೇಕು ? ಬ್ರಾಹ್ಮಣನಾದ ನೀನು ಹಿಂಸೆಯನ್ನು ಮಾಡುವದು ಯುಕ್ತವಲ್ಲ—' ಅಂದರು. ಅವರ ವಚನಗಳನ್ನು ಕೇಳಿ ಪರಶುರಾಮನು ಕೋಪವನ್ನು ಬಿಟ್ಟು ಅಶ್ವಮೇಧ ಸಹಸ್ರವನ್ನು ನರಮೇಧಶತವನ್ನು ಮಾಡಿ ಮತ್ತೂ ಅನೇಕ ಯಾಗಗಳನ್ನು ಮಾಡಿ ಚತುಸ್ಸಮುದ್ರ ಪರಿವೇಷ್ಟಿತವಾದ ಭೂಮಂಡಲವನ್ನು ಕಾಶ್ಯಪನಿಗೆ ಕೊಟ್ಟನು. ಅಂಥಾ ಭಾರ್ಗವರಾಮನಿಗೂ ಕಾರ್ತವೀರ್ಯಾರ್ಜುನನಿಗೂ ಸಮಾನವಾದ ಬಲಪರಾಕ್ರಮವುಳ್ಳ ಅರ್ಜುನನನ್ನು ಯುದ್ಧದಲ್ಲಿ ಜಯಿಸುವದಕ್ಕೆ ದೇವೇಂದ್ರನಿಗಾದರೂ ಶಕ್ಯವಲ್ಲಾ ' ಎಂದು ದುರ್ಯೋಧನನು ಧೃತರಾಷ್ಟ್ರನಿಗೆ ಹೇಳಿದನು.''

## ೧೧೦ ನೇ ಅಧ್ಯಾಯ.—ಅನುದ್ಯೂತಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ದುರ್ಯೋಧನನು ಧೃತರಾಷ್ಟ್ರನನ್ನು ನೋಡಿ ' ಮತ್ತೂ ಆ ಧನುರ್ಧರಶ್ರೇಷ್ಠನಾದ ಅರ್ಜುನನು ಮೊದಲು ಮಾಡಿದ ಅತ್ಯದ್ಭುತವಾದ ಸಾಹಸಗಳನ್ನು ಹೇಳುತಲಿದ್ದೇನೆ ಕೇಳು : ದ್ರೌಪದೀ ಸ್ವಯಂವರ ಸಮಯದಲ್ಲಿ ಸಕಲರಾದ ಅರಸುಗಳೂ ದ್ರುಪದರಾಯನ ಪಟ್ಟಣಕ್ಕೆ ಬಂದಲ್ಲಿ ಮಿಕ್ಕಾದ ಅರಸುಗಳಿಗೆ ಅಸಾಧ್ಯವಾದ ಧನುಸ್ಸನ್ನು ಹೆದೆಯಲ್ಲೇರಿಸಿ, ಉದಕದಲ್ಲಿ ತೋರುತಲಿದ್ದ ಯಂತ್ರಮತ್ಸ್ಯವನ್ನು ನಿಮಿಷಾರ್ಧದಲ್ಲಿ ಕೆಡಹಿ, ದ್ರೌಪದೀಹಸ್ತದಲ್ಲಿದ್ದ ಸುವರ್ಣಮಾಲಿಕೆಯಿಂದ ಅಲಂಕೃತನಾದ ಅರ್ಜುನನನ್ನು ನೋಡಿ ರೋಷಾಕ್ರಾಂತ ಹೃದಯರಾಗಿ ನಾನಾ ದೇಶಗಳ ದೆಸೆಯಿಂದ ಬಂದಿದ್ದ ರಾಧೇಯನು ಮೊದಲಾದ ಅರಸುಗಳು ನಾ

ನಾವಿಧವಾದ ಆಯುಧಹಸ್ತರಾಗಿ ಯುದ್ಧವನ್ನು ಮಾಡಿದರು ; ಅರ್ಜುನನು ತೀಕ್ಷ್ಣವಾದ ಬಾಣಪರಂಪರೆಗಳಿಂದ ಕರ್ಣನು ಮೊದಲಾದವರನ್ನು ಕಂಗೆಡಿಸಿ ಸಕಲ ಕ್ಷತ್ರಿಯರನ್ನೂ ಜಯಿಸಿ (ಅಂಬೆಯನ್ನು ಅಪಹರಿಸಿ ತಂದ ಭೀಷ್ಮನ ತೆರದಿಂದ) ಅತಿಸೌಂದರ್ಯಶಾಲಿಯಾದ ದ್ರೌಪದಿಯನ್ನು ತಂದನು ; ಮತ್ತೂ ಆತನು ತೀರ್ಥಯಾತ್ರೆಯನ್ನು ಮಾಡಿದ ಸಮಯದಲ್ಲಿ ರೂಪುರೇಖಾ ಸಮನ್ವಿತೆಯಾದ ಉಲೂಪಿ ಎಂಬ ನಾಗಕನ್ಯೆಕೆಯನ್ನು ಸಕಲರಾದಂಥಾ ನಾಗೇಂದ್ರರು ಪ್ರಾರ್ಥಿಸಿಕೊಡಲು ಅವಳನ್ನು ಕರದುಕೊಂಡು ಗೋದಾವರಿ ಕಾವೇರಿ ಮೊದಲಾದ ನದಿಗಳಲ್ಲಿ ಸ್ನಾನವನ್ನು ಮಾಡಿ ಪಾಂಡ್ಯದೇಶಕ್ಕೆ ಹೋಗಿ ಪಾಂಡ್ಯರಾಯನ ಕನ್ಯೆಯಾದ ಚಿತ್ರಾಂಗದೆಯನ್ನು ಮದುವೆಯಾಗಿ ಸಂತೋಷಪಡುತ ದಕ್ಷಿಣ ಸಮುದ್ರದಲ್ಲಿ ಪಂಚಾಪ್ಸರೋವರಗಳಲ್ಲಿ ಸ್ನಾನವನ್ನು ಮಾಡಿ ಕೊಮಾರ ತೀರ್ಥಕ್ಕೆ ಹೋಗಿ ಮೊಸಳೆಗಳಾಗಿದ್ದ ಅಪ್ಸರಸ್ತ್ರೀಯರಿಗೆ ಶಾಪವಿಮೋಚನವನ್ನು ಮಾಡಿ ಕನ್ಯಾತೀರ್ಥಕ್ಕೆ ಹೋಗಿ ಅಲ್ಲಿಂದ ದ್ವಾರಕಾಪಟ್ಟಣಕ್ಕೆ ಹೋಗಿ ಕೃಷ್ಣನ ಅಪ್ಪಣೆಯಿಂದ ಸುಭದ್ರೆಯನ್ನು ಮದುವೇಮಾಡಿಕೊಂಡು ರಥವಲ್ಲಿರಿಸಿಕೊಂಡು ಬರುತ್ತಿದ್ದನು. ಆ ಸಮಯದಲ್ಲಿ ಬಹುಕೋಟ ಸಂಖ್ಯೆಯುಳ್ಳ ಯಾದವ ಶ್ರೇಷ್ಠರು ಚತುರಂಗ ಬಲ ಸಮೇತರಾಗಿ ಸಿಂಹವನ್ನು ಬೆನ್ನಟ್ಟುವ ಹುಲಿಗಳ ತೆರದಿಂದ ಪ್ರದ್ಯುಮ್ನ ಕೃತವರ್ಮ ಗದ ಸಾರಣ ಸಾತ್ಯಕಿ ಆಹುತ ಸಾಂಬ ಚಾರುದೇಷ್ಣ ವಿಡೂರಥನು ಮೊದಲಾದ ಯದುವೀರರು ಬಲರಾಮನನ್ನು ಮುಂದಿಟ್ಟುಕೊಂಡು ಕೃಷ್ಣನು ಒಬ್ಬನು ಹೊರತಾಗಿ ಮಿಕ್ಕಾದವರಷ್ಟೂ ಸುತ್ತಿಮುತ್ತಿಕೊಳ್ಳಲು, ಜಗದೇಕ ವೀರನಾದ ಅರ್ಜುನನು ಒಬ್ಬನೇ ಅಷ್ಟುಮಂದಿಗೂ ಆಶ್ಚರ್ಯಕರವಾಗಿ ಅತಿದಾರುಣವಾದ ಯುದ್ಧವನ್ನು ಮುಹೂರ್ತ ಮಾತ್ರವು ಮಾಡಿ ತನ್ನ ತೀಕ್ಷ್ಣವಾದ ಬಾಣಪರಂಪರೆಗಳಿಂದ ಅಷ್ಟುಮಂದಿಯನ್ನು ಸೋಲಿಸಿ ಸುಭದ್ರಾ ಸಮೇತನಾಗಿ ಇಂದ್ರಪ್ರಸ್ಥ ಪಟ್ಟಣಕ್ಕೆ ಬಂದನು.' "

---

## ೧೧೧ ನೇ ಅಧ್ಯಾಯ.—ಅನುದ್ಯೂತಪರ್ವ ಶೇಷ.

"'ಎಲೈ ಧೃತರಾಷ್ಟ್ರ ಭೂಪತಿಯೇ, ಮತ್ತೂ ಅರ್ಜುನನಿಂದ ಮಾಡಲ್ಪಟ್ಟ ಸಾಹಸಗಳನ್ನು ಹೇಳುತಲಿದ್ದೇನೆ ಕೇಳು : ಅರ್ಜುನನು ಯಜ್ಞೇಶ್ವರನಿಂದ ಪ್ರಾರ್ಥಿತನಾಗಿ ಖಾಂಡವವನವನ್ನು ಯಜ್ಞೇಶ್ವರನಿಗೆ ಆಹುತಿಯಾಗಿ ಕೊಟ್ಟು ಆ ಯಜ್ಞೇಶ್ವರನು ಮಹಾಜ್ವಾಲಾಭೀಲನಾಗಿ ಆ ದೇವತಾವನವನ್ನು ದಹಿಸುವ ಸಮಯದಲ್ಲಿ ದಿವ್ಯರಥಾರೂಢನಾಗಿ ಮಹಾಕಾರ್ಮುಕವನ್ನು ಶಸ್ತ್ರಾಸ್ತ್ರಗಳನ್ನೂ ಧರಿಸಿ ತನ್ನ ಪರಾಕ್ರಮದಿಂದ ಪರಿಪಾಲಿಸುತ್ತಿದ್ದನು. ದೇವೇಂದ್ರನು ಮೇಘಗಳನ್ನು ಕಳುಹಿಸಲು ಅವು ಸಿಬಿಡವಾದ ವರ್ಷಧಾರೆಗಳನ್ನು ಒಮ್ಮಿಡಿಯಾಗಿ ಸುರಿದವು ; ಅರ್ಜುನನು ತೀಕ್ಷ್ಣವಾದ ಬಾಣಪರಂಪರೆಗಳಿಂದ ಆ ಮೇಘಗಳನ್ನು ಹಾರಿಸಿದನು. ಆಗ ರೋಷಭೀಷಣಾಕಾರಿಯಾಗಿ ಐರಾವತವೆಂಬ ಆನೆಯನ್ನೇರಿ ಸಕಲ ದಿಕ್ಪಾಲಕರು ರುದ್ರರು ವಸುಗಳು ಅಶ್ವಿನೀದೇವತೆಗಳು ಮರುತ್ತುಗಳು ಆದಿತ್ಯರು ವಿಶ್ವೇದೇವತೆಗಳು ಗಂಧರ್ವರು ಮತ್ತೂ ಮಿಕ್ಕಾದ ಸಕಲ ದೇವತಾ ಸಮೂಹಗಳು ಶಸ್ತ್ರಾಸ್ತ್ರಗಳು ಮೊದಲಾದ ಯುದ್ಧಸಾಧನಗಳನ್ನು ಧರಿಸಿ ತನ್ನನ್ನು ಸುತ್ತಿಕೊಂಡು ಬರಲು, ಪಾರ್ಥನನ್ನು ಯುದ್ಧದಲ್ಲಿ ಕೊಂದು ಖಾಂಡವವನ ಸಂರಕ್ಷಣವನ್ನು ಮಾಡಬೇಕೆಂದೆಣಿಸಿ ಇಂದ್ರನು ಬಂದನು ; ಆ ಸಮಯದಲ್ಲಿ ಪ್ರಳಯಕಾಲದಲ್ಲಿ ತೋರುವ ದುರ್ನಿಮಿತ್ತಗಳು ಅನೇಕವಾಗಿ ತೋರಿದವು ; ಅವನ್ನೂ ಗಣನೆಮಾಡದೆ ದೇವೇಂದ್ರನ ಸೈನ್ಯವು ಶೌರ್ಯಧುರ್ಯನಾದ ಅರ್ಜುನನಮೇಲೆ ಕಾಣಿಸಿಕೊಳ್ಳಲು ಆತನು ಸ್ವಲ್ಪವಾದರೂ ಚಲಿಸದೆ ತನ್ನ ಧನುಸ್ಸಿನಿಂದ ಬಿಡಲ್ಪಟ್ಟ ಪ್ರಚಂಡಬಾಣಗಳಿಂದ ದೇವೇಂದ್ರನು ಮೊದಲಾದ ಸಕಲ ದೇವತೆಗಳನ್ನೂ ಮುಚ್ಚಿದನು ; ಅವರು ಅನೇಕ ಪ್ರಕಾರವಾಗಿ ಶಸ್ತ್ರಾಸ್ತ್ರ ವರ್ಷಗಳನ್ನು ಸುರಿಯಲು ಆತನು ಗಾಂಡೀವದಿಂದ ಬಿಡಲ್ಪಟ್ಟ ಬಾಣಪರಂಪರೆಗಳಿಂದ ಅವರ ಬಾಣಗಳಷ್ಟನ್ನೂ ಖಂಡಿಸಿದನು. ಮತ್ತೂ ಕೋಪದಿಂದ ದೇವತೆಗಳು ನಾನಾಪ್ರಕಾರವಾದ ಖಡ್ಗ ಮೊದಲಾದ ಆಯುಧಗಳನ್ನು ಪ್ರಯೋಗಿಸಲು ಅರ್ಜುನನು ಆ ಆಯುಧಗಳಷ್ಟನ್ನೂ ತನ್ನ ತೀಕ್ಷ್ಣವಾದ ಬಾಣಗ

ಳಿಂದ ಹಿಂಡಿಸಿ ಗಾಂಡೀವವನ್ನು ಬಗ್ಗಿಸಿ ಅತಿತೀಕ್ಷ್ಣವಾದ ಬಾಣಸಮೂಹಗಳಿಂದ ದೇವತಾ ಸೈನ್ಯಕ್ಕೆ ದೈನ್ಯವನ್ನು ಕಲ್ಪಿಸಿದನು. ಸಮರ ದುರ್ಜಯನಾದ ಅರ್ಜುನನ ಬಾಣಗಳನ್ನು ಸೈರಿಸಲಾರದೆ ಅತಿಶ್ರಾಂತರಾಗಿ ಐರಾವತಾರೂಢನಾದ ದೇವೇಂದ್ರನನ್ನು ಬಿಟ್ಟು ಏಕಾದಶ ರುದ್ರರೂ ಗಂಧರ್ವರೂ ಮೂಡಣ ಮುಖವಾಗಿ ಓಡಲೂ ಮರುದ್ಗಣಗಳೂ ದಕ್ಷಿಣಮುಖವಾಗಿ ಓಡಲೂ ವಸುಗಳು ಅಶ್ವಿನೀದೇವತೆಗಳು ಪಶ್ಚಿಮದಿಗ್ಭಾಗಕ್ಕೆ ಹೋಗಲೂ ಆದಿತ್ಯರು ವಿಶ್ವೇದೇವತೆಗಳು ಭಯಭ್ರಾಂತರಾಗಿ ಉತ್ತರದಿಕ್ಕಿಗೆ ಹೋಗಲು, ಬಾರಿ ಬಾರಿಗೂ ಅರ್ಜುನನ ಬಾಣಗಳ ಚುರುಕನ್ನು ಮನಸ್ಸಿನಲ್ಲಿ ಸ್ಮರಿಸುತ ತಿರಿಗಿ ನೋಡದೆ ಸಾಧ್ಯರು ಉಪರಿಲೋಕಕ್ಕೆ ಓಡಿದರು. ಈ ಪ್ರಕಾರದಿಂದ ದೇವತಾ ಸೈನ್ಯವು ದೈನ್ಯವನ್ನೈದಿ ಎಲ್ಲಿ ನೋಡಿದರೂ ಧನುರ್ಧರನಾದ ಅರ್ಜುನನು ತೋರಲು, ಭಯಪಟ್ಟು ನಾಲ್ಕು ದಿಕ್ಕುಗಳಲ್ಲಿ ಕೆದರಿ ಓಡಿಹೋದರು. ಬಳಿಕ ದೇವೇಂದ್ರನು ಅತ್ಯಂತ ಕೋಪೋದ್ದೀಪಿತನಾಗಿ ಹೇರಳ ಶರಾಸನಗಳಿಂದ ವೀರಾಗ್ರೇಸರನಾದ ಅರ್ಜುನನನ್ನು ನೋಯಿಸಲು, ಆತನು ತೀಕ್ಷ್ಣವಾದ ಬಾಣಪರಂಪರೆಗಳಿಂದ ದೇವೇಂದ್ರನನ್ನು ನೋಯಿಸಿದನು. ದೇವೇಂದ್ರನು ದುರ್ಧರ್ಷವಾದ ಶಿಲಾವರ್ಷವನ್ನು ಸುರಿಯಿಸಲು, ಅರ್ಜುನನು ಚುರುಕಾದ ಬಾಣಗಳಿಂದ ಕಲ್ಲುಗಳನ್ನು ಪುಡಿಮಾಡಿದನು. ಕ್ರೋಧಾವಿಷ್ಟ ಹೃದಯನಾಗಿ ಪಾಕಶಾಸನನು ಕಾನನ ಸಮೇತವಾದ ಒಂದು ಪರ್ವತವನ್ನು ಎರಡು ಬಾಹುಗಳಿಂದ ಕಿತ್ತು ಆತನನ್ನು ಕೊಲ್ಲಬೇಕೆಂದು ಪ್ರಯೋಗಿಸಲು, ಅರ್ಜುನನು ವಜ್ರಸಂಕಾಶಗಳಾಗಿ ವಹ್ನಿಜ್ವಾಲೋಪಮಾನಗಳಾದ ಬಾಣಗಳಿಂದ ಬೆಟ್ಟವನ್ನು ಸಾವಿರಪಾಲಾಗಿ ಖಂಡಿಸಿ ಮತ್ತೂ ಆ ದೇವೇಂದ್ರನ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಲು, ದೇವೇಂದ್ರನು ಲೋಕೈಕ ಪರಾಕ್ರಮಶಾಲಿಯಾದ ಅರ್ಜುನನನ್ನು ಯುದ್ಧದಲ್ಲಿ ಜಯಿಸುವದಕ್ಕೆ ಅಶಕ್ಯವೆಂದೆಣಿಸಿ ತನ್ನ ಕುಮಾರನಾದ ಅರ್ಜುನನ ಪರಾಕ್ರಮಕ್ಕೆ ಬಹು ಸಂತೋಷಪಟ್ಟನು. ಈ ಪ್ರಕಾರದಿಂದ ದೇವೇಂದ್ರನನ್ನು ಜಯಿಸಿ ವನದ್ವೆಸೆಯಿಂದ ತಪ್ಪಿಸಿಕೊಂಡು ಹೋಗುವ ರಾಕ್ಷಸೋರಗ ಪ್ರಮುಖರನ್ನು ಖಂಡಿಸಿ ಯಜ್ಞೇಶ್ವರನಲ್ಲಿ ಹಾಕುತಲಿದ್ದ ಅರ್ಜುನನ ಬಾಣಗಳನ್ನು ಸಹಿಸಿ ನಿಲ್ಲುವಂಥಾವನು ಒಬ್ಬನಾದರೂ ಇಲ್ಲದೇ ಹೋದನು. ಮೊದಲು ಅಮೃತಾಹರಣ ಸಮಯದಲ್ಲಿ ಗರುಡನು ದೇವೇಂದ್ರನು ಮೊದಲಾದ ದೇವತೆಗಳನ್ನು ಜಯಿಸಿದ ತೆರದಿಂದ ದೇವತೆಗಳನ್ನು ಜಯಿಸಿ ಖಾಂಡವವನವನ್ನು ಯಜ್ಞೇಶ್ವರನಿಗೆ ಆಹುತಿಯಾಗಿ ಕೊಟ್ಟು ಆತನ ಪ್ರಸಾದದಿಂದ ಅಪ್ರತಿಹತವಾದ ರಥವನ್ನೂ ಧ್ವಜವನ್ನೂ ಶ್ವೇತಾಶ್ವಗಳನ್ನೂ ಗಾಂಡೀವವನ್ನೂ ಅಕ್ಷಯ ತೂಣೀರಗಳನ್ನೂ ಮತ್ತೂ ಅನೇಕ ದಿವ್ಯಾಸ್ತ್ರಗಳನ್ನೂ ಪಡದು ಮಯನ ದೆಸೆಯಿಂದ ದಿವ್ಯ ಸಭೆಯನ್ನು ಪಡೆದು ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಿ ಜಗತ್ಪ್ರಸಿದ್ಧನಾದನು.' "

---

## ೧೧೨ನೇ ಅಧ್ಯಾಯ.—ಅನುದ್ಯೂತಪರ್ವಶೇಷ.

" ' ಎಲ್ಲೈ ಧೊರೆಯೆ, ಆ ಬಳಿಕ ಅರ್ಜುನನು ಉತ್ತರದಿಕ್ಕಿನಲ್ಲಿ ಹೋಗಿ ನಾನಾ ಪುರಪರ್ವತಗಳಿಂದ ಸಮೇತಗಳಾದ ಒಂಭತ್ತು ವರ್ಷಗಳನ್ನು ಜಯಿಸಿ ಜಂಬೂದ್ವೀಪವನ್ನು ಸ್ವವಶವಮಾಡಿಕೊಂಡು ಸಮಸ್ತರಾದ ಅರಸುಗಳಿಂದ ಅನೇಕ ಧನ ರತ್ನ ಕಾಂಚನಗಳನ್ನು ಕಪ್ಪವಾಗಿ ತೆಗದುಕೊಂಡು ಇಂದ್ರಪ್ರಸ್ಥಪಟ್ಟಣಕ್ಕೆ ಹೋಗಿ ಜ್ಯೇಷ್ಠನಾಗಿ ಮಹಾನುಭಾವನಾಗಿರುವ ಧರ್ಮರಾಯನಿಗೆ ತಾನು ತಂದ ಕಾಣಿಕೆಗಳನ್ನು ಕೊಟ್ಟು ರಾಜಸೂಯಯಾಗವನ್ನು ನೆರವೇರಿಸಿದನು ; ಈ ಪ್ರಕಾರದಿಂದ ಅತ್ಯದ್ಭುತಗಳಾಗಿ ಅತಿಮಾನುಷಗಳಾದ ಆತನ ಪರಾಕ್ರಮಗಳನ್ನು ಎಷ್ಟೆಂದು ವಿವರಿಸುವದು ! ದೇವದಾನವ ಯಕ್ಷೋರಗ ರಾಕ್ಷಸ ಪಿಶಾಚರೂ ಭೀಷ್ಮದ್ರೋಣಾದಿ ಮಹಾ ರಥಿಕರೂ ಮತ್ತೂ ಮಿಕ್ಕಾದ ಧನುರ್ಧರರೂ ಸಮಸ್ತರಾದ ಅರಸುಗಳೂ ಒಬ್ಬ ಅರ್ಜುನನಿಗೆ ಎದುರಾಗಿ ಯುದ್ಧರಂಗದಲ್ಲಿ ನಿಲ್ಲಲಾರದೆ ಇರುವದರಿಂದ ಮೂರುಲೋಕಗಳಲ್ಲಿಯೂ ಪಾರ್ಥನಿಗೆ ಸಮಾನವಾದವನುಂಟೆ ? ಇಂಥಾ ಪುರುಷಶ್ರೇಷ್ಠನಾದ ಅರ್ಜುನನನ್ನು ಮನಸ್ಸಿನಲ್ಲಿ ಯಾವಾಗಲೂ ಚಿಂತಿಸುತ ಭಯಭ್ರಾಂತನಾದ ನನಗೆ ಗಾಂಡೀವವನ್ನೂ ಶರಗಳನ್ನೂ

ಹಿಡಿದು ಸನ್ನದ್ಧನಾಗಿ ಪ್ರಳಯಕಾಲಾಗ್ನಿಯೋಪಾದಿಯಲ್ಲಿಯೂ ಪಾಶಹಸ್ತನಾದ ಯಮನೋಪಾದಿಯಲ್ಲಿಯೂ ಅರ್ಜುನನು ಎಲ್ಲಿ ನೋಡಿದರೂ ಅಲ್ಲಿ ಕಾಣಿಸುತಲಿಧಾನೆ ; ಈ ಪಟ್ಟಣವಷ್ಟು ಪಾರ್ಥನಮಯವಾಗಿ ತೋರುವದರಿಂದ ನನ್ನ ಮನಸ್ಸು ತಲ್ಲಣಿಸುತಲಿಧೆ ; ಸ್ವಪ್ನದಲ್ಲಿಯೂ ಆತನ ಆಕೃತಿಯೇ ತೋರುವದರಿಂದ ಭ್ರಾಂತನಾಗಿ ನಿದ್ರೆಯನ್ನು ಬಿಟ್ಟು ಭಯಪಡುತಲಿಧೇನೆ ; ಅಶ್ವಗಳು ಅರ್ಥವು ಆರ್ಜವವು ಇವು ಮೊದಲಾದ ಅಕಾರಮೊದಲಾಗಿರುವ ಹೆಸರುಗಳನ್ನು ಕೇಳಿ ಅರ್ಜುನನ ನಾಮಧೇಯ ಚಂದದಿಂದ ಮಹಾಭೀತಿಯಾಗುತಲಿಧೆ ; ಅರ್ಜುನನು ಒಬ್ಬನು ಹೊರತಾಗಿ ಮಿಕ್ಕಾದವರ ದೆಸೆಯಿಂದ ನನಗೆ ಭಯಲೇಶವಾದರೂ ಇಲ್ಲ : ಅರ್ಜುನನು ಪ್ರಹ್ಲಾದನನ್ನಾದರೂ ಬಲಿಯನ್ನಾದರೂ ಜಯಿಸುವದಕ್ಕೆ ಸಮರ್ಥನು ; ಅರ್ಜುನನೊಡನೆ ಯುದ್ಧಕ್ಕೆಹೋದರೆ ಸಕಲಜನ ಕ್ಷಯವೂ ಪರಾಜಯವೂ ಆಗುವದು. ನಾನು ಈರೀತಿಯಿಂದ ಅರ್ಜುನನ ಮಹಾತ್ಮ್ಯವನ್ನು ಕರತಳಾಮಲಕವಾಗಿ ತಿಳಿದವನಾದ್ದರಿಂದ ಪೂರ್ವದಲ್ಲಿ ದಂಡಕಾರಣ್ಯದಲ್ಲಿ ರಾಮಭದ್ರನ ಶೌರ್ಯಕ್ಕೆ ಭಯಪಟ್ಟು ತಿರುಗುತಲಿದ್ದ ಮಾರೀಚನೋಪಾದಿಯಲ್ಲಿ ದುಃಖಾರ್ತನಾಗಿ ಮುಂದೆ ಏನೂತೋರದೆ ಸುಮ್ಮನೇಯಿದೇನೆ ' ಅಂದನು.

" ಕೇಳು ಜನಮೇಜಯನೆ, ಆ ಬಳಿಕ ಧೃತರಾಷ್ಟ್ರನು ಸುಯೋಧನನನ್ನು ಕುರಿತು ' ಹೀಗೆ ಮೂರು ಲೋಕದಲ್ಲಿಯೂ ಅನಿವಾರ್ಯನಾದ ಅರ್ಜುನನ ಧೈರ್ಯಸ್ಥೈರ್ಯಗಳನ್ನು ನೀನು ತಿಳಿದಿರುವದರಿಂದ ಈಹೊತ್ತು ಮೊದಲುಗೊಂಡು ದ್ಯೂತವನ್ನೂ ಶಸ್ತ್ರಯುದ್ಧವನ್ನೂ ಪರುಷಭಾಷಣೆಗಳನ್ನೂ ಪರಿಹರಿಸಿ ಕಪಟವನ್ನು ಬಿಟ್ಟು ಅರ್ಜುನನೊಡನೆ ಸ್ನೇಹವನ್ನು ಮಾಡು ; ಅರ್ಜುನನಕೂಡೆ ಸ್ನೇಹಮಾಡಿದಂಥಾವನು ಮೂರುಲೋಕಗಳಲ್ಲಿಯೂ ನಿರ್ಭಯನಾಗಿರುವನು ; ಆದ್ದರಿಂದ ನನ್ನ ವಾಕ್ಯವನ್ನು ಕೇಳಿ ಆತನಕೂಡೆ ಸ್ನೇಹವನ್ನು ಮಾಡು' ಅಂದನು. ದುರ್ಯೋಧನನು ತಂದೆಯನ್ನು ಕುರಿತು ' ಎಲೈ ಕೌರವೇಂದ್ರನೆ, ದ್ಯೂತದಿಂದ ಅವರು ಪರಾಭವವನ್ನೈದಿದರು ; ಇನ್ನುಮೇಲೆ ನಮಗೂ ಅವರಿಗೂ ಸ್ನೇಹವು ಬರಲಾರದು ; ಉಪಾಯಾಂತರದಿಂದ ಅವರಿಗೆ ದೇಶತ್ಯಾಗವನ್ನು ಕಲ್ಪಿಸಿ ನಾವು ಶ್ರೇಯಸ್ಸನ್ನು ಪಡೆಯಬೇಕು ' ಎನಲು ಧೃತರಾಷ್ಟ್ರನು ಮಗನನ್ನು ಕುರಿತು ' ಎಲೈ ದುರ್ಯೋಧನನೆ, ನೀನು ಮೊದಲೆ ಅವರಲ್ಲಿ ಮಾಡಿದ ಕಪಟೋಪಾಯಗಳಷ್ಟು ನಿಷ್ಫಲಗಳಾದ್ದರಿಂದ ಅವರಲ್ಲಿ ನಿನ್ನ ಕಪಟೋಪಾಯಗಳು ಪ್ರವರ್ತಿಸಲಾರವು ; ನಿನಗೂ ನಿನ್ನ ವಂಶಕ್ಕೂ ಶ್ರೇಯಸ್ಸುಬರಲಾರದು ; ಯಾವರೀತಿಯಿಂದಲಾದರೂ ಅನುಜಬಂಧು ಸಮೇತನಾಗಿ ಅರ್ಜುನನಕೂಡೆ ಸ್ನೇಹವನ್ನು ಮಾಡು ' ಎಂದು ನುಡಿದನು. ಆತನ ವಾಕ್ಯವನ್ನು ಕೇಳಿ ದುರ್ಯೋಧನನು ಮುಹೂರ್ತಮಾತ್ರವು ತನ್ನಮನಸ್ಸಿನಲ್ಲಿ ವಿಚಾರಿಸಿ ವಿಪರೀತನಾಗಿ ಧೃತರಾಷ್ಟ್ರನನ್ನು ಕುರಿತು ' ಯಾವ ಉಪಾಯಗಳಿಂದಲಾದರೂ ಶತ್ರುಗಳನ್ನು ಸಂಹರಿಸಬೇಕೆಂದು ಬೃಹಸ್ಪತಿಯು ಮಹೇಂದ್ರನಿಗೆ ಹೇಳಿದ ವಾಕ್ಯಗಳನ್ನು ತಿಳಿದೂ ನೀನು ಹೀಗೆ ಹೇಳಬಹುದೆ ! ಪಾಂಡವರು ಸಕಲಸೈನ್ಯ ಸಮೇತರಾಗಿ ನಮ್ಮಮೇಲೆ ಕಾಣಿಸಿಕೊಳ್ಳುವದಕ್ಕಿಂತಲು ಮೊದಲೆ ನಾವು ಅವರ ಧನವಷ್ಟನ್ನೂ ಉಪಾಯದಿಂದ ಅಪಹರಿಸಿ ಅದರಿಂದ ಸಕಲರಾದ ಅರಸುಗಳನ್ನೂ ಸ್ವಾಧೀನ ಮಾಡಿಕೊಂಡು ಆ ಬಳಿಕ ನಾವು ಯುದ್ಧಕ್ಕೆ ತೊಡಗಿದರೆ ಲೋಕದಲ್ಲಿ ಕೀರ್ತಿಯನ್ನು ಪಡೆಯುವೆವು ; ಕೋಪದಿಂದ ತನ್ನನ್ನು ಕಚ್ಚುವದಕ್ಕೆ ಬಂದ ದುಷ್ಟ ಸರ್ಪಗಳನ್ನು ಸಂಹರಿಸದೆ ಕೊರಳಲ್ಲಿ ಸುತ್ತಿಕೊಳ್ಳುವ ಮೂಢರುಂಟೆ ! ಶಸ್ತ್ರಾಸ್ತ್ರಸಂಪನ್ನರಾಗಿ ದಿವ್ಯರಥಾರೂಢರಾಗಿ ಮಹಾ ಸರ್ಪಗಳೋಪಾದಿಯಲ್ಲಿ ಯುದ್ಧಸನ್ನದ್ಧರಾಗಿ ಬಂದ ಪಾಂಡವರು ನಿಶ್ಶೇಷವಾಗಿ ನಮ್ಮನ್ನು ಸಂಹರಿಸದೇ ಹೋಗುವರೆ ! ಪಾಂಡವರು ನಿನ್ನ ಅಪ್ಪಣೆಯನ್ನುತಕೊಂಡು ಪಟ್ಟಣಕ್ಕೆ ಹೋಗುವ ಸಮಯದಲ್ಲಿ ಅರ್ಜುನನು ಹುಬ್ಬುಗಳನ್ನು ಗಂಟುಹಾಕಿ ಗಾಂಡೀವವನ್ನು ತಕೊಂಡು ಬಾರಿಬಾರಿಗೂ ನಮ್ಮನ್ನುನೋಡಿ ನಿಟ್ಟುಸುರುಗಳನ್ನು ಬಿಡುತ ಹೋದನು ; ಮಹಾ ಬಲಶಾಲಿಯಾದ ಭೀಮಸೇನನು ಮೇರುಶಿಖರದೋಪಾಧಿಯಲ್ಲಿರುವ ಗದಾದಂಡವನ್ನು ಬಾಹುದಂಡದಿಂದ ಎತ್ತಿ ಹಲ್ಲು ಕಡಿಯುತ ರಥಾರೂಢನಾಗಿ ಹೋದನು ; ನಕುಲ ಸಹದೇವರು ಅಷ್ಟಚಂದ್ರ ಭೂಷಿತಗಳಾದ ಖೇಟಗಳನ್ನು ಧರಿಸಿ ಖಡ್ಗಗಳನ್ನುಝುಳಪಿಸುತ ಮಿಾಶೆಗಳನ್ನು ತೀಡಿ ಕೌರವರನ್ನು ದುರುದುರನೆ ನೋಡುತ ಹೊರಟುಹೋದರು ; ಈಪ್ರಕಾರದಿಂದ ಕುಪಿತಾತ್ಮರಾದ ಪಾಂಡವರು ಸೈನ್ಯ ಸಮೇತರಾಗಿ ತಿರಿಗಿಬಂದು ಯುದ್ಧ ಮಾಡುದಕ್ಕೆಣಿಸಿಧಾರೆ ;

ಸಂಶಯವಿಲ್ಲ ; ದ್ರೌಪದಿಯನ್ನು ನಾವುಮಾಡಿದ ಅಪರಾಧವನ್ನು ಭುಜಬಲಧುರಂಧರರಾದವರು ಯಾವ ರೀತಿಯಿಂದ ಸಹಿಸುವರು ! ನಾನು ಒಂದು ಉಪಾಯವನ್ನು ಯೋಚಿಸಿಧೇನೆ ಕೇಳು : ಪಾಂಡವರನ್ನು ಕರತರಿಸಿ ಯಾರು ಸೋಲು ತಲಿಧಾರೊ ಅವರು ಕೃಷ್ಣಾಜಿನಗಳನ್ನು ಧರಿಸಿ ಮಹಾರಣ್ಯಕ್ಕೆ ಹೋಗಿ ಹನ್ನೆರಡು ವರ್ಷಗಳಿದ್ದು ಆ ಬಳಿಕ ಒಂದು ವರುಷವು ಅಜ್ಞಾತವಾಸವನ್ನು ಮಾಡಬೇಕು ; ಆ ಸಮಯದಲ್ಲಿ ಇಂಥಾವರೆಂದು ಯಾರಿಗಾದರು ತಿಳಿದರೆ ತಿರಿಗಿ ಹನ್ನೆರಡು ವರ್ಷಗಳು ವನವಾಸವನ್ನು ಮಾಡಬೇಕೆಂದು ಪಂಥವನ್ನು ಹಾಕಿ ದ್ಯೂತವನ್ನು ಆಡಿಸಬೇಕು ; ಹಾಗೆ ಮಾಡಿದರೆ ಅಕ್ಷವಿದ್ಯಾವಿಶಾರದನಾದ ಶಕುನಿಯು ಯಾವರೀತಿಯಿಂದಲಾದರೂ ಜಯಿಸುವನು ; ಇದು ನಿಶ್ಚಯವು ; ಆಗ ದ್ಯೂತದಿಂದ ಪರಾಜಿತರಾದ ಪಾಂಡವರು ಅಡವಿಗೆ ಹೋಗುವರು ; ಆ ಹನ್ನೆರಡು ವರ್ಷಗಳೊಳಗೆ ಚತುರಂಗ ಬಲವನ್ನೂ ಮಿತ್ರವರ್ಗವನ್ನೂ ಹೆಚ್ಚಾಗಿ ಸಂಪಾದಿಸಿ ಅವರಿಗೆ ಅನೇಕ ಪ್ರಕಾರವಾಗಿ ಸತ್ಕಾರಗಳನ್ನು ಮಾಡುತ ನಾವು ಶತ್ರುಗಳಿಗೆ ಜಯಿಸುವದಕ್ಕೆ ಅಶಕ್ಯವಾಗಿ ಬಲವಂತರಾಗಿರಬಹುದು. ಪಾಂಡವರು ಹದಿಮೂರು ವರ್ಷಗಳು ವ್ರತಸಮಾಪ್ತಿಯನ್ನು ಮಾಡಿ ಆ ಬಳಿಕ ಬಂದರೆ ನಾವು ಜಯಿಸುವೆವು ; ಇಲ್ಲದಿದ್ದರೆ ಮತ್ತೊಂದುಪಾಯಾಂತರವಿಲ್ಲದೇ ಇಧೆ ' ಎಂದು ಹೇಳಿದನು. ಧೃತರಾಷ್ಟ್ರನು ದುರ್ಯೋಧನನನ್ನು ನೋಡಿ ' ಇಂದ್ರಪ್ರಸ್ಥಪಟ್ಟಣಕ್ಕೆ ಹೋಗುತಲಿರುವ ಕುಂತೀ ಪುತ್ರರನ್ನು ಕರತರಿಸಿ ಪುನಃದ್ಯೂತವನ್ನು ಆಡಿಸು ' ಅಂದನು. ಆತನ ವಾಕ್ಯವನ್ನು ಕೇಳಿ ದ್ರೋಣನು ಭೀಷ್ಮನು ಸೋಮದತ್ತನು ಅಶ್ವತ್ಥಾಮನು ವಿದುರನು ವೈಶ್ಯ ಸ್ತ್ರೀ ಪುತ್ರನಾದ ಯುಯುತ್ಸುವು ಭೂರಿಶ್ರವನು ವಿಕರ್ಣನು ಇವರಷ್ಟುಮಂದಿಯೂ ಇನ್ನು ಜೂಜನ್ನು ಬಿಟ್ಟು ಉಪಶಾಂತಿಯನ್ನು ವಹಿಸಬೇಕು ' ಅಂದರು. ಅದನ್ನು ಕೇಳದೆ ಪುತ್ರಸ್ನೇಹಮೋಹಿತನಾದ ಧೃತರಾಷ್ಟ್ರನು ಧರ್ಮನಿರತರಾಗಿ ದ್ಯೂತ ವಿಮುಖರಾದ ಕೌಂತೇಯರನ್ನು ಕರತರಿಸಿದನು.

"ಕೇಳು ಜನಮೇಜಯನೆ, ಆ ಸಮಯದಲ್ಲಿ ಧರ್ಮಶೀಲೆಯಾಗಿ ವ್ಯಾಕುಲಮಾನಸೆಯಾದ ಗಾಂಧಾರಿಯು ತನ್ನ ಕುಮಾರಕರಿಗೆ ಆಪತ್ತುಗಳು ಬಾರದಿರಬೇಕೆಂದೆಣಿಸಿ ಧೃತರಾಷ್ಟ್ರನನ್ನು ಕುರಿತು ' ಈ ದುರ್ಯೋಧನನು ಹುಟ್ಟಿದ ಸಮಯದಲ್ಲಿ ಇವನು ನರಿಯೋಪಾದಿಯಲ್ಲಿ ಕೂಗಿದವನಾದ್ದರಿಂದ ಈತನ ದೆಸೆಯಿಂದ ವಂಶಕ್ಷಯವು ಆಗತಕ್ಕಂಥಾದ್ದು ; ಈತನನ್ನು ಪರಿಹರಿಸಬೇಕೆಂದು ಬುದ್ಧಿಸಂಪನ್ನನಾದ ವಿದುರನು ಆಗಲೇ ಹೇಳಿದನು ; ಪೂಜ್ಯರಾಗಿ ಪ್ರಜ್ಞಾಶಾಲಿಗಳಾದವರ ವಾಕ್ಯಗಳಲ್ಲಿ ಅನಾದರಣೆಯನ್ನು ಮಾಡಿ ಕುಲಕ್ಕೆ ಹಾನಿಯನ್ನು ಮಾಡಿಕೊಳ್ಳಬ್ಯಾಡ ; ಉದಕವನ್ನು ನಿಲ್ಲಿಸುವದಕ್ಕಾಗಿ ಮಾಡಿದ ಕಟ್ಟೆಯನ್ನು ತೆಗದು ಹಾಕಿದ ಹಾಗೂ ಉಪಶಾಂತಿಯಾದ ಅಗ್ನಿಯನ್ನು ಪುನಃಪ್ರಜ್ವಲಿಸುವಹಾಗೆ ಮಾಡಿದಹಾಗೂ ಮನಸ್ಸಿನಲ್ಲಿ ಕಶ್ಮಲವನ್ನು ತೀರಿ ಉಪಶಾಂತರಾದ ಪಾಡವರಿಗೆ ತಿರಿಗಿ ಕೋಪವನ್ನು ಯಾತಕ್ಕೆ ಕಲ್ಪಿಸಬೇಕು ? ನೀನು ಅರಿಯದಿರುವ ಅರ್ಥವುಂಟೆ ? ಶಾಸ್ತ್ರವು ದುರ್ಬುದ್ಧಿಗಳಾದ ಜನಗಳಿಗೆ ಹಿತಾಹಿತಗಳನ್ನು ತಿಳುಹಿಸುವದಕ್ಕೆ ಸಮರ್ಥವೆ ? ನೀನು ದೊಡ್ಡವನಾಗಿಯೂ ಬಾಲಕರ ಬುದ್ಧಿಯನ್ನು ಅಂಗೀಕರಿಸಿ ನಿನ್ನ ಮಕ್ಕಳನ್ನು ಯಾಕೆ ಕೆಡಿಸುತ್ತಲಿದ್ದೀ ? ನೀನು ವೃದ್ಧನೆಂದು ಅನಮಾನಮಾಡದರೀತಿಗೆ ಸ್ವತಂತ್ರನಾಗಿ ಕಾರ್ಯತಂತ್ರಗಳನ್ನು ನಡಸು ; ಶಮವು ದಮವು ಉಂಟಾಗಿ ಇಷ್ಟುದಿವಸವೂ ಇದ್ದ ನಿನ್ನ ಹೃದಯವು ಅವರ ವಾಕ್ಯಗಳದೆಸೆಯಿಂದ ಯಾಕೆ ವಿಪರೀತವಾಯಿತು ? ಲೋಕದಲ್ಲಿ ಸತ್ಪುರುಷರೊಡನೆ ಸ್ನೇಹಾಮಾಡುದೇ ಯುಕ್ತವಾದ್ದರಿಂದ ಅವರ ಕೂಡೆ ಕಲಹದಿಂದ ಬರುವಂಥಾ ಫಲವು ಫಲವಾಗಲಾರದು ; ಅದರಿಂದ ಧರ್ಮವು ಸಹಾಯವಾಗುವದೆಂದೆಣಿಸಬ್ಯಾಡ ; ಸುಧರ್ಮದಿಂದ ಸಂಪಾದಿಸಲ್ಪಟ್ಟಂಥಾ ಐಶ್ವರ್ಯವನ್ನು ಪುತ್ರಪೌತ್ರಾದಿಗಳು ಅನುಭವಿಸುವರು ; ಇಂಥಾ ಕ್ರೂರಕೃತ್ಯದಿಂದ ಸಂಪಾದಿಸಲ್ಪಟ್ಟಂಥಾ ಐಶ್ವರ್ಯವು ನಿಲ್ಲಲಾರವು ' ಅಂದಳು. ಧೃತರಾಷ್ಟ್ರನು ಧರ್ಮಶೀಲೆಯಾದ ಗಾಂಧಾರಿಯನ್ನು ಕುರಿತು ' ಈ ಭರತವಂಶಕ್ಕೆ ವಿನಾಶವಾದರೂ ಆಗಲಿ ; ಅವರಿಗೆ ನಾನು ಬುದ್ಧಿಯನ್ನು ಹೇಳಲಾರೆ ; ಅವರಿಗೆ ತೋರಿದರೀತಿಗೆ ಮಾಡಿಕೊಳ್ಳಲಿ ' ಎಂದು ನುಡಿದು ಪ್ರಾತಿಕಾಮಿಯನ್ನು ಕರದು ತಿರಿಗೂ ದ್ಯೂತಕ್ಕೆ ಪಾಂಡವರನ್ನು ಕರಕೊಂಡು ಬರಲು ಕಳುಹಿಸಿದನು."

## ೧೧೩ ನೇ ಅಧ್ಯಾಯ.—ಅನುದ್ಯೂತಪರ್ವಶೇಷ.

" ಕೇಳು ಜನಮೇಜಯನೆ, ಈ ಪ್ರಕಾರದಿಂದ ಪ್ರಾತಿಕಾಮಿಯು ಧೃತರಾಷ್ಟ್ರನ ಅಪ್ಪಣೆಯಿಂದ ಇಂದ್ರಪ್ರ
ಸ್ಥಪಟ್ಟಣಕ್ಕೆ ಹೋಗುತ್ತಿರುವ ಧರ್ಮರಾಯನನ್ನು ಕುರಿತು ' ನಿಮ್ಮ ತಂದೆಯಾದ ಧೃತರಾಷ್ಟ್ರನು ತಿರಿಗೂ ದ್ಯೂ
ತವನ್ನಾಡುವದಕ್ಕೆ ನಿನ್ನನ್ನು ಕರಕೊಂಡು ಬರಹೇಳಿದನು ; ಸಭೆಯವರೆಲ್ಲರೂ ಬಂದು ಕಾದಿದ್ದಾರೆ '
ಅಂದನು. ಅವನ ವಾಕ್ಯವನ್ನು ಕೇಳಿ ಧರ್ಮರಾಯನು ' ಲೋಕದಲ್ಲಿ ಸಕಲಜನಗಳೂ ದೈವಪ್ರೇರಿತರಾಗಿ ಶು
ಭಾಶುಭಗಳನ್ನೈದುತಲಿರುವರು ; ಕುರುವೃದ್ಧನಾದ ಧೃತರಾಷ್ಟ್ರನು ಪುನಃದ್ಯೂತಕ್ಕೆ ಕರದರೆ ಈ ದ್ಯೂತವು
ಸಕಲ ಜನ ವಿನಾಶಕಾರಣವೆಂದು ತಿಳಿಯುವೆನು ; ಆದರೂ ಪರಿಹರಿಸಕೂಡುವದಿಲ್ಲ ' ಎಂದು ತನ್ನ ಮನಸ್ಸಿನಲ್ಲಿ ಊ
ಹಿಸುತ ಅನುಜಸಮೇತನಾಗಿ ಶಕುನಿಯ ಮಾಯಾಬಲವನ್ನು ತಿಳಿದಿದ್ದರೂ ಪುನಃದ್ಯೂತಕ್ಕೆ ನಿಮಿತ್ತವಾಗಿ ಹಸ್ತಿ
ನಾಪಟ್ಟಣಕ್ಕೆ ಬಂದು ಸಭಾಸ್ಥಳವನ್ನು ಪ್ರವೇಶಿಸಿದನು. ಸಭಾಸದರೂ ಸುಹೃಜ್ಜನಗಳೂ ತಿರಿಗಿಯೂ ದ್ಯೂ
ತವು ಬಂದರೆ ಆದರಿಂದ ಪ್ರಜಾಕ್ಷಯವಾಗುವದೆಂದು ಬಹುದುಃಖಪಟ್ಟರು. ಈ ಪ್ರಕಾರದಿಂದ ಬಂದ ಕೌಂತೇ
ಯರನ್ನು ನೋಡಿ ಅವರ ಸಕಲೈಶ್ವರ್ಯವನ್ನೂ ಅಪಹರಿಸಬೇಕೆಂದೆಣಿಸಿ ಶಕುನಿಯು ಪಾಂಡವರನ್ನು ಕುರಿತು
' ನಾವು ಮೊದಲು ಜಯಿಸಿದ ಧನವೆಲ್ಲವನ್ನೂ ಧೃತರಾಷ್ಟ್ರನು ಪುನಃ ನಿಮಗೆ ಕೊಟ್ಟನು ; ಇನ್ನು ಮೇಲೆ ಒಂ
ದು ಪಂಥವನ್ನು ವಿವರಿಸುತಲಿದ್ದೇನೆ ಕೇಳು : ನಮ್ಮ ಇತ್ತಂಡದವರೊಳಗೆ ಯಾರು ಸೋತರೂ ಅವರು ಸಕಲೈಶ್ವರ್ಯ
ಗಳನ್ನೂ ಬಿಟ್ಟು ಕೃಷ್ಣಾಜಿನಗಳನ್ನು ಧರಿಸಿ ಅರಣ್ಯಕ್ಕೆ ಹೋಗಿ ಹನ್ನೆರಡುವರ್ಷಗಳಿದ್ದು ಮತ್ತೊಂದು ವರ್ಷವು
ಯಾರು ಅರಿಯದಹಾಗೆ ಬಂದು ಪಟ್ಟಣದಲ್ಲಿರಬೇಕು ; ಆ ಸಮಯದಲ್ಲಿ ಯಾರಾದರೂ ಅರಿತರೆ ತಿರಿಗಿ ಹನ್ನೆರಡು
ವರ್ಷಗಳೂ ವನವಾಸಕ್ಕೆ ಹೋಗಲುಳ್ಳವರು ; ಇಂಥಾ ವ್ರತವನ್ನು ನೆರವೇರಿಸಿ ಬಂದರೆ ತಮ್ಮ ರಾಜ್ಯಗಳನ್ನು ತ
ಕ್ಕೊಂಡು ಸುಖವಾಗಿರಲುಳ್ಳವರು ; ಇದು ಪಂಥವು ; ಇದಕ್ಕೆ ಒಡಂಬಟ್ಟು ತಿರಿಗೂ ದ್ಯೂತವನ್ನು ಮಾಡೀ' ಎಂ
ದು ನುಡಿದನು. ಆ ಸಮಯದಲ್ಲಿ ಸಭಾಸದರು ದುಃಖಾಕ್ರಾಂತ ಹೃದಯರಾಗಿ ಕೈಗಳನ್ನು ಸಾಚಿ ' ಪಾಂಡವರು ಎ
ಷ್ಟು ತಿಳಿದಿದ್ದರೂ ತಿರಿಗಿಯೂ ದ್ಯೂತಕ್ಕೆ ಆರಂಭಿಸುತಲಿದ್ದಾರೆ ; ಇವರ ವಿವೇಕವನ್ನು ಏನನ್ನಬೇಕು ? ' ಎಂದು
ಬಹುಪ್ರಕಾರವಾಗಿ ನುಡಿಯುತ್ತಿದ್ದರು. ಅಂಥಾ ಜನಾಪವಾದವನ್ನು ಕೇಳಿ ಲಜ್ಜಿತನಾಗಿ ಪ್ರತಿಜ್ಞಾಧರ್ಮವನ್ನು ಬಿ
ಡಲಾರದೆ ಇದು ಕೌರವರಿಗೆ ಲಯಕಾರಣವೆಂದು ತಿಳಿದು ದ್ಯೂತಾಭಿಮುಖನಾದ ಧರ್ಮರಾಯನು ಶಕುನಿಯ
ನ್ನು ಕುರಿತು ' ನೀನು ದ್ಯೂತಕ್ಕೆ ಕರದರೆ ಧರ್ಮಶೀಲನಾಗಿ ದೃಢವ್ರತನಾದ ನನ್ನಂಥಾವನು ಹ್ಯಾಗೆ ಬಾರದೇ ಇ
ರುವನು ! ಆದ್ದರಿಂದ ಆರಂಭಿಸು ' ಅಂದನು. ದುರಾತ್ಮಕನಾದ ಶಕುನಿಯು ' ರಥ ಗಜ ತುರಗ ಧೇನುಗಣಗಳು
ಆಡು ಕುರಿಗಳು ಧನರತ್ನರಾಶಿಗಳು ದಾಸದಾಸೀಜನಗಳು ಇವು ಮೊದಲಾದ ಸಕಲ ವಸ್ತುಗಳನ್ನು ಕೊಟ್ಟು ವ
ನವಾಸಕ್ಕೆ ಹೋಗುವದೇ ಪಂಥವು ; ಈ ಅರ್ಥದಲ್ಲಿ ನಾವಿಬ್ಬರೂ ಜೂಜಾಡುವ ' ಎಂದು ನುಡಿಯುವ ಸಮಯದ
ಲ್ಲಿ ಧರ್ಮರಾಯನು ದೇವಕಾರ್ಯಾರ್ಥವಾಗಿ ಕಲಿಪುರುಷನು ಮುಹೂರ್ತ ಮಾತ್ರವು ತನ್ನಲ್ಲಿದ್ದದ್ದರಿಂದ ಭೀಷ್ಮ
ದ್ರೋಣ ಕೃಪಾಶ್ವತ್ಥಾಮ ವಿದುರ ಯುಯುತ್ಸು ಸಂಜಯ ವಿಕರ್ಣರೂ ಭೀಮಾರ್ಜುನ ನಕುಲ ಸಹದೇವರೂ ಕುಂ
ತೀ ಗಾಂಧಾರಿ ದ್ರೌಪದಿಗಳೂ ದ್ಯೂತವು ಬ್ಯಾಡವೆಂದು ತಡೆದರೂ ಕೇಳದೇ ಶಕುನಿಯನ್ನು ಕುರಿತು ' ಸಕಲ ವ
ಸ್ತುಗಳನ್ನು ಕೊಟ್ಟು ವನವಾಸಕ್ಕೆ ಹೋಗುವದೇ ಪಂಥವಾಗಿ ಆಡೂ ' ಅಂದನು. ಮಾಯೋಪಾಯನಿಪುಣನಾಗಿ
ಕಾಲಪ್ರೇರಿತನಾದ ಶಕುನಿಯು ದಾಳಗಳನ್ನು ಹಾಕಿ ' ಇದೊ ಜಯಿಸಿದೆನು ! ' ಎಂದು ನುಡಿದನು. "

## ೧೧೪ ನೇ ಅಧ್ಯಾಯ.—ಅನುದ್ಯೂತಪರ್ವಶೇಷ.

" ಕೇಳು ಜನಮೇಜಯನೆ, ಆ ಬಳಿಕ ಈ ಪ್ರಕಾರದಿಂದ ದ್ಯೂತಪರಾಜಿತರಾಗಿ ವನವಾಸಕ್ಕೆ ಹೋಗುವದ
ಕ್ಕೆ ನಿಶ್ಚೈಸಿ ಯಥಾಕ್ರಮದಿಂದ ಕೃಷ್ಣಾಜಿನಗಳನ್ನು ಧರಿಸಿ ರಾಜ್ಯಗಳನ್ನೂ ವಸ್ತುಗಳನ್ನೂ ಬಿಟ್ಟು ಹೋಗು
ವಂಥಾ ಪಾಂಡವರನ್ನು ಕಂಡು ದುಶ್ಶಾಸನನು ' ಕೌಂತೇಯರು ಸಕಲೈಶ್ವರ್ಯ ಹೀನರಾಗಿ ವನವಾಸಕ್ಕೆ ಹೋಗುತಲಿ
ದ್ದಾರೆ ; ಮಹಾತ್ಮನಾಗಿ ಕೌರವಶ್ರೇಷ್ಠನಾದ ದುರ್ಯೋಧನನಿಗೆ ಈ ಹೊತ್ತಲ್ಲವೆ ರಾಜ್ಯವು ಸ್ಥಿರವಾಯಿತು ! ಇವರು

ಸಕಲ ಸುಖಗಳನ್ನೂ ರಾಜ್ಯವನ್ನೂ ಬಿಟ್ಟು ಬಹುಕಾಲವು ವನಗಳಲ್ಲಿ ದುಃಖಗಳನ್ನು ಅನುಭವಿಸುತ ಇರುವದ್ದರಿಂದ ಸದ್ಗುಣ ಸಮೇತರಾಗಿ ಜ್ಯೇಷ್ಠರಾಗಿ ಐಶ್ವರ್ಯಸಮನ್ವಿತರಾದ ನಮ್ಮಲ್ಲಿ ದೈವಾನುಗ್ರಹವುಂಟೆಂದು ತಿಳಿಯುತ್ತದೆ; '—ಇಂಥಾ ಮಹಾತ್ಮರು ಇಲ್ಲಾ—' ಎಂದು ಪ್ರಸಿದ್ಧಿಯನ್ನು ಪಡದು ಐಶ್ವರ್ಯಮದಮತ್ತರಾಗಿ ನಮ್ಮನ್ನು ಪರಿಹಾಸಗಳನ್ನು ಮಾಡುತಲಿದ್ದ ಪಾಂಡವರು ಶಕುನಿಯಿಂದ ಪರಾಜಿತರಾಗಿ ದಿವ್ಯಭೂಷಣಾಂಬರಗಳನ್ನು ಮಹಾರಾಜಚಿನ್ಹೆಗಳನ್ನೂ ಬಿಟ್ಟು ಕೃಷ್ಣಾಜಿನಗಳನ್ನು ಧರಿಸಿ ವನಕ್ಕೆ ಹೋಗುವದರಿಂದ ಇನ್ನು ದುಃಖವು ಕೌರವರಿಗೆ ಒಂದು ದಿವಸಕ್ಕೂ ಇಲ್ಲದೇ ಹೋಯಿತು!' ಅಂದನು. ಮತ್ತು ಪಾಂಚಾಲಿಯನ್ನು ಕುರಿತು 'ಪ್ರತಿಷ್ಠಾಹೀನರಾಗಿ ನಿರ್ಧನರಾಗಿರುವ ಈ ಪಾಂಡವರಿಂದ ನಿನಗೆ ಜೀವನವೇನಿದೆ? ಎಳ್ಳಿನ ಹೊಟ್ಟಿನೋಪಾದಿಯಲ್ಲಿಯು ಚರ್ಮನಿರ್ಮಿತವಾದ ಮೃಗಗಳೋಪಾದಿಯಲ್ಲಿಯೂ 'ಕಾಕಯುವಧಾನ್ಯದ ತೆರದಿಂದಲೂ ನಿಸ್ಸಾರವಾಗಿರುವ ಇವರ ದೆಸೆಯಿಂದ ನಿನಗೆ ಯಾವ ಸುಖವುಂಟಾಗುವದು? ಆದ್ದರಿಂದ ಇವರನ್ನು ಪರಿಹರಿಸಿ ಐಶ್ವರ್ಯಸಂಪನ್ನರಾಗಿ ಶಮದಮಾದಿಗುಣಗರಿಷ್ಠರಾದ ಕೌರವರೊಳಗೆ ಒಬ್ಬನನ್ನು ಪ್ರಿಯನಾಗಿ ವರಿಸು; ಇನ್ನು ಮೇಲೆ ಮಹಾರಣ್ಯಮಧ್ಯದಲ್ಲಿ ದುಃಖವನ್ನು ಅನುಭವಿಸುವಾಗ ದುಶ್ಶಾಸನನ ಬುದ್ಧಿಯನ್ನು ಕೇಳದೇ ಹೋದೆಯೆಂದು ಪಶ್ಚಾತ್ತಾಪವನ್ನು ಪಡಯಬ್ಯಾಡ' ಅಂದನು. ಈ ಪ್ರಕಾರವಾಗಿ ದುರ್ಭಾಷೆಗಳನ್ನಾಡುತಲಿರುವ ದುಶ್ಶಾಸನನನ್ನು ನೋಡಿ ಅತಿಕೋಪಶೀಲನಾದ ಭೀಮಸೇನನು ಹಿಮವತ್ಪರ್ವತದಲ್ಲಿ ಹುಟ್ಟಿದ ಸಿಂಹವು ನರಿಯನ್ನು ಅಟ್ಟಿಕೊಳ್ಳುವ ಚಂದದಿಂದ ದುಶ್ಶಾಸನನನ್ನು ಧಿಕ್ಕರಿಸುತ 'ಎಲೆ ಪಾಪಾತ್ಮನೆ, ದುಷ್ಟಜನ ಸಮೇತನಾದ ಶಕುನಿಯೂ ನೀನೂ ಮಾಯಾ ದ್ಯೂತದಿಂದ ಜಯಿಸಿದ ಮಾತ್ರದಿಂದಲೆ ಕೃತಾರ್ಥನಾದ ಪುರುಷನೋಪಾದಿಯಲ್ಲಿ ರಾಜಲೋಕಮಧ್ಯದಲ್ಲಿ ನಿಂತು ವ್ಯರ್ಥವಾಕ್ಯಗಳನ್ನು ಆಡುತ್ತಿದ್ದೀ; ನೀನು ವಚನಶಲ್ಯಗಳಿಂದ ನಮ್ಮ ಮರ್ಮಸ್ಥಾನಗಳನ್ನು ನೆಡುತ್ತಿದ್ದೀ; ಇನ್ನು ಮೇಲೆ ಯುದ್ಧದಲ್ಲಿ ನಿನಗೆ ಸಹಾಯವಾಗಿ ಬಂದ ಅರಸುಗಳಷ್ಟನ್ನೂ ಯಮಪಟ್ಟಣಕ್ಕೆ ಕಳುಹಿಸಿ ನಿನ್ನ ವಕ್ಷಸ್ಥಳವನ್ನು ಭೇದಿಸಿ ನೆತ್ತರನ್ನು ಹೀರುವಾಗ ನೀನು ಆಡಿದ ಮಾತುಗಳನ್ನು ಸ್ಮರಿಸುವ ಹಾಗೆ ಮಾಡುತಲಿದ್ದೇನೆ!' ಎಂದು ಈ ಪ್ರಕಾರದಲ್ಲಿ ನುಡಿದ ಧರ್ಮಪಾಶಬದ್ಧನಾಗಿ ಮೃಗಚರ್ಮಧರನಾಗಿ ದುಃಖಾಭಿಭೂತನಾದ ಭೀಮನನ್ನು ನೋಡಿ ದುಷ್ಟಾತ್ಮಕನಾದ ಆ ದುಶ್ಶಾಸನನು 'ಇದು ಪಶುವು!' ಎಂದು ಬಾರಿಬಾರಿಗೂ ನುಡಿಯುತ ಲಜ್ಜಾವಿಹೀನನಾಗಿ ಸಭಾಮಧ್ಯದಲ್ಲಿ ನಟಿಸುತ್ತಿದ್ದನು. ಭೀಮನು ಆ ದುರಾತ್ಮಕನನ್ನು ಕೋಪವೀಕ್ಷಣದಿಂದ ನೋಡಿ 'ಎಲೆ ಪುರುಷಾಧಮನೆ, ಕಪಟದಿಂದ ರಾಜ್ಯವನ್ನು ಅಪಹರಿಸಿದ ಮಾತ್ರದಿಂದಲೇ ವ್ಯರ್ಥಾಲಾಪಗಳನ್ನು ಯಾತಕ್ಕೆ ನುಡಿಯುತ್ತಿದ್ದಿ? ಇದಕ್ಕೆ ಫಲವಾಗಿ ಯುದ್ಧರಂಗದಲ್ಲಿ ನಿನ್ನ ಹೃದಯವನ್ನು ಸೀಳಿ ರಕ್ತವನ್ನು ಪಾನಮಾಡದಿದ್ದರೆ ನನಗೆ ಪರಲೋಕ ಸಾಧ್ಯವು ಇಲ್ಲದೇ ಹೋಗಲಿ! ನಾನು ಯಾವ ರೀತಿಯಿಂದಲಾದರೂ ಧೃತರಾಷ್ಟ್ರನ ಮಕ್ಕಳಷ್ಟನ್ನೂ ಯುದ್ಧದಲ್ಲಿ ಕೊಂದು ಶಾಂತಿಯನ್ನೈದಲುಳ್ಳವನು!' ಎಂದು ನುಡಿದನು. ಆ ಸಮಯದಲ್ಲಿ ಸಿಂಹಗಮನನಾದ ದುರ್ಯೋಧನನು ಭೀಮಸೇನನಿಗೆ ಕೋಪವನ್ನುಟ್ಟಿಸಬೇಕೆಂದೆಣಿಸಿ ಆತನ ಗಮನವನ್ನು ತಾನು ಅನುಸರಿಸಿ ಹಾಸ್ಯವನ್ನು ಮಾಡಲು ಭೀಮನು ತಿರಿಗಿ ನೋಡಿ 'ಎಲೆ ಮೂಢಾತ್ಮನೆ, ಇಂಥಾ ಪರಿಹಾಸಗಮನದಿಂದ ಪ್ರಯೋಜನವೇನಿದೆ? ಇನ್ನು ಯುದ್ಧರಂಗದಲ್ಲಿ ನಿನ್ನನ್ನು ಪುತ್ರಮಿತ್ರ ಸಮೇತವಾಗಿ ಕೊಂದು ನೀನು ಮಾಡಿದ ಅಕೃತ್ಯಗಳಷ್ಟನ್ನೂ ಸ್ಮರಿಸುವಹಾಗೆ ಮಾಡುತಲಿದೇನೆ!' ಎಂದು ನುಡಿದನು. ಮತ್ತೂ ಬಲಶಾಲಿಯಾಗಿ ಅಭಿಮಾನವಂತನಾದ ಭೀಮನು ಕೋಪವನ್ನು ತಡದು ಸಭೆಯವರನ್ನು ಕುರಿತು 'ನಾನು ದುರ್ಯೋಧನನನ್ನು ಕೊಲ್ಲುತಲಿದ್ಧೇನೆ; ಅರ್ಜುನನು ಕರ್ಣನನ್ನು ಕೊಲ್ಲುತಲಿಧಾನೆ; ಸಹದೇವನು ಶಕುನಿಯನ್ನು ಕೊಲ್ಲುತಲಿಧಾನೆ; ಇನ್ನೊಂದು ವಾಕ್ಯವನ್ನು ಸಭಾಮಧ್ಯದಲ್ಲಿ ಹೇಳುತಲಿಧೇನೆ ಕೇಳಿ; ಪಾಪಾತ್ಮನಾದ ಈ ದುರ್ಯೋಧನನನ್ನು ನನ್ನ ಗದಾಪ್ರಹಾರದಿಂದ ತೊಡೆಗಳನ್ನು ಮುರಿದು ಕೆಡಹಿ ಇವನ ಶಿರಸ್ಸಿನಲ್ಲಿ ಪಾದವಿರಿಸಿ ಆ ಸಮಯದಲ್ಲಿ ಈ ವಾಕ್ಯಗಳಷ್ಟನ್ನೂ ಮೂದಲಿಸುತ್ತೇನೆ!' ಎಂದು ನುಡಿದನು. ಅರ್ಜುನನು ಭೀಮನನ್ನು ಕುರಿತು 'ನೀನು ಹೇಳಿದಂಥಾ ಅರ್ಥಕ್ಕೆ ದೈವಾನುಕೂಲದಿಂದ ಬಂದು ಯುದ್ಧವು ಬಂದರೆ ನನ್ನ ಕೂಡೆ ವಿರೋಧಿಸಿರುವ ವೈರಿಗ

ಳನ್ನು ಹೋದವರನ್ನಾಗಿ ಎಣಿಸು ; ಈ ಕೌರವರು ತಮಗೆ ಬರುವಂಥಾ ಭಯವನ್ನರಿಯದೆ ಮನೆಯಲ್ಲಿ ಸುಖವಾಗಿದ್ದಾರೆಂದು ಎಣಿಸಿದ್ದಾರೆ ; ಇನ್ನು ಹದಿಮೂರು ವರ್ಷಪರ್ಯಂತವೂ ಇವರು ಬದುಕಿದ್ದರೆ ಆಗ ನಮ್ಮ ಸಾಮರ್ಥ್ಯವು ತಿಳಿದೀತು ; ಈಗ ಬರೀಮಾತುಗಳಿಂದ ಪ್ರಯೋಜನವೇನು ? ದುರ್ಯೋಧನ ದುಶ್ಯಾಸನ ಕರ್ಣಶಕುನಿಗಳ ರಕ್ತವನ್ನು ಭೂಮಿಯು ಪಾನಮಾಡುತಲಿದೆ ! ಈ ದುರಾತ್ಮಕರಾದ ಕೌರವರನ್ನೂ ಈ ಕರ್ಣನನ್ನೂ ನಿನ್ನ ಅಪ್ಪಣೆಯಿಂದ ಪುತ್ರ, ಮಿತ್ರಾ, ಮಾತ್ಯ ಸಮೇತವಾಗಿ ಸಂಹರಿಸುತಲಿದ್ದೇನೆ ; ಮತ್ತೂ ಇರುವ ಅರಸುಗಳು ಧೃತರಾಷ್ಟ್ರನ ಮಕ್ಕಳಿಗೆ ಪ್ರಿಯವನ್ನು ಮಾಡಬೇಕೆಂದು ಬುದ್ಧಿಮೋಹದಿಂದ ಯುದ್ಧದಲ್ಲಿ ನನಗೆ ಎದುರಾಗಿ ಬಂದು ಕಾಣಿಸಿಕೊಂಡರೆ ಅವರನ್ನೂ ಸಂಹರಿಸುತಲಿದೇನೆ ! ಹಿಮವತ್ಪರ್ವತವು ಚಲಿಸಿದರೂ ಸೂರ್ಯನ ತೇಜಸ್ಸು ಕೆಟ್ಟು ಹೋದರೂ ಚಂದ್ರನ ಶೈತ್ಯವು ಹೋದರೂ, ನನ್ನ ಪ್ರತಿಜ್ಞೆಯು ಕೆಡಲಾರದು ! ನಾವು ಹದಿಮೂರು ವರ್ಷಗಳು ಪ್ರತಿಜ್ಞೆಯನ್ನು ಪರಿಪಾಲಿಸಿ ತಿರಿಗಿ ಬಂದರೆ ರಾಜ್ಯವನ್ನು ಕೊಟ್ಟು ಬೇಡಿಕೊಂಡರೆ ಹೋಗಲಿ ; ಇಲ್ಲದಿದ್ದರೆ ನನ್ನ ವಾಕ್ಯಗಳಷ್ಟೂ ನಿಜವಾಗುತ್ತವೆ !' ಎಂದು ನುಡಿದನು. ಸಹದೇವನು ಬಾಹುದಂಡವನ್ನು ಉನ್ನತವಾಗಿ ಎತ್ತಿ ಶಕುನಿಯನ್ನು ನೋಡಿ 'ನಿನ್ನ ಕೈಯಲ್ಲಿರುವ ದಾಳಗಳು ಯುದ್ಧಮುಖದಲ್ಲಿ ನಾನು ನಿನ್ನನ್ನು ಕೊಲ್ಲುವ ಸಮಯದಲ್ಲಿ ನನ್ನ ಕೈಯಲ್ಲಿ ಬಾಣಗಳಾಗಿ ಬಂದು ನಿನ್ನನ್ನೇ ಕೊಲ್ಲುತ್ತವೆ ! ಭೀಮಸೇನನು ನಿನ್ನನ್ನು ಕೊಲ್ಲುವದಕ್ಕೆ ನನ್ನನ್ನು ಕಟ್ಟುಮಾಡುವದರಿಂದ ಯುದ್ಧದಲ್ಲಿ ಬಂಧುಮಿತ್ರ ಸಹಿತವಾಗಿ ಕ್ಷತ್ರಿಯಧರ್ಮದಿಂದ ನನಗೆ ಎದುರಾಗಿ ನಿಲ್ಲುವೆಯಾ—ನಿನ್ನನ್ನು ಸಂಹರಿಸಿದೆನು ಎಂದು ನಿಶ್ಚಯವಾಗಿ ತಿಳುಕೊ !' ಎಂದು ನುಡಿದನು. ಮತ್ತು ನಕುಲನು 'ಕಪಟದ್ಯೂತದಲ್ಲಿ ದುರ್ಯೋಧನನಿಗೆ ಪ್ರೀತಿ ಬರುವದಕ್ಕೋಸ್ಕರ ದ್ರೌಪದಿಯನ್ನು ದುರ್ಭಾಷೆಗಳಾಡಿ ದುರ್ವೃತ್ತಿಗಳಾಗಿ ದೈವಪ್ರೇರಿತರಾದ ಈ ಧೃತರಾಷ್ಟ್ರನ ಮಕ್ಕಳನ್ನೂ ಪುರುಷಾಧಮನಾಗಿ ಸಾಬಲನ ಮಗನಾಗಿರುವ ಉಲೂಕನನ್ನೂ ಧರ್ಮರಾಯನ ಅಪ್ಪಣೆಯಿಂದ ದ್ರೌಪದಿಗೆ ಪ್ರೀತಿಯನ್ನು ಮಾಡುವದಕ್ಕೋಸ್ಕರ ಕೊಲ್ಲುತಲಿದ್ದೇನೆ !' ಎಂದು ನುಡಿದನು. ಈಪ್ರಕಾರದಿಂದ ಪುರುಷಕಂಠೀರವರಾದ ಪಾಂಡವರು ಬಹುಪ್ರಕಾರವಾದ ಪ್ರತಿಜ್ಞೆಗಳನ್ನು ಮಾಡಿ ಧೃತರಾಷ್ಟ್ರನ ಸಮಿಪಕ್ಕೆ ಹೋದರು."

---

## ೧೧೫ನೇ ಅಧ್ಯಾಯ.—ಅನುದ್ಯೂತಪರ್ವಶೇಷ.

"ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ವೃದ್ಧನಾದ ಭೀಷ್ಮನು ಧೃತರಾಷ್ಟ್ರನು ಸೋಮದತ್ತನು ಬಾಹ್ಲೀಕನು ದ್ರೋಣನು ಕೃಪನು ಅಶ್ವತ್ಥಾಮನು ವಿದುರನು ಧೃತರಾಷ್ಟ್ರನ ಕುಮಾರಕರು ಭೂರಿಶ್ರವನು ವಿಕರ್ಣನು ಯುಯುತ್ಸುವು ಸಂಜಯನು ಮತ್ತೂ ಮಿಕ್ಕಾದ ಅರಸುಗಳು ಮಂತ್ರಿ ಮೊದಲಾದ ಸಭ್ಯರು ಧರ್ಮಶೀಲೆಯಾದ ಗಾಂಧಾರಿಯು ತನ್ನ ತಾಯಿಯಾದ ಕುಂತಿಯು ಮೊದಲಾದವರನ್ನು ಕುರಿತು 'ನಾವು ವನವಾಸಕ್ಕೆ ಹೋಗಿ ತಿರಿಗಿಯೂ ಬರುವದಕ್ಕೆ ಅಪ್ಪಣೆಯನ್ನು ಕೊಡಬೇಕು' ಅಂದನು. ಅವರಷ್ಟುಮಂದಿಯೂ ಆತನ ಮುಖವನ್ನು ನೋಡುವದಕ್ಕೆ ನಾಚಿಗೆಪಟ್ಟು 'ಪಾಂಡವರಿಗೆ ಶುಭವಾಗಲಿ !! ಎಂದು ಸುಮ್ಮನೇ ಇದ್ದರು. ಆ ಸಮಯದಲ್ಲಿ ವಿದುರನು ಧರ್ಮರಾಯನನ್ನು ನೋಡಿ 'ಅತಿ ಸುಕುಮಾರದೇಹಿಯಾಗಿ ವಯೋವೃದ್ಧೆಯಾಗಿರುವ ಈ ಕುಂತೀದೇವಿಯು ವನವಾಸವನ್ನು ಸಹಿಸಲಾರಳು ; ನೀವು ಸುಖವಾಗಿ ತಿರಿಗಿ ಬರುವ ಪರ್ಯಂತವೂ ಈಕೆಯನ್ನು ನನ್ನ ಮನೆಯಲ್ಲಿರಿಸಿಕೊಂಡು ರಕ್ಷಿಸುತಲಿದ್ದೇನೆ ; ನೀವು ಇಲ್ಲಿರಿಸಿ ಹೋಗಿ ; ಧರ್ಮವಿಧಿಜ್ಞನಾದ ಪುರುಷನು ಎಲ್ಲಿಯೂ ಕ್ಲೇಶಪಡದೇ ಇರುವನಾದ್ದರಿಂದ ನೀವು ಪರಾಜಯವನ್ನೈದಿದಿರೆಂದು ಕ್ಲೇಶಪಡಬ್ಯಾಡ ; ಧರ್ಮನಿರತನಾದ ನೀನು ಭುಜಬಲಧುರಂಧರನಾದ ಧನಂಜಯನು ಶತ್ರುಸಂಹಾರಕನಾದ ಭೀಮಸೇನನು ಅರ್ಥಸಂಪಾದಕನಾದ ನಕುಲನು ಸಕಲ ರಾಜಕಾರ್ಯ ನಿರ್ವಾಹಕನಾದ ಸಹದೇವನು ಬ್ರಾಹ್ಮಣಶ್ರೇಷ್ಠನಾದ ಧೌಮ್ಯನು ಧರ್ಮಾರ್ಥಗಳಲ್ಲಿ ಕೌಶಲವುಳ್ಳ ದ್ರೌಪದೀದೇವಿಯು ನೀವಷ್ಟುಮಂದಿಯೂ ಅನ್ಯೋನ್ಯ ಸಹಾಯರಾಗಿ ಹೋಗೀ ; ಪರರಿಗೆ ಅಜೇಯರಾಗಿ

ಸಂತುಷ್ಟರಾಗಿರುವ ನಿಮಗೆ ಎಲ್ಲರೂ ಶುಭವನ್ನು ಮಾಡುವರು ; ಸಕಲ ಗುಣಸಂಪನ್ನರಾದ ನಿಮ್ಮನ್ನು ದೇವೇಂದ್ರನಾದರೂ ವಿರೋಧಿಸಲಾರನು ; ಹಿಮವತ್ಪರ್ವತ ಪ್ರಾಂತ್ಯದಲ್ಲಿ ಮೇರು ಸಾವರ್ಣಿಯೆಂಬ ಮುನೀಶ್ವರನ ದೆಸೆಯಿಂದಲೂ ವಾರಣಾವತ ಪುರದಲ್ಲಿ ಕೃಷ್ಣದ್ವೈಪಾಯನನಿಂದಲೂ ಭೃಗುತುಂಗ ಪರ್ವತದಲ್ಲಿ ಪರಶುರಾಮನ ದೆಸೆಯಿಂದಲೂ ದೃಷದ್ವತಿ ಎಂಬ ನದೀಪ್ರಾಂತ್ಯದಲ್ಲಿ ಶಂಭು ಋಷೀಶ್ವರನ ದೆಸೆಯಿಂದಲೂ ಮತ್ತೂ ಅಸಿತಮುನೀಶ್ವರನ ದೆಸೆಯಿಂದಲೂ ಬ್ರಹ್ಮಕುಮಾರಕನಾದ ನಾರದಮುನೀಶ್ವರನ ದೆಸೆಯಿಂದಲೂ ನಿಮ್ಮ ಪುರೋಹಿತನಾದ ಧೌಮ್ಯನ ದೆಸೆಯಿಂದಲೂ ಸಕಲ ಧರ್ಮಗಳನ್ನೂ ತಿಳಿದ ಮಹಾನುಭಾವನಾದ್ದರಿಂದ ನಿನಗೆ ಸಕಲ ಶ್ರೇಯಸ್ಸುಗಳೂ ಉಂಟಾಗುತಲಿದೆ ! ಐಲನ ಮಗನಾದ ಪುರೂರವನಿಗಿಂತಲೂ ಅಧಿಕ ಬುದ್ಧಿಸಂಪನ್ನನಾಗಿ ಭುಜಬಲಶೌರ್ಯದಲ್ಲಿ ಸಕಲ ಮಹೀಪತಿಗಳನ್ನು ಜಯಿಸಿ ತಪೋಬಲದಲ್ಲಿ ಸಕಲರಾದ ಋಷಿಗಳನ್ನು ಜಯಿಸಿ ಶತ್ರುವಿಜಯದಲ್ಲಿ ದೇವೇಂದ್ರನಿಗೆ ಸಮಾನನಾಗಿ ಕೋಪದಲ್ಲಿ ಯಮನಿಗೆ ಸಮಾನನಾಗಿ ತ್ಯಾಗದಲ್ಲಿ ಕುಬೇರನಿಗೆ ಸಮಾನನಾಗಿ ಪ್ರಸನ್ನಭಾವದಲ್ಲಿ ಚಂದ್ರನಿಗೆ ಸಮಾನನಾಗಿ ಕ್ಷಮೆಯಲ್ಲಿ ಭೂಮಿಗೆ ಸಮಾನನಾಗಿ ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನನಾಗಿ ಬಲದಲ್ಲಿ ವಾಯುವಿಗೆ ಸಮಾನನಾಗಿರುವ ನೀನು ದೇವತಾಂಶಸಂಭವನಾಗಿ ಪರಿಶುದ್ಧವೃತ್ತನಾದ್ದರಿಂದ ನಿನಗೆ ಆರೋಗ್ಯಭಾಗ್ಯಗಳು ಉಂಟಾಗುತಲಿವೆ ! ಆಪತ್ತು ಬಂದ ಸಮಯದಲ್ಲಿಯೂ ಯಥೋಚಿತವಾಗಿ ಬುದ್ಧಿಸಂಪನ್ನರಾಗಿರೀ ; ವನವಾಸಕ್ಕೆ ಹೋಗಿ ವ್ರತಸಮಾಪ್ತಿಯನ್ನು ಮಾಡಿ ಸಹೋದರ ಸಹಿತನಾಗಿ ತಿರಿಗಿ ಬಂದರೆ ನಿನ್ನನ್ನು ನೋಡಿ ಸಂತೋಷಪಡಲುಳ್ಳವನು' ಎಂದು ನುಡಿದನು. ಆತನ ವಾಕ್ಯವನ್ನು ಕೇಳಿ ಸತ್ಯಪ್ರತಿಜ್ಞನಾದ ಯುಧಿಷ್ಠಿರನು 'ಹಾಗೇ ಆಗಲಿ' ಎಂದು ನುಡಿದು ಭೀಷ್ಮದ್ರೋಣಾದಿಗಳಿಗೆ ನಮಸ್ಕಾರವನ್ನು ಮಾಡಿ ವನವಾಸಕ್ಕೆ ಅಭಿಮುಖನಾದನು."

---

## ೧೧೬ ನೇ ಅಧ್ಯಾಯ.—ಅನುದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಈಪ್ರಕಾರದಿಂದ ಪಾಂಡವರು ಭೂಷಣಾಂಬರಗಳನ್ನು ಛತ್ರಚಾಮರಾದಿ ಸಕಲ ರಾಜಚಿನ್ಹೆಗಳನ್ನೂ ಬಿಟ್ಟು ಕೃಷ್ಣಾಜಿನಗಳನ್ನು ಧರಿಸಿ ಪಾದಚಾರಿಗಳಾಗಿ ಬಹುಜನ ಸಮ್ಮತವಾದ ರಾಜಮಾರ್ಗದಲ್ಲಿ ಹೋಗುವ ಸಮಯದಲ್ಲಿ ಪುರಜನಗಳು ಅವರನ್ನು ನೋಡಬೇಕೆಂದು ಉಪ್ಪರಿಗೆಗಳನ್ನೂ ವಿಮಾನಶಿಖರಗಳನ್ನೂ ಮಹೋನ್ನತಗಳಾದ ಗೋಪುರಗಳನ್ನೂ ವೃಕ್ಷಾಗ್ರಗಳನ್ನೂ ಏರಿ ನೋಡುತ 'ಚತುರಂಗಬಲ ಸಮೇತರಾಗಿ ರಾಜಮಾರ್ಗದಲ್ಲಿ ಬರುವಂಥಾ ರಾಜನಂದನರು ದ್ರೌಪದೀ ಸಮೇತರಾಗಿ ದೀನರೋಪಾದಿಯಲ್ಲಿ ಹೋಗುತಲಿಥಾರೆ ! ಬಾಹುಬಲಧುರಂಧರರಾದ ಭೀಮಾರ್ಜುನರು ಕಪಟಾತ್ಮರಾದ ಈ ಕೌರವರನ್ನು ಸಂಹರಿಸುವದಕ್ಕೆ ತೊಡಗಿದರೆ ಧರ್ಮಶೀಲನಾದ ಈ ಧರ್ಮರಾಯನು ಅವರನ್ನು ತಡದು ರಾಜ್ಯವನ್ನೂ ಐಶ್ವರ್ಯವನ್ನೂ ಕೊಟ್ಟು ಧೌಮ್ಯ ಸಹೋದರಸಹಿತನಾಗಿ ವನವಾಸಕ್ಕೆ ಹೋಗುತಲಿಥಾನೆ ! ಮೊದಲು ಆಕಾಶಗಮನವುಳ್ಳ ಪಕ್ಷಿಗಳಿಗಾದರೂ ನೋಡುವದಕ್ಕೆ ಅಶಕ್ಯವಾದ ಅಂತಃಪುರದಲ್ಲಿದ್ದು ದಿವ್ಯ ಭೂಷಣಾಂಬರಗಳನ್ನು ಪುಷ್ಪಮಾಲಿಕೆಗಳನ್ನು ಅಂಗರಾಗಗಳನ್ನು ಧರಿಸುತ ಅತಿ ಸುಕುಮಾರದೇಹಿಯಾದ ಈ ಪಾಂಚಾಲರಾಯನ ಮಗಳು ಈಗ ಸಮಸ್ತರಾದವರು ನೋಡುತ್ತಿರಲು ಪಾದಚಾರಿಯಾಗಿ ಹೋಗುತಲಿಥಾಳೆ ! ಛಳಿ ಗಾಳಿ ಬಿಸಲು ಮಳೆಗಳು ಎಷ್ಟು ಬಾಧಿಸುತಲವೆಯೊ ತಿಳಿಯದು ! ಲೋಕದಲ್ಲಿ ಗುಣಹೀನನಾದ ಮಗನನ್ನು ಬಿಟ್ಟಿರುವದಕ್ಕೂ ತಾಯಿತಂದೆಗಳು ಕ್ಲೇಶಪಡುವರು ; ಸತ್ಯಭಾಷಣೆಯು ದಯೆಯು ಶೌರ್ಯವು ಧೈರ್ಯವು ಆಚಾರವು ಮನೋನಿಗ್ರಹವು ಕ್ಷಮೆಯು ಇವು ಮೊದಲಾದ ಸಕಲ ಸದ್ಗುಣಗಳುಳ್ಳ ಧರ್ಮರಾಯನು ಮೊದಲಾದ ಮಕ್ಕಳನ್ನೂ ಪತಿವ್ರತಾಶಿರೋಮಣಿಯಾದ ಈ ದ್ರೌಪದೀದೇವಿಯನ್ನೂ ಬಿಟ್ಟು ಕುಂತಿಯು ಯಾವಪ್ರಕಾರದಿಂದ ಸಹಿಸುವಳೊ ತಿಳಿಯದು ! ಧರ್ಮರಾಯನು ವೃಕ್ಷಮೂಲವೂ ಸಕಲ ಜನಗಳು ಶಾಖಾಪುಷ್ಪ ಫಲಗಳೂ ಆದ್ದರಿಂದ ಈ ಯುಧಿಷ್ಠಿರನು ವನವಾಸಕ್ಕೆ ಹೋದರೆ ಜಲವಿಲ್ಲ

ದಿರುವ ಮಡುವಿನಲ್ಲಿರುವ ಜಂತುಗಳೋಪಾದಿಯಲ್ಲಿ ಸಕಲ ಜನರು ತಲ್ಲಣಿಸುವರು ! ಆದ್ದರಿಂದ ವಾಹನಗಳನ್ನೂ
ಕ್ಷೇತ್ರಗಳನ್ನೂ ಮನೆಗಳನ್ನೂ ಬಿಟ್ಟು ಬಂಧುಜನ ಸಮೇತವಾಗಿ ನಾವೂ ಅವರ ಸಂಗಡಲೇ ಹೋಗಿ ಮಹಾರಣ್ಯ
ಭೂಮಿಗಳಲ್ಲಿ ಅವರಕೂಡೆ ಸುಖದುಃಖಗಳನ್ನು ಅನುಭವಿಸುತಲಿರೋಣ ! ನಾವು ಧಾರ್ಮಿಕರಾದ ಪಾಂಡವರ ಸಂ
ಗಡ ಹೋದಮೇಲೆ ಅಪಹೃತಗಳಾದ ಧನಧಾನ್ಯಗಳುಳ್ಳಂಥಾವಾಗಿ ಅಲಂಕಾರರಹಿತಗಳಾಗಿ ಅಸಾರಗಳಾಗಿ ರಜೋಧೂ
ಷಿತಗಳಾಗಿ ದೇವತಾರಹಿತಗಳಾಗಿ ಹೆಗ್ಗಣಗಳು ಹೆಚ್ಚಿ ಬಿಲಗಳನ್ನು ಅಗಿಯಲು ಧೂಮೋದಕ ಹೀನಗಳಾಗಿ ಬಲಿ
ಕರ್ಮ ಮಂತ್ರಹೋಮ ಜಪಾಧ್ವರ ರಹಿತಗಳಾಗಿ ಬಿದ್ದು ಒಡೆದ ಮಡಿಕೆಗಳುಳ್ಳಂಥಾವಾಗಿ ಜನಶೂನ್ಯವಾದ ಈ ಪ
ಟ್ಟಣಗಳನ್ನು ಆ ಶಕುನಿಯೇ ಆಳಲಿ ! ಪಾಂಡವರು ವನಕ್ಕೆ ಹೋಗುವಲ್ಲಿ ಅಲ್ಲಿರುವ ಸಿಂಹಾದಿ ದುಷ್ಟಮೃಗಗಳು
ಓಡಿ ಹೋಗುವದರಿಂದ ಅದೇ ಪಟ್ಟಣವು ! ಅವರಿಲ್ಲದಿರುವ ಪಟ್ಟಣವು ವನವಾಗುವದರಿಂದ ಯಾವ ರೀತಿಯಿಂದಲಾ
ದರೂ ನಾವೂ ವನಕ್ಕೆ ಹೋದರೆ ಅದೇ ಸೌಖ್ಯವು ' ಎಂದು ಬಹು ಪ್ರಕಾರವಾಗಿ ನುಡಿಯುತಲಿದ್ದರು. ಪಾಂಡವರು
ಜನರ ವಾಕ್ಯಗಳನ್ನು ಕೇಳುತ ವ್ಯಸನದಿಂದ ಅತಿ ಶೋಕಾಕ್ರಾಂತರಾಗಿ ಸ್ವಲ್ಪವಾದರೂ ವಿವರ್ಣಭಾವವು ತೋರದಿ
ರುವ ರೀತಿಗೆ ಹೋಗುತ್ತಿರುವ ಸಮಯದಲ್ಲಿ ಏಕವಸ್ತ್ರೆಯಾಗಿ ರಜಸ್ವಲೆಯಾಗಿ ಕೆದರಿದ ಮಂಡೇ ಕೂದಲುಗಳು
ಳ್ಳಂಥಾವಳಾಗಿ ಅತಿ ಶೋಕಾಕ್ರಾಂತೆಯಾಗಿ ಪಾದಚಾರಿಯಾಗಿ ಪಾಂಚಾಲರಾಯನ ಮಗಳಾದ ದ್ರೌಪದಿಯನ್ನು
ನೋಡಿ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೂ ಕಂಬನಿಗಳನ್ನು ತುಂಬಿ ಹಾಹಾಕಾರದೊಡನೆ ಧೃತರಾಷ್ಟ್ರನ ಮ
ಕ್ಕಳನ್ನು ನಿಂದಿಸಿ ಕ್ಲೇಶಪಡುತ್ತಿದ್ದರು. ಧರ್ಮರಾಯನು ಈಪ್ರಕಾರದಿಂದ ನುಡಿಯುತಲಿರುವ ಜನರ ವಾಕ್ಯ
ಗಳನ್ನು ಕೇಳುತ ವನವಾಸಕ್ಕೆ ನಿಶ್ಚೈಸಿ ಸಹೋದರ ಸಮೇತನಾಗಿ ಹೊರಟನು. ಆ ಸಮಯದಲ್ಲಿ ದ್ರೌಪದೀ
ದೇವಿಯು ಯಶಸ್ವಿನಿಯಾದ ಕುಂತೀದೇವಿಗೂ ಅತಿ ಶೋಕಪೀಡಿತರಾದ ಇತರ ರಾಜಸ್ತ್ರೀಯರಿಗೂ ಯಥೋಚಿ
ತವಾಗಿ ನಮಸ್ಕಾರಗಳನ್ನೂ ಆಲಿಂಗನಾದಿಗಳನ್ನೂ ಮಾಡಿ ವನವಾಸಕ್ಕೆ ನಿಶ್ಚೈಸಲು ಅತಿ ದುಃಖಾರ್ತೆಯಾದ ಕುಂ
ತೀದೇವಿಯು ಗದ್ಗದಸ್ವರದೊಡನೆ ದ್ರೌಪದಿಯನ್ನು ಕುರಿತು ' ಇಂಥಾ ಆಪತ್ತು ಬಂತೆಂದು ಕ್ಲೇಶಪಡಬ್ಯಾಡ;
ಶೀಲವೂ ಸದಾಚಾರವೂ ಉಂಟಾಗಿ ಪತಿವ್ರತಾಧರ್ಮವನ್ನು ತಿಳಿದಂಥಾ ನಿನಗೆ ಪತಿಗಳಲ್ಲಿ ನಡಕೊಳ್ಳತಕ್ಕ ರೀತಿ
ಯನ್ನು ಹೇಳತಕ್ಕಂಥಾ ಅರ್ಥವು ಏನದೆ ? ಸಕಲ ಗುಣಗಳಿಂದಲೂ ಉಭಯಕುಲಗಳನ್ನೂ ಪವಿತ್ರಮಾಡಿ ಪತಿ
ವ್ರತಾರತ್ನವಾದ ನಿನ್ನ ಕೋಪದಿಂದ ಕೌರವರಷ್ಟುಮಂದಿಯೂ ದಗ್ಧರಾಗಿ ಹೋಗದಿರುವದರಿಂದ ಅವರು ಇನ್ನೂ
ಕೆಲವು ಕಾಲವು ಬದುಕಬಲ್ಲವರು ಎಂದು ತಿಳಿದೆ ! ಲೋಕದಲ್ಲಿ ಪತಿವ್ರತಾ ಜನಗಳಿಗೆ ಶುಭಗಳು ಉಂಟಾಗುವದ
ರಿಂದ ಸಕಲ ಧರ್ಮಜ್ಞೆಯಾಗಿ ಪರಿಶುದ್ಧ ಹೃದಯಳಾಗಿರುವ ನಿನಗೆ ಸಕಲ ಶ್ರೇಯಸ್ಸುಗಳೂ ಆಗುತಲಿವೆ ! ಮನ
ಸ್ವಿಯಾಗಿ ಸುಕುಮಾರದೇಹಿಯಾದ ಸಹದೇವನನ್ನು ವನವಾಸಾಯಾಸವಿಲ್ಲದೆ ಇರುವಹಾಗೆ ರಕ್ಷಿಸು ! ನನ್ನ ವಾ
ಕ್ಯಗಳನ್ನು ನಿನ್ನ ಮನಸ್ಸಿನಲ್ಲಿರಿಸಿಕೊಂಡು ಸುಖದಿಂದ ಹೋಗಿ ಬಾ ಅಂದಳು. ' ಹಾಗೇ ಆಗಲಿ ' ಎಂದು ಕ
ಣ್ಣೀರುಗಳನ್ನು ಸುರಿಯುತಲಿರುವ ನೇತ್ರಗಳುಳ್ಳಂಥಾವಳಾಗಿ ಪುಷ್ಪಿಣಿಯಾದ ಪಾಂಚಾಲಿಯು ಬರುತಿರಲು, ಅ
ವಳ ಸಂಗಡಲೇ ರೋದನವನ್ನು ಮಾಡುತ ಹೋಗಿ ಕುಂತೀದೇವಿಯು ಮುಂದೆ ಹೋಗುತಲಿರುವ ದಿವ್ಯ ಭೂಷಣ
ಗಳನ್ನು ವಸ್ತ್ರಗಳನ್ನೂ ಬಿಟ್ಟು ನಾರುಶೀರೆಗಳನ್ನೂ ಕೃಷ್ಣಾಜಿನಗಳನ್ನೂ ಧರಿಸಿ ನಾಚಿಕೆಯಿಂದ ತಲೆ ಬಗ್ಗಿ
ಸಿದಂಥಾವರಾಗಿ ಶೋಕಾಕ್ರಾಂತ ಹೃದಯರಾಗಿ ಸುಹೃಜ್ಜನಗಳು ಕ್ಲೇಶಪಡುವಂಥಾ ದುರ್ದೆಶೆಯನ್ನೈದಿರುವ
ತನ್ನ ಕುಮಾರರನ್ನು ನೋಡಿ ಅವರಷ್ಟುಮಂದಿಯನ್ನೂ ತಬ್ಬಿಕೊಂಡು ಶೋಕಾರ್ತೆಯಾಗಿ ಭೂಮಿಯಲ್ಲಿ ಬಿದ್ದು
' ಸ್ವಧರ್ಮವೂ ಚರಿತ್ರವೂ ಸದ್ವೃತ್ತಿಯೂ ಭೂಷಣಗಳಾಗಿ ಮಹಾತ್ಮರಾಗಿ ದೇವಗುರುಭಕ್ತರಾಗಿ ಯಜ್ಞಶೀ
ಲರಾಗಿರುವ ನಿಮ್ಮಂಥಾವರಿಗೆ ಇಂಥಾ ಆಪತ್ತುಗಳು ಬಂದವು ! ಇದು ಏನೋ ಕಾಲವೈಪರೀತ್ಯವು ! ನನ್ನಂಥಾ
ಭಾಗ್ಯಹೀನಳಾದವಳಲ್ಲಿ ಹುಟ್ಟಿದವರಾದ್ದರಿಂದ ಈ ಲೋಕದಲ್ಲಿ ಯಾರಿಗೂ ಇಲ್ಲದ ಆಪತ್ತು ನಿಮಗೆ ಪ್ರಾಪ್ತವಾಯಿ
ತು ! ಸಕಲ ಸದ್ಗುಣಶಾಲಿಗಳಾದ ನೀವು ಐಶ್ವರ್ಯಹೀನರಾದ ದುರ್ಗಮಗಳಾಗಿ ವನಸ್ಥಳದಲ್ಲಿ ದುಃಖಾಯಾಸಗಳ
ನ್ನು ಹ್ಯಾಗೆ ಸಹಿಸುವಿರೊ ! ಭುಜಶೌರ್ಯಗಳು ಸತ್ವಬಲಗಳು ಮಹೋತ್ಸಾಹಗಳು ಪರಾಕ್ರಮಗಳು ಎಂಬ ಈ

ಗುಣಗಳಿಂದ ಪರಿಪೂರ್ಣರಾಗಿರುವಂಥಾ ನಿಮಗೆ (ಆ! ಕಟಕಟಾ!) ಇಂಥಾ ಕ್ಲೇಶವು ಬರುತಲಿದೆಂದು ಮೊದಲೇ ತಿಳಿದಿದ್ದರೆ ಶತಶೃಂಗಪರ್ವತದಲ್ಲಿ ಪಾಂಡುರಾಯನು ಹೋದಮೇಲೆ ಎಲ್ಲಾದರೂ ಹೋಗುವೆನೆ ಹೊರತಾಗಿ ಇಲ್ಲಿಗೆ ಬರುವೆನೇ! ಸಂತಾನವಿಲ್ಲವೆಂಬ ವಿಚಾರದಿಂದ ಬಹುದಿನಗಳು ತಪೋನಿಷ್ಠನಾಗಿದ್ದು ಆ ಬಳಿಕ ಕುಮಾರರು ಹುಟ್ಟಿದ್ದನ್ನು ನೋಡಿ ಯಾವ ದುಃಖವನ್ನೂ ನೋಡದೆ ಸ್ವರ್ಗಕ್ಕೆ ಹೋದ ಪಾಂಡುರಾಯನ ಭಾಗ್ಯವು ನನಗೆ ಇಲ್ಲದೇ ಹೋಯಿತು! ಕಲ್ಯಾಣಿಯಾಗಿ ಸಕಲ ಧರ್ಮಜ್ಞೆಯಾದ ಮಾದ್ರೀದೇವಿಯು ಬರುವಂಥಾ ಅರ್ಥವನ್ನು ತಿಳಿದು ಮೊದಲೇ ಪರಮಸದ್ಗತಿಯನ್ನು ಪಡೆದವಳಾದ್ದರಿಂದ ಅವಳೇ ಧನ್ಯಳೆಂದು ಮನಸ್ಸಿನಲ್ಲಿ ಸ್ಮರಿಸುತಲಿದ್ದೇನೆ! ಮತಿಯೂ ವಿನಯವೂ ಸದ್ಗತಿಯೂ ಉಳ್ಳ ಮಾದ್ರೀದೇವಿಯಿಂದ ವಂಚಿಸಲ್ಪಟ್ಟು ಪ್ರಾಣಗಳಲ್ಲಿ ಪ್ರೀತಿಯನ್ನುಮಾಡಿ ಶರೀರವನ್ನು ಬಚ್ಚಿಟ್ಟುಕೊಂಡು ಇಂಥಾ ದುಃಖವನ್ನು ಅನುಭವಿಸುವಂಥಾವಳಾದ್ದರಿಂದ ನನ್ನ ಜನ್ಮವು ವ್ಯರ್ಥವಾಯಿತು! ಬಹು ವ್ರತಗಳನ್ನು ಮಾಡಿ ಪಡೆದ ಈ ಸತ್ಪುತ್ರರನ್ನು ಅಗಲಿ ನಾನು ನಿಲ್ಲಲಾರೆ! ನಾನು ನಿಮ್ಮ ಸಂಗಡಲೇ ಬರುತಲಿದ್ದೇನೆ! ಎಲೆ ದ್ರೌಪದಿಯೇ, ನನ್ನನ್ನು ಬಿಟ್ಟು ಹೋಗುವದು ನಿನಗೆ ಯುಕ್ತವೇ! ಇಂಥಾ ದುಃಖಸಮುದ್ರದಲ್ಲಿ ಮುಳುಗಿದ ನನ್ನ ಶರೀರವು ಹೋಗಲಿಲ್ಲವಲ್ಲಾ! ಎಂದಿಗಾದರೂ ನನಗೆ ನಾಶಬಾರದೇ! ಹಾ ಪಾಂಡುಮಹಾರಾಯನೆ! ಎಲ್ಲಿದ್ದೀ! ಶತ್ರುಗಳ ದ್ಯೂತದಿಂದ ವಂಚಿತರಾಗಿ ವನಕ್ಕೆ ಹೋಗುವದಕ್ಕೆ ಉದ್ಯುಕ್ತವಾಗಿರುವ ನಿನ್ನ ಸತ್ಪುತ್ರರಲ್ಲಿ ಯಾಕೆ ಉಪೇಕ್ಷೆಮಾಡುತ್ತಿದ್ದೀ! ಎಲೈ ಸಹದೇವನೇ—ಮಗನೆ, ನೀನು ನನ್ನ ದೇಹಕ್ಕಿಂತಲೂ ಪ್ರಿಯನಾದ ಮಗನಾಗಿ ದಯವುಳ್ಳವನಾದ್ದರಿಂದ ನನ್ನನ್ನು ಬಿಟ್ಟು ಹೋಗಬಹುದೆ! ಸತ್ಯಸಂಧರಾದ ಯುಧಿಷ್ಠಿರಾದಿಗಳು ವನಕ್ಕೆ ಹೋಗಲೀ! ನೀನು ನನ್ನ ಸಮೀಪದಲ್ಲಿದ್ದು ನನ್ನನ್ನು ರಕ್ಷಿಸಿ ಈ ಧರ್ಮದಿಂದ ಶ್ರೇಯಸ್ಸನ್ನು ಪಡೆ!' ಎಂದು ಹೀಗೆ ಬಹುಪ್ರಕಾರವಾಗಿ ಪ್ರಲಾಪಿಸುತಲಿರುವ ಕುಂತಿಗೆ ಪಾಂಡವರು ಸಮಾಧಾನವನ್ನು ಮಾಡಿ ನಮಸ್ಕರಿಸಿ ಶೋಕಪೀಡಿತರಾಗಿ ಮುಂಭಕ್ಕೆ ಹೋದರು. ಆ ಬಳಿಕ ವಿದುರನು ದುಃಖಾರ್ತೆಯಾದ ಕುಂತಿಯನ್ನು ನೋಡಿ ತಾನೂ ದುಃಖಪಡುತ ಬಹುವಿಧ ವಚನಗಳಿಂದ ಕುಂತಿಗೆ ಸಮಾಧಾನವನ್ನು ಮಾಡಿ ತನ್ನ ಮನೆಗೆ ಕಳುಹಿಸಿದನು. ಆ ಬಳಿಕ ಪಾಂಡವರು ದೀನರಾಗಿ ವನಕ್ಕೆ ಹೋಗಲು, ಪುತ್ರಸ್ನೇಹ ಲಾಲಸೆಯಾದ ಕುಂತೀದೇವಿಯು ಪ್ರಲಾಪಿಸುತ್ತಿರಲು, ಸಭಾಮಧ್ಯದಲ್ಲಿ ದ್ರೌಪದೀದೇವಿ ಭಂಗಪಟ್ಟದ್ದನ್ನು ನೋಡಿ ಹಸ್ತಗಳಿಂದ ಮುಖಗಳನ್ನು ಮುಚ್ಚಿಕೊಂಡು ಕೌರವಾಂತಃಪುರದ ಸ್ತ್ರೀಯರುಗಳಷ್ಟುಮಂದಿಯೂ ಮಹಾಧ್ವನಿಯಿಂದ ರೋದನವನ್ನು ಮಾಡುತ್ತಿದ್ದರು."

---

## ೧೧೭ ನೇ ಅಧ್ಯಾಯ.—ಅನುದ್ಯೂತ ಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ಧರ್ಮರಾಯನು ಕುಂತೀದೇವಿಯನ್ನು ವಿದುರನಿಗೆ ಒಪ್ಪಿಸಿ ಆತನನ್ನು ಕಳುಹಿಸಿ ಸಹೋದರ ಸಮೇತನಾಗಿ ವನವಾಸಕ್ಕೆ ನಿಶ್ಚೈಸಿ ಭೂಷಣಾಂಬರಗಳನ್ನು ಬಿಟ್ಟು ಹೋಗುತಲಿರುವ ಸಮಯದಲ್ಲಿ ಆತನನ್ನು ನೋಡಿ ಹಸ್ತಿನಾಪಟ್ಟಣದ ಪೌರಜನಗಳೂ ಕೌರವ ಭೃತ್ಯವರ್ಗವೂ ಸ್ತ್ರೀಬಾಲವೃದ್ಧ ಸಮೇತರಾಗಿ ಹಾಹಾಕಾರವನ್ನು ಮಾಡುತ್ತಿದ್ದರು. ಮಹಾನುಭಾವರಾದ ಪಾಂಡುಪುತ್ರರು ಅರಣ್ಯಕ್ಕೆ ಹೋಗುವದನ್ನು ನೋಡಿ ನಾಲ್ಕು ವರ್ಣದ ಸ್ತ್ರೀಯರೂ ಗುಬ್ಬಚ್ಚಿಹಕ್ಕಿಗಳೋಪಾದಿಯಲ್ಲಿ ರೋದನವನ್ನು ಮಾಡುತ್ತಿದ್ದರು. ಮೊದಲು ದಶರಥರಾಮನು ರಾಜ್ಯವನ್ನು ಬಿಟ್ಟು ಅಡವಿಗೆ ಹೋದ ಸಮಯದಲ್ಲಿ ಅಯೋಧ್ಯಾಪುರದ ಜನಗಳು ಆತನನ್ನನುಸರಿಸಿ ಹೋದ ಚಂದದಿಂದ ಹಸ್ತಿನಾಪಟ್ಟಣದ ಸ್ತ್ರೀಬಾಲವೃದ್ಧ ಜನರು ಶೋಕಾಕುಲಮಾನಸರಾಗಿ ರಾಜಮಾರ್ಗಗಳಲ್ಲಿಯೂ ಉಪ್ಪರಿಗೆಗಳಲ್ಲಿಯೂ ಸಭಾಭವನಗಳಲ್ಲಿಯೂ ಆರ್ತನಾದಗಳಿಂದ ಶೋಕಿಸುತ್ತಿದ್ದರು. ಆ ಬಳಿಕ ಯುಧಿಷ್ಠಿರನು ಪುರೋಹಿತ ಸಮೇತನಾಗಿ ತಮ್ಮಂದಿರೂ ದ್ರೌಪದಿಯೂ ತನ್ನ ಸಂಗಡಲೇ ಬರುತ್ತಿರಲು ಧೈರ್ಯವನ್ನು ಆಶ್ರೈಸಿ ರಾಜಮಾರ್ಗದಲ್ಲಿ ಹೋಗಿ ವರ್ಧಮಾನ ದ್ವಾರದಿಂದ ಹೊರಟು ದುಃಖದಿಂದ ತಪಿಸುತ ತನ್ನ ಸಂಗಡ ಬರುವ ಪೌರಜನಗಳು ತನ್ನಲ್ಲಿರುವ ಪ್ರೇಮಾತಿಶಯದಿಂದ ಸಂಗಡಲೇ ಬರುತ್ತಿರುವದನ್ನು

ನೋಡಿ ಪ್ರೀತಿಪೂರ್ವಕವಾಗಿ ಗದ್ಗದಸ್ವರದಿಂದ ಇಂತೆಂದನು : 'ನೀವು ನಮ್ಮಲ್ಲಿ ಪ್ರೀತಿಯುಳ್ಳವರಾದ್ದರಿಂದ ನಮಗೆ ಪ್ರದಕ್ಷಿಣವನ್ನು ಮಾಡಿ ಸ್ತ್ರೀಬಾಲವೃದ್ಧಸಮೇತರಾಗಿ ಪಟ್ಟಣಕ್ಕೆ ಹೋಗಿರಿ ; ನಾನು ಪಟ್ಟಣದ್ದೆಸೆಯಿಂದ ಹೊರಟು ದುಃಖವನ್ನು ಬಿಟ್ಟು ತಮ್ಮಂದಿರೂ ಪಾಂಚಾಲಿಯೂ ಸಂಗಡಬರಲು, ವನದಲ್ಲಿ ಹನ್ನೆರಡು ವರ್ಷಗಳಿದ್ದು ಆ ಬಳಿಕ ಒಂದು ಸಂವತ್ಸರವು ಅಜ್ಞಾತವಾಸವಾಗಿದ್ದು ತಿರಿಗಿ ಬಂದು ನಿಮ್ಮನ್ನು ನೋಡುವಹಾಗೆ ಅನುಗ್ರಹವನ್ನು ಮಾಡಿರಿ' ಎಂದು ನುಡಿದನು. ಆತನ ದೀನಾಲಾಪಗಳನ್ನು ಕೇಳಿ ಸ್ತ್ರೀಬಾಲವೃದ್ಧಸಮೇತರಾದ ಪೌರಜನಗಳು ಉತ್ತರೀಯಗಳಿಂದಲೂ ಹಸ್ತಗಳಿಂದಲೂ ಮುಖಗಳನ್ನು ಮುಚ್ಚಿಕೊಳ್ಳುತ ತಾಯಿತಂದೆಗಳನ್ನೂ ಸುಹೃಜ್ಜನಗಳನ್ನೂ ಎಡಬಿಡುತಲಿರುವ ಚಂದದಿಂದ ಚಿಕ್ಕಮುಖದಿಂದ 'ಧರ್ಮರಾಯನು ವನಕ್ಕೆ ಹೋಗುತಲಿರ್ಥಾನೆ' ಎಂದು ಶೋಕದಿಂದ ಮುಹೂರ್ತಮಾತ್ರವು ನಿಶ್ಚೇಷ್ಟಿತರಾಗಿದ್ದರು. ಆ ಬಳಿಕ ಧೈರ್ಯವನ್ನು ಆಶ್ರೈಸಿ 'ಯುಧಿಷ್ಠಿರನು ವನವಾಸಕ್ಕೆ ಪೋಗುತಲಿದಾನಲ್ಲಾ; ಇನ್ನುಮೇಲೆ ನಮಗೆ ಯಾರು ದಿಕ್ಕು!' ಎಂದು ಪ್ರಲಾಪಿಸುತಿದ್ದರು. ಪಾಂಡವರು ಪೌರಜನಗಳನ್ನು ಪಟ್ಟಣಕ್ಕೆ ಕಳುಹಿಸಿ ವನವನ್ನು ಪೊಕ್ಕುದನ್ನು ನೋಡಿ ಆ ಪೌರಜನರು ಪಾಂಡವರಲ್ಲಿದ್ದ ಸ್ನೇಹಾತಿಶಯದಿಂದ ನಾಲ್ಕು ದಿಕ್ಕುಗಳಲ್ಲಿ ಪ್ರಲಾಪಿಸುತ ಅವರ ಸಂಗಡಲೇ ಹೋಗುತ 'ಧರ್ಮಪ್ರಧಾನರಾದ ಪಾಂಡವರು ರಾಜ್ಯಭ್ರಷ್ಟರಾಗಿ ವನವಾಸಕ್ಕೆ ಹೋಗುವಂಥಾದ್ದರಿಂದ ಧರ್ಮಕ್ಕಿಂತಲೂ ಅಧರ್ಮವೇ ದೊಡ್ಡದಾಯಿತು' ಎಂದು ಹೇಳುವಂಥಾವರೂ 'ಧರ್ಮಶ್ರೇಷ್ಠನಾದ ಧರ್ಮರಾಯನು ಹ್ಯಾಗೆ ವನದಲ್ಲಿರುವನೊ!' ಎಂದು ಚೇದದಿಂದ ನುಡಿಯುವಂಥಾವರೂ 'ಬಲಪರಾಕ್ರಮ ಧುರೀಣನಾದ ಭೀಮನು ಅಡವಿಯಲ್ಲಿ ಹ್ಯಾಗೆ ನಿರ್ವಹಿಸುವನೊ!' ಎಂದು ಕ್ಲೇಶಪಡುವಂಥಾವರೂ 'ಧನುರ್ಧರಾಗ್ರೇಸರನಾದ ಧನಂಜಯನು ವಿಪಿನದಲ್ಲಿ ವಾಸಮಾಡಿಕೊಂಡು ಹ್ಯಾಗಿರುವನೊ!' ಎಂದು ಪರಿತಪಿಸುವಂಥಾವರೂ 'ಬಾಲಕರಾಗಿ ಅತಿಸುಕುಮಾರದೇಹಿಗಳಾದ ನಕುಲಸಹದೇವರು ಅರಣ್ಯ ಸಂಚಾರಕ್ಕೆ ಯೋಗ್ಯರೇ!' ಎಂದು ಪ್ರಲಾಪಿಸುವಂಥಾವರೂ 'ಕೋಮಲಾಂಗಿಯಾಗಿ ಮಹಾರಾಜ ಪುತ್ರಿಯಾದ ದ್ರೌಪದಿಗೆ ವನವಾಸವು ಉಚಿತವೇ!' ಎಂದು ಅಧಿಕವಾಗಿ ಕ್ಲೇಶಪಡುವಂಥಾವರೂ ಆಗಿ ಅವರ ಗುಣಗಳನ್ನು ಬಾರಿಬಾರಿಗೂ ಉಗ್ಗಳಿಸಿ ಹೊಗಳುತಲಿದ್ದರು. ಪೌರಜನಗಳ ದುಃಖಪ್ರಳಾಪಗಳನ್ನು ಕೇಳಿ ಲಜ್ಜಾಭರದಿಂದ ಶಿರಸ್ಸನ್ನು ಬಗ್ಗಿಸಿಕೊಂಡು ಸುಹೃಜ್ಜನ ಸಮೇತವಾಗಿ ಭೀಷ್ಮನು ದ್ರೋಣನು ಕೃಪನು ಅಶ್ವತ್ಥಾಮನು ವಿದುರನು ವಿಕರ್ಣನು ಮತ್ತೂ ಮಿಕ್ಕಾದ ಕುರುವೃದ್ಧರೂ ಬ್ರಾಹ್ಮಣೋತ್ತಮರೂ ಶೋಕದಲ್ಲಿ ಮುಳುಗುತ ದುರ್ಯೋಧನನ ಭಯದಿಂದ ಏನೂ ಅನ್ನಲಾರದೆ ಸುಮ್ಮನೇ ಇದ್ದರು. ಅವರಲ್ಲಿ ಕೆಲವು ಬ್ರಾಹ್ಮಣೋತ್ತಮರು ನಿರ್ಭಯರಾಗಿ 'ಪಾಂಡವರಿಗೆ ಬಂದ ಕ್ಲೇಶಗಳನ್ನು ಮನಸ್ಸಿನಲ್ಲೆಣಿಸದೆ ದುರ್ಬುದ್ಧಿಯಾಗಿರುವ ಧೃತರಾಷ್ಟ್ರನು ಅಜ್ಞಾನಾಂಧನಾಗಿ ಧರ್ಮವನ್ನು ಅರಿಯದೆ ಅಧರ್ಮವನ್ನು ಮಾಡಿದನು ; ಧರ್ಮಾತ್ಮನಾದ ಧರ್ಮರಾಯನೂ ಬಾಹುಬಲಶಾಲಿಯಾದ ಭೀಮಸೇನನೂ ಅತಿರಥಶ್ರೇಷ್ಠನಾದ ಅರ್ಜುನನೂ ಮಹಾಪ್ರಾಜ್ಞರಾದ ಮಾದ್ರಿಯ ಮಕ್ಕಳೂ ಪಾಪಕ್ಕೆ ಹೋಗರು ; ಈ ಧೃತರಾಷ್ಟ್ರನು ಪಿತೃಧನವಾದ ರಾಜ್ಯವನ್ನು ಪಾಂಡವರು ಪರಿಪಾಲಿಸುವದಕ್ಕೆ ಸೈರಿಸಲಾರದೇ ಹೋದನು! ಭೀಷ್ಮ ದ್ರೋಣ ಕೃಪರು ಮೊದಲಾದವರು ಪಾಂಡವರಿಗೆ ಅರಣ್ಯವಾಸವನ್ನು ಪರಿಕಲ್ಪಿಸಿದ ಕಪಟದ್ಯೂತವನ್ನು ನಿಲ್ಲಿಸುವದಕ್ಕೆ ಸಾಮರ್ಥ್ಯವಿದ್ದರೂ ಸುಮ್ಮನೇಯಿದ್ದದ್ದರಿಂದ ಅಧರ್ಮವು ಬಾರದೇ ಇರುವದೇ! ಮೊದಲು ಭೀಷ್ಮನೂ ಧೃತರಾಷ್ಟ್ರನೂ ಪರಮಧಾರ್ಮಿಕನಾಗಿ ರಾಜರ್ಷಿಯಾದ ಪಾಂಡುಮಹಾರಾಜನೂ ಪ್ರಜೆಗಳನ್ನು ತಾಯಿತಂದೆಗಳೋಪಾದಿಯಲ್ಲಿ ಪೋಷಿಸಿದರು ; ಈಗ ಧೃತರಾಷ್ಟ್ರನು ಮಕ್ಕಳಮೇಲಣ ಮೋಹದಿಂದ ಧರ್ಮಶೀಲರಾಗಿ ಪ್ರಾಜ್ಞರಾಗಿರುವ ಪಾಂಡವರ ತೇಜಸ್ಸನ್ನು ಸಹಿಸಲಾರದೆ ವನಕ್ಕೆ ಕಳುಹಿಸಿದನು ; ಇಂಥಾ ಪಾಪಕರ್ಮನ ಪಟ್ಟಣದಲ್ಲಿರದೆ ಕೌರವರನ್ನು ಬಿಟ್ಟು ನಾವೆಷ್ಟುಮಂದಿಯೂ ಪಾಂಡವರಕೂಡೆ ಹೋಗಿ ಅರಣ್ಯದಲ್ಲಿ ವಾಸಮಾಡುವಾ!' ಎಂದು ದುಃಖಾರ್ತರಾಗಿ ನುಡಿಯುತಿದ್ದರು. ಆ ಬ್ರಾಹ್ಮಣೋತ್ತಮರ ವಾಕ್ಯಗಳನ್ನು ಕೇಳಿ ಧರ್ಮರಾಯನು ತಾನು ದುಃಖಾಕ್ರಾಂತನಾದರೂ ಸಂತೋಷವನ್ನು ಪಡುತ ಬ್ರಾಹ್ಮಣರನ್ನು ಕುರಿತು 'ಎಲೈ ಬ್ರಾಹ್ಮಣೋತ್ತಮರುಗಳಿರಾ, ವೃದ್ಧನಾಗಿ

ಗುರುವಾಗಿ ಕೌರವಶ್ರೇಷ್ಠನಾಗಿ ತಂದೆಯಾಗಿರುವ ನಮ್ಮ ಧೃತರಾಷ್ಟ್ರನ ಮನಸ್ಸಿಗೆ ಪ್ರೀತಿಯನ್ನು ಮಾಡುವದೇ ನಮಗೆ ಸಹಜವ್ರತವು; ನೀವೂ ನಮಗೆ ಪ್ರಾಣಬಂಧುಗಳಾದ್ದರಿಂದ ಪುತ್ರಮಿತ್ರ ಕಳತ್ರ ಸಮೇತರಾಗಿ ನಮಗೆ ಪ್ರದಕ್ಷಿಣವಾಗಿ ಪಟ್ಟಣಕ್ಕೆ ತಿರಿಗಿ ಹೋಗಿರಿ; ಹದಿಮೂರುವರುಷಗಳು ಹೋದಮೇಲೆ ನಾವು ಬಂದು ನಿಮ್ಮನ್ನು ನೋಡುತಲಿದೇವೆ ' ಎಂದು ನುಡಿದು ಮುಂದಕ್ಕೆ ನಡೆಯುತ್ತಿದ್ದನು" ಎಂದು ವೈಶಂಪಾಯನಮುನೀಶ್ವರನು ಜನಮೇಜಯರಾಯನಿಗೆ ಹೇಳಿದನು.

## ೧೧೮ ನೇ ಅಧ್ಯಾಯ.—ಅನುದ್ಯೂತಪರ್ವ ಶೇಷ.

ಅನಂತರದಲ್ಲಿ ಜನಮೇಜಯರಾಯನು ವೈಶಂಪಾಯನ ಮುನೀಂದ್ರನನ್ನು ನೋಡಿ "ಎಲೈ ವೈಶಂಪಾಯನ ಮುನೀಂದ್ರನೆ, ಪಾಂಡವರು ದುರ್ಯೋಧನಾದಿಗಳ ಕಪಟದ್ಯೂತದಿಂದ ಪರಾಜಿತರಾಗಿ ವನವಾಸಕ್ಕೆ ಹೋದ ಪ್ರಕಾರವನ್ನು ಸವಿಸ್ತಾರವಾಗಿ ಹೇಳಬೇಕು ' ಎಂದು ಕೇಳಿದನು. ವೈಶಂಪಾಯನಮುನೀಶ್ವರನು ಜನಮೇಜಯರಾಯನನ್ನು ಕುರಿತು ಇಂತೆಂದನು; 'ಎಲೈ ಜನಮೇಜಯನೆ ಪಾಂಡವರು ವನವಾಸಕ್ಕೆ ಹೋದ ತೆರವನ್ನು ಕೇಳು; ಪೂರ್ವದಲ್ಲಿ ಸತ್ಯಸಂಧನಾದ ರಾಮಭದ್ರನು ಸೀತಾ ಸಮೇತನಾಗಿ ಲಕ್ಷ್ಮಣನೊಡನೆ ಕೂಡಿ ಕೈಕೇಯಿಯ ದೆಸೆಯಿಂದ ರಾಜ್ಯಭ್ರಂಶವನ್ನೈದಿ ಇತರಜನ ದುರ್ಲಭವಾದ ಐಶ್ವರ್ಯವನ್ನು ಪರಿಹರಿಸಿ ಅಯೋಧ್ಯಾಪಟ್ಟಣದ್ದೆಸೆಯಿಂದ ಹೊರಟು ದಂಡಕಾರಣ್ಯಕ್ಕೆ ಹೋದ ಚಂದದಿಂದ ಧರ್ಮಾತ್ಮನಾದ ಧರ್ಮರಾಯನು ನೀಚನಾದ ಸುಯೋಧನನ ದೆಸೆಯಿಂದಲೂ ಮಾಯಾಬಲಶಾಲಿಯಾದ ಶಕುನಿಯ ದೆಸೆಯಿಂದಲೂ ತಂದೆಯಾದ ಧೃತರಾಷ್ಟ್ರನ ದೆಸೆಯಿಂದಲೂ ಕಪಟದ್ಯೂತದಲ್ಲಿ ಪರಾಜಿತನಾಗಿ ಸತ್ಪುರುಷರ ಧರ್ಮವನ್ನಾಶ್ರಯಿಸಿ ಅನೇಕವಾದ ಐಶ್ವರ್ಯವನ್ನು ಬಿಟ್ಟು ರಾಜ್ಯಹೀನನಾಗಿ ಹಸ್ತಿನಾಪಟ್ಟಣದ್ದೆಸೆಯಿಂದ ಹೊರಟು ಭಾರ್ಯಾ ಸಹೋದರಸಹಿತನಾಗಿ ವನಕ್ಕೆ ಹೋದನು. ಆ ಬಳಿಕ ಕುಮಾರಕರ ದುರ್ನೀತಿಯಿಂದ ದುಃಖಾಕ್ರಾಂತಮಾನಸನಾಗಿ ಭಯಭ್ರಾಂತನಾದ ಧೃತರಾಷ್ಟ್ರನು ತನ್ನ ಮನಸ್ಸಿನಲ್ಲಿ ಚಿಂತಿಸಿ ಸಮಾಧಾನವನ್ನು ಪಡೆಯಲಾರದೆ ವಿದುರನನ್ನು ಕರದು ' ಧರ್ಮರಾಯನು ವನವಾಸಕ್ಕೆ ಹೋದ ಸಮಯದಲ್ಲಿ ಹ್ಯಾಗೆ ಹೋದನು? ಭೀಮಾರ್ಜುನ ನಕುಲ ಸಹದೇವರೂ ಮಹಾ ತಪಸ್ವಿನಿಯಾದ ದ್ರೌಪದೀದೇವಿಯೂ ಪುರೋಹಿತನಾದ ಧೌಮ್ಯಾಚಾರ್ಯನೂ ಇವರೆಲ್ಲರೂ ಯಾವರೀತಿಯಿಂದ ಹೋದರು? ಅವರ ಇಂಗಿತ ಚೇಷ್ಟೆಗಳನ್ನು ನನಗೆ ವಿವರಿಸು ' ಎಂದು ಕೇಳಿದನು. ವಿದುರನು ಧೃತರಾಷ್ಟ್ರನನ್ನು ನೋಡಿ ' ಧರ್ಮರಾಯನು ವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ಹೋದನು; ಭೀಮನು ಬಾಹುದಂಡಗಳನ್ನು ಬೀಸುತ ಹೊರಟನು; ಅರ್ಜುನನು ಮಳಲನ್ನು ಚೆಲ್ಲುತ ಧರ್ಮರಾಯನ ಹಿಂದೆ ನಡದನು; ಚಿಂತಾವಿಹ್ವಲನಾಗಿ ಸೌಂದರ್ಯಶಾಲಿಯಾಗಿ ವೀರಾಗ್ರೇಸರನಾದ ನಕುಲನು ಧೂಳಿಧೂಸರಗಾತ್ರನಾಗಿ ಹೊರಟನು; ಸಹದೇವನು ಮುಖದಲ್ಲಿ ಧೂಳಿಯನ್ನು ತೊಡಕೊಂಡು ಹೊರಟನು; ಅತಿಮನೋಹರಾಕಾರಿಯಾಗಿ ಸೌಂದರ್ಯಶಾಲಿಯಾದ ಪಾಂಚಾಲಿಯು ರೋದನವನ್ನು ಮಾಡುತ ಕುರುಳುಗಳಿಂದ ಮುಖವನ್ನು ಮುಚ್ಚಿಕೊಂಡು ಧರ್ಮರಾಯನ ಹಿಂದುಗಡೆಯಲ್ಲಿ ಹೋದಳು; ಧೌಮ್ಯನು ಹಸ್ತದಿಂದ ದರ್ಭೆಮುಷ್ಟಿಯನ್ನೆತಕೊಂಡು ಯಮದೇವತಾಕಗಳಾಗಿ ರುದ್ರದೇವತಾಕಗಳಾದ ಸಾಮವೇದಗಳನ್ನು ಮಾರ್ಗದಲ್ಲಿ ಗಾನಮಾಡುತ ನಡದನು ' ಅಂದನು. ಧೃತರಾಷ್ಟ್ರನು ವಿದುರನನ್ನು ಕುರಿತು ' ಪಾಂಡವರು ಅರಣ್ಯಕ್ಕೆ ಹೋಗುವ ಸಮಯದಲ್ಲಿ ನಾನಾಚೇಷ್ಟೆಗಳಿಂದ ಹೋಗುವದಕ್ಕೆ ಕಾರಣವೇನು? ವಿವರಿಸು ' ಅಂದನು. ವಿದುರನು ಧೃತರಾಷ್ಟ್ರನನ್ನು ನೋಡಿ ' ಧರ್ಮರಾಯನು ನಿನ್ನ ಮಕ್ಕಳ ಮಾಯೋಪಾಯದಿಂದ ರಾಜ್ಯವೂ ಧನವೂ ಹೋದದ್ದರಿಂದ ಕ್ರೋಧೋದ್ದೀಪಿತನಾಗಿದ್ದರೂ ಹೃದಯದಲ್ಲಿ ಧರ್ಮವನ್ನೇ ಸ್ಥಿರವಾಗಿರಿಸಿಕೊಂಡು ತನ್ನ ಉಗ್ರದೃಷ್ಟಿಯಿಂದ ನೋಡಿದರೆ ಸಮಸ್ತರಾದವರೂ ಭಸ್ಮವಾದಾರೆಂದೆಣಿಸಿ ದುರ್ಯೋಧನಾದಿಗಳಲ್ಲಿ ದಯವುಳ್ಳವನಾದ್ದರಿಂದ ವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ಹೋದನು; ಭುಜಬಲಗರ್ವಿತನಾದ ಭೀಮಸೇನನು ಭುಜಾಟೋಪದಲ್ಲಿ ತನಗೆ ಸಮಾನನಾದವನು ಒಬ್ಬನೂ ಭೂಮಿಯಲ್ಲಿಲ್ಲವೆಂದು ಭುಜಗಳನ್ನು ಬೀಸುತ ಆ ಭುಜಗಳಿಂದಲೇ

ಸಕಲ ಶತ್ರುಸಂಹಾರವನ್ನು ಮಾಡುವದಾಗಿ ತಿಳಿಹಿಸುತ ನಡೆದನು; ಅರ್ಜುನನು ಮರಳು ಚೆಲ್ಲಿದ ರೀತಿಯಲ್ಲಿ ಅತಿ ನಿಬಿಡವಾದ ಶರಸಮೂಹಗಳನ್ನು ಶತ್ರುಗಳ ಮೇಲೆ ಪ್ರಯೋಗಿಸಲುಳ್ಳವನೆಂದು ಸೂಚನೆಯನ್ನು ಮಾಡುತ ಹೋದನು; ಅತಿ ಸೌಂದರ್ಯಶಾಲಿಯಾದ ನಕುಲನು ಸ್ತ್ರೀಜನಗಳಿಗೆ ತನ್ನಲ್ಲಿ ಮೋಹವು ಹುಟ್ಟದಿರುವರೀತಿಗೆ ರಜೋದೂಷಿತಾಂಗನಾಗಿ ನಡೆದನು; ಸಹದೇವನು ದುರ್ದೆಸೆಯಲ್ಲಿದ್ದ ತನ್ನನ್ನು ಒಬ್ಬರೂ ತಿಳಿಯಬಾರದೆಂದು ಮುಖದಲ್ಲಿ ಧೂಳನ್ನು ತೊಡೆದುಕೊಂಡು ಹೊರಟನು, ರಜೋಗೂಷಿತವಾದ ಏಕವಸ್ತ್ರವನ್ನು ಧರಿಸಿ ಕೆದರಿದ ಕೇಶಗಳಿಂದ ಕೂಡಿ ರೋದನವನ್ನು ಮಾಡುತ ಯಾರದೆಸೆಯಿಂದ ತನಗೆ ದುರವಸ್ಥೆ ಬಂತೋ ಅಂಥಾವರ ಹೆಂಡತಿಗಳು ಯುದ್ಧದಲ್ಲಿ ಹತರಾದ ತಮ್ಮ ಪತಿಸುತಮಿತ್ರರಿಗಾಗಿ ಶೋಣಿತದಿಗ್ಧಾಂಗರಾಗಿ ಕೆದರಿದ ಮುಂಡೇಕೂದಲುಗಳುಳ್ಳಂಥಾವರಾಗಿ ಹದಿನಾಲ್ಕನೇ ಸಂವತ್ಸರದಲ್ಲಿ ಸ್ನಾನವನ್ನು ಮಾಡಿ ಹಸ್ತಿನಾಪಟ್ಟಣವನ್ನು ಪ್ರವೇಶಿಸುವರೆಂದು ಹೊರಟಳು; ಧೌಮ್ಯನು ಪಾಂಡವರನ್ನು ಪಟ್ಟಣದ್ದೆಸೆಯಿಂದ ಹೊರಡಿಸಿದಂಥಾ ಧೃತರಾಷ್ಟ್ರನ ಮಕ್ಕಳೆಷ್ಟುಮಂದಿಯೂ ಯುದ್ಧರಂಗದಲ್ಲಿ ಸಂಹರಿಸಲ್ಪಟ್ಟಮೇಲೆ ಹಾಗೆ ಸಾಮಗಾನವನ್ನು ಮಾಡುವರೆಂದು ದರ್ಭೆಗಳನ್ನು ದಕ್ಷಿಣಾಗ್ರಗಳಾಗಿ ಹಿಡಿದು ನಡೆದನು' ಅಂದನು.

“ಕೇಳು ಜನಮೇಜಯನೇ, ಆ ಬಳಿಕ ಧೃತರಾಷ್ಟ್ರನು ವಿದುರನನ್ನು ಕುರಿತು ‘ಪಟ್ಟಣದಲ್ಲಿಯೂ ದೇಶದಲ್ಲಿಯೂ ಇರುವಂಥಾ ಜನರು ಏನು ಹೇಳಿಕೊಳ್ಳುತಲಿಧಾರೆ? ಅದೆಷ್ಟನ್ನೂ ಯತಾರ್ಥವಾಗಿ ತಿಳುಹಿಸು' ಅಂದನು. ವಿದುರನು ಧೃತರಾಷ್ಟ್ರನನ್ನು ನೋಡಿ ‘ಎಲೈ ಧೃತರಾಷ್ಟ್ರನೇ, ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ, ಜನಗಳೂ ‘—ಅಕಟಕಟಾ! ನಮಗೆ ರಕ್ಷಕರಾದ ಪಾಂಡವರು ಧೃತರಾಷ್ಟ್ರನು ಮಾಡಿದ ಕಪಟೋಪಾಯದಿಂದ ದುಃಖಾರ್ತರಾಗಿ ಹೋದರು!—' ಎಂದು ಶೋಕಾಕುಲಮಾನಸರಾಗಿ ನಿನ್ನನ್ನು ನಿಂದಿಸುತಲಿಧಾರೆ; ಈಪ್ರಕಾರದಿಂದ ಪುರುಷಶ್ರೇಷ್ಠರಾದ ಕೌಂತೇಯರು ಹಸ್ತಿನಾಪಟ್ಟಣದ್ದೆಸೆಯಿಂದ ಹೊರಟು ಮಹಾರಣ್ಯಕ್ಕೆ ಹೋಗುವ ಸಮಯದಲ್ಲಿ ಮೇಘಗಳಿಲ್ಲದೆ ಮಿಂಚುಗಳು ಹುಟ್ಟುವದು, ಪರ್ವವಿಲ್ಲದ ಸಮಯದಲ್ಲಿ ರಾಹುವು ಸೂರ್ಯಮಂಡಲವನ್ನು ನುಂಗುವದು, ಭೂಮಂಡಲವಷ್ಟೂ ಚಲಿಸುವದು, ಎಲ್ಲಿನೋಡಿದರೂ ಅಪಸವ್ಯವಾಗಿ ಕೊಳ್ಳಿಗಳು ಬೀಳುವದು, ಮಾಂಸಗಳನ್ನು ಭಕ್ಷಿಸುತ ಹದ್ದು ನರಿ ಕಾಗೆ ಮೊದಲಾದ ದುಷ್ಟಜಂತುಗಳು ದೇವತಾಗ್ರಹಗಳಲ್ಲಿಯೂ ಜಗತೀಮದಗಳಲ್ಲಿಯೂ ಕೋಟೆಕೊತ್ತಲಗಳಲ್ಲಿಯೂ ಉಪ್ಪರಿಗೆಗಳಲ್ಲಿಯೂ ಕೂಗುವದು— ಇವು ಮೊದಲಾದ ಮಹೋತ್ಪಾತಗಳು ತೋರಿದ್ದರಿಂದಲೂ ನಿನ್ನ ದುರ್ಮಂತ್ರದಿಂದಲೂ ಕೌರವರಿಗಷ್ಟೂ ವಿನಾಶವು ಬರಲುಳ್ಳಂಥಾದ್ದು!' ಅಂದನು. ಆ ಸಮಯದಲ್ಲಿ ಅನೇಕ ಋಷಿಗಣಪರಿವೃತನಾದ ನಾರದಮಹಾಮುನೀಶ್ವರನು ಸಭಾಮಧ್ಯದಲ್ಲಿ ಕೌರವರ ಸನ್ನಿಧಾನದಲ್ಲಿ ನಿಂತು ಅವರನ್ನು ಕುರಿತು ‘ಇನ್ನು ಹನ್ನೆರಡು ವರ್ಷಗಳು ತುಂಬಿ ಹದಿಮೂರನೇ ವರ್ಷದಲ್ಲಿ ಅಜ್ಞಾತವಾಸವು ಕಳೆದು ಹದಿನಾಲ್ಕನೇ ವರ್ಷದಲ್ಲಿ ದುರ್ಯೋಧನನು ಮಾಡಿದ ದುರ್ನೀತಿಯಿಂದ ಭೀಮಾರ್ಜುನರ ಭುಜಬಲದಿಂದ ಧೃತರಾಷ್ಟ್ರನ ಮಕ್ಕಳಿಗಷ್ಟೂ ನಾಶ ಬರುತಲಿದೆ!' ಎಂದು ಘಟ್ಟಿಯಾಗಿ ನುಡಿದು ಬ್ರಹ್ಮತೇಜೋವಿರಾಜಮಾನನಾಗಿ ಅಂತರ್ಧಾನವನ್ನೈದಿದನು.

“ಆ ಬಳಿಕ ಧರ್ಮರಾಯನು ಮೊದಲಾದವರು ವನವಾಸಕ್ಕೆ ಹೋದಮೇಲೆ ಪೌರಜನಗಳು ಕರುಗಳನ್ನು ಅಗಲಿದ ಧೇನುಸಮೂಹಗಳೋಪಾದಿಯಲ್ಲಿ ದುಃಖಿಸುತ ದೀನರಾಗಿ ಪುನಃ ಪಟ್ಟಣವನ್ನು ಪ್ರವೇಶಿಸಿದ ಸಮಯದಲ್ಲಿ ಸ್ತ್ರೀಬಾಲವೃದ್ಧ ಸಹಿತವಾದ ಹಸ್ತಿನಾಪಟ್ಟಣವು ನಿಶ್ಶಬ್ದವಾಗಿ ಉತ್ಸವರಹಿತವಾಗಿ ತೋರಿತು. ಮಹಾ ರೋಗಪೀಡಿತರಾದವರ ಚಂದದಿಂದ ಸಕಲ ಜನಗಳೂ ಸಂತೋಷರಹಿತರಾಗಿ ಪಾಂಡವರನ್ನು ಸ್ಮರಿಸಿ ದುಃಖಿಸುತ್ತಿದ್ದರು. ಮತ್ತೂ ಪೌರಜನಗಳು ಅಲ್ಲಲ್ಲಿ ಗುಂಪುಕೂಡಿ ‘ದುಃಖಾರ್ತೆಯಾದ ಕುಂತೀದೇವಿಯು ಪುತ್ರಹೀನೆಯಾದ್ದರಿಂದ ಕರುವನ್ನು ಅಗಲಿದ ಹಸುವಿನೋಪಾದಿಯಲ್ಲಿ ಪ್ರಲಾಪಿಸುತಲಿಧಾಳೆ! ಧರ್ಮರಾಯನು ಅರಣ್ಯಕ್ಕೆ ಹೋ

ಗುವದರಿಂದ ಕುರುವೃದ್ಧರು ಶೋಕಪರಾಯಣರಾಗಿಧಾರೆ! ಈ ಧೃತರಾಷ್ಟ್ರನು ಇಷ್ಟು ಮಾಡಿದನಲ್ಲಾ!' ಎಂದು ನುಡಿಯುತ ಕ್ಲೇಶಪಡುತ್ತಿದ್ದರು. ಆ ಸಮಯದಲ್ಲಿ ಬ್ರಾಹ್ಮಣರು ಪಾಂಡವರನ್ನು ಸ್ಮರಿಸಿ 'ಧರ್ಮಶಾಲಿಯಾದ ಯುಧಿಷ್ಠಿರನು ನಿರ್ಜನವಾದ ವನದಲ್ಲಿ ಯಾವಪ್ರಕಾರದಿಂದ ಇರುವನೋ! ಭೀಮಸೇನನು ಮೊದಲಾದ ತಮ್ಮಂದರು ಮಹಾಸುಖೋಚಿತೆಯಾಗಿ ದುಃಖಾನುಭವಕ್ಕೆ ಅಯೋಗ್ಯಳಾಗಿರುವ ದ್ರೌಪದಿಯನ್ನು ಯಾವರೀತಿಯಿಂದ ಇರಿಸಿಕೊಂಡಿಧಾರೆೊ!' ಎನ್ನುತ ಬಹುಪ್ರಕಾರವಾಗಿ ಪ್ರಳಾಪಿಸುತ್ತಿದ್ದರು. ಆ ರಾಜ್ಯದಲ್ಲಿದ್ದವರೆಲ್ಲರು ಯಾವಾಗಲೂ ಮಹಾನುಭಾವರಾದ ಪಾಂಡವರನ್ನು ಸ್ಮರಿಸುತ ಶಸ್ತ್ರಗಳ ಘಾಯಗಳನ್ನು ಪಡದವರ ತೆರದಿಂದ ಅಹೋರಾತ್ರೆಯೂ ನಿದ್ರಾಹಾರಗಳನ್ನು ಬಿಟ್ಟು ತಮ್ಮಕೂಡೆ ಮಾತನಾಡಿದವರಿಗೆ ಪ್ರತ್ಯುತ್ತರವನ್ನು ಕೊಡದೆ ದುಃಖದಿಂದ ಅಪಹರಿಸಲ್ಪಟ್ಟಂಥಾ ಮನಸ್ಸುಳ್ಳವರಾಗಿ ನಿಶ್ಚೇಷ್ಟಿತರ ತೆರದಿಂದ ಸೀತಾಲಕ್ಷ್ಮಣ ಸಮೇತನಾದ ರಾಮಸ್ವಾಮಿಯು ದಂಡಕಾರಣ್ಯಕ್ಕೆ ಹೋದ ಸಮಯದಲ್ಲಿ ಅಯೋಧ್ಯಾಪುರದ ಜನಗಳು ದುಃಖಪಟ್ಟ ರೀತಿಗೆ ದುಃಖಪಡುತ್ತಿದ್ದರು."

---

## ೧೧೯ ನೇ ಅಧ್ಯಾಯ.—ಅನುದ್ಯೂತಪರ್ವ ಶೇಷ.

"ಕೇಳು ಜನಮೇಜಯನೆ, ಆ ಬಳಿಕ ವಿದುರನ ದೆಸೆಯಿಂದ ಪೌರಜನಗಳ ವಾಕ್ಯಗಳನ್ನು ಕೇಳಿ ಧೃತರಾಷ್ಟ್ರನು ಸಕಲ ಬಂಧುಜನ ಸಮೇತನಾಗಿ ಭಯಭ್ರಾಂತನಾಗಿ ಶೋಕಮೋಹಿತನಾಗಿದ್ದನು. ಕರ್ಣ ಶಕುನಿ ಸಮೇತನಾದ ಸುಯೋಧನನು ದ್ರೋಣಾಚಾರ್ಯನನ್ನು ತನಗೆ ಆಧಾರವಾದ ಮಹಾದ್ವಿಪನನ್ನಾಗೆಣಿಸಿ ಸಕಲ ರಾಜ್ಯವನ್ನೂ ಆತನ ವಶವನ್ನಾಗಿ ಕೊಟ್ಟು, ಶರಣವನ್ನೈದಿದನು. ದ್ರೋಣಾಚಾರ್ಯನು ದುರಭಿಮಾನಶಾಲಿಗಳಾದ ದುರ್ಯೋಧನ ದುಶ್ಶಾಸನ ಕರ್ಣ ಶಕುನಿಗಳು ಇನ್ನೂ ಮಿಕ್ಕಾದ ಕುರುವೃದ್ಧರು ಮೊದಲಾದವರನ್ನು ಕುರಿತು 'ದೇವಕುಮಾರಕರಾದ ಪಾಂಡವರು ಅವಧ್ಯರೆಂದು ಬ್ರಾಹ್ಮಣಶ್ರೇಷ್ಠರು ಹೇಳುವರು; ನೀವು ನನ್ನನ್ನು ಶರಣವನ್ನೈದಿದ್ದರಿಂದ ನನ್ನ ಕೈಯಲ್ಲಾದಷ್ಟು ಧೃತರಾಷ್ಟ್ರನು ಮೊದಲಾದ ಕೌರವರನ್ನು ಪರಿಪಾಲಿಸುತಲಿಧೇನೆ; ಆ ಬಳಿಕ ಈಶ್ವರನಿದಾನೆ! ಕಪಟದ್ಯೂತದಿಂದ ಜಯಿಸಲ್ಪಟ್ಟ ಕೌಂತೇಯರು ಧರ್ಮಪರಿಪಾಲನಾರ್ಥವಾಗಿ ಹನ್ನೆರಡು ವರ್ಷಗಳು ವನದಲ್ಲಿದ್ದು ತಮ್ಮ ಪ್ರತಿಜ್ಞೆಯನ್ನು ನೆರವೇರಿಸಿ ನಮಗೆ ಮಹಾಭಯವುಂಟಾಗುವಹಾಗೆ ವೈರವನ್ನಾಶ್ರೈಸಿ ಬರುವರು; ಅದಲ್ಲದೆ ದ್ರುಪದರಾಯನು ನನಗೆ ಸ್ನೇಹಿತನಾಗಿದ್ದರೂ ಯುದ್ಧರಂಗದಲ್ಲಿ ಆತನನ್ನು ರಾಜ್ಯಭ್ರಷ್ಟನಾಗಿ ಮಾಡಿದ್ದರಿಂದ ಅತಿಕುಪಿತನಾಗಿ ನನ್ನನ್ನು ಕೊಲ್ಲುವದಕ್ಕೆ ಸಾಮರ್ಥ್ಯವುಳ್ಳ ಮಗನನ್ನು ಪಡಯಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದನು; ಆತನು ಅಗ್ನಿಜ್ವಾಲಾ ಸಮಾನದೇಹನಾಗಿ ದೇವಪ್ರಸಾದ ಲಬ್ಧನಾಗಿ ಮಹಾಕಾರ್ಮುಕಹಸ್ತನಾಗಿ ಕವಚಧಾರಿಯಾಗಿ ದಿವ್ಯಾಸ್ತ್ರಕೋವಿದನಾದ ಧೃಷ್ಟದ್ಯುಮ್ನನನ್ನೂ ಕೃಷ್ಣಾ ಎಂಬ ಮಗಳನ್ನೂ ಕೊಟ್ಟನು; ಅಂಥಾ ಪುರುಷಶ್ರೇಷ್ಠನಾದ ಧೃಷ್ಟದ್ಯುಮ್ನನು ಪಾಂಡವರಿಗೆ ಪರಮಮಿತ್ರನಾಗಿಧಾನೆ; ಆತನನ್ನು ದ್ರೋಣಹಂತನೆಂದು ಸಕಲರಾಜವರೂ ನುಡಿಯುವರು; ನಾನು ಮನುಷ್ಯನಾದ್ದರಿಂದ ನನ್ನ ಮನಸ್ಸಿನಲ್ಲಿ ಮಹಾಭೀತಿ ಹುಟ್ಟದೆ; ಈ ಪ್ರಾಣವು ನಿನ್ನ ಆಧೀನವಾದ್ದರಿಂದ ಈ ವಿರೋಧಿಗಳಮೇಲೆ ಕಾಣಿಸಿಕೊಂಡು ತೋರಿದ ಮಾತ್ರವು ಯುದ್ಧಮಾಡುತಲಿಧೇನೆ; ನಿನಗೆ ಅಶುಭಸೂಚಕವಾದ ಕಾಲವು ಬರುತಲಿದೆ; ಇದುವರಿವಿಗು ನೀವು ಮಾಡಿದ ಕಾರ್ಯವು ಹಾಗಿರಲಿ: ನಿನ್ನ ಐಶ್ವರ್ಯಸುಖವನ್ನು ಅಭ್ರಚ್ಛಾಯೆಯಾಗೆಣಿಸಿ ಇನ್ನಾದರೂ ಶ್ರೇಯಸ್ಸು ಬರುವಂಥಾ ಕಾರ್ಯವನ್ನು ಆಲೋಚಿಸಿ ಪಾಂಡವರನ್ನು ಕರತರಿಸಿ ಅವರ ಕೂಡೆ ಸ್ನೇಹವನ್ನು ಮಾಡಿಕೊ; ಇದು ನಿನಗೆ ಸಮ್ಮತವಲ್ಲದಿದ್ದರೆ ಅನೇಕ ಯಾಗಗಳನ್ನು ಮಾಡಿ ಬೇಕಾದ ಸುಖಗಳಲ್ಲಿ ಪ್ರವರ್ತಿಸು; ಇನ್ನೂ ಹದಿನಾಲ್ಕನೇ ವರ್ಷದಲ್ಲಿ ಮಹತ್ತಾದ ಯುದ್ಧವು ನಿನಗೆ ಬರುತಲಿದೆ; ನಿನಗೆ ತೋರಿದ ರೀತಿಯಿಂದ ಇರು' ಎಂದು ನುಡಿ

ನು. ದ್ರೋಣಾಚಾರ್ಯನ ವಾಕ್ಯಗಳನ್ನು ಕೇಳಿ ಧೃತರಾಷ್ಟ್ರನು 'ದ್ರೋಣಾಚಾರ್ಯನ ವಾಕ್ಯಗಳಷ್ಟು ಯು
ರ್ಥವಾಗಿ ತೋರುತ್ತಲಿದೆ; ಎಲೈ ವಿದುರನೆ, ನೀನು ಶೀಘ್ರವಾಗಿ ಹೋಗಿ ಪಾಂಡವನ್ನು ಕರದುಕೊಂಡು ಬಾ;
ಅವರು ತಿರಿಗಿ ಬಾರದಿದ್ದರೆ ರಥಗಳನ್ನು ಶಸ್ತ್ರಾಸ್ತ್ರಗಳನ್ನು ಬೇಕಾದ ಧನಧಾನ್ಯಗಳನ್ನು ಭೃತ್ಯವರ್ಗಗಳನ್ನೂ
ಕೊಟ್ಟು ಅವರಿಗೆ ಸಂತೋಷವನ್ನು ಮಾಡಿ ಬಾ' ಅಂದನು."

## ೧೨೧ ನೇ ಅಧ್ಯಾಯ.—ಅನುದ್ಯೂತಪರ್ವ ಸಮಾಪ್ತಿ.

"ಕೇಳು ಜನಮೇಜಯನೆ, ಆ ಬಳಿಕ ದ್ಯೂತದಲ್ಲಿ ಪರಾಜಿತರಾದ ಪಾಂಡವರು ವನಕ್ಕೆ ಹೋದ ಬಳಿಕ
ಈ ರೀತಿಯಿಂದ ಚಿಂತಾಕ್ರಾಂತನಾಗಿ ನಿಟ್ಟುಸುರುಗಳನ್ನು ಬಿಡುತ ಚಂಚಲಹೃದಯನಾಗಿದ್ದ ಧೃತರಾಷ್ಟ್ರನನ್ನು
ಕುರಿತು ಸಂಜಯನು 'ಎಲೈ ಕೌರವೇಂದ್ರನೆ, ಪಾಂಡವರನ್ನು ಮಹಾರಣ್ಯಕ್ಕೆ ಕಳುಹಿಸಿ ಸಕಲೈಶ್ವರ್ಯ ಸಮೇತವಾ
ದ ರಾಜ್ಯವನ್ನು ತೆಕ್ಕೊಂಡ ಬಳಿಕ ನಿನಗೆ ಚಿಂತೆಯಾಕೆ?' ಎಂದು ಕೇಳಿದನು. ಆತನು 'ಪರಮದುರ್ಜಯರಾಗಿ
ಸುಹೃತ್ಸಮೇತರಾಗಿ ಅತಿರಥಶ್ರೇಷ್ಠರಾದ ಪಾಂಡವರ ಕೂಡೆ ವಿರೋಧವುಂಟಾಗಿಯೂ ದುಃಖಿಸದೇ ಇರಬಹುದೇ!'
ಅಂದನು. ಆತನನ್ನು ನೋಡಿ ಸಂಜಯನಿಂತೆಂದನು: ಭೀಷ್ಮದ್ರೋಣ ವಿದುರಾದಿಗಳು ತಡೆದರೂ ನಿನ್ನ ಮಗನಾ
ದ ದುರ್ಯೋಧನನು ಲಜ್ಜಾವಿಹೀನನಾಗಿ ಸೂತಪುತ್ರನಾದ ಪ್ರಾತಿಕಾಮಿಯನ್ನು ಕಳುಹಿಸಿ ಧರ್ಮಚಾರಿಣಿಯಾಗಿ
ಪಾಂಡವರಿಗೆ ಪ್ರಿಯಭಾರ್ಯೆಯಾದ ದ್ರೌಪದೀದೇವಿಯನ್ನು ಸಭಾಮಧ್ಯಕ್ಕೆ ಎಳತಂದು ಬಹುಪ್ರಕಾರದಿಂದ ಭಂಗಪಡಿ
ಸಿದನಾದ್ದರಿಂದ ಇನ್ನುಮೇಲೆ ಸಕಲಜನ ವಿನಾಶಕಾರಣವಾದ ಸಮರವು ಬಾರದೆ ಹೋಗುವದೇ! ಲೋಕದಲ್ಲಿ ದೈ
ವವು ಯಾರನ್ನು ಕೆಡಿಸಬೇಕೆಂದು ಇಚ್ಛೈಸುತಲಿದೆಯೊ ಅವರಿಗೆ ಬುದ್ಧಿ ವೈಪರೀತ್ಯವನ್ನು ಕಲ್ಪಿಸುವದು; ಆತನು
ಅಕೃತ್ಯಗಳನ್ನೇ ಮಾಡುತಿದ್ದರೆ ನಾಶವು ಬರುವದು; ಅಂಥಾ ವಿನಾಶಕಾಲದಲ್ಲಿ ಇದು ನೀತಿಯು, ಇದು ಅನೀತಿಯು,
ಇದು ಅರ್ಥವು, ಇದು ಅನರ್ಥವು ಎಂದು ತೋರದು; ಕಾಲನು ಈಪ್ರಕಾರದಿಂದ ವಿಪರೀತ ಬುದ್ಧಿಯನ್ನು ಹುಟ್ಟಿ
ಸುವನೇ ಹೊರತಾಗಿ ತಾನೇ ದಂಡವನ್ನು ಎತ್ತಿ ಸಂಹರಿಸುವನೇ; ಅಯೋನಿಜೆಯಾಗಿ ಸೌಂದರ್ಯವತಿಯಾಗಿ ಮಹಾಕು
ಲ ಪ್ರಸೂತೆಯಾಗಿ ಗಂಭೀರಹೃದಯೆಯಾಗಿ ಸರ್ವ ಧರ್ಮಜ್ಞೆಯಾಗಿ ಕೀರ್ತಿಶಾಲಿಯಾಗಿ ವನಿತಾರತ್ನವಾಗಿ ಏಕವ
ಸ್ತ್ರಧಾರಿಣಿಯಾದ ಪಾಂಚಾಲಿಯು ಋತುಮತಿಯಾಗಿರುವ ಸಮಯದಲ್ಲಿ ಮುಂಡೇಕೂದಲುಗಳನ್ನು ಹಿಡಿದು ಗುಬ್ಬ
ಚ್ಚಿಹಕ್ಕಿಯೋಪಾದಿಯಲ್ಲಿ ಮೊರೆಯಿಡುತ್ತಿರಲೂ ಸಭಾಮಧ್ಯಕ್ಕೆ ಎಳಕೊಂಡುಬಂದನು! ದದ್ಯೂತ ವಿಶಾರದ
ನಾದ ನಿನ್ನ ಕುಮಾರಕನು ಒಬ್ಬನು ಹೊರತಾಗಿ ಮತ್ತೊಬ್ಬರು ಇಂಥಾ ಅಕೃತ್ಯಗಳನ್ನು ಆಚರಿಸುವರೇ! ಐಶ್ವ
ರ್ಯವನ್ನೂ ರಾಜ್ಯವನ್ನೂ ಭೋಗವನ್ನೂ ವಸ್ತ್ರಗಳನ್ನೂ ಪರಿಜನಗಳನ್ನೂ ಅಪಹರಿಸಿ ಕೌಂತೇಯರನ್ನು ಭೃತ್ಯ
ರನ್ನಾಗಿ ಮಾಡಿಕೊಳ್ಳಲು ಅವರು ಪರಾಕ್ರಮವಂತರಾದರೂ ಧರ್ಮಪಾಶಬದ್ಧರಾಗಿ ಅಶಕ್ತರೋಪಾದಿಯಲ್ಲಿದ್ದ ಸ
ಮಯದಲ್ಲಿ ದುಃಖಾರ್ತೆಯಾದ ದ್ರೌಪದಿಯನ್ನು ಈ ಕರ್ಣದುಶ್ಯಾಸನರು ಅಷ್ಟುಮಂದಿಯೂ ಕೇಳುತ್ತಿರಲು ಅನೇ
ಕ ಪರುಷಭಾಷಣೆಗಳನ್ನಾಡಿದರು; ಪತಿವ್ರತಾರತ್ನವಾದ ಪಾಂಚಾಲಿಯು ಕೋಪದೃಷ್ಟಿಯಿಂದ ನೋಡಿದರೆ ಸಕಲ
ರಾದವರೂ ಭಸ್ಮವಾಗಿ ಹೋಗರೆ! ಇಂಥಾ ಅನರ್ಥವನ್ನು ಮಾಡುವದರಿಂದ ಅತಿಭಯಂಕರವಾದ ಸಮರವು ಆಗ
ತಕ್ಕಂಥಾದ್ದು!' ಎಂದು ನುಡಿದನು. ಧೃತರಾಷ್ಟ್ರನು ಸಂಜಯನನ್ನು ನೋಡಿ 'ಎಲೈ ಸಂಜಯನೆ, ನಮಗೆ ಪಾಂ
ಡವರಲ್ಲಿಯೂ ದುರ್ಯೋಧನಾದಿಗಳಲ್ಲಿಯೂ ಭೇದವುಂಟೇ! ದ್ರೌಪದಿಯನ್ನು ಸಭಾಮಧ್ಯಕ್ಕೆ ಕರತಂದಾಗ ಗಾಂಧಾರಿ
ಯು ಸೊಸೆಗಳೊಡನೆ ಮಹಾ ದುಃಖದಿಂದ ರೋದನವನ್ನು ಮಾಡಿದಳು: ಆ ಸಮಯದಲ್ಲಿ ವಿನಾಶಸೂಚಕಗಳಾದ
ಶಿಡಿಲುಗಳೂ ಕೊಳ್ಳಿಗಳೂ ಬಿದ್ದವು! ಪರ್ವಕಾಲವಲ್ಲದಿದ್ದರೂ ರಾಹುವು ಸೂರ್ಯನನ್ನು ನುಂಗಿದನು! ರಥಶಾಲಗ
ಳು ತಮಗೆ ತಾವೆ ಸಕಲಪ್ರಾಣಿ ಭಯಂಕರವಾಗಿ ಉರಿದವು! ಕೌರವರಿಗೆ ಅಶುಭವಾಗಿ ಧ್ವಜಗಳು ಬಿದ್ದವು! ದು
ರ್ಯೋಧನನ ಅಗ್ನಿಹೋತ್ರ ಗೃಹದಲ್ಲಿ ನರಿಗಳು ಕೂಗಿದವು! ನಾನಾದಿಕ್ಕುಗಳಲ್ಲಿ ಕತ್ತೆಗಳು ಧ್ವನಿಮಾಡಿದವು! ಇ

ನ್ನೂ ಅನೇಕವಾದ ಮಹೋತ್ಪಾತಗಳು ತೋರಿದವು! ಆ ಬಳಿಕ ಭೀಷ್ಮದ್ರೋಣ ವಿದುರ ಸಂಜಯ
ಸೋಮದತ್ತ ಬಾಹ್ಲೀಕ ಮೊದಲಾದವರು ನನ್ನ ಸನ್ನಿಧಾನಕ್ಕೆ ಬಂದಲ್ಲಿ ಇಷ್ಟುಮಂದಿಯೂ ವಿದುಗನೂ
ಈ ವಿವರಗಳನ್ನು ತಿಳುಹಿಸಲು ನಾನು ದ್ರೌಪದಿಯನ್ನು ಕರದು '—ನಿನಗೆ ಮನೋಭೀಷ್ಟವಾದ ವರವನ್ನು
ಡುತಲಿಧೇನೆ; ಬೇಡು—' ಎಂದು ಕೇಳಲು ಆಕೆಯು ತೇಜೋವಿರಾಜಮಾನರಾಗಿ ರಥಾದಿ ಸಾಧನ ಸಮೇತ
ತನ್ನ ಪತಿಗಳಿಗೆ ದಾಸ್ಯವಿಲ್ಲದ ರೀತಿಗೆ ವರವನ್ನು ಕೊಡಬೇಕೆನಲೂ ನಾನು ಹಾಗೇ ಆಗಲಿ ಎಂದು ವರವನ್ನು
ಟ್ಟು ಧರ್ಮರಾಯನನ್ನು ತಮ್ಮಂದಿರು ಪತ್ನಿ ಸಮೇತನಾಗಿ ಸಕಲ ಐಶ್ವರ್ಯವನ್ನು ಕೊಟ್ಟು ಆತನ ರಾಜ್ಯಕ್ಕೆ
ಳುಹಿಸಿದೆನು; ಆ ಸಮಯದಲ್ಲಿ ಮಹಾಪ್ರಾಜ್ಞನಾದ ವಿದುರನು ನನ್ನನ್ನು ಕುರಿತು '—ಲಕ್ಷ್ಮೀದೇವಿಗೆ ಸಮಾ
ಳಾದ ದ್ರೌಪದೀದೇವಿಯನ್ನು ಸಭೆಗೆ ತಂದದ್ದರಿಂದ ನಮ್ಮ ಐಶ್ವರ್ಯಪ್ರಾಣಗಳಿಗೆ ಹಾನಿಬಂತು; ಈ ದ್ರೌಪದಿಯ
ಭಂಗಪಡಿಸಿದ್ದಕ್ಕೆ ಕೋಪೋದ್ದೀಪಿತರಾದ ಪಾಂಡವರು ಧನುರ್ಧರಾಗ್ರಗಣ್ಯರಾದ ವೃಷ್ಣಿಶ್ರೇಷ್ಠರು ತೇಜೋಧು
ಧರರಾದ ಪಾಂಚಾಲರು ಸತ್ಯಸಂಧನಾದ ಶ್ರೀಕೃಷ್ಣದೇವನು ಇವರೆಲ್ಲರೂ ಸಹಿಸುವರೇ! ವಾಸುದೇವ ರಕ್ಷಿತರಾ
ಪಾಂಚಾಲರಾಯನ ಸಮೇತರಾಗಿ ಅರ್ಜುನನು ಮತ್ತು ಯಮನು ಕಾಲದಂಡವನ್ನು ತಿರುಗಿಸುವ ಚಂದದಿಂದ ಗ
ದಂಡವನ್ನು ತಿರಿಗಿಸುವ ಮಹಾ ಬಲಶಾಲಿಯಾದ ಭೀಮನು ಅವಶ್ಯ ಬರಲುಳ್ಳವರು; ಹಾಗೆ ಬರುವ ಶೌರ್ಯಶಾಲಿಯ
ಅರ್ಜುನನ ಗಾಂಡೀವಧ್ವನಿಯನ್ನು ಕೇಳಿಯೂ ಭೀಮನ ಗದಾವೇಗವನ್ನು ನೋಡಿಯೂ ಈ ಕೌರವರಷ್ಟುಮಂ
ಯೂ ನಿರ್ವಹಿಸುವರೆ! ಆದ್ದರಿಂದ ಬಲವಂತರಾದ ಪಾಂಡವರೊಡನೆ ಇನ್ನಾದರೂ ವಿರೋಧಿಸದೆ ಸಮಾಧಾನವನ
ಮಾಡಿಕೊಳ್ಳುವದೇ ಲೇಸು; ಮೊದಲು ಮಹಾಪ್ರತಾಪಶಾಲಿಯಾದ ಜರಾಸಂಧನನ್ನು ಭೀಮನು ಬಾಹು ಯು
ದಿಂದ ಕೊಂದನು; ಅದನ್ನು ನೀನರಿಯೆಯಾ! ಆದ್ದರಿಂದ ಈ ಪಾಂಡವರ ಸಂಗಡ ಸ್ನೇಹಮಾಡಿಕೊಳ್ಳುವದು
ಭಯಪಕ್ಷದವರಿಗೂ ಲೇಸು—' ಎಂದು ಈಪ್ರಕಾರದಿಂದ ಧರ್ಮಸಹಿತವಾಗಿ ನುಡಿಯಲು ನಾನು ಪುತ್ರಸ್ನೇ
ಮೋಹಿತನಾಗಿ ಕೇಳದೇ ಹೋದೆನು!' ಎಂದು ಧೃತರಾಷ್ಟ್ರನು ಹೇಳಿದನು" ಎಂದು ವೈಶಂಪಾಯನ ಮುನಿ
ದ್ರನು ಜನಮೇಜಯರಾಯನಿಗೆ ಹೇಳಿದನು.

---

ಅನಂತರದಲ್ಲಿ ವೈಶಂಪಾಯನ ಮುನೀಂದ್ರನು ಜನಮೇಜಯನರೇಂದ್ರನನ್ನು ಕುರಿತು ಇಂತೆಂದನು:

"ಕೇಳು ಜನಮೇಜಯನೆ, ಈ ಸಭಾಪರ್ವದ ಅರ್ಥವನ್ನು ಸಂಕ್ಷೇಪವಾಗಿ ಹೇಳುತಲಿಧೇನೆ: ಖಾಂ
ದಾಹಾನಂತರದಲ್ಲಿ ಮಯನು ಕೃಷ್ಣಾರ್ಜುನರ ಸನ್ನಿಧಾನಕ್ಕೆ ಬಂದದ್ದು, ಕೃಷ್ಣನು ದ್ವಾರಕಾಪಟ್ಟಣಕ್ಕೆ ಹೋದ
ಮಯನು ಸಭಾಭವನವನ್ನು ನಿರ್ಮಿಸಿ ಪಾಂಡವರಿಗೆ ಕೊಟ್ಟದ್ದು, ಆ ಸಭಾಭವನದಲ್ಲಿ ಓಲಗದಲ್ಲಿರುವ ಪಾಂ
ರ ಸಮೀಪಕ್ಕೆ ಸಮಸ್ತರಾದ ಅರಸುಗಳೂ ಋಷಿಗಳೂ ಬಂದದ್ದು, ನಾರದನು ಬಂದದ್ದು, ರಾಜನೀತಿ ಪ್ರ
ಯು, ಇಂದ್ರಾದಿ ಲೋಕಪಾಲಕರ ಸಭಾವರ್ಣನವು, ಹರಿಶ್ಚಂದ್ರನ ಮಹಾತ್ಮ್ಯವನ್ನು ಹೇಳಿದ್ದು, ರಾಜಸೂಯ
ಗಮಾಡಬೇಕೆಂಬ ಇಚ್ಛೆಯು, ಕೃಷ್ಣಸ್ವಾಮಿ ಬಂದದ್ದು, ರಾಜವಂಶಗಳು ಹುಟ್ಟಿದ್ದು, ಜರಾಸಂಧ ವೈಭವವು,
ನ ಪರಾಕ್ರಮವರ್ಣನವು, ಅರ್ಜುನನು ತನ್ನ ಶೌರ್ಯವನ್ನು ಧರ್ಮರಾಯನಿಗೆ ತಿಳುಹಿಸಿದ್ದು, ಜರಾಸಂಧನು ಹು
ಪ್ರಕಾರವು, ಚಂಡಕೌಶಿಕನು ಜರಾಜಂಧನಿಗೆ ವರವನ್ನು ಕೊಟ್ಟದ್ದು. ಹಂಸಡಿಂಭಕರ ವಧೆಯು, ಕೃಷ್ಣ ಭೀ
ರ್ಜುನರು ಜರಾಸಂಧನ ವಧಾರ್ಥವಾಗಿ ಹೊರಟದ್ದು, ದೀರ್ಘತಮೋಪಾಖ್ಯಾನವು, ಗಿರಿವ್ರಜ ಪಟ್ಟಣವನ್ನು ಪ್ರ
ಶಿಸಿದ್ದು, ಭೀಮಜರಾಸಂಧರ ಮಲ್ಲಯುದ್ಧಾರಂಭವು, ಕೃಷ್ಣ ಜರಾಸಂಧರಿಗೆ ವಿರೋಧಬಂದ ಪ್ರಕಾರವು,
ವೃತ್ತಾಂತವು, ಕೃಷ್ಣನ ಚರಿತ್ರೆಯು, ಭೀಮ ಜರಾಸಂಧರ ಬಾಹುಯುದ್ಧವು, ಜರಾಸಂಧನು ಪರಲೋ
ಹೋದದ್ದು, ಆತನ ಕುಮಾರನಿಗೆ ಪಟ್ಟವನ್ನು ಕಟ್ಟಿದ್ದು, ಅರಸುಗಳನ್ನು ಶರೆಯ ದೆಸೆಯಿಂದ ಬಿಡಿಸಿದ್ದು ಇ
ಪ್ರಸ್ಥಪ್ರವೇಶವು, ಕೃಷ್ಣನು ದ್ವಾರಕಾವತೀಪಟ್ಟಣಕ್ಕೆ ಹೋದದ್ದು, ರಾಜಸೂಯ ಯಾಗಾರಂಭವು, ಭೀ

ನ ನಕುಲ ಸಹದೇವರ ದಿಗ್ವಿಜಯವು, ಸಕಲ ಧನ ರತ್ನ ಕಾಂಚನ ಪ್ರಾಪ್ತಿಯು, ಕೃಷ್ಣನು ಬಂದದ್ದು, ರಾಜ
ಸೂಯಯಾಗ ಮಾಡಿದ್ದು, ಸಕಲರಾದ ಅರಸುಗಳೂ ಕಪ್ಪಗಳನ್ನು ತಂದುಕೊಟ್ಟದ್ದು, ಕೃಷ್ಣನಿಗೆ ಅಗ್ರಪೂಜೆ
ಮಾಡಿದ್ದು, ಶಿಶುಪಾಲನು ನಿಂದಿಸಿದ್ದು, ಸಹದೇವನ ಕೋಪವು, ಭೀಷ್ಮನು ಧರ್ಮರಾಯನಿಗೆ ಕೃಷ್ಣಸ್ವಾಮಿಯ
ಮಾಹಾತ್ಮ್ಯವನ್ನು ತಿಳುಹಿಸಿದ್ದು, ಪುಷ್ಕರಾವತಾರವು, ಜಗದುತ್ಪತ್ತಿ ಪ್ರಕಾರವು. ಮಧುಕೈಟಭ ಸಂಹಾರವು,
ವರಾಹಾವಿರ್ಭಾವವು, ವಾಮನಾವತಾರವು, ದತ್ತಾತ್ರೇಯಾವಿರ್ಭಾವವು, ಕಾರ್ತವೀರ್ಯಾರ್ಜುನನ ಚರಿತ್ರೆಯು,
ಪರಶುರಾಮ ಪ್ರಾದುರ್ಭಾವವು, ರಾಮಾವತಾರ ವರ್ಣನವು, ತಾರಕಾಸುರಯುದ್ಧವು, ಪ್ರಜಾಭಾರ ಪೀಡಿತವಾದ
ಭೂಮಿದೇವಿಯು ನಾರಾಯಣನ ಸನ್ನಿಧಾನಕ್ಕೆ ಹೋಗಿ ತನ್ನ ಬಾಧೆಯನ್ನು ಹೇಳಿಕೊಂಡದ್ದು, ಬಲರಾಮನಾವಿರ್ಭಾ
ವವು, ಕೃಷ್ಣಾವತಾರವು, ದೇವತೆಗಳಷ್ಟೂ ಅರಸುಗಳಾಗಿ ಭೂಮಿಯಲ್ಲಿ ಹುಟ್ಟಿದ್ದು, ಕೃಷ್ಣನ ದಿವ್ಯ ಚರಿತ್ರೆಯು,
ಕಂಸನ ಸಂಹಾರವು, ದೇವೇಂದ್ರನು ಬಂದದ್ದು, ನರಕಾಸುರ ವಧೆಯು, ಕೃಷ್ಣನು ಹದಿನಾರುಸಾವಿರ ಕನ್ಯೆಯರ
ನ್ನು ವಿವಾಹ ಮಾಡಿಕೊಂಡದ್ದು, ದ್ವಾರಕಾವರ್ಣನವು, ಕೃಷ್ಣವೈಭವ ಪ್ರಶಂಸೆಯು, ಬಾಣಾಸುರನ ಗರ್ವ
ಭಂಗಮಾಡಿದ್ದು, ಭೀಷ್ಮನಮೇಲೆ ಶಿಶುಪಾಲನು ಮೊದಲಾದ ಅರಸುಗಳು ಕೋಪಿಸಿಕೊಂಡದ್ದು, ದುಶ್ಶಕುನ ಉ
ತ್ಪಾತಗಳು, ಕೃಷ್ಣ ಶಿಶುಪಾಲರ ದ್ವಂದ್ವಯುದ್ಧವು, ಶಿಶುಪಾಲನ ವಧೆಯು, ರಾಜಸೂಯ ಯಾಗ ಸಮಾಪ್ತಿಯು,
ಬಂದಿದ್ದ ಸಮಸ್ತರಾದ ಅರಸುಗಳನ್ನೂ ಅವರವರ ದೇಶಗಳಿಗೆ ಕಳುಹಿಸಿದ್ದು, ಕೃಷ್ಣನು ದ್ವಾರಕಾಪಟ್ಟಣಕ್ಕೆ ಹೋದದ್ದು.
ಸಭಾಭವನದಲ್ಲಿ ದುರ್ಯೋಧನನು ಭಂಗಪಟ್ಟದ್ದಕ್ಕೆ ಭೀಮಸೇನನು ಮೊದಲಾದವರು ಹಾಸ್ಯವನ್ನು ಮಾಡಿದ್ದು.
ಪಾಂಡವರ ವೈಭವವನ್ನು ನೋಡಿ ದುರ್ಯೋಧನನು ದುಃಖಪಟ್ಟದ್ದು, ಶಕುನಿಯು ಸಂತಾಪಪಟ್ಟದ್ದು, ದ್ಯೂತವಾ
ಡಬೇಕೆಂದು ಧೃತರಾಷ್ಟ್ರನಿಗೆ ಅರಿಕೆಮಾಡಿದ್ದು, ಧೃತರಾಷ್ಟ್ರನು ಆಜ್ಞಾಪನೆ ಮಾಡಿದ್ದು. ದುರ್ಯೋಧನನು ರಾಜ
ಸೂಯ ಮಹಾತ್ಮ್ಯವನ್ನೂ ಪಾಂಡವರ ಮಹಾವೈಭವವನ್ನೂ ಧೃತರಾಷ್ಟ್ರನಿಗೆ ತಿಳುಹಿಸಿದ್ದು, ಧೃತರಾಷ್ಟ್ರನ
ವಿದುರನ ನೀತಿಯು, ವಿಧಿಪ್ರೇರಿತನಾಗಿ ಧೃತರಾಷ್ಟ್ರನು ವಿದುರನನ್ನು ಕಳುಹಿಸಿ ಪಾಂಡವರನ್ನು ಕರೆಸಿದ್ದು,
ದ್ಯೂತಾರಂಭವು, ಆ ಸಮಯದಲ್ಲಿ ವಿದುರನು ಧೃತರಾಷ್ಟ್ರನಿಗೆ ನೀತಿಗಳನ್ನು ಹೇಳಿದ್ದು, ದ್ಯೂತಸಮಾಪ್ತಿಯು,
ದ್ರೌಪದೀಭಂಗವು, ವಸ್ತ್ರಾಪಹರಣವು, ಭೀಮಾರ್ಜುನರು ಕೋಪದಿಂದ ಪ್ರತಿಜ್ಞೆಗಳನ್ನು ಮಾಡಿದ್ದು, ಕೌರವರ
ಮನೆಗಳಲ್ಲಿ ದುಶ್ಶಕುನಗಳಾದದ್ದು, ಧೃತರಾಷ್ಟ್ರನು ದ್ರೌಪದಿಗೆ ವರಗಳನ್ನು ಕೊಟ್ಟದ್ದು, ಪಾಂಡವರು ದಾಸಭಾ
ವವಿಮುಕ್ತರಾಗಿ ತಮ್ಮ ಪಟ್ಟಣಕ್ಕೆ ಹೊರಟದ್ದು, ದುರ್ಯೋಧನನು ಧೃತರಾಷ್ಟ್ರನಿಗೆ ಅರ್ಜುನನ ಪ್ರತಾಪವನ್ನು
ವಿಸ್ತಾರವಾಗಿ ಹೇಳಿದ್ದು, ತಿರಿಗೂ ದ್ಯೂತವನ್ನು ಆಡಿದ್ದು, ಪಾಂಡವರಿಗೆ ವಿದುರನು ನೀತಿವಾಕ್ಯಗಳನ್ನು ಹೇಳಿ
ದ್ದು, ಪಾಂಡವರು ವನವಾಸಕ್ಕೆ ಹೊರಟದ್ದು, ಪೌರಜನಗಳು ದುಃಖಿಸಿದ್ದು, ನಾರದನು ಕೌರವರ ವಿನಾಶವನ್ನು
ಹೇಳಿದ್ದು, ಧೃತರಾಷ್ಟ್ರನ ಮಕ್ಕಳು ಭಯಪಟ್ಟದ್ದು, ದ್ರೋಣಾಚಾರ್ಯನನ್ನು ಶರಣವನ್ನೈದಿದ್ದು, ದ್ರೋಣನು ಅ
ರ್ಜುನನ ಪ್ರತಾಪವನ್ನು ತಿಳುಹಿಸಿದ್ದು, ಸಂಜಯನ ನೀತಿಯು—ಇವು ಮೊದಲಾದ ಕಥೆಗಳೊಡನೆ ಕೂಡಿ
ನೂರು ಇಪ್ಪತ್ತು ಅಧ್ಯಾಯಗಳುಳ್ಳದ್ದಾಗಿ ಸಭಾಪರ್ವವು ರಮಣೀಯವಾಗಿರುವದು.

"ಈ ಕಥೆಗಳನ್ನು ಶಮದಮಾದಿ ಸಂಪನ್ನನಾದ ಪೌರಾಣಿಕನ ದೆಶೆಯಿಂದ ಭಕ್ತಿಪೂರ್ವಕವಾಗಿ ಹೇಳಿಸಿ
ಕೇಳಬೇಕು; ಆ ಪೌರಾಣಿಕನನ್ನು ದಿವ್ಯವಾದ ವಸ್ತ್ರಾಭರಣಗಳಿಂದ ಅಲಂಕರಿಸಿ, ಗೋದಾನ ಭೂದಾನ
ಸುವರ್ಣದಾನಂಗಳು ಮೊದಲಾದ ಅನೇಕ ದಾನಂಗಳಿಂದ ವ್ಯಾಸಪ್ರೀತ್ಯರ್ಥವಾಗಿ ಸಂತೋಷಪಡಿ...
ಸಭೆಯಲ್ಲಿರುವ ಬ್ರಾಹ್ಮಣರನ್ನು ಮಹಾಭಾರತ ಶ್ರವಣಸಾದ್ಗುಣ್ಯಾರ್ಥವಾಗಿ ವಸ್ತ್ರ ಸುವರ್ಣ...
ಸುಗಂಧಯುಕ್ತ ತಾಂಬೂಲಗಳಿಂದಲೂ ಷಡ್ರಸೋಪೇತವಾದ ಅನ್ನದಾನಂಗಳಿಂದಲೂ ಪ್ರತ್ಯೇಕ ಪ...
ಸಂತೋಷಪಡಿಸಿ, ಪೌರಾಣಿಕನಿಗೆ ಪುಷ್ಪಫಲ ತಾಂಬೂಲಾದಿಗಳನ್ನು ಸಮರ್ಪಿಸಿ ಆತನ ದೆಶೆ...
...ಜನಮೇಜಯನೆ, ಆ ಬಳಿಕ ಪರ್ವಸಮಾಪ್ತಿಯಲ್ಲಿ ಪೌರಾಣಿಕನನ್ನು ದಿವ್ಯ ವಸ್ತ್ರ...

ರಣಗಳಿಂದಲೂ ಅಲಂಕರಿಸಿ, ಕಾಂಸ್ಯ ಪಾತ್ರ ಸಹಿತವಾಗಿ ಅಲಂಕಾರವಾದ ಗೋದಾನವನ್ನು ಮ... ಭೂದಾನ ಸುವರ್ಣದಾನಗಳನ್ನು ಮಹಾ ಪೌರಾಣಿಕನಿಗೋಸ್ಕರ ಕೊಟ್ಟು ಸಂತೋಷಪಡಿಸಬೇಕು. ಅ... ಪೌರಾಣಿಕನಿಗೆ ಸಂತೋಷವನ್ನು ಮಾಡಿದರೆ ಸಕಲ ದೇವತೆಗಳು ಸಂತೋಷಪಡುವರು. ಕೇಳ್ಳು ಜನಮೇ... ಯನೇ, ಈ ಪ್ರಕಾರವಾಗಿ ನಿಯಮದಿಂದ ಈ ಮಹಾಭಾರತದಲ್ಲಿ ಒಂದು ಶ್ಲೋಕವನ್ನಾದರೂ ಅರ್ಧ ಶ್ಲೋ... ವನ್ನಾದರು ಯಾವ ಪುರುಷನು ಓದುವನೋ ಯಾವ ಪುರುಷನು ಕೇಳುವನೋ ಅತನು ಈ ಲೋಕದಲ್ಲಿ ಸ... ಪಾಪಂಗಳ ದೆಸೆಯಿಂದ ಬಿಡಲ್ಪಟ್ಟವನಾಗಿ, ಸಕಲ ಐಶ್ವರ್ಯಗಳನ್ನು ಅನುಭವಿಸಿ, ಪರಲೋಕದಲ್ಲಿ ಸದ್ಗತಿ... ನೈದುವನು" ಎಂದು ವೈಶಂಪಾಯನ ಋಷಿಯು ಜನಮೇಜಯರಾಯನಿಗೆ ಹೇಳಿದ ಅರ್ಥವನ್ನು ನೈಮಿಶಾರ... ವಾಸಿಗಳಾದ ಶೌನಕಾದಿ ಋಷಿಗಳಿಗೆ ಸೂತಪೌರಾಣಿಕನು ವಿವರಿಸಿದನು.

ಇಂತು ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲ ದೇಶಾವತಂಸ ಕರ್ಣಾಟಕ ಜನಪದದಧಿಷ್ಠಾನಭೂತ ಶ್ರೀ... ನ್ಮಹೀಶೂರ ಮಹಾ ಸಂಸ್ಥಾನ ಮಧ್ಯ ದೇದೀಪ್ಯಮಾನಾ ವಿಕಲ ಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ರಾಜ... ರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಹ್ಮಾಸನಾರೂಢ ಶ್ರೀಮದ್ರಾಜಾಧಿರಾಜ ರಾಜ ಪರಮೇಶ್ವರ ಪ್ರೌಢ... ತಾಪಾ ಪ್ರತಿಮ ವೀರ ನರಪತಿ ಬಿರುದೆಂತೆಂಬರ ಗಂಡ ಲೋಕೈಕ ವೀರ ಯದುಕುಲ ಪಯಃ ಪರಾವಾರ ಕಳಾನಿಧಿ ಶಂಖ ಚಕ್ರಾಂ... ಕುಠಾರ ಮಕರ ಮತ್ಸ್ಯ ಶರಭ ಸಾಲ್ವ ಗಂಡ ಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ... ಚಾಮರಾಜ ಮಹೀಪಾಲ ಧರ್ಮಪತ್ನಿ ಕೆಂಪನಂಜಮ್ಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕರಾಯಮಾಣಾ ಶ್ರೀಚಾಮುಂಡಿಕಾಂ... ವರಪ್ರಸಾದೋದ್ಭವರಾದ ಆತ್ರೇಯಸಗೋತ್ರ ಅಶ್ವಲಾಯನ ಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹಿಶೂರ ಪುರವರಾ... ಶ್ರೀಮತ್ಕೃಷ್ಣರಾಜ ಒಡೆಯರವರಿಂದ ಲೋಕೋಪಕಾರಾರ್ಥವಾಗಿ ಬುಧಜನ ಸಮ್ಮತಿಯಿಂದ ರಚಿಸಲ್ಪಟ್ಟ ಶ್ರೀಮತ್ಕೃಷ್ಣರಾ... ವಾಣೀವಿಲಾಸವೆಂಬ ಮಹಾಭಾರತದ ಟೀಕಿನಲ್ಲಿ

## ಸಭಾಪರ್ವ ಸಮಾಪ್ತಿ.

ಸಭಾಜನೆಸಭಾಸರ್ಗೋ । ರಾಜಸೂಯ ಸವೋತ್ಸವಃ ॥
ಸಭಾಪರ್ವಣ್ಯನುದ್ಯೂತೇ । ರಾಜ್ಯಭ್ರಂಶೋಭಿವರ್ಣಿತಃ ॥






ನಿದ್ದು, ಭೀಮಜಾ
ವೃತ್ತಾಂತವು, ಕೃಷ್ಣ
ಹೋದದ್ದು, ಆತನ ಕು
ಪ್ರಸ್ಥ ಪ್ರವೇಶವು, ಕೃ

ಶ್ರೀ ಚಾಮುಂಡೇಶ್ವರಿ ಪ್ರೆಸ್, ಲಾಲ್‌ಬಾಗ್ ರೋಡ್ ಬೆಂಗಳೂರು ೧—೧೨—೯೧.

